

# ಕೊಂಕಣಿ ಮತ್ತು ಮರಾಠಿ ಇವುಗಳ ತುಲನಾತ್ಮಕ ವಿಮರ್ಶೆ ಹಾಗೂ ಸಾರಸ್ವತ ಬ್ರಾಹ್ಮಣರ ಪ್ರಾಚೀನ ಇತಿಹಾಸ

ಪ್ರಕಾಶಕರು:

ಶ್ರೀ ಲಲಿತಾ ಪ್ರಾಚ್ಯ ಸಂಶೋಧನಾಲಯ

ಅಶೋಕ ನಗರ ಮಂಗಳೂರು-೬.

# ಕೊಂಕಣಿ ಮತ್ತು ಮರಾಠಿ

ಇವುಗಳ

# ತುಲನಾತ್ಮಕ ವಿಮರ್ಶೆ

ಮತ್ತು

## ಸಾರಸ್ವತ ಬ್ರಾಹ್ಮಣರ ಪ್ರಾಚೀನ ಇತಿಹಾಸ

ಲೇಖಕ:

**ಬಸ್ತಿ ಪುಂಡಲೀಕ ವೆಂಕಟೇಶ ಶೆಣಾಇ**

ರಾಷ್ಟ್ರಭಾಷಾ ವಿಶಾರದ

ಅಶೋಕ ನಗರ ಮಂಗಳೂರು ೬.

**ಶಕ ೧೮೯೦**

ಪ್ರಕಾಶಕರು:

**ಶ್ರೀ ಲಲಿತಾ ಪ್ರಾಚ್ಯ ಸಂಶೋಧನಾಲಯ**

**ಅಶೋಕ ನಗರ ಮಂಗಳೂರು ೬.**

**Price: Rs. 6·50** 7·50

ದಾನೇನ ಶೋಭತೇಪಾಣಿಃ ॥

ತದ್ದೇವೇಷುಗಚ್ಛತಿ ಯದ್ದತ್ತಮಯಾಚಿತಮ್ ॥



ಶ್ರೀಮಾನ್ ಬಿ. ಮಾಧವ ಶೆಣೈ

*Partner:*

**MANGALORE GANESH BEEDI WORKS**

MYSORE

# ಸಮರ್ಪಣೆ

ಸ್ವಜಾತಿ ವತ್ಸಲರೂ, ಸ್ವಸಮಾಜದ ಅಭ್ಯುದಯೋತ್ಸುಕರೂ

ನನ್ನ ಪೂಜ್ಯ ತಾತಂದಿರೂ ಆಗಿರುವ

**ಶ್ರೀಮಾನ್ ಸುಜೀರ ಚೆರಡಪ್ಪ ವೈಕುಂಠ ನಾಯಕ**

(ಸಿ. ವೀ. ನಾಯಕ)

ಅವರ ಅಡಿದಾವರೆಗಳಲ್ಲಿ

ನನ್ನ ಈ ಕೃತಿಯನ್ನು

ಅತ್ಯಂತ ಪೂಜ್ಯಭಾವದಿಂದ ಸಮರ್ಪಿಸಿದ್ದೇನೆ.

*Founder of*

**Scientific Dye Works and Sujeerkar's Tile Works Mangalore.**



ಶ್ರೀಮಾನ್ ಸುಜೀರ ಚೆರಡಪ್ಪ ವೈಕುಂಠ ನಾಯಕ

*Founder of*

**Scientific Dye Works and Sujeerkar's Tile Works Mangalore.**

# ಪ್ರಸ್ತಾವನೆ

ಕೊಂಕಣಿ ಮತ್ತು ಮರಾಠಿ ಎಂಬ ಎರಡು ಸಂಬಂಧೀ ಭಾಷೆಗಳಲ್ಲಿ ಪ್ರಾಚೀನವಾದಂದು ಯಾವುದು? ಎಂಬುದರ ಕುರಿತು ಸಾಧಾರಣ ನೂರು ವರ್ಷಗಳಿಂದಲೂ ವಿವಾದವು ಸಾಗುತ್ತ ಬಂದಿದೆ. ಮರಾಠಿಗರು ಕೊಂಕಣಿಯನ್ನು ಮರಾಠಿಯ ಒಳಭೇದ ಇಲ್ಲವೇ ಗ್ರಾಮ್ಯರೂಪ ಎನ್ನುವುದು ಮತ್ತು ಕೊಂಗಣಿಗರು ಮರಾಠಿಗರ ಹೇಳಿಕೆಗಳನ್ನು ನಿರಾಕರಿಸಿ ಕೊಂಕಣಿಯು ಮರಾಠಿಯಿಂದ ಭಿನ್ನವಾದ ಸ್ವತಂತ್ರ ಭಾಷೆ ಎನ್ನುವುದು ಇಂದಿಗೂ ಸಾಗುತ್ತಿದೆ. ಪೋರ್ತುಗೀಸರು ಗೋವವನ್ನು ಆಕ್ರಮಿಸಿ ಹಿಡಿದುಕೊಂಡ ತರುವಾಯ ಅವರು ಗೋವದಲ್ಲಿನ ಪ್ರಾಚೀನ ಲಿಖಿತ ಸಾಹಿತ್ಯವನ್ನೆಲ್ಲ ಸುಟ್ಟು ಹಾಕಿದುದರಿಂದ, ಕೊಂಕಣಿಗರಿಗೆ ತಮ್ಮ ಭಾಷೆಯ ಪ್ರಾಚೀನ ಲಿಖಿತ ಪ್ರಮಾಣಗಳನ್ನು ಉದಹರಿಸಿ ಮರಾಠಿಗರ ವಾದವನ್ನು ಖಂಡಿಸಲು ಸಾಧ್ಯವಿಲ್ಲವಾಗಿದೆ. ಹೀಗಾಗಿ ಮರಾಠಿಗರ ಪಕ್ಷವು ಕೊಂಕಣಿಗರ ಪಕ್ಷಕ್ಕಿಂತ ಹೆಚ್ಚು ಬಲಗೊಂಡಿದೆ. ಆದುದರಿಂದ ಕೊಂಕಣಿಗರು ತಮ್ಮ ಭಾಷೆಯಲ್ಲಿನ ಪ್ರಾಚೀನ ಪ್ರಯೋಗಗಳ ಆಧಾರದಿಂದಲೇ ಮರಾಠಿಗರ ವಾದವನ್ನು ಖಂಡಿಸಬೇಕಾಗಿದೆ.

ಕೊಂಕಣಿ ಮತ್ತು ಮರಾಠಿ ಭಾಷೆಗಳ ವಾದದಲ್ಲಿ ಭಾಗವಹಿಸಿದ ವಿದ್ವಾಂಸರು, ತುಳುನಾಡಿನಲ್ಲಿ ಮತ್ತು ಕೇರಳದಲ್ಲಿ ಬಳಕೆಯಲ್ಲಿರುವ ಕೊಂಕಣಿಯನ್ನು ಪರಿಶೀಲಿಸುವುದಕ್ಕಿಂತ ಮೊದಲೇ ಮರಾಠಿಯನ್ನು ಪ್ರಾಚೀನ ಮಹಾರಾಷ್ಟ್ರೀ-ಪ್ರಾಕೃತದ ಇಂದಿನ ಪ್ರತಿನಿಧಿಯೆಂದು ಗ್ರಹಿಸಿ-ಸಾಗಿದುದು ಆ ಎರಡು ಭಾಷೆಗಳೊಳಗಿನ ವಿವಾದವು ಸಮರ್ಪಕವಾದ ರೀತಿಯಲ್ಲಿ ಬಗೆ ಹರಿಯದಿರಲು ಕಾರಣವಾಗಿದೆ. ಇಂದಿನ ತನಕ ಮರಾಠಿ ಪಂಡಿತರಾಗಲೀ ಕೊಂಕಣಿ-ವಿದ್ವಾಂಸರಾಗಲೀ ಮರಾಠಿಯನ್ನು ಕೊಂಕಣಿಯೊಂದಿಗೆ ಹೋಲಿಸಿ ಶಾಸ್ತ್ರೀಯ ಅಥವಾ ವೈಜ್ಞಾನಿಕ ರೀತಿಯಿಂದ-ಅವುಗಳಲ್ಲಿ ಪ್ರಾಚೀನವಾವುದೆಂದು—ಅಥವಾ ಅವುಗಳೊಳಗಿನ ಸಂಬಂಧವು ಯಾವ ಬಗೆಯದು—ಎಂಬುದನ್ನು ನಿರ್ಧರಿಸುವ ಪ್ರಯತ್ನವನ್ನು ಮಾಡಿಲ್ಲ. ಅವರ ತುಲನೆಗಳೆಲ್ಲವೂ ಕೆಲವು ಶಬ್ದಗಳ ಮಟ್ಟಿಗೇನೇ ಸೀಮಿತವಾಗಿದ್ದವು. ಡಾಕ್ಟರ್ ಸುಮಿತ್ರ ಮಂಗೇಶ ಕತ್ರೆಯವರು "Formation of Konkani" ಎಂಬ ಪ್ರಬಂಧವನ್ನು ವೈಜ್ಞಾನಿಕ ರೀತಿಯಿಂದ ಬರೆದಿದ್ದಾರಾದರೂ ಅವರ ಸಾಧನೆಯು ಕೊಂಕಣಿ ಮತ್ತು ಮರಾಠಿಗಳು ಭಿನ್ನ-ಭಿನ್ನ ಭಾಷೆಗಳೆಂದು ಸಿದ್ಧಪಡಿಸುವ ಕಡೆಗೆ ಒಲಿದಿದೆಯೆನ್ನಬಹುದು.

ಅವರಂತೆಯೇ ಬೇರೆ ಕೆಲವು ವಿದ್ವಾಂಸರು ಈಗಿನ ಮರಾಠಿಯಲ್ಲಿ ಬಳಸಲ್ಪಡದಿರುವ ಕೆಲವು ಕೊಂಕಣಿ ಶಬ್ದಗಳನ್ನು ಮುಂದೆ ತಂದು ಕೊಂಕಣಿಯು ಮರಾಠಿಯಿಂದ ಭಿನ್ನ ಭಾಷೆಯೆಂದು ಸಾಧಿಸಲು ಪ್ರಯತ್ನಿಸಿದ್ದಾರೆ. ಆದರೆ ಆ ಶಬ್ದಗಳು ಈಗಿನ ಮರಾಠಿಯಲ್ಲಿ ಇಲ್ಲದಿದ್ದರೂ ತಮ್ಮ ಹಳೆಯ ಮರಾಠಿ ಸಾಹಿತ್ಯದಲ್ಲಿ ಆ ಶಬ್ದಗಳು ಇವೆಯೆಂದು ಮರಾಠಿಗರು ಪ್ರತಿವಾದ ಹೂಡಿದುದಕ್ಕೆ ಪ್ರತಿಯಾಗಿ ಕೊಂಕಣಿಗರು ಹಳೆಯ ಮರಾಠಿಯಲ್ಲಿದ್ದ ಆ ಶಬ್ದಗಳು ಹೊಸ ಮರಾಠಿಯಲ್ಲಿರದೇ ಕೊಂಕಣಿಯಲ್ಲಿ ಮಾತ್ರ ಇವೆಯೆಂಬ ವಿಷಯವು ಕೊಂಕಣಿಯು ಮರಾಠಿಗಿಂತ ಪ್ರಾಚೀನವಾದುದೆಂದು ಸಿದ್ಧಪಡಿಸುವ ದೃಢವಾದ ಪ್ರಮಾಣವಾಗಿದೆಯೆಂದು ವಾದಿಸಿಲ್ಲ.

ಕೊಂಕಣಿಯು ಗೋವದೊಳಗೆ ಮಾತ್ರವಲ್ಲದೇ ಪೊರ್ತುಗೀಸರು ಭಾರತ ವರ್ಷದ ಕಡೆಗೆ ಬರುವ ಹಲವು ಶತಮಾನಗಳ ಮೊದಲೇ ಗೋವದಿಂದ ವಲಸೆ ಹೋಗಿ ಅರಬ ದೇಶದಲ್ಲಿ, ತುಳುನಾಡಿನಲ್ಲಿ, ಮತ್ತು ಕರ್ಣಾಟಕದಲ್ಲಿ ನೆಲಸಿದ್ದ ಸಾರಸ್ವತ ಬ್ರಾಹ್ಮಣರಲ್ಲಿ ಹಾಗೂ ಸಾರಸ್ವತ ಮೂಲದ ವಾಣಿಯರಲ್ಲಿ (=ವೈಶ್ಯರಲ್ಲಿ) ಬಳಕೆಯಲ್ಲಿದ್ದಿತೆಂಬುದನ್ನಾಗಲೀ, ಅವರು ನುಡಿಯುವ ಕೊಂಕಣಿಯು ಈಗ ಗೋವದಲ್ಲಿ ಬಳಕೆಯಲ್ಲಿರುವ ಕೊಂಕಣಿಯಿಂದ ಹಲವು ಅಂಶಗಳಲ್ಲಿ ಭಿನ್ನವಾಗಿದ್ದು ಅತ್ಯಂತ ಶುದ್ಧ ರೂಪದಲ್ಲಿದೆಯೆಂಬುದನ್ನಾಗಲೀ ಮರಾಠಿಗರು ಅರಿತಿಲ್ಲದುದರಿಂದಲೇ ಕೊಂಕಣಿ ಮತ್ತು ಮರಾಠಿಗಳ ವಾದವು ಬೆಳೆದಿದೆಯೆಂಬುದರಲ್ಲಿ ಸಂದೇಹವಿಲ್ಲ.

ಒಂದೇ ವರ್ಗದ ಎರಡು ಭಾಷೆಗಳಲ್ಲಿ ಪ್ರಾಚೀನವಾವುದು ಅರ್ವಾಚೀನವಾವುದು ಮತ್ತು ಒಂದರೊಂದಿಗೆ ಇನ್ನೊಂದರ ಸಂಬಂಧವು ಯಾವ ಬಗೆಯದು ಎಂಬುದನ್ನು ನಿರ್ಣಯಿಸುವಲ್ಲಿ ಆ ಎರಡು ಭಾಷೆಗಳಲ್ಲಿ ಬಳಕೆಯಲ್ಲಿರುವ ನಾಮಪದಗಳ ವಿಭಕ್ತಿರೂಪಗಳು ಮತ್ತು ಕ್ರಿಯೆಗಳ ಕಾಲಾರ್ಥಕ ರೂಪಗಳು ಮುಖ್ಯ ಪ್ರಮಾಣಗಳಾಗಿರುತ್ತವೆಯೇ ಹೊರತು ಶಬ್ದಭಾಂಡಾರವಲ್ಲ. ಏಕೆಂದರೆ ಒಂದೇ ವರ್ಗಕ್ಕೆ ಸೇರಿದ ಹಲವು ಭಾಷೆಗಳ ಶಬ್ದಭಾಂಡಾರದೊಳಗಿನ ಅಧಿಕಾಂಶ ಶಬ್ದಗಳು ಒಂದೇ ಮೂಲದಿಂದ ರೂಪಾಂತರವಾದವುಗಳಾಗಿರುವುದರಿಂದ ಅವುಗಳು ಸಮಾನ ಅಥವಾ ಒಂದೇ ಆಗಿರುತ್ತವೆ. ಆದರೆ ಅವುಗಳ ವಿಭಕ್ತಿರೂಪಗಳು ಮತ್ತು ಆಖ್ಯಾತ ರೂಪಗಳು ಭಿನ್ನವಾಗಿರುತ್ತವೆ. ಅಂದರೆ ವಿಭಕ್ತಿರೂಪಗಳಲ್ಲಿ ಹಾಗೂ ಆಖ್ಯಾತ ರೂಪಗಳಲ್ಲಿ ಮಾರ್ಪಾಟುಗಳುಂಟಾಗುವುದರಿಂದಲೇ ಮೂಲ ಭಾಷೆಯಿಂದ ಕವಲೊಡೆದು ಹೊಸ ಭೇದ ಅಥವಾ ಹೊಸ ಭಾಷೆ ಉಂಟಾಗುವು

ದಾಗಿದೆ. ಹಾಗಿದ್ದರೂ ಕೆಲವು ಭಾಷೆಗಳಲ್ಲಿ ಅಂಥ ಮಾರ್ಪಾಟು ಅತ್ಯಲ್ಪ ವಾಗಿರುತ್ತದೆ. ಮತ್ತು ಹಾಗಿರುವುದರಿಂದ ಆ ಭಾಷೆಗಳ ಪೂರ್ವಾಪರ ಸಂಬಂಧವನ್ನು ನಿರ್ಧರಿಸುವುದು ಸುಲಭವಾಗುತ್ತದೆ. ಉದಾಹರಣೆಗೆ ಸಂಸ್ಕೃತದ "ಹಸ್ತ=ಕೈ" ಎಂಬ ಶಬ್ದವು ಹಾತ್ ಇಲ್ಲವೇ ಹಾಥ್ ಎಂಬ ರೂಪದಲ್ಲಿ ಭಾರತ ವರ್ಷದೊಳಗಿನ ಸಕಲ ಪ್ರಾಕೃತ ವಿಭೇದಗಳಲ್ಲಿ ಬಳಸಲ್ಪಡುತ್ತದೆ. ಮತ್ತು ಸಂಸ್ಕೃತದ "ಹಸ್ತೇನ=ಕೈಯಿಂದ" ಎಂಬ ತೃತೀಯಾ ವಿಭಕ್ತಿಯ ಏಕ ವಚನರೂಪವು ಕೊಂಕಣಿಯಲ್ಲಿ "ಹಾತ್ತಾನ" ಇಲ್ಲವೇ "ಹಾತ್ತಾನೇ" ಎಂದೂ ಮರಾಠಿಯಲ್ಲಿ "ಹಾತಾನೇ" ಎಂದೂ ಗುಜರಾತಿಯಲ್ಲಿ ಹಾಥೇ ಎಂದೂ ಹಿಂದೀ ಯಲ್ಲಿ "ಹಾಥ್‌ಸೇ" ಎಂದೂ ರೂಪತಳೆಯುತ್ತದೆ. ಅವುಗಳಲ್ಲಿ ಕೊಂಕಣಿ ಮತ್ತು ಮರಾಠಿಗಳ ರೂಪವು ಅತ್ಯಂತ ಸಮೀಪದ್ದಾಗಿದೆ ಅಥವಾ ಒಂದೇ ಆಗಿದೆ ಎನ್ನಲೂಬಹುದು. ಅದೇ ರೀತಿಯಲ್ಲಿ ಸಂಸ್ಕೃತದ "ಗತಃ=ಹೋದನು" ಎಂಬ ಭೂತಕಾಲಿಕ ಕೃದಂತವು ಆದ್ಯಪ್ರಾಕೃತದಲ್ಲಿ "ಗತೋ" ಎಂದೂ ಶೌರ ಸೇನಿಯಲ್ಲಿ "ಗದೋ" ಎಂದೂ ತರುವಾಯದ ಪ್ರಾಕೃತದಲ್ಲಿ "ಗಓ" ಎಂದೂ ಹಳೆಯ ಹಿಂದಿಯಲ್ಲಿ "ಗಯೋ" ಎಂದೂ ಹೊಸ ಹಿಂದಿಯಲ್ಲಿ "ಗಯಾ" ಎಂದೂ ಕೊಂಕಣಿಯಲ್ಲಿ "ಗೆಲೊ" ಎಂದೂ ಮರಾಠಿಯಲ್ಲಿ "ಗೇಲಾ" ಎಂದೂ ಮಾರ್ಪ ಟ್ಟಿದೆ. ಹಳೆಯ ಹಿಂದಿಯಲ್ಲಿ "ಗಯೋ" ಇದ್ದುದು ಹೊಸ ಹಿಂದಿಯಲ್ಲಿ "ಗಯಾ" ಆದಂತೆಯೇ ಕೊಂಕಣಿಯಲ್ಲಿ "ಗೆಲೊ" ಇದ್ದುದು ಮರಾಠಿಯಲ್ಲಿ "ಗೇಲಾ" ಆಗಿದೆಯೆಂಬುದು ಸ್ವತಃ ಸಿದ್ಧವಿದೆ.

ಭಾರತ ವರ್ಷದೊಳಗಿನ ಸಂಸ್ಕೃತ ಜನ್ಯ ಭಾಷೆಗಳಲ್ಲಿ ಕೊಂಕಣಿ ಮತ್ತು ಮರಾಠಿಗಳಲ್ಲಿ ಹಾಗೂ ಹಳೆ ಹಿಂದೀ ಮತ್ತು ಹೊಸ ಹಿಂದೀಗಳಲ್ಲಿ ಮಾತ್ರ ವಿಭಕ್ತಿರೂಪಗಳ ಮತ್ತು ಆಖ್ಯಾತರೂಪಗಳ ಸಾಮೀಪ್ಯವು ಅಥವಾ ಸಾಮ್ಯವು ಕಂಡುಬರುತ್ತದೆ. ಅಂದರೆ ಆ ಎರಡು ಜೊತೆಗಳಲ್ಲಿನ ಭಾಷೆಗಳು ಒಂದಕ್ಕೊಂದು ಅತ್ಯಂತ ನಿಕಟವಾಗಿ ಸಂಬಂಧಿಸಿವೆಯೆಂದು ಸಿದ್ಧವಾಗುತ್ತದೆ. ಮರಾಠಿಗರು, ಮರಾಠಿಯಿಂದ ಕೊಂಕಣಿಯು ಹುಟ್ಟಿದ್ದಿತೆಂದು ಇಲ್ಲವೇ ಕೊಂಕಣಿಯು ಮರಾಠಿಯ ಗ್ರಾಮ್ಯರೂಪವಾಗಿರುತ್ತದೆಂದು ಹೇಳುತ್ತಾರೆ. ಆದುದರಿಂದ ಕೊಂಕಣಿ ಮತ್ತು ಮರಾಠಿಗಳಲ್ಲಿ ಪ್ರಾಚೀನವಾದುದು ಯಾವುದು ಅರ್ವಾಚೀನ ವಾದುದು ಯಾವುದು ಅಥವಾ ಯಾವುದರಿಂದ ಯಾವುದು ಹುಟ್ಟಿತು? ಎಂಬುದೇ ಇಲ್ಲಿ ಬಗೆಹರಿಸಬೇಕಾದ ಪ್ರಶ್ನೆಯಾಗಿರುತ್ತದೆ.

ನನ್ನ ಶೋಧದ ನಿಷ್ಕರ್ಷವು ಅಥವಾ ಕೊಂಕಣಿ ಮತ್ತು ಮರಾಠಿ ಭಾಷೆ

ಗಳ ಅಧ್ಯಯನದ ಫಲವು ಕೊಂಕಣಿ ಮತ್ತು ಮರಾಠಿ ಭಾಷೆಗಳು ಭಿನ್ನ-ಭಿನ್ನವಾದ ಭಾಷೆಗಳಾಗಿರದೇ ಒಂದರಿಂದ ಇನ್ನೊಂದು ಹುಟ್ಟಿದುದೆಂದೇ ಇರುತ್ತದೆ. ಅಂದರೆ ಕೊಂಕಣಿಯು ಮೂಲ ಭಾಷೆಯಾಗಿದ್ದು ಅದರಲ್ಲಿ ಉಂಟಾದ ಒಂದೆರಡು ಹೊಸ ಮಾರ್ಪಾಟುಗಳಿಂದಾಗಿ ಕವಲೊಡೆದು ಬೇರಾದ ನುಡಿಯೇ ಮರಾಠಿಯಾಗಿರುತ್ತದೆ. ಆದುದರಿಂದ ಗೋವದಲ್ಲಿ ಮತ್ತು ಗೋವದ ಹೊರಗೆ ನೆಲಸಿರುವ ಗೋವಮೂಲದ ಜನರು ನುಡಿಯುವ ಭಾಷೆಯನ್ನು "ಕೊಂಕಣಿ" ಎನ್ನುವುದಾದಲ್ಲಿ ಮರಾಠಿಯನ್ನು ಹೊಸ ಕೊಂಕಣಿ ಎನ್ನಬೇಕಾಗುವುದು; ಇಲ್ಲವೇ ಕೊಂಕಣಿಯನ್ನು ಹಳೆಯ ಮರಾಠಿ ಎನ್ನಬೇಕಾಗುವುದು. ಏಕೆಂದರೆ ಹಳೆಗನ್ನಡದಿಂದ ಹೊಸಗನ್ನಡವು ಹೇಗೆ ಭಿನ್ನವಾದ ನುಡಿಯಲ್ಲವೋ ಅಥವಾ ಹಳೆ ಹಿಂದಿಯಿಂದ ಹೊಸ ಹಿಂದಿಯು ಹೇಗೆ ಭಿನ್ನವಲ್ಲವೋ ಹಾಗೆಯೇ ಕೊಂಕಣಿಯಿಂದ ಮರಾಠಿಯೂ ಭಿನ್ನವಲ್ಲ. ಅಥವಾ ಕನ್ನಡದಿಂದ ತುಳುವು ಭಿನ್ನವಾಗಿರುವಂತೆ ಕೊಂಕಣಿಯಿಂದ ಮರಾಠಿಯು ಭಿನ್ನವಾಗಿಲ್ಲ. ಹಾಗಿದ್ದರೂ ಕೊಂಕಣಿಯಲ್ಲಿ ಬಳಕೆಯಲ್ಲಿರುವ ಹಲವು ಪ್ರಾಕೃತ ಶಬ್ದಗಳ ಬದಲಿಗೆ ಮರಾಠಿಯಲ್ಲಿ ಅನ್ಯ ಭಾಷೆಗಳ ಶಬ್ದಗಳು ಬಳಕೆಗೆ ಬಂದಿರುವುದರಿಂದ ಕೊಂಕಣಿಗರಿಗೆ ಮರಾಠಿಯೂ, ಮರಾಠಿಗರಿಗೆ ಕೊಂಕಣಿಯೂ ತಿಳಿಯುವುದು ತುಸು ಕಠಿನವಾಗಿದೆ. ಅವುಗಳೆರಡರ ಸಂಬಂಧವನ್ನು ಒಂದು ಚಿಕ್ಕ ಉದಾಹರಣೆಯಿಂದ ಸ್ಪಷ್ಟಪಡಿಸಬಹುದು:—

| ಕನ್ನಡ | ತುಳು | ಕೊಂಕಣಿ | ಮರಾಠಿ |
|---|---|---|---|
| ಅವನು ಬರುತ್ತಾನೆ | ಆಯೆ ಬರ್ಪೆ | ತೊ ಎತಾ | ತೋ ಯೇತೋ |
| ಅವನು ಬಂದನು | ಆಯೆ ಬತ್ತೆ | ತೊ ಆಯಲೊ | ತೋ ಆಲಾ |
| ಅವನು ಹೋದನು | ಆಯೆ ಪೋಯೆ | ತೊ ಗೆಲೊ | ತೋ ಗೇಲಾ |
| ಅವಳು ಹೋದಳು | ಆಳ್ ಪೋಯೊಳ್ | ತೀ ಗೆಲಿ | ತೀ ಗೇಲೀ |
| ಅದು ಹೋಯಿತು | ಅವು ಪೋಂಡ | ತೆಂ ಗೆಲೆಂ | ತೇಂ ಗೇಲೇಂ |

ಹಿಂದಿನ ಉದಾಹರಣೆಯಲ್ಲಿ ಕನ್ನಡದ ಮತ್ತು ತುಳುವಿನ ಸರ್ವನಾಮಗಳು ಮತ್ತು ಕ್ರಿಯಾರೂಪಗಳು ಸಂಪೂರ್ಣ ಭಿನ್ನವಾಗಿವೆ. ಆದರೆ ಕೊಂಕಣಿಯು ಮತ್ತು ಮರಾಠಿಯ ಕ್ರಿಯಾರೂಪಗಳಲ್ಲಿ ಪುಲ್ಲಿಂಗ ರೂಪ ಒಂದನ್ನು ಬಿಟ್ಟು ಇತರ ಕ್ರಿಯಾರೂಪಗಳೂ-ಎಲ್ಲ ಸರ್ವನಾಮಗಳೂ ಒಂದೇ ಆಗಿವೆ. ಮತ್ತು ಕೊಂಕಣಿಯ ಪುಲ್ಲಿಂಗದ ಕ್ರಿಯಾರೂಪದ ಕೊನೆಯಲ್ಲಿನ ಆಕಾರವು ಮರಾಠಿಯಲ್ಲಿ ಓಕಾರವಾಗಿಯೂ, ಓಕಾರವು ಆಕಾರವಾಗಿಯೂ ಮಾರ್ಪಟ್ಟಿದೆ. ಹಾಗೂ ಕೊಂಕಣಿಯ "ಆಯಲೊ" ಎಂಬುದು ಮರಾಠಿಯಲ್ಲಿ "ಆಲಾ" ಎಂದು ಮಾರ್ಪಡುವಾಗ

ನಡುವಿನ "ಯ" ಎಂಬ ವರ್ಣವು ಲೋಪವಾಗಿದೆ. ಸಂಸ್ಕೃತದಲ್ಲಿ ಬಂದನು ಅನ್ನಲು "ಆಗತಃ" ಎಂಬ ರೂಪವಿದೆ. ಅದು ಶೌರಸೇನಿಯಲ್ಲಿ "ಆಅದೋ" ಎಂದು ಮಾರ್ಪಡುತ್ತದೆ. ಹಾಗೂ ತರುವಾಯ ಅದು ಕೊಂಕಣಿಯಾಗಿ ಮಾರ್ಪಡುವಾಗ "ಆಅಲೋ" ಎಂದಾಗಿ ಉಚ್ಚರಿಸಲು ಅನುಕೂಲವಾಗುವಂತೆ "ಆಯಲೊ" ಎಂದು ಮಾರ್ಪಡುತ್ತದೆ. ಅಂದರೆ ಕೊಂಕಣಿಯಲ್ಲಿನ "ಆಯಲೊ" ಎಂಬುದೇ ಮೂಲರೂಪವಾಗಿದ್ದು ಮರಾಠಿಯಲ್ಲಿನ "ಆಲಾ" ಎಂಬುದು ತರುವಾಯದ ಮಾರ್ಪಾಟೆಂದು ಸಿದ್ಧವಾಗುತ್ತದೆ. ಮತ್ತು ಸಂಸ್ಕೃತ ಶಬ್ದಗಳಲ್ಲಿನ "ತ"ಕಾರವು ಶೌರಸೇನಿಯಲ್ಲಿ "ದ"ಕಾರವಾಗಿ ಮಾರ್ಪಟ್ಟ ತರುವಾಯ ಆ "ದ"ಕಾರವು ಕೊಂಕಣಿಯಲ್ಲಿ "ಲ"ಕಾರವಾಗಿ ಮಾರ್ಪಡುತ್ತದೆಂದು ಸಿದ್ಧವಾಗುತ್ತದೆ. ಅರ್ಥಾತ್ ಮರಾಠಿಯು ಕೊಂಕಣಿಯ ತರುವಾಯ ಕೊಂಕಣಿಯಿಂದಲೇ ಹುಟ್ಟಿದುದೆಂದು ಸಿದ್ಧವಾಗುತ್ತದೆ. ಈ ಕುರಿತು ಇನ್ನೂ ಸ್ಪಷ್ಟತರವಾದ ಉದಾಹರಣೆಗಳು ಈ ಪ್ರಬಂಧದಲ್ಲಿ ಯಥಾ ಪ್ರಸಂಗವಾಗಿ ಬರುವವು. ವಸ್ತುಸ್ಥಿತಿಯು ಹೀಗಿರುವುದರಿಂದ ಕೊಂಕಣಿಯನ್ನು ಹಳೆಯ ಮರಾಠಿಯೆಂದೂ, ಆಧುನಿಕ ಮರಾಠಿಯನ್ನು ಹೊಸ ಮರಾಠಿಯೆಂದೂ ಕರೆಯುವುದು-ಯಥಾರ್ಥವಾಗುತ್ತದೆ.

ಕೊಂಕಣಿ ಭಾಷೆಯನ್ನು ಪ್ರಾಕೃತವೆಂದು ಕರೆದ ಅಥವಾ ಕೆಲವರು ಮಹಾರಾಷ್ಟ್ರೀ ಪ್ರಾಕೃತವೆಂದು ಕರೆದ ವಿಭೇದದಿಂದ ರೂಪಾಂತರವಾದುದೆನ್ನುವುದಕ್ಕಿಂತ ಶೌರಸೇನೀ ಮತ್ತು ಮಹಾರಾಷ್ಟ್ರೀ ಪ್ರಾಕೃತಗಳ ಮಿಶ್ರರೂಪವಾಗಿದ್ದ "ಆವಂತೀ" ವಿಭೇದದಿಂದ ರೂಪಾಂತರವಾದುದೆನ್ನುವುದು ಹೆಚ್ಚು ಸಮರ್ಪಕವಾಗಿದೆ. ಏಕೆಂದರೆ ಸಂಸ್ಕೃತದ ಭೂತಕಾಲಿಕರೂಪ "ಆಗತಃ" ಎಂಬುದು ಶೌರಸೇನಿಯಲ್ಲಿ "ಆಅದೋ" ಆದ ತರುವಾಯ ಅದು ಕೊಂಕಣಿಯಲ್ಲಿ "ಆಯಲೊ". ಆಗಿ ಮಾರ್ಪಡುತ್ತದೆಂದು ಹಿಂದೆ ಹೇಳಿದೆ. ಸಂಸ್ಕೃತದ "ವ್ರಜತಿ = ಹೋಗುತ್ತಾನೆ; ಹೋಗುತ್ತಾಳೆ, ಮತ್ತು ಹೋಗುತ್ತದೆ" ಎಂಬರ್ಥದ ಕ್ರಿಯೆಯು ಶೌರಸೇನಿಯಲ್ಲಿ "ವಚ್ಚದಿ" ಎಂದೂ ಮಹಾರಾಷ್ಟ್ರೀ ಪ್ರಾಕೃತದಲ್ಲಿ "ವಚ್ಚಇ" ಎಂದೂ ರೂಪಾಂತರವಾಗುತ್ತದೆ. ಹಿಂದೆ ಕೊಂಕಣಿಯಲ್ಲಿ ವಚ್ಚಇ; ವ್ಹಣಇ ಮುಂತಾದ ರೂಪಗಳು ಬಳಕೆಯಲ್ಲಿದ್ದವೆಂಬುದರ ಪ್ರಮಾಣಗಳು ಕೊಂಕಣಿಯಲ್ಲಿ ಈಗಲೂ ಉಳಿದುಕೊಂಡಿವೆ. ಆದರೆ ವಚ್ಚದಿ. ಕರದಿ. ವ್ಹಣದಿ ಮುಂತಾದ ರೂಪಗಳು ಬಳಕೆಯಲ್ಲಿದ್ದವೆಂಬುದರ ಪ್ರಮಾಣಗಳು ಈ ತನಕ ದೊರೆತಿಲ್ಲ.

ಕೆಲವರು ಕೊಂಕಣಿಯು ಅರ್ಧಮಾಗಧಿಯಿಂದ ಹುಟ್ಟಿದ್ದಿತೆಂತಲೂ, ಬೇರೆ ಕೆಲವರು ಪೈಶಾಚಿಯಿಂದ ಹುಟ್ಟಿದ್ದಿತೆಂತಲೂ ಅಂದಿದ್ದಾರೆ. ಆದರೆ ಅವರ ಆ ಹೇಳಿಕೆಯಲ್ಲಿ ಹುರುಳಿಲ್ಲವೆಂದು ಮುಂದಿನ ವಿವರಗಳಿಂದ ತಿಳಿಯಬಹುದು, ಮಾಗಧೀ ಭಾಷೆಯ ಪ್ರಕೃತಿಯು ಅಂದರೆ ಮೂಲವು ಶೌರಸೇನಿಯಾಗಿರುತ್ತದೆ. ಅಂದರೆ ಶೌರಸೇನೀ ಭಾಷೆಯಲ್ಲಾದ ಕೆಲವು ಹೊಸ ಮಾರ್ಪಾಟುಗಳಿಂದಾಗಿ ಮಾಗಧೀ ಎಂಬ ಕವಲು ಹೊರಟಿದೆ. ಶೌರಸೇನೀ ಮತ್ತು ಮಾಗಧಿಗಳೊಳಗಿನ ಮುಖ್ಯಭೇದವೆಂದರೆ ಶೌರಸೇನಿಯಲ್ಲಿ ಸಂಸ್ಕೃತದ ಅಕಾರಾಂತ ಪುಲ್ಲಿಂಗ ಶಬ್ದಗಳು ಪ್ರಥಮಾ ವಿಭಕ್ತಿಯ ಏಕವಚನದಲ್ಲಿ ಓಕಾರಾಂತವಾಗುತ್ತವೆ. ಶ ಮತ್ತು ಷ ಎಂಬ ವರ್ಣಗಳ ಬದಲಿಗೆ "ಸ" ಎಂಬ ಒಂದೇ ವರ್ಣಬರುತ್ತದೆ. ಉದಾ:— ಸಂಸ್ಕೃತ–ಪುರುಷಃ = ಶೌರಸೇನೀ–ಪುರಿಸೋಃ ಸಂ. ತಾದೃಶಃ = ಶೌ. ತಾರಿಸೋ. ಸಂ, ಸಃ = ಶೌ. ಸೋ. ಸಂ. ಕತರಃ = ಶೌ. ಕಯರೋ ಇತ್ಯಾದಿ. ಶೌರಸೇನಿಯಲ್ಲಿ ಓಕಾರಾಂತವಾಗಿರುವ ಪುಲ್ಲಿಂಗ ಶಬ್ದಗಳು ಮಾಗಧಿಯಲ್ಲಿ "ಏ"ಕಾರಾಂತವಾಗುತ್ತವೆ. ಮತ್ತು ಶೌರಸೇನಿ ಶಬ್ದಗಳಲ್ಲಿನ "ರ" ಮತ್ತು "ಸ" ವರ್ಣಗಳು ಮಾಗಧಿಯಲ್ಲಿ "ಲ" ಮತ್ತು "ಶ"ಗಳಾಗಿ ಮಾರ್ಪಡುತ್ತವೆ. ಹಾಗೆಯೇ ಸಂಸ್ಕೃತದ 'ಕೃತಮ್' ಎಂಬ ಭೂತಕಾಲಿಕ ಕೃದಂತವು ಶೌರಸೇನಿಯಲ್ಲಿ "ಕಿದಂ" ಎಂದಾಗುವುದಾದರೆ ಮಾಗಧಿಯಲ್ಲಿ "ಕಟಂ" ಎಂದಾಗುತ್ತದೆ. ಆದುದರಿಂದ ಹಿಂದೆ ಉದಹರಿಸಿದ ಶೌರಸೇನಿಯಲ್ಲಿನ ಪುರಿಸೋ, = ಗಂಡಸು, ತಾರಿಸೋ = ಅಂಥವನು, ಸೋ = ಅವನು; ಕಯರೋ = ಯಾವನು ಎಂಬ ಶಬ್ದಗಳು ಮಾಗಧಿಯಲ್ಲಿ ಅನುಕ್ರಮವಾಗಿ ಪುಲಿಶೇ, ತಾಲಿಶೇ: ಶೇ ಮತ್ತು ಕಯಲೇ ಎಂದು ಮಾರ್ಪಡುತ್ತವೆ. ಅರ್ಧಮಾಗಧೀ ಎಂಬುದರ ಅರ್ಥವು, ಶೌರಸೇನಿಯು ಪೂರ್ಣಮಾಗಧಿಯಾಗಿ ಮಾರ್ಪಡದೇ ಅರ್ಧಸ್ಥಿತಿಯಲ್ಲಿದ್ದ ಮಾಗಧಿಯೆಂದಿರುತ್ತದೆ. ಅಂದರೆ ಅರ್ಧಮಾಗಧಿಯಲ್ಲಿ ಶೌರಸೇನೀ ಶಬ್ದಗಳಲ್ಲಿನ ರ ಮತ್ತು ಸಗಳು ಲ ಮತ್ತು ಶಗಳಾಗಿ ಮಾರ್ಪಡುವುದಿಲ್ಲ ಅಂದರೆ ಹಿಂದೆ ಉದರಿಸಿದ ಶಬ್ದಗಳು ಅರ್ಧಮಾಗಧಿಯಲ್ಲಿ ಅನಕ್ರಮವಾಗಿ ಪುರಿಸೇ, ತಾರಿಸೇ, ಸೇ ಮತ್ತು ಕಯರೇ ಎಂದಾಗುತ್ತವೆ. ಆದರೆ ಕೊಂಕಣಿಯಲ್ಲಿ ಸಂಸ್ಕೃತದ ಅಕಾರಾಂತ ಪುಲ್ಲಿಂಗ ಶಬ್ದಗಳು ಪ್ರಥಮಾ ವಿಭಕ್ತಿಯ ಏಕವಚನದಲ್ಲಿ ಇಂದಿಗೂ ಓಕಾರಾಂತವಾಗಿಯೇ ಇರುವುದರಿಂದಲೂ, ಕೃತಮ್ ಎಂಬ ಭೂತಕಾಲಿಕ ಕೃದಂತದ ಕೊಂಕಣಿರೂಪವು ಮಾಗಧಿಯಂತೆ ಕಟಂ ಎಂದಿರದೆ ಕೆಲೆಂ ಎಂದಿರುವುದರಿಂದಲೂ, ಮಾಗಧಿಯ ಇತರ ನಿಯಮಗಳು ಕೂಡ ಕೊಂಕಣಿಗೆ ಅನ್ವಯಿಸುವುದಿಲ್ಲವಾದುದ

ರಿಂದಲೂ ಕೊಂಕಣಿಯು ಅರ್ಧಮಾಗಧಿಯಿಂದ ಹುಟ್ಟಿದುದೆನ್ನುವ ವಾದದಲ್ಲಿ ಹುರುಳಿಲ್ಲವೆಂದು ಸಿದ್ಧವಾಗುತ್ತದೆ.

ಪೈಶಾಚೀ ಭಾಷೆಯ ಪ್ರಕೃತಿಯು ಅಂದರೆ ಮೂಲವು ಕೂಡ ಶೌರಸೇನಿಯೇ ಆಗಿರುವುದರಿಂದ ಪೈಶಾಚಿಯಲ್ಲಿನ ಕೆಲವು ಶಬ್ದಗಳು ಕೊಂಕಣಿಯಂತೆಯೇ ಇರುವುದು ಸ್ವಾಭಾವಿಕವಾಗಿದೆ. ಆದರೆ ಕೊಂಕಣಿ ಮತ್ತು ಪೈಶಾಚಿಗಳಲ್ಲಿ ಶಬ್ದಗಳ ಕೊನೆಯಲ್ಲಿನ ಸ್ವರದ ಮಟ್ಟಿಗೆ ಮಾತ್ರ ಸಾಮ್ಯವಿರುತ್ತದೆಯೇ ಹೊರತು ಶಬ್ದಗಳಲ್ಲಿನ ವರ್ಣಗಳಲ್ಲಿ ಸಾಮ್ಯವಿರುವುದಿಲ್ಲ. ಪೈಶಾಚೀ ಶಬ್ದಗಳಲ್ಲಿನ ವರ್ಣವಿಕಾರಗಳ ಕುರಿತು ವರರುಚಿಯು ಪ್ರಾಕೃತ ಪ್ರಕಾಶದಲ್ಲಿ ಮುಂದಿನ ಸೂತ್ರಗಳಿವೆ:—"**ವರ್ಗಾಣಾಂ ತೃತೀಯ ಚತುರ್ಥಯೋರಯುಜ-ಯೋರನಾದ್ಯೋರಾದ್ಯೌ ॥ ೧೦-೩ ॥** ಅಂದರೆ ವರ್ಗಗಳಲ್ಲಿನ ತೃತೀಯ ಮತ್ತು ಚತುರ್ಥವರ್ಣಗಳು ಶಬ್ದದ ಆದಿಯಲ್ಲಿರದಿದ್ದರೆ ಮತ್ತು ಸಂಯುಕ್ತವಾಗಿರದಿದ್ದರೆ, ಅವುಗಳ ಬದಲಿಗೆ ಅನುಕ್ರಮವಾಗಿ ಪ್ರಥಮ ದ್ವಿತೀಯ ವರ್ಣಗಳು ಆದೇಶವಾಗಿ ಬರುತ್ತವೆ. **॥ ಣೋ ನಃ ॥ ೧೦-೫ ॥** ಅಂದರೆ 'ಣ'ಕಾರವಿದ್ದುದು 'ನ' ಆಗುತ್ತದೆ. ಹೇಮಚಂದ್ರನ ಪ್ರಾಕೃತ ಅಧ್ಯಾಯದಲ್ಲಿ ಮುಂದಿನ ಎರಡು ಸೂತ್ರಗಳಿವೆ:—**ತದೋಸ್ತಃ ॥ ೪-೩೦೭ ॥** ತ ಮತ್ತು ದ ಗಳು ಎಲ್ಲ ಸಂದರ್ಭಗಳಲ್ಲಿ "ತ" ಆಗುತ್ತವೆ. **ಲೋ ಳಃ ॥ ೧೦-೩೦೮ ॥** ಅಂದರೆ "ಲ"ದ ಸ್ಥಾನದಲ್ಲಿ "ಳ" ಬರುತ್ತದೆ. ಹಿಂದಿನ ಸೂತ್ರಗಳಿಂದ ನಿಷ್ಪನ್ನವಾಗುವುದೇನೆಂದರೆ ಪೈಶಾಚಿಯಲ್ಲಿ "ಣ" 'ದ' ಮತ್ತು "ಲ" ಎಂಬ ವರ್ಣಗಳು ಯಾವ ಸಂದರ್ಭದಲ್ಲಿಯೂ ಬರುವುದಿಲ್ಲ. ಆದುದರಿಂದ ಶೌರಸೇನೀ ಭಾಷೆಯಲ್ಲಿನ–ದಾಮೋದರೋ, ಮಾಧವೋ. ಗೋವಿಂದೋ, ಮದನೋ. ಮೇಘೋ, ಸರಭಸಂ, ಗಗನಂ, ಗುಣಗಣಂ, ಜಲಂ ಮೊದಲಾದ ಶಬ್ದಗಳು ಪೈಶಾಚಿಯಲ್ಲಿ ಅನುಕ್ರಮವಾಗಿ—ತಾಮೋತರೋ, ಮಾಥವೋ, ಗೋವಿಂತೋ, ಮತನೋ, ಮೇಖೋ, ಸರಫಸಂ, ಗಕನಂ, ಗುನಗನಂ, ಜಳಂ ಮುಂತಾಗಿ ಮಾರ್ಪಡುತ್ತವೆ. ಆದರೆ ಕೊಂಕಣಿಯಲ್ಲಿ ಶಬ್ದಗಳಲ್ಲಿನ "ಲ" ಕಾರವು ಕೆಲವು ಸಂದರ್ಭಗಳಲ್ಲಿ "ಳ" ಕಾರವಾಗಿ ಮಾರ್ಪಡುತ್ತದಾದರೂ, ಪೈಶಾಚಿಯಲ್ಲಾಗುವ ಇತರ ಮಾರ್ಪಾಟುಗಳು ಕೊಂಕಣಿಯಲ್ಲಿ ಆಗುವುದಿಲ್ಲ. ಅರ್ಥಾತ್ ಪೈಶಾಚಿಯಲ್ಲಿನ "ತಾಮೋತರ. ಕುತುಂಬ, ಜಳ, ಗುನ, ಮೊದಲಾದ ರೂಪಾಂತರಗಳು ಕೊಂಕಣಿಯ ಜಾಯಮಾನಕ್ಕೆ ವಿರುದ್ಧವಾಗಿವೆ. ಆದುದರಿಂದ

ಕೊಂಕಣಿಯು ಪೈಶಾಚೀ ಪ್ರಾಕೃತದಿಂದ ಹುಟ್ಟಿದುದೆನ್ನುವ ವಾದದಲ್ಲಿಯೂ ಹುರುಳಿಲ್ಲವೆಂದು ಸಿದ್ಧವಾಗುತ್ತದೆ.

ವಾಸ್ತವಿಕವಾಗಿ ಪೈಶಾಚೀ ಭಾಷೆಯು ವಾಯುವ್ಯ ಗಡಿನಾಡಿನಲ್ಲಿ ಬಳಕೆಯಲ್ಲಿದ್ದ ಭಾಷೆಯಾಗಿದ್ದು ಉತ್ತರ ಪಂಜಾಬದಲ್ಲಿ ಶೌರಸೇನೀ ವಿಭೇದದ ಮೂಲ ರೂಪ ಅಂದರೆ ಆದ್ಯ ಪ್ರಾಕೃತವು ಬಳಕೆಯಲ್ಲಿತ್ತು. ಮತ್ತು ಆ ಆದ್ಯಪ್ರಾಕೃತವು ಮೌರ್ಯವಂಶದವರ ತಾಯಿನುಡಿಯಾಗಿತ್ತು. ಆದುದರಿಂದಲೇ ಮೌರ್ಯ ಚಕ್ರವರ್ತಿ ಚಂದ್ರಗುಪ್ತನ ಮೊಮ್ಮಗನಾಗಿದ್ದ ಅಶೋಕ ಚಕ್ರವರ್ತಿಯ ಅಧಿಕಾಂಶ ಧರ್ಮಲೇಖಗಳು ಆದ್ಯಪ್ರಾಕೃತದಲ್ಲಿ ಬರೆಯಲ್ಪಟ್ಟಿದ್ದವೆನ್ನಬಹುದು. ಉತ್ತರಪಂಜಾಬದ ಮೌರ್ಯವಂಶದವರು ಸೌರಾಷ್ಟ್ರದಲ್ಲಿ ಮತ್ತು ಕೊಂಕಣದಲ್ಲಿ ಆಳುತ್ತಿದ್ದರೆಂಬ ಉಲ್ಲೇಖಗಳು ಚರಿತ್ರೆಯ ಪುಸ್ತಕಗಳಲ್ಲಿ ದೊರೆಯುತ್ತಿವೆಯಾದರೂ ಅವುಗಳ ವಿಸ್ತೃತವಾದ ವಿವರಗಳು ದೊರೆಯುವುದಿಲ್ಲ. ಹೀಗಾಗಿ ಆ ಕುರಿತು ಹೆಚ್ಚಿಗೇನನ್ನೂ ಬರೆಯಲು ಸಾಧ್ಯವಿಲ್ಲ.

ಕೊಂಕಣಿಯು ಅಥವಾ ಕೆಲವರು ಮಹಾರಾಷ್ಟ್ರೀ ಪ್ರಾಕೃತವೆಂದು ಕರೆದ ಭಾಷೆಯು ಕೊಂಕಣದ ಹಾಗೂ ಗೋವದೊಳಗಿನ ಜನರ ಮತ್ತು ಗೋವದಿಂದ ವಲಸೆ ಹೋಗಿ ಇತರ ಪ್ರದೇಶಗಳಲ್ಲಿ ನೆಲಸಿದ ಸಕಲ ಹಿಂದುಗಳ ಕ್ರೈಸ್ತರ ಮತ್ತು ಮುಸಲ್ಮಾನರ ತಾಯಿನುಡಿಯಾಗಿದೆ. ಹಾಗಿದ್ದರೂ ಆ ಭಾಷೆಯು ಮೂಲದಲ್ಲಿ ಸಾರಸ್ವತ ಬ್ರಾಹ್ಮಣರ ತಾಯಿನುಡಿಯಾಗಿದ್ದುದರಿಂದ ಅದು ಅವರಿಂದಲೇ ಪ್ರಭಾವಿತವಾಗಿದೆ. ಅರ್ಥಾತ್ ಕೊಂಕಣಿಯಲ್ಲಿ ಸಾರ್ವತ್ರಿಕವಾಗಿ ಬಳಕೆಯಲ್ಲಿರುವ "ಉಜ್ಞೊ=ಬೆಂಕಿ ಮತ್ತು ಉರಿ" "ಸೂಂಬ=ಹುರಿಹಗ್ಗ" "ಚರುವಿ=ಅನ್ನ ಬೇಯಿಸುವ ಪಾತ್ರೆ" "ದಾಯಿ=ಸಟ್ಟುಗ ಮತ್ತು ಹಾವಿನ ಹೆಡೆ ಮುಂತಾದ ಅರ್ಥಗಳುಳ್ಳ ಯಜ್ಞಸಂಬಂಧೀ ಶಬ್ದಗಳೂ "ಉದಕ=ನೀರು" "ಧೂವ= ಮಗಳು" ಮುಂತಾದ ಬಳಕೆಯ ಶಬ್ದಗಳೂ ಸಾರಸ್ವತ ಬ್ರಾಹ್ಮಣರಿಂದಲೇ ಬಳಕೆಗೆ ಬಂದವುಗಳಾಗಿವೆ ಅಂದರೆ ಕೊಂಕಣಿಯು ಅಥವಾ ಮೂಲಮಹಾರಾಷ್ಟ್ರೀಯು ಸಾರಸ್ವತ ಬ್ರಾಹ್ಮಣರಿಂದಲೇ ಬಳಕೆಗೆ ಬಂದಿದ್ದಿತೆಂದು ಹೇಳಿದರೆ ತಪ್ಪಾಗದು.

ಪೋರ್ತುಗೀಸರು ಭಾರತವರ್ಷದ ಕಡೆಗೆ ಬರುವುದರ ಹಲವು ಶತಮಾನಗಳ ಮೊದಲಿನಿಂದಲೂ ತುಳುನಾಡಿನಲ್ಲಿ ಸಾರಸ್ವತ ಬ್ರಾಹ್ಮಣರು ನೆಲಸಿದ್ದುದರಿಂದ ಅವರು ನುಡಿಯುವ ಕೊಂಕಣಿಯಲ್ಲಿ ಮತ್ತು ಪೋರ್ತುಗೀಸರು ಗೋವವನ್ನು ಹಿಡಿದ ತರುವಾಯ ವಲಸೆಬಂದ ಜನರು ಅಂದರೆ ಕ್ರೈಸ್ತರು ಹಾಗೂ

ಜಾರಡೇ. ಸೋನಾರ. ಗಾವುಂಡೆ ಮೊದಲಾದ ಹಿಂದುಗಳು ನುಡಿಯುವ
ಕೊಂಕಣಿಯಲ್ಲಿ ತುಸು ಅಂತರವಿದೆ. ಅಂದರೆ ತುಳುನಾಡಿನಲ್ಲಿ ಮೊದಲಿನಿಂದಲೂ
ನೆಲಸಿದ್ದ ಸಾರಸ್ವತ ಬ್ರಾಹ್ಮಣರು ನುಡಿಯುವ ಕೊಂಕಣಿಯಲ್ಲಿ ಗೋವದ
ಕೊಂಕಣಿಗೂ ಮರಾಠಿಗೂ ಸಾಮಾನ್ಯಗಳಾಗಿರುವ "ಮೋಟೆಂ = ತೋರ"
ಮತ್ತು "ದಪ್ಪ" "ಮೊಟವೆಂ = ಗಿಡ್ಡ" "ಬಾರೀಕ = ಸಪುರ" "ಲಾಂಬ = ಉದ್ದ
ಮತ್ತು ದೂರ" "ಪಾಟಿಂ = ಹಿಂದೆ ಮತ್ತು ಮರಳಿ" "ಮುಂತಾದ ಶಬ್ದಗಳಿಲ್ಲ.
ಅವುಗಳ ಬದಲಿಗೆ ಅನುಕ್ರಮವಾಗಿ "ಥೋರ" "ಗುಡ್ಡೆಂ" "ಸಪೂರ" "ದೀಘ"
"ಮಾಗಶಿಂ ಇಲ್ಲವೇ ಪರತೂನ್" ಎಂಬ ಶಬ್ದಗಳಿವೆ. ಬಾರೀಕ ಎಂಬ ಶಬ್ದವು
ಪಾರಸಿ ಮೂಲದ್ದಾಗಿರುತ್ತದೆ. ಇತರ ಶಬ್ದಗಳು ಹಿಂದೀ ಭಾಷೆಯ ಸಂಪರ್ಕ
ದಿಂದಾಗಿ ಮರಾಠಿಯಲ್ಲಿ ಮತ್ತು ಗೋವದ ಕೊಂಕಣಿಯಲ್ಲಿ ಸೇರಿದ್ದವು. ಅಲ್ಲದೆ
ಮಹಾರಾಷ್ಟ್ರವು ಉತ್ತರದಲ್ಲಿ ಹಿಂದೀ ಮತ್ತು ಮುಂಡ ಭಾಷೆಗಳು ಬಳಿಕೆಯಲ್ಲಿದ್ದ
ಮಧ್ಯಪ್ರದೇಶಕ್ಕೆ ಹತ್ತಿಕೊಂಡಿರುವುದರಿಂದ ಮೂಲಮಹಾರಾಷ್ಟ್ರಿಯ ಮೇಲೆ ಆ
ಎರಡು ಭಾಷೆಗಳ ಪ್ರಭಾವವಾಗುವುದು ಸ್ವಾಭಾವಿಕವಾಗಿತ್ತು. ಅರ್ಥಾತ್
ಕೊಂಕಣಿ (= ಮೂಲಮಹಾರಾಷ್ಟ್ರಿ) ಭಾಷೆಯ ಮೇಲೆ ಆ ಎರಡು ಭಾಷೆಗಳ
ಪ್ರಭಾವ ಬಿದ್ದುದರಿಂದ ಮಹಾರಾಷ್ಟ್ರದ ಭಾಷೆಯು ದಕ್ಷಿಣ ಪ್ರಾಂತದ ಭಾಷೆ
ಯಿಂದ ಕವಲೊಡೆದು ಬೇರಾಯಿತೆನ್ನಬಹುದು. ದಕ್ಷಿಣಕನ್ನಡ ಜಿಲ್ಲೆಯ
ಸಾರಸ್ವತ ಬ್ರಾಹ್ಮಣರು ನುಡಿಯುವ ಕೊಂಕಣಿಯೊಂದಿಗೆ ಗೋವದ ಕೊಂಕಣಿ
ಯನ್ನು ಮತ್ತು ಮರಾಠಿಯನ್ನು ಹೋಲಿಸಿ ವಿಮರ್ಶಿಸಿದರೆ ಆ ಪ್ರಭಾವವು
ಯಾವ ಬಗೆಯದೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ.

ನಾನು ಕೊಂಕಣಿ ಮತ್ತು ಮರಾಠಿಗಳ ಪೂರ್ವಾಪರ ಸಂಬಂಧವನ್ನು
ನಿರ್ಣಯಿಸುವಲ್ಲಿ ಹಿಂದೆ ವಿವರಿಸಿದಂಥ ತುಲನಾತ್ಮಕವಾದ ವೈಜ್ಞಾನಿಕ ಪದ್ಧತಿ
ಯನ್ನು ಅನುಸರಿಸಿದ್ದೇನೆ. ಮತ್ತು ಮರಾಠಿಯು ಕೊಂಕಣಿಯಿಂದಲೇ ಹುಟ್ಟಿದು
ದೆಂದು ಸಂದೇಹಕ್ಕೆ ಎಡೆಯಿಲ್ಲದಂತೆ ಸಿದ್ಧಪಡಿಸಿದ್ದೇನೆ. ಅಂದರೆ ಆ ಎರಡೂ
ಭಾಷೆಗಳನ್ನು ಒಂದರೊಂದಿಗೆ ಇನ್ನೊಂದನ್ನು ಹೋಲಿಸಿ ವೈಜ್ಞಾನಿಕ ರೀತಿಯಿಂದ
ವಿಮರ್ಶಿಸಿ ನೋಡಿದ ತರುವಾಯ ಹಾಗೂ ಹಲವು ಪ್ರಾಚೀನ ಪ್ರಾಕೃತ ಶಬ್ದ
ರೂಪಗಳು ಕೊಂಕಣಿಯಲ್ಲಿ ಮಾತ್ರ ಇರುವುದನ್ನು ಕಂಡುಕೊಂಡ ತರುವಾಯ
ನನ್ನ ವಿವೇಚನೆಗೆ ಸರಿಯೆಂದು ತೋರಿದ ನಿಷ್ಕರ್ಷವನ್ನು ಪಕ್ಷಪಾತವಿಲ್ಲದೇ
ನಿರೂಪಿಸಿದ್ದೇನೆ. ಹಾಗಿದ್ದರೂ ನನ್ನ ಪ್ರತಿಪಾದನೆಯು ನೂರಕ್ಕೆ ನೂರು ಸರಿ
ಯಾದುದೆಂದು ಹೇಳುವ ಸಾಹಸವನ್ನು ಮಾಡಲಾರೆ. ಏಕೆಂದರೆ ನನ್ನ ಪ್ರತಿಪಾದನೆ

ಯಲ್ಲಿ ದೋಷಗಳಿರಲೂ ಬಹುದು. ಸುಜ್ಞರು ಅಂಥ ದೋಷಗಳನ್ನು ತಿಳಿಸಿದಲ್ಲಿ ಧನ್ಯವಾದಗಳೊಂದಿಗೆ ಸ್ವೀಕರಿಸುವೆನು.

ಕೆಲವರು ಕೊಂಕಣಿಗೆ ಲಿಪಿ ಇಲ್ಲವೆನ್ನುತ್ತಿರುವುದರಿಂದ ಇದರಲ್ಲಿ ಲಿಪಿಯ ಕುರಿತಾಗಿಯೂ ಕೆಲವು ಮಾತುಗಳನ್ನು ಸೇರಿಸಬೇಕಾಗಿ ಬಂದಿದೆ. ಬ್ರಿಟಿಷರು ಭಾರತ ವರ್ಷವನ್ನು ಕಬಳಿಸಿದ ತರುವಾಯ ಅವರು ಭಾರತೀಯರ ಕುರಿತು ಹಲವು ನಿರಾಧಾರವಾದ ಕಲ್ಪನೆಗಳನ್ನು ಪ್ರಚಾರ ಮಾಡಿದ್ದಾರೆ. ಪ್ರಾಚೀನ ಭಾರತೀಯರಲ್ಲಿ ಲಿಪಿ ಇರಲಿಲ್ಲವೆಂಬುದು ಅಂಥ ಕಲ್ಪನೆಗಳಲ್ಲಿ ಒಂದಾಗಿದೆ. ಅಂದರೆ ಇಂದು ಭಾರತ ವರ್ಷದಲ್ಲಿ ಬಳಕೆಯಲ್ಲಿರುವ ಸಕಲ ಭಾರತೀಯ ವರ್ಣ ಮಾಲೆಗಳ ಮೂಲವಾಗಿದ್ದ "ಬ್ರಾಹ್ಮೀ" ಎಂಬ ಹೆಸರಿನ ವರ್ಣಮಾಲೆಯು, ಪಾಶ್ಚಾತ್ಯರು ಬಳಸುವ ರೋಮನ್ ವರ್ಣಮಾಲೆಯಂತೆಯೇ ರೇಖಾತ್ಮಕ ವಾಗಿದ್ದುದರಿಂದ–ರೋಮನ್ ವರ್ಣಮಾಲೆಯಂತೆಯೇ ಅದು ಕೂಡ ಸೆಮಿಟಿಕ್ ಮೂಲದ ಫಿನಿಷ್ಯನ್ ಮತ್ತು ಅರಮೇಇಕ್ ವರ್ಣಮಾಲೆಗಳಿಂದ ರೂಪಾಂತರ ಹೊಂದಿದ್ದಿತೆಂದು ಹಾಗೂ ಬ್ರಾಹ್ಮೀ ವರ್ಣಮಾಲೆಯು ಮೂಲದಲ್ಲಿ ಭಾರತೀ ಯರ ಸ್ವಂತದ ನಿರ್ಮಾಣವಾಗಿರಲಿಲ್ಲವೆಂದು ಅವರು ವಾದಿಸಿದ್ದರು:— ಅವರು ಹಾಗೆ ಹೇಳಿದುದರ ಒಂದು ಉದ್ದೇಶವು ಭಾರತೀಯ ಭಾಷೆಗಳನ್ನು ಬರೆಯಲು ತಮ್ಮದಾದ ರೋಮನ್ ವರ್ಣಮಾಲೆಯನ್ನು ಬಳಕೆಗೆ ತರುವುದಾಗಿತ್ತು. ಹಾಗೆಯೇ ಭಾರತೀಯ ಹಿಂದೂ ಸಮಾಜದ ಜನರಲ್ಲಿ ಕಲಹ ಹುಟ್ಟಿಸಿ, ತಮ್ಮ ಆಳ್ವಿಕೆಯನ್ನು ಭಾರತ ವರ್ಷದಲ್ಲಿ ಶಾಶ್ವತಗೊಳಿಸುವ ಉದ್ದೇಶದಿಂದ, ಹಿಂದೂ ಸಮಾಜವನ್ನು ಆರ್ಯ, ದ್ರಾವಿಡ, ಮುಂಡ ಇತ್ಯಾದಿಯಾಗಿ ವಿಭಜಿಸಿ, ಆರ್ಯ ಜನರು ಶಿವಾರಾಧನೆಯನ್ನು ಮತ್ತು ನಾಗಪೂಜೆಯನ್ನು, ದ್ರಾವಿಡರಿಂದ ಇಲ್ಲವೇ ಮುಂಡರಿಂದ ಪಡೆದಿದ್ದರೆಂಬ ನಿರಾಧಾರಾವಾದ ಮತ್ತೊಂದು ಕಲ್ಪನೆಯನ್ನು ಪ್ರಚಾರ ಮಾಡಿದ್ದರು. ಈ ಕಲ್ಪನೆಯು, ಸಿಂಧೂ ಕಣಿವೆಯ ಸಂಸ್ಕೃತಿಯು ಆರ್ಯರದಲ್ಲವೆಂದು ಸಾಧಿಸುವ ಹಂಚಿಕೆಯಲ್ಲಿನ ಮೊದಲನೆಯ ಹಂತವಾಗಿತ್ತು. ಭಾರತೀಯ ಇತಿಹಾಸದಲ್ಲಿ ಅಂಥ ನಿರಾಧಾರವಾದ ಕಲ್ಪನೆಗಳನ್ನು ಇರಗೊಡು ವುದು ದೇಶಹಿತದ ದೃಷ್ಟಿಯಿಂದ ಅಪಾಯಕರವಾಗಿರುವುದರಿಂದ ನಾನು ಬ್ರಿಟಿಷರ ಆ ಕಲ್ಪನೆಗಳನ್ನು ಪ್ರಮಾಣಗಳ ಮೂಲಕ ನಿರಾಕರಿಸಲು ಪ್ರಯತ್ನಿಸಿದ್ದೇನೆ. ಹಲವು ಮಂದಿ ಭಾರತೀಯ ವಿದ್ವಾಂಸರು ಲಿಪಿಯ ಕುರಿತಾಗಿ ಬ್ರಿಟಿಷರು ಮುಂದೆ ತಂದಿದ್ದ ವಾದವನ್ನು ಅಲ್ಲಗಳೆಯಲು ಪ್ರಯತ್ನಿಸಿದ್ದಾರೆ. ಆದರೆ ಯಾವನೊಬ್ಬ ವಿದ್ವಾಂಸನಾದರೂ ಬ್ರಾಹ್ಮೀ ವರ್ಣಮಾಲೆಯು ವಾಸ್ತವಿಕವಾಗಿ

ಯಾವ ಮೂಲದಿಂದ ಹುಟ್ಟಿದ್ದಿತೆಂದು ಸಂದೇಹಕ್ಕೆ ಹಾಗೂ ಪ್ರತಿವಾದಕ್ಕೆ ಎಡೆ ಯಿಲ್ಲದಂತೆ ಸಿದ್ಧಪಡಿಸಲು ಶಕ್ತನಾಗದುದರಿಂದ ಭಾರತೀಯರ ನಿರಾಕರಣವು ನಿಷ್ಫಲವಾಗಿದೆ ಮತ್ತು ಬ್ರಿಟಿಷ್ ವಿದ್ವಾಂಸರ ವಾದವು ಹಾಗೆಯೇ ಉಳಿದು ಕೊಂಡಿದೆ.

ಬ್ರಾಹ್ಮೀ ವರ್ಣಮಾಲೆಯು ಯಾವ ಮೂಲದಿಂದ ಹುಟ್ಟಿದುದೆಂದು ಭಾರತೀಯ ವಿದ್ವಾಂಸರಿಂದ ಹೇಳಲು ಸಾಧ್ಯವಿಲ್ಲವೆಂದು ಬಗೆದಿದ್ದ ಎಡ್ವಾರ್ಡ್ ಥಾಮಸ್ ಎಂಬ ಬ್ರಿಟಿಷ್ ವಿದ್ವಾಂಸರೊಬ್ಬರು ಅಶೋಕ ಚಕ್ರವರ್ತಿಯು ದಕ್ಷಿಣ ಭಾರತದಲ್ಲಿ ಕೆತ್ತಿಸಿದ್ದ ಧರ್ಮಶಾಸನಗಳಲ್ಲಿ ಬಳಸಿದ ಬ್ರಾಹ್ಮೀ ಲಿಪಿ ಯಲ್ಲಿನ ಕೆಲವು ವರ್ಣಗಳು ಉತ್ತರ ಭಾರತದಲ್ಲಿನ ವರ್ಣಗಳಿಂದ ತುಸು ಭಿನ್ನ ವಾಗಿದ್ದುದರ ಮೇಲಿಂದ ಬ್ರಾಹ್ಮೀ ವರ್ಣಮಾಲೆಯು ಮೊತ್ತಮೊದಲು ದಕ್ಷಿಣ ಭಾರತದಲ್ಲಿಯೇ ರೂಪುಗೊಂಡಿದ್ದಿತೆಂತಲೂ, ದಕ್ಷಿಣ ಭಾರತದಲ್ಲಿನ ದ್ರಾವಿಡ ಜನರೇ ಫಿನಿಶ್ಯನ್ ವರ್ಣಮಾಲೆಯಿಂದ ಅದನ್ನು ರೂಪಾಂತರಿಸಿದ್ದರೆಂತಲೂ ವಾದಿಸಿದ್ದರು.[1] ಆದರೆ ಹಾಗೆ ರೂಪಾಂತರಿಸಿದ್ದು ಯಾರು ಎಲ್ಲಿ ಮತ್ತು ಯಾವಾಗ ಎಂಬುದನ್ನು ಮಾತ್ರ ಅವರಿಂದ ಹೇಳಲು ಸಾಧ್ಯವಾಗಿರಲಿಲ್ಲ. ಮತ್ತು ಅವರು ತನ್ನ ವಾದವನ್ನು ಸಿದ್ಧಪಡಿಸಲು ಯಾವುದೊಂದು ದೃಢವಾದ ಪ್ರಮಾಣವನ್ನು ಮುಂದೆ ತಂದಿರಲಿಲ್ಲ. ಅವರ ಅಭಿಪ್ರಾಯವನ್ನು ಅನುಸರಿಸಿ ಬೆಳಗಾಂವಿಯ ಶ್ರೀ. ಪ. ಗೋ. ಕುಲಕರ್ಣಿ ಎಂಬವರು ಕೆಲವು ವರ್ಷಗಳ ಹಿಂದೆ "ಜಯ ಕರ್ಣಾಟಕ" ಮಾಸಪತ್ರಿಕೆಯಲ್ಲಿ ಒಂದು ದೀರ್ಘವಾದ ಲೇಖನವನ್ನು ಪ್ರಕಟಿಸಿ ಅದರಲ್ಲಿ "ಬ್ರಾಹ್ಮೀ ಲಿಪಿಗೆ ಮೂಲದಲ್ಲಿ ದ್ರಾವಿಡ ಲಿಪಿಯೇ ಇರ ಬೇಕೆಂಬ ಶಂಕೆಯು ದೃಢವಾಗುತ್ತದೆ." ಎಂದಿದ್ದರು. ಇದೇ ೧೯೬೮ನೆಯ ಇಸವಿ ಜುಲಾಯಿ ೨೮ ಆದಿತ್ಯವಾರದ "The Hindu weekly Magazine" ದಲ್ಲಿ ಶ್ರೀಮಾನ್ ಆರ್. ನಾಗಸ್ವಾಮಿ ಎಂಬ ಲಿಪಿ ತಜ್ಞ ತಮಿಳು ವಿದ್ವಾಂಸರು ಪ್ರಕಟಿಸಿದ "The Irulapatti Herostones; Land Marks in S. Indian History" ಎಂಬ ಲೇಖನದಲ್ಲಿ ತಮಿಳು ನಾಡಿನ ಗುಹೆಗಳಲ್ಲಿ ಕಂಡು ಬಂದ ಲೇಖನಗಳ "ಬ್ರಾಹ್ಮೀ ಲಿಪಿ"ಯನ್ನು "ದಮಿಳಿ" ಎಂದು ಹೊಸ ಹೆಸರಿನಿಂದ ಕರೆದಿದ್ದಾರೆ. ಅವರು ತನ್ನ ಮೊದಲಿನ ಲೇಖನಗಳಲ್ಲಿ ಆ ಲಿಪಿಯನ್ನು "ಬ್ರಾಹ್ಮೀ" ಎಂದೇ ಕರೆದಿದ್ದರು. ಅಂದರೆ ಬ್ರಾಹ್ಮೀ ಲಿಪಿಯ ವಾಸ್ತವಿಕ ಮೂಲವಾವು

---

1. Elements of South Indian Palaeography page 6.

ದೆಂದು ಗೊತ್ತಾಗದುದರಿಂದ ಥಾಮಸರು ಹೇಳಿದಂತೆ ಅದನ್ನು "ತಮಿಳು" ಲಿಪಿ ಎನ್ನಬಹುದೆಂದು ಶ್ರೀ ನಾಗಸ್ವಾಮಿಯುವರು ಎಣಿಸಿದಂತೆ ತೋರುತ್ತದೆ.

ನಾನು ಬ್ರಾಹ್ಮೀ ಲಿಪಿಯ ವಾಸ್ತವಿಕ ಮೂಲವನ್ನು ಕಂಡುಹಿಡಿಯ ಬೇಕೆಂಬ ಹಂಬಲದಿಂದ ಕೈಗೊಂಡ ಅಧ್ಯಯನದ ಫಲಸ್ವರೂಪವಾಗಿ ಬ್ರಾಹ್ಮೀ ವರ್ಣಮಾಲೆಯು ಆರ್ಯಬ್ರಾಹ್ಮಣರ ಸ್ವಂತದ ನಿರ್ಮಾಣವೆಂತಲೂ, ಆಚಾರ್ಯ ಪಾಣಿನಿಯು ತನ್ನ ವ್ಯಾಕರಣದಲ್ಲಿ "ಯವನಾನಿ" ಎಂದು ಕರೆದ (ಗ್ರೀಕ್) ವರ್ಣಮಾಲೆಯು ಬ್ರಾಹ್ಮೀ ವರ್ಣಮಾಲೆಯಿಂದಲೇ ರೂಪಾಂತರಿಸಲ್ಪಟ್ಟಿ ದೆಂತಲೂ ಪ್ರತಿಪಾದಕ್ಕೆ ಎಡೆಯಿಲ್ಲದಂತೆ ಸಿದ್ಧಪಡಿಸಲು ಸಾಧ್ಯವಾಗಿದೆ. ಅಷ್ಟು ಮಾತ್ರವಲ್ಲದೇ ಬ್ರಾಹ್ಮೀ ವರ್ಣಮಾಲೆಯ ಮೂಲವನ್ನು ಕಂಡುಹಿಡಿದುದರ ಪರಿಣಾಮದಿಂದಾಗಿ, ಬ್ರಿಟಿಷ್ ವಿದ್ವಾಂಸರು ಆರ್ಯರದಲ್ಲವೆಂದು ಸಾಧಿಸಲು ಬಹಳವಾಗಿ ಹೆಣಗಾಡಿದ ಸಿಂಧೂ ಸಂಸ್ಕೃತಿಯು ಕೂಡ ಆರ್ಯರದೇ ಆಗಿದ್ದಿ ತೆಂದು ಪ್ರಮಾಣಗಳ ಮೂಲಕ ಸಿದ್ಧಪಡಿಸಲು ಸಾಧ್ಯವಾಗಿದೆ. ಆದುದರಿಂದ ಆ ಕುರಿತಾದ "ಬ್ರಾಹ್ಮೀ ವರ್ಣಮಾಲೆ ಮತ್ತು ಸಿಂಧೂ ಸಂಸ್ಕೃತಿಯ ವಾಸ್ತವಿಕ ಇತಿಹಾಸ" ಎಂಬ ಹೆಸರಿನಲ್ಲಿ ಒಂದು ಚಿಲೋ ಪ್ರಬಂಧವನ್ನು ಬರೆದು ಶೀಘ್ರ ದಲ್ಲಿಯೇ ಪ್ರಕಟಿಸಬೇಕೆಂದು ಸಂಕಲ್ಪಿಸಿದ್ದೇನೆ.

ಭಾರತವರ್ಷದೊಳಗಿನ ಬ್ರಾಹ್ಮಣ ಪಂಗಡಗಳಲ್ಲಿ ಸಾರಸ್ವತ ಬ್ರಾಹ್ಮಣರ ಪಂಗಡವೇ ಮೊತ್ತಮೊದಲಿನದು ಮತ್ತು ಅತ್ಯಂತ ಪ್ರಾಚೀನವಾದುದೆಂಬುದು ಐತಿಹಾಸಿಕ ಸತ್ಯವಾಗಿರುತ್ತದೆ. ಆದುದರಿಂದ ಶಕವು ಆರಂಭವಾಗುವ ಹಲವು ಶತಮಾನಗಳ ಮೊದಲು ಉತ್ತರ ಭಾರತದಿಂದ ಬಂದು ದಕ್ಷಿಣ ಭಾರತದಲ್ಲಿ ನೆಲಸಿದ ಬ್ರಾಹ್ಮಣರು ಸಾರಸ್ವತರೇ ಆಗಿದ್ದರೆಂಬುದರಲ್ಲಿ ಸಂದೇಹ ಉಳಿಯುವು ದಿಲ್ಲ. ಅವರು ದಕ್ಷಿಣ ಭಾರತಕ್ಕೆ ಬಂದುದರ ಉದ್ದೇಶವು ವೈದಿಕ ಧರ್ಮದ ಪ್ರಚಾರ ಮಾಡುವುದಾಗಿದ್ದುದರಿಂದ ಅವರು ಬರುವಾಗ ತಮ್ಮೊಂದಿಗೆ ವೈದಿಕ ಧರ್ಮಗ್ರಂಥಗಳನ್ನೂ, ವಿದ್ಯಾ ಪ್ರಸಾರಕ್ಕೆ ಆವಶ್ಯಕವಿರುವ ಲಿಪಿಯನ್ನೂ ತಂದಿದ್ದ ರೆಂದು ಹೇಳಬಹುದಾಗಿದೆ. ಹೀಗಿರುವಾಗ ಲಿಪಿಯ ನಿರ್ಮಾತೃಗಳೂ, ದಕ್ಷಿಣ ಭಾರತದಲ್ಲಿ ಲಿಪಿಯನ್ನು ಬಳಕೆಗೆ ತಂದವರೂ ಆಗಿದ್ದ ಸಾರಸ್ವತ ಬ್ರಾಹ್ಮಣರು ನುಡಿಯುವ ಕೊಂಕಣಿಗೆ ಲಿಪಿ ಇಲ್ಲವೆನ್ನುವುದರಲ್ಲಿ ಹುರುಳಿಲ್ಲವೆನ್ನಬೇಕಾಗಿದೆ.

ಸಂಸ್ಕೃತಜನ್ಯ ಭಾಷೆಗಳನ್ನು ಬರೆಯಲು ಸಂಸ್ಕೃತವನ್ನು ಬರೆಯಲು ಬಳಸುವ ನಾಗರೀಲಿಪಿಯನ್ನೇ ಬಳಸಬಹುದಾಗಿತ್ತಾದರೂ, ಗುಜರಾತಿಗಳು, ಬಂಗಾಲಿಗಳು ಮತ್ತು ಒರಿಯರು ತಮ್ಮ ಭಾಷೆಗಳನ್ನು ಬರೆಯಲು ನಾಗರಿಯನ್ನು ಕೊಂಚ

ರೂಪಾಂತರಿಸಿ ಬಳಸುತ್ತ ಬಂದಿದ್ದಾರೆ. ಈಗ ಸಂಸ್ಕೃತವನ್ನು, ಹಿಂದಿಯನ್ನು ಮರಾಠಿಯನ್ನು ಹಾಗೂ ಗೋವದ ಜನರು ಕೊಂಕಣಿಯನ್ನು ಬರೆಯಲು ನಾಗರೀಲಿಪಿಯನ್ನು ಬಳಸುತಿದ್ದಾರೆ. ಆದರೆ ನಾಗರೀ ವರ್ಣಮಾಲೆಯಲ್ಲಿ "ಎ" ಮತ್ತು "ಒ"ಗಳೆಂಬ ಹ್ರಸ್ವಸ್ವರಗಳಿಲ್ಲದಿರುವುದರಿಂದ ನಾಗರೀಲಿಪಿಯಿಂದ ಪ್ರಾಕೃತ ಭಾಷೆಗಳನ್ನು ಅದರಲ್ಲಿಯೂ ಕೊಂಕಣಿಯನ್ನು ಬರೆಯಲು ತೊಂದರೆಯಾಗುತ್ತದೆ.

ನಾನು ಈ ಪ್ರಬಂಧದಲ್ಲಿ ಕೊಂಕಣಿಯ ಪ್ರಾಚೀನತೆಯನ್ನು ಪ್ರತಿಪಾದಿಸಲು ಇತರ ಪ್ರಾಚೀನ ಗ್ರಂಥಗಳನ್ನು ಬಿಟ್ಟು "ಜ್ಞಾನೇಶ್ವರೀ" ಎಂಬ ಗ್ರಂಥವನ್ನು ಮಾತ್ರ ಆಧಾರವನ್ನಾಗಿ ಆರಿಸಿದ್ದೇನೆ. ಏಕೆಂದರೆ ಮರಾಠಿಯ ವಿದ್ವಾಂಸರು ಕೊಂಕಣಿಯು ಮರಾಠಿಯಿಂದ ಹುಟ್ಟಿದುದೆಂದು ಸಾಧಿಸಲು ಜ್ಞಾನೇಶ್ವರಿಯಿಂದ ಹಲವು ಕೊಂಕಣಿ ಶಬ್ದಗಳನ್ನು ಎತ್ತಿ ತೋರಿಸಿದ್ದಾರೆ. ಅರ್ಥಾತ್ ಜ್ಞಾನೇಶ್ವರಿಯಲ್ಲಿ ಕೊಂಕಣಿಯವುಗಳೆಂದು ಸಿದ್ಧವಾಗುವ ಹಲವು ಶಬ್ದಗಳೂ ಪ್ರಯೋಗಗಳೂ ಇವೆಯೆಂದು ಮರಾಠಿಗರೇ ಒಪ್ಪಿಕೊಂಡಿರುವುದರಿಂದ ನಾನು ಜ್ಞಾನೇಶ್ವರಿಯನ್ನೇ ಪ್ರಮಾಣವನ್ನಾಗಿ ಆರಿಸುವುದು ಉಚಿತವಾಗಿತ್ತು.

ಕೊಂಕಣಿ ಮತ್ತು ಮರಾಠಿಗಳ ಕುರಿತ ಈ ಪ್ರಬಂಧವನ್ನು ಬರೆದು ಮುಗಿಸುತ್ತಿದ್ದಂತೆಯೇ ಕೊಂಕಣಿ ಭಾಷೆಯ ಬಳಕೆಗೆ ಕಾರಣರಾದ ಸಾರಸ್ವತ ಬ್ರಾಹ್ಮಣರ ಪ್ರಾಚೀನ ಇತಿಹಾಸದ ಒಂದು ಚಿಕ್ಕ ಅಂಶವಾದರೂ ಅದರೊಂದಿಗೆ ಇರುವುದು ಉಚಿತವೆಂದು ತೋರಿತು. ಸಾರಸ್ವತ ಬ್ರಾಹ್ಮಣರ ಇತಿಹಾಸಕ್ಕೆ ಸಂಬಂಧಪಟ್ಟ ಹಲವು ಲೇಖಗಳೂ. ಗ್ರಂಥಗಳೂ ಈ ಮೊದಲೇ ಪ್ರಕಟವಾಗಿವೆ ಯಾದರೂ ಅವುಗಳಲ್ಲಿ ಸಾರಸ್ವತ ಬ್ರಾಹ್ಮಣರ ಇತಿಹಾಸಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳು ಬಂದಿವೆಯೆನ್ನಲಾಗುವುದಿಲ್ಲ. ಆದುದರಿಂದ ಈ ಮೊದಲು ಪ್ರಕಟವಾಗಿರದ ಕೆಲವು ಹೊಸ ವಿಷಯಗಳನ್ನು ಇದರಲ್ಲಿ ಬೆಳಕಿಗೆ ತರಲು ಪ್ರಯತ್ನಿಸಿದ್ದೇನೆ. ಇದರಲ್ಲಿನ ವಿಷಯಗಳಿಂದಲೇ ಸಾರಸ್ವತ ಬ್ರಾಹ್ಮಣರ ಇತಿಹಾಸವು ಮುಗಿಯುವಂತಿಲ್ಲ. ಇನ್ನೆಷ್ಟು ವಿಷಯಗಳು ಅತೀತದ ಗರ್ಭದಲ್ಲಿ ಅಡಗಿವೆಯೋ ಹೇಳಲಾಗುವುದಿಲ್ಲ. ಅವುಗಳನ್ನೆಲ್ಲ ಹುಡುಕಿ ತೆಗೆಯುವ ಕೆಲಸವು ಹಾಗೆಯೇ ಉಳಿದಿದೆ. ಇದರಲ್ಲಿ ನಾನು ಹಲವು ವಿಷಯಗಳನ್ನು ಕೊಟ್ಟಿರುವೆನಾದರೂ—ಪ್ರಬಂಧವನ್ನು ಬೇಗನೇ ಬರೆದು ಮುಗಿಸಬೇಕೆಂಬ ಆತುರದಿಂದಾಗಿ ಆ ವಿಷಯಗಳನ್ನು ಆವಶ್ಯಕವಿದ್ದಷ್ಟು ವಿಸ್ತಾರವಾಗಿ ವಿವರಿಸಲು ಸಾಧ್ಯವಾಗಿಲ್ಲ ಮತ್ತು ಆವಶ್ಯಕವಿರುವ ಶಾಸನಗಳ ಪ್ರತಿಗಳನ್ನು ಕೊಡಲಿಕ್ಕಾಗಲಿಲ್ಲ. ಅಷ್ಟು ಮಾತ್ರವಲ್ಲದೇ ಸಾರಸ್ವತ ಬ್ರಾಹ್ಮಣರು ಬಹಳ ಹೆಚ್ಚು

ಸಂಖ್ಯೆಯಲ್ಲಿ ನೆಲಸಿದ್ದ ದೇವಗಿರಿ ಯಾದವರ ರಾಜ್ಯದ ವಿಷಯುವು ಸಂಪೂರ್ಣ ವಾಗಿ ಬಿಟ್ಟು ಹೋಗಿದೆ.

ಡಾಕ್ಟರ್ ರಾಬರ್ಟ್ ಸಿವೆಲ್ ಅವರು ಸಂಗ್ರಹಿಸಿದ ಮತ್ತು ಶ್ರೀಮಾನ್ ಎಸ್. ಕೃಷ್ಣಸ್ವಾಮಿ ಅಯ್ಯಂಗಾರರು ಸಂಪಾದಿಸಿದ "The Historical Inscriptions of Southern India" ಎಂಬ ಪುಸ್ತಕದ ಹದಿನಾರನೆಯ ಪುಟದಲ್ಲಿ" ಆಂಧ್ರ ವಂಶದ ಒಂದು ಶಾಖೆಯುವರಾದ ಚುಟುಸಾತಕರ್ಣಿ ಕುಟುಂಬದವರು ಪೂನ ಮತ್ತು ನಾಸಿಕ ಪ್ರಾಂತಗಳನ್ನು ಆಳುತಿದ್ದರೆಂದೂ, ಅದೇ ಮನೆತನದ ಹಾರೀತಿ ಪುತ್ರ ಚುಟುಕುಲಾನಂದ ಸಾತಕರ್ಣಿ ಎಂಬವನು ಸ್ವತಂತ್ರ ರಾಜನಾಗಿ ಬನವಾಸಿ ಯಲ್ಲಿ ಆಳತೊಡಗಿದ್ದನೆಂದೂ ಕಾಂಚಿಯಲ್ಲಿ ಪಲ್ಲವ ರಾಜವಂಶವನ್ನು ಸ್ಥಾಪಿಸಿದ "ಬಪ್ಪಾ" ಎಂಬವನು ಆ ಕಾಲದಲ್ಲಿ ಆಂಧ್ರದ ಸಾತವಾಹನರಾಜ ಮೂರನೆಯ ಪುಳುಮಾಯಿಯ ಕೈಕೆಳಗೆ ಮಹಾಮಂಡಳೇಶ್ವರನಾಗಿದ್ದನೆಂದೂ, ಅವನು ಪಶ್ಚಿಮ ಕರಾವಳಿಯಲ್ಲಿನ ಸಾತಕರ್ಣಿಗಳನ್ನು ಸೋಲಿಸಿದನೆಂದೂ ಹೇಳಿದೆ.[1] ಅಂದರೆ ಪಲ್ಲವರಾಜವಂಶದ ಸ್ಥಾಪಕನಾದ ಬಪ್ಪಾ ಎಂಬವನು-ಪಶ್ಚಿಮ ಕರಾವಳಿ ಯಲ್ಲಿ ಆಳುತಿದ್ದ ಸಾತಕರ್ಣಿಗಳನ್ನು ಸೋಲಿಸಿ–ಮೊತ್ತಮೊದಲು ಕೊಂಕಣ ಕರಾವಳಿಯಲ್ಲಿ ತನ್ನ ರಾಜ್ಯವನ್ನು ಬಲಗೊಳಿಸಿದನೆಂದೂ–ಆ ತರುವಾಯವೇ ಅವನು ಪೂರ್ವಕರಾವಳಿಯಲ್ಲಿನ ಸಾತವಾಹನರನ್ನು ಸೋಲಿಸಿ ಕಾಂಚಿಯಲ್ಲಿ ರಾಜಧಾನಿಯನ್ನು ಸ್ಥಾಪಿಸಿದನೆಂದೂ ಹೇಳಬಹುದಾಗಿದೆ.

ಹಿಂದೆ ಹೇಳಿದ ಡಾಕ್ಟರ್ ಸಿವೆಲ್ಲರ ಪುಸ್ತಕದ ಹದಿನೇಳನೆಯ ಪುಟದ ಪಾದ ಟಿಪ್ಪಣಿಯಲ್ಲಿ ಶ್ರೀ. ಕೃಷ್ಣಸ್ವಾಮಿ ಅಯ್ಯಂಗಾರರು "ಬಪ್ಪಾ" ಎಂಬ

---

1. It should be noted that since the middle of the second century A. D., the provinces of Nasik and Poona had been governed by Chutu-Satakarnis, a branch of the Andhras. Haritiputra Chutu-culananda Satakarni established himself as independent at Banavasi. The family was defeated, by Bappa, the first prominent Pallava king about A. D. 225. Bappa had been Governor of large tracts under the last Satavahana (Andhra) king Pulumai III. The Andhra kingdom now shrunk to small size, consisting practically of nothing but the Telugu provinces; and Bappa finally put an end to the Andhra dynasty and ruling himself from Kanchi, siezed their dominions. Following him his descendents became a first-class power. Pallava rule lasted for over 600 Years.

ಶಬ್ದದ ಅರ್ಥವು "ತಂದೆ" ಎಂಬುದಾಗಿ ಸ್ಪಷ್ಟಪಡಿಸಿದ್ದಾರೆ.[1] ಬಪ್ಪಾ ಎಂಬವನು ಸ್ವತಂತ್ರ ಅರಸನಾದ ತರುವಾಯ "ಜಯವರ್ಮಮಹಾರಾಜ" ಎಂಬ ಹೆಸರಿನಿಂದ ಕರೆಯಲ್ಪಟ್ಟಿರಬಹುದೆಂದು ಊಹಿಸಿದ್ದಾರೆ.[2] ಬಪ್ಪಾ ಎಂಬ ಶಬ್ದವು ಸಂಸ್ಕೃತದ "ವಪ್ತಾ=ತಂದೆ" ಎಂಬ ಶಬ್ದದ ಪ್ರಾಕೃತ ರೂಪಾಂತರವಾಗಿದೆ ಮತ್ತು ಅದು ಕೊಂಕಣಿಯೂ ಆಗಿದೆ. ಅಂದರೆ ಅದು ಪಲ್ಲವರ ತಾಯಿನುಡಿಯು ಪ್ರಾಕೃತವಾಗಿದ್ದಿತು ಎಂಬುದರ ಸ್ಪಷ್ಟವಾದ ಪ್ರಮಾಣವಾಗಿದೆ. ಆದುದರಿಂದಲೇ ಪಲ್ಲವರ ಮೊತ್ತ ಮೊದಲಿನ ಶಾಸನಗಳು ಪ್ರಾಕೃತ ಭಾಷೆಯಲ್ಲಿ ಬರೆಯಲ್ಪಟ್ಟಿವೆ.

ನಾನು ಇವರಲ್ಲಿ ಸ್ಕಂದ ಪುರಾಣದಿಂದಾಗಲೀ ಇತರ ಪುರಾಣಗಳಿಂದಾಗಲೀ ಪ್ರಮಾಣಗಳನ್ನು ಉದಹರಿಸುವ ಗೋಜಿಗೆ ಹೋಗಿಲ್ಲ. ಏಕೆಂದರೆ ಪುರಾಣಗಳಲ್ಲಿ ಪ್ರಾಚೀನಕಾಲದ ಹಲವು ವಾಸ್ತವಿಕ ಸತ್ಯ ವಿಷಯಗಳು ಇವೆಯಾದರೂ ಅರ್ವಾಚೀನ ಕಾಲದ ಜನರು ಅವುಗಳಲ್ಲಿ ಆಧಾರರಹಿತವಾದ ಹಾಗೂ ಪರಸ್ಪರ ವಿರುದ್ಧವಾದ ಹಲವು ಹೊಸ ವಿಷಯಗಳನ್ನು ಸೇರಿಸಿ ಪುರಾಣಗಳ ಪ್ರಾಮಾಣ್ಯಕ್ಕೆ ಭಂಗತಂದಿದ್ದಾರೆ. ಹೀಗಾಗಿ ಅವುಗಳಲ್ಲಿನ ಯಾವುದೊಂದು ವಿಷಯವು ಯಾವ ನಿಶ್ಚಿತಕಾಲದಲ್ಲಿ ಘಟಿಸಿತೆಂದಾಗಲೀ, ಅದು ಸತ್ಯವೋ ಇಲ್ಲವೇ ಮಿಥ್ಯವೋ ಎಂದಾಗಲೀ ತಿಳಿದುಕೊಳ್ಳುವುದು ದುಃಸಾಧ್ಯವಾಗಿದೆ. ಅಲ್ಲದೇ ಈಗ ಬಳಕೆಯಲ್ಲಿರುವ ಹಲವು ಶಬ್ದಗಳಿಗೆ ಸಲ್ಲದ ಕಾಲ್ಪನಿಕವ್ಯುತ್ಪತ್ತಿಗಳನ್ನು ನಿರ್ಮಿಸಿ ಅವುಗಳಲ್ಲಿ ಸೇರಿಸಿದುದರಿಂದ ಆ ಶಬ್ದಗಳ ವಾಸ್ತವಿಕ ಮೂಲವಾವುದೆಂದು ತಿಳಿಯದಂತಾಗಿದೆ. ಉದಾಹರಣೆಗೆ–"ಮಂಗೇಶ" ಎಂಬ ಶಬ್ದವು "ಮಾಂಗಿರೀಶ" ಶಬ್ದದ ರೂಪಾಂತರವೆಂದು ಸಾಧಿಸಲು "ಶಿವನು ಪಾರ್ವತಿಯನ್ನು ಪರೀಕ್ಷಿಸಲು ಹುಲಿಯ ರೂಪದಿಂದ ಗರ್ಜಿಸುತ್ತ ಬರಲಾಗಿ ಅವಳು ಹೆದರಿ "ತ್ರಾಹಿ ಮಾಂ ಗಿರೀಶ ಹೇ ಗಿರೀಶನೇ ನನ್ನನ್ನು ಕಾಪಾಡು" ಎಂದಳೆಂದೂ—ಅದರಲ್ಲಿನ "ಮಾಂ ಗಿರೀಶ" ಎಂಬ ಶಬ್ದಗಳ ಜೋಡಣೆಯಿಂದ "ಮಾಂಗಿರೀಶ" ಶಬ್ದವು ಬಳಕೆಗೆ ಬಂತೆಂದೂ ಕಥೆ ಕಟ್ಟಿದ್ದಾರೆ. ಕಥೆಯು ಚೆಲೋದಾಗಿದ್ದರೂ ಅದನ್ನು

1. The word "Bappa" merely means "father". It would not be surprising if on his acquisition of real power this ruler adopted a more high sounding name.

2. It is not known who this Jayavarman was, but it is just possible that it may have been a name adopted by Bappa.

ಇತಿಹಾಸವೆಂದೊಪ್ಪಲು ಆಧಾರ ಸಾಲದು. ಮಾತ್ರವಲ್ಲ ಅದನ್ನೊಪ್ಪಲು ಕೆಲವು ಅಡ್ಡಿಗಳೂ ಇವೆ.

ಪರಶುರಾಮನು ತ್ರಿಹೋತ್ರಪುರದಿಂದ ಅಲ್ಲಿನ ನಿವಾಸಿಗಳಾಗಿದ್ದ ಹತ್ತು ಗೋತ್ರಗಳ ಬ್ರಾಹ್ಮಣರನ್ನು ಅವರ ಕುಲದೇವರುಗಳ ಸಹಿತವಾಗಿ ಕರತಂದು ಗೋವದಲ್ಲಿ ಸ್ಥಾಪಿಸಿದನೆಂಬ ಕಥೆ ಇದೆ. ತಿರುಹೂತದಿಂದ ಬಂದ ಮೈಥಿಲ ಬ್ರಾಹ್ಮಣರು ಗೋವದಲ್ಲಿ ನೆಲಸಿದ್ದುದೇ ಈ ಕಥೆಯು ಮೂಲವಾಗಿದೆಯೆಂಬು ದರಲ್ಲಿ ಸಂದೇಹವಿಲ್ಲ. ಹಿಂದೆ ಬಿಹಾರದ ಒಂದು ಭಾಗವನ್ನು ವಿದೇಹ ಮತ್ತು ಮಿಥಿಲಾ ಎಂಬ ಹೆಸರುಗಳಿಂದ ಕರೆಯುತ್ತಿದ್ದರು. ಅದನ್ನೇ ತರುವಾಯದವರು ತಿರುಹೂತವೆಂದಿದ್ದರು. ಆದರೆ ತಿರುಹೂತ ಎಂಬ ಹೆಸರು ಶಕದ ಐದನೆಯ ಶತಮಾನಕ್ಕಿಂತ ಮೊದಲು ಬಳಕೆಯಲ್ಲಿದ್ದಿತೆಂದು ತಿಳಿದು ಬಂದಿಲ್ಲ. ಬೇರೊಬ್ಬರು "ತ್ರಿಹೋತ್ರ"ದಿಂದ ಅಲ್ಲ ಕಾಶ್ಮೀರದ "ತ್ರಿಗರ್ತ" ಎಂಬಲ್ಲಿಂದ ಬಂದಿದ್ದ ಬ್ರಾಹ್ಮಣರು ಗೋವದಲ್ಲಿ ನೆಲಸಿದ್ದರು ಎಂದಿದ್ದಾರೆ. ಆದರೆ ಕಾಶ್ಮೀರದಲ್ಲಿ "ತ್ರಿಗರ್ತ" ಎಂಬ ಪ್ರದೇಶವಿದ್ದಂತೆ ತಿಳಿದು ಬಂದಿಲ್ಲ. ಪರಂತು ಪಂಜಾಬದ ಈಶಾನ್ಯಕ್ಕೆ ಚಂಬಾದಿಂದ ಕಾಂಗಡಾದ ವರೆಗೆ ಚಾಚಿರುವ ಪ್ರದೇಶದ ಪ್ರಾಚೀನ ಹೆಸರು "ತ್ರಿಗರ್ತ" ಎಂದಿತ್ತು.

ಹಾಗೆಯೇ ಶಕದ ಹತ್ತನೆಯ ಶತಮಾನದಲ್ಲಿ ಕೊಂಕಣದಿಂದ ಸೈನ್ಯ ಸಹಿತ ವಾಗಿ ಬಂಗಾಲಕ್ಕೆ ಹೋಗಿ ಅಲ್ಲಿ ರಾಜ್ಯವನ್ನು ಸ್ಥಾಪಿಸಿ ಆಳಿದ "ಸೇನ" ವಂಶವ ಅರಸರ ರಾಜಧಾನಿಯ ಹೆಸರು ಗೌಡ ಎಂದಿತ್ತು. ಆಚಾರ್ಯ ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ ಉಕ್ತವಾಗಿರುವ ಗೌಡಪುರವು (೬–೨–೧೦೦) ಅದೇ ಆಗಿರ ಬಹುದು. ಶಕದ ಹದಿನೆರಡನೆಯ ಶತಮಾನದಲ್ಲಿ ಮುಸಲ್ಮಾನರು ಬಿಹಾರ ಮತ್ತು ಬಂಗಾಲಗಳ ಮೇಲೆ ದಾಳಿ ಮಾಡಿದ ಕಾಲದಲ್ಲಿ ಮೈಥಿಲ ಮತ್ತು ಗೌಡ ಬ್ರಾಹ್ಮಣರ ಹಲವು ಕುಟುಂಬಗಳು ಅಲ್ಲಿಂದ ವಲಸೆ ಬಂದು ಗೋವದಲ್ಲಿ ನೆಲಸಿದ್ದರೆಂಬ ಐತಿಹ್ಯವಿದೆ. ಅದಕ್ಕಿಂತ ಮೊದಲು ಕೂಡ ಅಲ್ಲಿನ ಬ್ರಾಹ್ಮಣರು ಬಂದು ಗೋವದಲ್ಲಿ ನೆಲಸಿರಬಹುದು. ಆದರೆ ಗೋವದಲ್ಲಿರುವ ಸಾರಸ್ವತ ಬ್ರಾಹ್ಮಣರ ಕುಲದೇವತೆಗಳನ್ನು ತಿರುಹೂತದ ಮೈಥಿಲ ಬ್ರಾಹ್ಮಣರು ತಂದಿದ್ದರೆನ್ನಲು ಆಧಾರ ಸಾಲದು. ಏಕೆಂದರೆ ಗೋವದಲ್ಲಿ ನೆಲಸಿದ್ದ ಸಾರಸ್ವತ ಬ್ರಾಹ್ಮಣರಲ್ಲಿ ಶಿವ, ಶಕ್ತಿ ಮತ್ತು ಮಹಾಶೇಷ ಎಂಬ ಮೂರು ದೇವತೆಗಳ ಆರಾಧನೆಯು ಬಹಳ ಪ್ರಾಚೀನಕಾಲದಿಂದಲೂ ಇದ್ದಿತು ಮತ್ತು ಗೋವದಲ್ಲಿ ಇತರ ದೇವತೆಗಳ ಪ್ರತಿಷ್ಠಾಪನೆಯು ಬೇರೆ ಬೇರೆ ಕಾಲದಲ್ಲಿ

ಬೇರೆ ಬೇರೆ ಅರಸುಗಳಿಂದ ಜರುಗಿದ ಐತಿಹಾಸಿಕ ಪ್ರಮಾಣಗಳು ದೊರೆಯು ತ್ತವೆ.

ಗೋವದ ಮಂಗೇಶ ದೇವಾಲಯದಲ್ಲಿ ಸ್ಥಾಪಿಸಲ್ಪಟ್ಟಿರುವ ವತ್ಸಗೋತ್ರದ ದೇವಶರ್ಮ ಮತ್ತು ಕೌಂಡಿನ್ಯಗೋತ್ರದ ಶಿವಶರ್ಮ ಎಂಬವರು ಕನೋಜದಿಂದ ಬಂದ ಬ್ರಾಹ್ಮಣರಾಗಿದ್ದರೇ ಹೊರತು ತ್ರಿಹೋತ್ರದಿಂದ ಬಂದ ಮೈಥಿಲ ಬ್ರಾಹ್ಮಣರಾಗಿರಲಿಲ್ಲ. ಹಾಗೆಯೇ ಶಾಂತಾದುರ್ಗೆಯ ದೇವಾಲಯದಲ್ಲಿ ಸ್ಥಾಪಿಸ ಲ್ಪಟ್ಟಿರುವ ಲೋಮಶರ್ಮನು ಕೂಡ ಕನೋಜ ಬ್ರಾಹ್ಮಣನಾಗಿದ್ದನು. ಅವರು ಆ ದೇವತೆಗಳ ಪ್ರಾಚೀನ ದೇವಾಲಯಗಳನ್ನು ಕಟ್ಟಿಸಿಕೊಟ್ಟವರಾಗಿರಬಹುದೇ ಹೊರತು ಆ ದೇವತೆಗಳನ್ನು ತಂದವರೆನ್ನಲು ಆಧಾರ ಸಾಲದು. ಏಕೆಂದರೆ ಮಂಗೇಶ ದೇವಾಲಯದಲ್ಲಿ ಶಿವಪಂಚಾಯತನ ಅಂದರೆ ಶಿವ, ಶಕ್ತಿ, ವಿಷ್ಣು, ಸೂರ್ಯ ಮತ್ತು ಗಣಪತಿ ಎಂಬ ಐವರು ದೇವರುಗಳಿದ್ದಂತೆಯೇ ನಾಸಿಕ ಜಿಲ್ಲೆಯ ಸಿನ್ನರ್ ಅಥವಾ ಸಿಂಡಿನೇರ ಎಂಬಲ್ಲಿನ ಗೋಂಡೇಶ್ವರ ದೇವಾಲಯ ದಲ್ಲಿಯೂ, ತುಳುನಾಡಿನ ಕುಕ್ಕೆಯ ಸುಬ್ರಹ್ಮಣ್ಯ ದೇವಾಲಯದಲ್ಲಿಯೂ ಉಳ್ಳಾಲದ ಸೋಮೇಶ್ವರ ದೇವಾಲಯದಲ್ಲಿಯೂ ಪಂಚಾಯತನ ದೇವರು ಗಳಿದ್ದಾರೆ. ಮತ್ತು ಗೋವದಲ್ಲಿರುವಂತೆಯೇ ಉಳ್ಳಾಲದ ಸೋಮೇಶ್ವರ ದೇವಾಲಯದಲ್ಲಿಯೂ ಕೋಟೇಶ್ವರದ ಸಪ್ತಕೋಟೀಶ್ವರನ ದೇವಾಲಯ ದಲ್ಲಿಯೂ ಸಪ್ತಮಾತೃಕೆಗಳ ಪ್ರತಿಮೆಗಳಿವೆ. ಅಂದರೆ ಮೈಥಿಲ ಬ್ರಾಹ್ಮಣರು ಗೋವಕ್ಕೆ ಬರುವ ಬಹುಕಾಲ ಮೊದಲೇ ಸಾರಸ್ವತ ಬ್ರಾಹ್ಮಣರ ಕುಲದೇವತೆ ಗಳು ಗೋವದಲ್ಲಿದ್ದವೆಂದು ತಿಳಿಯಬೇಕಾಗುತ್ತದೆ.

ವಾಣಿಯರು ಅಥವಾ ಗೋವದ ವೈಶ್ಯರು ಸಾರಸ್ವತ ಬ್ರಾಹ್ಮಣರ ರಕ್ತ ಸಂಬಂಧಿಗಳೆನ್ನಬಹುದು. ಅಂದರೆ ವಾಣಿಯರು ಅತ್ಯಂತ ಪ್ರಾಚೀನ ಕಾಲ ದಲ್ಲಿಯೇ ವೈದಿಕ ವೃತ್ತಿಯನ್ನು (= ಭಟ್ಟ ವೃತ್ತಿಯನ್ನು) ತೊರೆದು ವ್ಯಾಪಾರ ವನ್ನು ಕೈಗೊಂಡ ಸಾರಸ್ವತ ಬ್ರಾಹ್ಮಣರಾಗಿದ್ದರು. ಅವರು ವೈದಿಕ ವೃತ್ತಿ ಯಿಂದ ಸಂಪೂರ್ಣವಾಗಿ ದೂರವಿದ್ದುದರಿಂದ ಮೂಲ ಸಮುದಾಯದಿಂದ ಒಡೆದು ವೈಶ್ಯರೆಂಬ ಬೇರೆಯೇ ಸಮಾಜವಾಗಿದ್ದರು. ಆದುದರಿಂದ ವಾಣಿ ಯರು ಮೂಲದಲ್ಲಿ ಸಾರಸ್ವತ ಬ್ರಾಹ್ಮಣರೇ ಆಗಿದ್ದುದರಿಂದಾಗಿ ಸಾರಸ್ವತ ಬ್ರಾಹ್ಮಣರಿಗೆ ಸಂಬಂಧಪಡುವ ಸಕಲ ಧಾರ್ಮಿಕ, ಸಾಂಸ್ಕೃತಿಕ ಹಾಗೂ ಇತಿಹಾಸಿಕ ವಿಷಯಗಳು ಅವರಿಗೂ ಅನ್ವಯಿಸುತ್ತವೆಂದು ತಿಳಿಯಬೇಕು.

ಸಾರಸ್ವತ ಬ್ರಾಹ್ಮಣರ ಪೂರ್ವಜರಾಗಿದ್ದ ಆರ್ಯಋಷಿಗಳು ಯಜ್ಞ

ಧರ್ಮನಿರ್ಣಯರಾಗಿದ್ದುದರಿಂದ ಅವರು ತಾವು ಜರಗಿಸುವ ವೈದಿಕ ಯಜ್ಞಗಳಲ್ಲಿ ಪಶುಗಳನ್ನು ಆಲಂಭನ ಮಾಡಿ (=ಕೊಂದು) ಅವುಗಳ ಮಾಂಸವನ್ನು ದೇವತೆಗಳಿಗೂ, ಶ್ರಾದ್ಧ ಕಾಲದಲ್ಲಾದರೆ ಪಿತೃಗಳಿಗೂ ಆಹುತಿಯಾಗಿ ಅರ್ಪಿಸಿದ ತರುವಾಯ ಉಳಿದುದನ್ನು ಅಟ್ಟು ತಾವು ಭುಂಜಿಸುತ್ತಿದ್ದರು. ಆದರೆ ಆರ್ಯ ಬ್ರಾಹ್ಮಣರು ಭಾರತ ವರ್ಷದೊಳಗೆ ನೆಲಸಿದ ಸಾವಿರಾರು ವರ್ಷಗಳ ತರುವಾಯ ವೈದಿಕ ಯಜ್ಞಗಳಲ್ಲಿ ಪಶುಗಳ ಆಲಂಭನ ಮಾಡುವ ಕುರಿತಾಗಿ ಅವರಲ್ಲಿ ಮತಭೇದ ಹುಟ್ಟಿತ್ತು. ಅದರ ಛಾಯೆಯು ಕೆಲವು ಶ್ರೌತಸೂತ್ರಗಳಲ್ಲಿಯೂ, ಉಪನಿಷತ್ತುಗಳಲ್ಲಿಯೂ ಗೋಚರಿಸುತ್ತದೆ. ಆದರೆ ಪಶುಗಳ ಆಲಂಭನವು ಗೃಹಸ್ಥನ ನಿತ್ಯ ಮತ್ತು ನೈಮಿತ್ತಿಕ ಕರ್ಮಗಳ ಮುಖ್ಯ ಅಂಗವಾಗಿದ್ದುದರಿಂದ ಮತ್ತು ಅದು ಪ್ರಾಚೀನ ಕಾಲದಿಂದ ಸಾಗಿ ಬಂದ ಧರ್ಮವಾಗಿದ್ದುದರಿಂದ ಸಾಮಾನ್ಯ ಮನುಷ್ಯನಿಂದ ಅದನ್ನು ವಿರೋಧಿಸುವುದು ಅಥವಾ ತಡೆಗಟ್ಟುವುದು ಸಾಧ್ಯವಿರಲಿಲ್ಲ. ಹಾಗಿದ್ದರೂ ಕಾಲಕ್ರಮೇಣ ಬ್ರಾಹ್ಮಣರಲ್ಲಿ ಪಶುಗಳ ಆಲಂಭನವನ್ನು ಪ್ರಕಟವಾಗಿ ವಿರೋಧಿಸುವ ಒಂದು ಪಂಗಡವು ಎಲೆ ಎತ್ತಿತು. ಮತ್ತು ಯಾಜ್ಞಿಕ ಬ್ರಾಹ್ಮಣರ ಸಮುದಾಯದಿಂದ ಬೇರ್ಪಟ್ಟಿತು. ಆ ಚಿಕ್ಕ ಪಂಗಡವು ಹೆಚ್ಚು ಬಲಶಾಲಿಯಾಗಿರಲಿಲ್ಲವಾದುದರಿಂದ ಅವರಿಂದಾಗಿ ಪಶುಯಜ್ಞಗಳಿಗೆ ಯಾವ ಬಗೆಯ ತೊಂದರೆಯೂ ಆಗುತ್ತಿರಲಿಲ್ಲ. ಆ ಚಿಕ್ಕ ಪಂಗಡವೇ ಮುಂದೆ ಜೈನ ಧರ್ಮಕ್ಕೆ ಜನ್ಮವಿತ್ತಿತೆನ್ನಬಹುದು.

ಮುಂದೆ ಯಜ್ಞಗಳು ಪ್ರಬಲವಾಗಿ ಅರಸರು ಜರಗಿಸುತ್ತಿದ್ದ ಯಜ್ಞಗಳಲ್ಲಿ ಒಂದೇ ಸಲಕ್ಕೆ ಸಾವಿರಾರು ಮೂಕ ಪಶುಗಳ ಬಲಿಯಾಗುವುದನ್ನು ಕಂಡು ಮರುಕಗೊಂಡ ಬುದ್ಧದೇವನು ಯಜ್ಞಗಳಲ್ಲಿ ಆ ರೀತಿಯಾಗಿ ಪಶುಗಳನ್ನು ನಿರ್ದಯವಾಗಿ ಕೊಲ್ಲಬಾರದೆಂದು ಜನರ ಮನಕರಗುವಂತೆ ಬೋಧಿಸತೊಡಗಿದನು. ಕರುಣೆ, ಅನುಕಂಪ ಮತ್ತು ಮಾರ್ದವಗಳಿಂದ ಕೂಡಿರುತ್ತಿದ್ದ ಅವನ ಬೋಧನಾ ರೀತಿಗೆ ಮನಸೋತ ಹಲವು ಮಂದಿ ಯಾಜ್ಞಿಕ ಬ್ರಾಹ್ಮಣರು ಬುದ್ಧದೇವನ ಅಹಿಂಸಾ ಧರ್ಮದಲ್ಲಿ ದೀಕ್ಷಿತರಾದರು. ಮತ್ತು ಅವನ ಶಿಷ್ಯರಾಗಿ ಅಹಿಂಸಾತತ್ವದ ಪ್ರಚಾರದಲ್ಲಿ ಅವನಿಗೆ ನೆರವಾದರು. ಬುದ್ಧದೇವನ ಪ್ರಚಾರ ರೀತಿಯು ಎದುರಾಳಿಗಳ ಸಂಬಂಧದಲ್ಲಿ ಗೌರವ, ಸಹಾನುಭೂತಿ ಮತ್ತು ವಿನಯಗಳಿಂದ ಕೂಡಿರುತ್ತಿತ್ತು. ಹೀಗಾಗಿ ಜನರು ಬಹುಬೇಗನೇ ಅವನಿಗೆ ಒಲಿಯುತ್ತಿದ್ದರು. ಆದರೆ ಜೈನರ ಪ್ರಚಾರ–ರೀತಿಯು ತುಸು ತೀವ್ರತರವಾಗಿದ್ದು ವೇದಗಳ ಹಾಗೂ ಯಜ್ಞವಿಧಿಗಳ ಖಂಡನೆಯಿಂದ ಕೂಡಿರುತ್ತಿದ್ದುದರಿಂದ ಜನರು

ಅವರನ್ನು ಅಷ್ಟೇ ತೀವ್ರ ರೀತಿಯಿಂದ ವಿರೋಧಿಸುತಿದ್ದರು. ಅಂದರೆ ಬುದ್ಧ ದೇವನ ಪ್ರಚಾರ ಮಾರ್ಗವು ಯಾಜ್ಞಿಕ ಬ್ರಾಹ್ಮಣರ ಹಿಂಸಾತಿರೇಕದ ಮತ್ತು ಜೈನರ ಅಹಿಂಸಾತಿರೇಕದ ಮಧ್ಯದಿಂದ ಸಾಗಿತ್ತು. ಬುದ್ಧದೇವನು ಮಾಂಸಾ ಹಾರಿಗಳಾಗಿದ್ದ ಬ್ರಾಹ್ಮಣರನ್ನು ನಿಂದಿಸುತ್ತಿರಲಿಲ್ಲ. ಮಹಾವಿದ್ವಾಂಸರಾಗಿರು ತಿದ್ದ ಆ ಯಾಜ್ಞಿಕ ಬ್ರಾಹ್ಮಣರನ್ನು ಗೌರವದಿಂದ ಸಂಬೋಧಿಸಿ ಹಿಂಸೆಯನ್ನು ಕಡಿಮೆ ಮಾಡಿರಿ ಇಲ್ಲವೇ ತೊರೆಯಿರಿ ಎಂಬುದಾಗಿ ವಿನಯಪೂರ್ವಕವಾಗಿ ಕೇಳಿ ಕೊಳ್ಳುತಿದ್ದ. ಅಷ್ಟೇ ಅಲ್ಲ ಅವನು ತನ್ನ ಶಿಷ್ಯರಿಗೆ, ಭಿಕ್ಷೆಬೇಡಲು ಹೋದ ಗೃಹಸ್ಥರ ಮನೆಗಳಿಂದ ಭಿಕ್ಷೆಯಲ್ಲಿ ಮಾಂಸದ ಅಡಿಗೆಯು ದೊರೆತರೂ ಅದನ್ನು ತ್ಯಜಿಸದೇ ಭುಂಜಿಸಬಹುದೆಂದು ಹೇಳುತಿದ್ದ.

ಹೇಗಿದ್ದರೂ ಆ ಕಾಲದಲ್ಲಿ ಬುದ್ಧದೇವನ ಮತ್ತು ಜೈನರ ಅಹಿಂಸಾ ಧರ್ಮದ ಪ್ರಚಾರವು ಬ್ರಾಹ್ಮಣರ ಪಶುಯಜ್ಞಗಳನ್ನು ತಡೆಯುವಷ್ಟು ಶಕ್ತಿ ಯನ್ನು ಪಡೆದಿರಲಿಲ್ಲ. ಏಕೆಂದರೆ ಯಜ್ಞವು ಆರ್ಯರ ಸಾರ್ವಜನಿಕ ಧರ್ಮ ವಾಗಿದ್ದುದರಿಂದ ಆ ಕಾಲದ ಅರಸರು ಜನರ ಧಾರ್ಮಿಕ ಕಾರ್ಯಗಳಲ್ಲಿ ಅಡ್ಡಿ ಯೊಡ್ಡಲು ಸಾಧ್ಯವಿರಲಿಲ್ಲ. ವೈದಿಕ ಧರ್ಮವನ್ನು ಕಾಪಾಡುವುದು ಅರಸನ ಮೊದಲ ಕರ್ತವ್ಯವಾಗಿದ್ದುದರಿಂದ ಅರಸರು ಬ್ರಾಹ್ಮಣರು ಜರಗಿಸುವ ಯಜ್ಞ ಗಳನ್ನು ಪ್ರೋತ್ಸಾಹಿಸಲೇ ಬೇಕಿತ್ತು; ಆದರೂ ಕೆಲವು ಅರಸರು ಬುದ್ಧದೇವನ ಅಹಿಂಸಾ ಧರ್ಮದತ್ತ ಒಲವು ತೋರಿಸತೊಡಗಿದುದರಿಂದ ಇತರ ಅರಸರಿಗೆ ಅದೊಂದು ರಾಜಕೀಯ ಸಮಸ್ಯೆಯಾಗಿ ಪರಿಣಮಿಸಿತ್ತು.

ಬುದ್ಧದೇವನ ಮಹಾನಿರ್ವಾಣದ ಸಾಧಾರಣ ಇನ್ನೂರು ವರ್ಷಗಳ ತರುವಾಯ ಮಗಧ ಚಕ್ರವರ್ತಿ ಅಶೋಕನು ಕಳಿಂಗದೇಶವನ್ನು ಗೆಲ್ಲಲು ಮಾಡಿದ ಯುದ್ಧದಲ್ಲಿ ಲಕ್ಷಲಕ್ಷಾಂತರ ಜನರು ಮಡಿದುದಲ್ಲದೇ ಲಕ್ಷಾಂತರ ಜನರು ಅಂಗೋಪಾಂಗಗಳನ್ನು ಕಳೆದುಕೊಂಡರು. ರಾಜ್ಯದಲ್ಲಿ ಪಿಡುಗು ಹಬ್ಬಿ ಜನರು ಬಳಲಿದರು. ಇದನ್ನೆಲ್ಲ ಕಂಡು ವ್ಯಥಿತನಾದ ಅಶೋಕನು ಮುಂದೆಂದೂ ರಾಜ್ಯ ವನ್ನು ಬೆಳಿಸುವ ಉದ್ದೇಶದಿಂದ ಯುದ್ಧ ಮಾಡುವುದಿಲ್ಲವೆಂದು ಪ್ರತಿಜ್ಞೆ ಗೈದುದಲ್ಲದೇ ತನ್ನ ರಾಜ್ಯದಲ್ಲಿ ಯಾವ ಬಗೆಯ ಹಿಂಸೆಯೂ ಜರಗದಂತೆ ತಡೆಯುವ ನಿರ್ಧಾರವನ್ನು ಮಾಡಿದನು. ತರುವಾಯ ತನ್ನ ಪ್ರಜೆಗಳು ಅಹಿಂಸಾ ಧರ್ಮವನ್ನು ಆಚರಿಸಬೇಕೆಂದು ವಿಧಿಸಿ ಧರ್ಮಶಾಸನಗಳನ್ನು ಬರೆಯಿಸಿ ದನು. ಆ ಶಾಸನಗಳ ಮೂಲಕ ಬ್ರಾಹ್ಮಣರು ಯಜ್ಞಗಳಲ್ಲಿ ಪಶುಗಳ ಆಲಂಭನ ಮಾಡದಂತೆ ನಿಷೇಧಿಸಿದನು. ಅಷ್ಟೇ ಅಲ್ಲ ಆ ಧರ್ಮಶಾಸನಗಳನ್ನು

ಆಚರಣೆಗೆ ತರುವಂತೆ ಮಾಡಲು ವಿಶೇಷ ಅಧಿಕಾರಿಗಳನ್ನು ನೇಮಿಸಿದನು. ಆಗ ಜೈನರಿಗೂ ತಮ್ಮ ಅಹಿಂಸಾತತ್ವದ ಪ್ರಚಾರ ಮಾಡಲು ಸರಿಯಾದ ಇಂಬು ದೊರೆಯಿತು. ಅಹಿಂಸಾವಾದಿಗಳ ದೃಷ್ಟಿಕೋನದಿಂದ ಅಶೋಕನ ಕಾರ್ಯಗಳು ಪ್ರಶಂಸನೀಯವಾದವುಗಳಾಗಿರಬಹುದು. ಆದರೆ ಅರಸನಾಗಿದ್ದ ಅಶೋಕನು ಯಾವ ವೈದಿಕ ಧರ್ಮವನ್ನು ಎತ್ತಿಹಿಡಿಯಬೇಕಾಗಿದ್ದಿತೋ ಅದೇ ವೈದಿಕ ಧರ್ಮಕ್ಕೆ ವಿರುದ್ಧವಾದ ಶಾಸನಗಳನ್ನು ಮಾಡಿ, ವೈದಿಕ ಧರ್ಮಾನುಯಾಯಿ ಗಳಾಗಿದ್ದ ಬ್ರಾಹ್ಮಣರ ಧಾರ್ಮಿಕ ಸ್ವಾತಂತ್ರ್ಯವನ್ನು ಕಸಿದುಕೊಂಡಿದ್ದನು. ಆದುದರಿಂದ ಅವನ ಕಾಲದ ಬ್ರಾಹ್ಮಣರು ಅವನನ್ನು ಪ್ರಶಂಸಿಸುವುದಾಗಲೀ, ಅವನ ಕಾರ್ಯಗಳಲ್ಲಿ ಸಹಕರಿಸುವುದಾಗಲೀ ಸಾಧ್ಯವಿರಲಿಲ್ಲ. ನಮಗೆ ಅಶೋಕನ ಕುರಿತಾಗಿ ಪರಸ್ಪರ ವಿರುದ್ಧವಾದ ಎರಡು ಕಥೆಗಳು ದೊರೆಯುತ್ತವೆ. ಒಂದು ಕಥೆಯು ಬೌದ್ಧಮತೀಯರು ಬರೆದುದಾಗಿದ್ದು, ಎರಡನೆಯ ಕಥೆಯು, ಅವನ ವಿರೋಧಿಗಳು ಬರೆದುದಾಗಿದೆ. ವಿರೋಧಿಗಳು ಬರೆದ ಕಥೆಯಲ್ಲಿ ಅತ್ಯಂತ ಮುಖ್ಯವಾದ ವಿಷಯವಾವುದೆಂದರೆ – ಅಶೋಕನು ಸಿಂಹಾಸನಕ್ಕೆ ನ್ಯಾಯವಾದ ಅಧಿಕಾರಿಯಾಗಿರಲಿಲ್ಲ. ಬಿಂದುಸಾರನ ಹಿರಿಯ ಮಗನಾಗಿದ್ದ ಸುಷೀಮನೇ ಸಿಂಹಾನಕ್ಕೆ ಅಧಿಕಾರಿಯಾಗಿದ್ದ – ಹಾಗೂ ಅಶೋಕನು ಅಣ್ಣನನ್ನು ಕೊಲೆಗೈದು ಪಟ್ಟವನ್ನೇರಿದ್ದನೆಂಬುದಾಗಿದೆ. ಈ ವಿಷಯವನ್ನು ಆಳವಾಗಿ ವಿಚಾರಿಸಿ ವಿಮರ್ಶಿ ಸಿದರೆ ಅದರಿಂದ ಹೊರಪಡುವ ನಿಷ್ಕರ್ಷವು ಈಗ ಬಳಕೆಯಲ್ಲಿರುವ ಕಥೆಗೆ ವಿರುದ್ಧವಾಗುವುದು. ಅಂದರೆ ಅಶೋಕನು ಅನ್ಯಾಯದಿಂದ ರಾಜ್ಯಾಧಿಕಾರ ವನ್ನು ವಶಪಡಿಸಿಕೊಂಡುದರಿಂದ ಬ್ರಾಹ್ಮಣರು ಅವನನ್ನು ವಿರೋಧಿಸುತ್ತಿದ್ದರು. ಹೀಗಾಗಿ ವಿರೋಧಿಗಳಾದ ಬ್ರಾಹ್ಮಣರ ಸೊಕ್ಕನ್ನು ಅಡಗಿಸಲಿಕ್ಕಾಗಿಯೇ ಅಶೋಕನು ಬೌದ್ಧಧರ್ಮವನ್ನು ಸ್ವೀಕರಿಸಿದ್ದನೆಂದು ಹೇಳಬೇಕಾಗುವುದು.

ಅಶೋಕನು ವೈದಿಕಧರ್ಮಕ್ಕೆ ವಿರುದ್ಧವಾದ ಶಾಸನಗಳನ್ನು ಮಾಡಿದುದ ರಿಂದ ವೈದಿಕಧರ್ಮಾನುಯಾಯಿಗಳಾಗಿದ್ದ ಯಾಜ್ಞಿಕ ಬ್ರಾಹ್ಮಣರಿಗೂ ಯಜ್ಞ ವಿರೋಧಿಗಳಾದ ಅಹಿಂಸಾವಾದಿಗಳಿಗೂ ಸಂಘರ್ಷವು ಆರಂಭವಾಯಿತು. ಅಶೋಕನ ಜೀವಿತಕಾಲದಲ್ಲಿ ಅವನ ದಬ್ಬಾಳಿಕೆಯಿಂದಾಗಿ ಆ ಸಂಘರ್ಷವು ವಿಕೋಪಕ್ಕೆ ಹೋಗದಿದ್ದರೂ ಅವನ ಕಾಲದಲ್ಲಿ ಆರಂಭವಾದ ಆ ಧಾರ್ಮಿಕ ಸಂಘರ್ಷವು ಉತ್ತರ ಭಾರತದಲ್ಲಿನ ಹಲವು ರಾಜವಂಶಗಳನ್ನು ಉರುಳಿಸುತ್ತ ಮುಂದುವರಿದು ಶಕದ ಎಂಟನೆಯ ಶತಮಾನದಲ್ಲಿ ವಿಖ್ಯಾತ ಮೀಮಾಂಸಾ ವಾದಿಯಾಗಿದ್ದ ಭಟ್ಟಕುಮಾರಿಲ ಮಿಶ್ರನ ಪ್ರಬಲ ಪ್ರಚಾರದಿಂದಲೂ, ದಕ್ಷಿಣ

ಭಾರತದಲ್ಲಿ ಶ್ರೀಮಚ್ಛಂಕರಾಚಾರ್ಯರ ಅದ್ವೈತ ಸಿದ್ಧಾಂತದೊಂದಿಗೆ ಬ್ರಾಹ್ಮಣ ಧರ್ಮದ ಪ್ರಚಾರದಿಂದಲೂ ಬೌದ್ಧಧರ್ಮದ ನಿರ್ಮೂಲನದೊಂದಿಗೆ ಕೊನೆಗೊಂಡಿತು. ಅದರೊಂದಿಗೆ ಜೈನಧರ್ಮದ ಬಲವೂ ಬಹಳ ಕುಗ್ಗಿತು. ಹಾಗಿದ್ದರೂ ಜನರ ಮನಸ್ಸಿನಲ್ಲಿ ಅಹಿಂಸಾತತ್ವವು ತನ್ನ ಅಚ್ಚನ್ನು ಆಳವಾಗಿ ಒತ್ತಿದ್ದಿತು. ಅಂದರೆ ಜನರು ಅಹಿಂಸಾ ತತ್ವವನ್ನು ಆಚರಿಸದಿದ್ದರೂ ಅದು ಶ್ರೇಷ್ಠವಾದ ಧರ್ಮವೆಂದು ಎಣಿಸತೊಡಗಿದ್ದರು.

ದಕ್ಷಿಣ ಭಾರತದಲ್ಲಿ ಶ್ರೀ ಶಂಕರಾಚಾರ್ಯರ ವಾದ ಪ್ರಭಾವಕ್ಕೆ ಸೋತು ಬ್ರಾಹ್ಮಣ ಧರ್ಮವನ್ನು ಸ್ವೀಕರಿಸಿದ ಬೌದ್ಧರು ಮತ್ತು ಜೈನರು ತಮ್ಮ ಅಹಿಂಸಾ ತತ್ವವನ್ನು ತಾವು ಸ್ವೀಕರಿಸಿದ ಹೊಸ ಬ್ರಾಹ್ಮಣ ಧರ್ಮದಲ್ಲಿ ಸೇರಿಸಿದ್ದರು. ಅಂದರೆ ಅವರು ಯಜ್ಞಗಳಲ್ಲಿ ಮತ್ತು ಪಿತೃಶ್ರಾದ್ಧಗಳಲ್ಲಿ ಪಶುಕಲ್ಪವನ್ನು ನಿಷೇಧಿಸಿದ್ದರು. ಅಂಥ ನಿಷೇಧ ವಾಕ್ಯಗಳನ್ನು ಸ್ಮೃತಿಗ್ರಂಥಗಳಲ್ಲಿ ಸೇರಿಸಿದ್ದರು. ಹೀಗಾಗಿ ಬುದ್ಧದೇವನ ಜನ್ಮಕಾಲಕ್ಕಿಂತ ಮೊದಲೇ ವೈದಿಕ ಧರ್ಮಪ್ರಚಾರಕ್ಕಾಗಿ ಉತ್ತರ ಭಾರತದಿಂದ ಬಂದು ದಕ್ಷಿಣ ಭಾರತದಲ್ಲಿ ನೆಲಸಿದ್ದ ಯಜ್ಞಧರ್ಮಿಯ ಬ್ರಾಹ್ಮಣರ ಸಂತತಿಯವರಿಗೂ ಶ್ರೀಶಂಕರಾಚಾರ್ಯರಿಂದ ಮತಾಂತರಿಸಲ್ಪಟ್ಟ ಹೊಸ ಬ್ರಾಹ್ಮಣರಿಗೂ ಮೀಮಾಂಸಾ ಶಾಸ್ತ್ರದ ಅಥವಾ ಯಜ್ಞಪ್ರಕ್ರಿಯೆಯ ಕುರಿತು ವಾದ–ವಿವಾದಗಳು ಜರಗತೊಡಗಿದ್ದವು. ಆ ವಿವಾದಗಳು ಅಷ್ಟು ತೀವ್ರವಾದವುಗಳಾಗಿರಲಿಲ್ಲ. ಮುಂದೆ ಶಕದ ಹತ್ತನೆಯ ಶತಮಾನದಲ್ಲಿ ಶ್ರೀ ರಾಮಾನುಜಾಚಾರ್ಯರಿಂದ ಸ್ಥಾಪಿತವಾದ ಶ್ರೀ ವೈಷ್ಣವ ಮತದ ಅನುಯಾಯಿಗಳು ಶ್ರೀ ಶಂಕರಾಚಾರ್ಯರ ಅದ್ವೈತ ಸಿದ್ಧಾಂತವನ್ನೂ, ಶಿವಮತವನ್ನೂ ಖಂಡಿಸುವುದರೊಂದಿಗೆ ಯಜ್ಞಗಳಲ್ಲಿ ಪಶುಗಳ ಆಲಂಭನ ಮಾಡುವುದನ್ನು ತೀವ್ರವಾಗಿ ಖಂಡಿಸತೊಡಗಿದರು. ಇಂದಿನ ವಿಜ್ಞಾನಿಗಳು ನಾವು ಆಹಾರವನ್ನಾಗಿ ಬಳಸುವ ಸಸ್ಯಗಳಲ್ಲಿ ಮತ್ತು ಧಾನ್ಯದ ಕಾಳುಗಳಲ್ಲಿ ಕೂಡ ಜೀವವಿದೆಯೆಂದು ಕಂಡುಕೊಂಡಿರುವುದರಿಂದ ಇಂದು ಅಹಿಂಸಾ ವಾದಕ್ಕೆ ಹಿಂದಿನಷ್ಟು ಮಹತ್ವವಿಲ್ಲವಾಗಿದೆಯಾದರೂ, ವೈದಿಕ ಶಬ್ದಗಳಿಗೆ ಹೊಸ ಹೊಸ ಅರ್ಥಗಳನ್ನು ಕಟ್ಟುವ ವಿದ್ವತ್ತೆಗೆ ಬಹಳ ಮಹತ್ವವಿದ್ದ ಹಿಂದಿನ ಕಾಲದಲ್ಲಿ ಅಹಿಂಸಾ ವಾದದ ಪ್ರಚಾರವು ಜನರ ಒಲವನ್ನು ಮತ್ತು ಅರಸರ ಆಶ್ರಯವನ್ನು ಗಳಿಸುವ ಪ್ರಧಾನ ಸಾಧನವಾಗಿತ್ತು. ಅಂದರೆ ಶ್ರೀ ಮಚ್ಛಂಕರಾಚಾರ್ಯರ ತರುವಾಯ ತಲೆಯೆತ್ತಿದ ಪ್ರತಿಯೊಂದು ಹೊಸ ಮತವು ಒಂದು ವಿಶಿಷ್ಟ ವಂಗಡದ ಜನರ ಆರ್ಥಿಕ ಮತ್ತು ರಾಜಕೀಯ ಪ್ರಯೋಜನಗಳನ್ನು ಸಾಧಿಸುವ ಉದ್ದೇಶದಿಂದ

ಪ್ರಚಾರ ಮಾಡಲ್ಪಡುತಿದ್ದಿತೇ ಹೊರತು ಜನಸಾಮಾನ್ಯರ, ಅಥವಾ ಹಿಂದುಳಿದ ಮತ್ತು ದಲಿತ ವರ್ಗದ ಜನರ ಉದ್ಧಾರ ಮಾಡುವ ಉದ್ದೇಶದಿಂದಲ್ಲವೆಂದರೆ ತಪ್ಪಾಗದು. ಅಂದರೆ ಎಲ್ಲ ಸಿದ್ಧಾಂತಗಳ ಅಥವಾ ತತ್ವಗಳ ವಾದ–ಪ್ರತಿವಾದ ಗಳು - ಮತ್ತು ಶಿಕ್ಸಾಟಗಳು ಬ್ರಾಹ್ಮಣರೆನಿಸಿಕೊಂಡು ಅರಸುಗಳ ಆಸ್ಥಾನಗಳಲ್ಲಿ ಪ್ರವೇಶ ದೊರಕಿಸಿಕೊಳ್ಳಲು ಪ್ರಯತ್ನಿಸುವ ವರ್ಗದ ಜನರ ಮಟ್ಟಿಗೆನೇ ಸೀಮಿತ ವಾಗಿದ್ದವು ಮತ್ತು ರಾಜಕುಲದಲ್ಲಿ ಪಟ್ಟಕ್ಕೆ ಅಧಿಕಾರಿಯಾದವನನ್ನು ಹಿಂದೆ ತಳ್ಳಿ ಅವನ ಪಟ್ಟವನ್ನು ಕಬಳಿಸಲು ಸಂಚು ನಡಿಸುವ ರಾಜಪುರುಷರು ಅಂಥ ಹೊಸ ಮತದ ಪ್ರಚಾರಕರಿಗೆ ಆಶ್ರಯವೀಯುತಿದ್ದರು.

ಆದುದರಿಂದ ಈಗ ಸಾರಸ್ವತ ಬ್ರಾಹ್ಮಣರ ಇತಿಹಾಸವನ್ನು ಬರೆಯು ಲಿಚ್ಛಿಸುವ ಪ್ರತಿಯೊಬ್ಬನು ಹಿಂಸೆ ಮತ್ತು ಅಹಿಂಸೆಗಳ ಅಥವಾ ಮಾಂಸಾಹಾರದ ಮತ್ತು ಶಾಕಾಹಾರದ ಸಮಸ್ಯೆಯನ್ನು ಎದುರಿಸಲೇ ಬೇಕಾಗುತ್ತದೆ. ಏಕೆಂದರೆ ಮತ್ಸ್ಯಾಹಾರದ ಸಮಸ್ಯೆಯು ಸಾರಸ್ವತ ಬ್ರಾಹ್ಮಣರ ಇತಿಹಾಸದ ಒಂದು ಅಲಕ್ಷಿಸಿ ಬಿಡಲಾಗದಂಥ ಅಂಗವಾಗಿ ಬಿಟ್ಟಿದೆ. ಆದುದರಿಂದ ಆ ಸಮಸ್ಯೆ ಯನ್ನು ಕೂಲಂಕಷವಾಗಿ ವಿಶ್ಲೇಷಿಸದೇ ಅಥವಾ ವಿವರವಾಗಿ ವಿಮರ್ಶಿಸದೇ ಬಿಟ್ಟರೆ ಅವರ ಇತಿಹಾಸವು ಅಪೂರ್ಣವಾಗಿಯೇ ಉಳಿಯುತ್ತದೆ. ಅಂದರೆ ಸಾರಸ್ವತ ಬ್ರಾಹ್ಮಣರ ಪೂರ್ವಜರಾಗಿದ್ದ ವೈದಿಕ ಋಷಿಗಳೆಲ್ಲರೂ ಮಾಂಸಾ ಹಾರಿಗಳಾಗಿದ್ದರೆಂದು ವೇದಗಳಿಂದ ಮತ್ತು ಇತರ ವೈದಿಕ ಸಾಹಿತ್ಯದಿಂದ ತಿಳಿದು ಬರುವುದರಿಂದ ಅಂಥ ಐತಿಹಾಸಿಕ ಸತ್ಯವನ್ನು ಸಾರಸ್ವತ ಬ್ರಾಹ್ಮಣರ ಇತಿಹಾಸ ದಲ್ಲಿ ಪ್ರಕಟಿಸದೇ ಅಡಗಿಸುವುದು ಸಾಧ್ಯವೂ ಅಲ್ಲ ಸರಿಯಾದುದೂ ಅಲ್ಲ. ಅರ್ಥಾತ್ ಸಾರಸ್ವತ ಬ್ರಾಹ್ಮಣರು ವಾಸ್ತವಿಕ ಸತ್ಯವನ್ನು ಪ್ರಕಟಿಸುವಾಗ ಅಹಿಂಸಾ ವಾದಿಗಳು ಏನನ್ನುವರೋ ಎಂದು ಬೆದರಬೇಕಾಗಿಲ್ಲ.

ತಾತ್ಪರ್ಯವೇನೆಂದರೆ ಸಾರಸ್ವತ ಬ್ರಾಹ್ಮಣ ಸಮುದಾಯದಲ್ಲಿನ ಒಂದು ಪ್ರಮುಖ ತಂಡವು ಸಂಖ್ಯೆಯಲ್ಲಿ ಚಿಕ್ಕದಾಗಿದ್ದರೂ ಇತರ ವಿಷಯಗಳಲ್ಲಿ ಗಣನೀ ಯವೂ, ಪ್ರಬಲವೂ ಆಗಿದ್ದು ಮೀನು ತಿನ್ನುವುದನ್ನು ತಪ್ಪೆಂದಾಗಲೀ ಪಾಪ ವೆಂದಾಗಲೀ ಭಾವಿಸುವುದಿಲ್ಲ ಮಾತ್ರವಲ್ಲ ಹಾಗೆಂದು ಒಪ್ಪುವುದೂ ಇಲ್ಲ. ಅವರಂತೆಯೇ ಬಂಗಾಲಿ ಮತ್ತು ಬಿಹಾರೀ ಬ್ರಾಹ್ಮಣರು ಕೂಡ ಮೀನು ತಿನ್ನು ವುದನ್ನು ತಪ್ಪು ಅಥವಾ ಪಾಪವೆಂದು ಭಾವಿಸುವುದಾಗಲೀ, ಒಪ್ಪುವುದಾಗಲೀ ಇಲ್ಲ. ಆದರೆ ಗುಜರಾತದಲ್ಲಿ ನೆಲಸಿರುವ ಸಾರಸ್ವತ ಬ್ರಾಹ್ಮಣ ವರ್ಗವು ಮತ್ತು ಗೋವಮೂಲದ ಸಾರಸ್ವತ ಬ್ರಾಹ್ಮಣರ ಅಧಿಕ ಸಂಖ್ಯಾಕ ತಂಡವು

ಅಹಿಂಸಾ ತತ್ವದ ಕಡೆಗೆ ಒಲಿದಿರುವುದರಿಂದ ಆ ತಂಡದ ಜನರು ಮೀನು ತಿನ್ನುವುದನ್ನು ವಿರೋಧಿಸುತ್ತಾರೆ ಮತ್ತು ಬಹಳ ಮಡಿವಂತಿಕೆಯನ್ನು ತೋರಿಸುತ್ತಾರೆ. ಅಷ್ಟೇ ಅಲ್ಲ ಮೀನು ಅಂದರೆ ನಾತ ಅದನ್ನು ಹೇಗೆ ತಿನ್ನುತ್ತಾರೋ ಅನ್ನುತ್ತಾರೆ ಮತ್ತು ಮೂಗುಮುರಿಯುತ್ತಾರೆ. ತಿನ್ನದವರು ಮೀನನ್ನು ನಾತ ಎನ್ನುವುದು ಅಥವಾ ಅದರಿಂದ ಅಸಹ್ಯಪಡುವುದು ಸ್ವಾಭಾವಿಕವಾಗಿದೆ. ಆದರೆ ಅವರು ತಮ್ಮ ಮಡಿವಂತಿಕೆಯನ್ನು ಒಂದು ಮಿತಿಯಲ್ಲಿರಿಸಿಕೊಳ್ಳಬೇಕು ಮತ್ತು ಧಾನ್ಯವು ಇಲ್ಲವೇ ಹಾಲು ಕೊಳೆತರೆ ಮೀನಿಗಿಂತ ಹೆಚ್ಚು ನಾತಬೀರುತ್ತದೆಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡು ವಿರೋಧೀಪಕ್ಷದ ಬಂಗಾಳಿ ಬ್ರಾಹ್ಮಣರು ಮತ್ತು ಬಿಹಾರೀ ಬ್ರಾಹ್ಮಣರು ಅಹಿಂಸಾತತ್ವದ ಕುರಿತು ಎಂಥ ಅಭಿಪ್ರಾಯವನ್ನು ತಳೆದಿದ್ದಾರೆಂಬುದನ್ನೂ ಮೀನುತಿನ್ನುವುದರ ಕುರಿತು ಅವರ ವಿಚಾರಸರಣಿಯು ಹೇಗಿದೆಯೆಂಬುದನ್ನೂ ತಿಳಿದುಕೊಳ್ಳಬೇಕು. ಏಕೆಂದರೆ ಆ ವಿರೋಧಿಪಕ್ಷದಲ್ಲಿರುವವರು ಅಜ್ಞ ಮನುಷ್ಯರಾಗಿರದೇ ಹಲವು ಭಾಷೆಗಳಲ್ಲಿ ಪಾಂಡಿತ್ಯವನ್ನು ಪಡೆದವರಾಗಿದ್ದು, ಇತಿಹಾಸ ಸಂಶೋಧಕರೆಂದು ಹೆಸರುಗಳಿಸಿದ ಶ್ರೀಮಾನ್ ರಾಧಾಕುಮುದ ಮುಕರ್ಜಿ, ಪ್ರೊಫೆಸರ್, ಕೇ. ಪೀ. ಜಯಸ್ವಾಲ್ ಮುಂತಾದ ಘನವಿದ್ವಾಂಸರಾಗಿದ್ದಾರೆ.

ಬಿಹಾರದ, ಬಂಗಾಲದ ಮತ್ತು ಸಾರಸ್ವತ ಬ್ರಾಹ್ಮಣರಲ್ಲಿ ಮೀನು ತಿನ್ನದವರು ಕೂಡ ಇರುವುದರಿಂದ, ಮದುವೆ, ಮುಂಜಿ ಮೊದಲಾದ ಶುಭಕಾರ್ಯಗಳ ಭೋಜನಗಳಲ್ಲಿಯೂ. ಭೂರಿಸಂತರ್ಪಣೆಗಳಲ್ಲಿಯೂ ಮೀನನ್ನು ಅಡುವುದಾಗಲೀ ಬಡಿಸುವುದಾಗಲೀ ಇಲ್ಲ. ಹಾಗಿದ್ದರೂ ಬಿಹಾರದ ಬ್ರಾಹ್ಮಣರಲ್ಲಿ ಕೆಲವರು ಮದುವೆಯ ಊಟದಲ್ಲಿಯೂ ಮೀನನ್ನು ಬಡಿಸಬೇಕೆಂದು ಮೊಂಡು ಹಿಡಿಯುವವರಿದ್ದಾರೆಂದು ತಿಳಿದು ಬರುತ್ತದೆ. ಅಂದರೆ ೧೯೬೬ನೆಯ ಇಸವಿಯಲ್ಲಿ ಬಿಹಾರದ ಬ್ರಾಹ್ಮಣರಲ್ಲಿ ಜರುಗಲಿದ್ದ ಒಂದು ಮದುವೆಯಲ್ಲಿ ಗಂಡಿನ ಕಡೆಯವರು ಲಗ್ನದ ಊಟದಲ್ಲಿ ಮೀನನ್ನು ಬಡಿಸಬೇಕೆಂದು ಮೊಂಡು ಹಿಡಿದುದರಿಂದ ಆ ಸಂಬಂಧವು ತಪ್ಪಿಹೋಯಿತೆಂದು ವರದಿಯಾಗಿತ್ತು.[1]

---

1. Gaya (Bihar) July 6. (1966) " The demand for a Non Vegetarian dish that was not there at the all important dinner, by the groom's party wrecked an alliance, but not the marriage at a village two miles from here recenthy." It is not customary for Brahmins to serve non-vegetarian food on an auspicious occassion" the brides father pointed out. The entire party of the groom walked out in a huff. An invitee

ಅಹಿಂಸಾ ತತ್ವವು ಕೆಲವೇ ಮಂದಿ ಜೈನರಿಗೆ ಅಥವಾ ಕೆಲವೇ ಮಂದಿ ಬ್ರಾಹ್ಮಣರಿಗೆ ಮಾತ್ರ ಸಂಬಂಧಿಸಿದ ವಿಷಯವಾಗಿರದೇ ಜಗತ್ತಿನಲ್ಲಿ ತುಂಬಿರುವ ಕೋಟಿ-ಕೋಟ್ಯಂತರ ಮಾನವ ಸಮುದಾಯಕ್ಕೆ ಸಂಬಂಧಿಸಿದ ಸಮಸ್ಯೆಯಾಗಿರುತ್ತದೆ. ಆದುದರಿಂದ ಅಹಿಂಸಾತತ್ವವನ್ನು ಇಡೀ ಮಾನವ ಸಮುದಾಯದ ದೃಷ್ಟಿಯಿಂದ ಅಥವಾ ಆಧುನಿಕ ರೀತಿಯಿಂದ ವಿಮರ್ಶಿಸಿ ಅದರಲ್ಲಿ ಹುರುಳಿದೆಯೋ ಎಂದು ಕಂಡುಕೊಳ್ಳಬೇಕಾಗಿದೆ. ಏಕೆಂದರೆ ಭಾರತ ವರ್ಷದಲ್ಲಿನ ಕೆಲವೇ ಮಂದಿ ಅಹಿಂಸಾವಾದಿಗಳು ನ್ಯಾಯಾಸನದಲ್ಲಿ ಕುಳಿತು ಜಗತ್ತಿನ ಕೋಟಿಗಟ್ಟಳೆ ಜನರನ್ನು ಮಾಂಸಾಹಾರಿಗಳೆಂಬ ಕಾರಣದಿಂದ ಅಪರಾಧಿಗಳ ಸ್ಥಾನದಲ್ಲಿ ನಿಲ್ಲಿಸಿ ನೀವೆಲ್ಲರು ಪಾಪಿಗಳು, ಆದುರಿಂದ ನಿಮಗೆ ನರಕಲೋಕವೇ ಗತಿಯೆಂದು ತೀರ್ಪು ಕೊಡುವುದು ಸರಿಯಾಗದು. ಮತ್ತು ಅವರಿಗೆ ಅಂಥ ಅಧಿಕಾರವೂ ಇರಲಾರದು.

ಭಾರತವರ್ಷದಲ್ಲಿ ಮೊತ್ತಮೊದಲು ವೈದಿಕ ಯಜ್ಞಗಳಿಗೆ ವಿರುದ್ಧವಾಗಿ "ಅಹಿಂಸೆ" ಎಂಬ ವಾದವು ಯಾವ ಪ್ರದೇಶದಲ್ಲಿ ಪ್ರಕಟರೂಪದಿಂದ ಮುಂದೆ ಬಂದಿತೋ ಆ ಪ್ರದೇಶದ ಬ್ರಾಹ್ಮಣರು ಅಂದರೆ ಬಿಹಾರೀ ಮತ್ತು ಬಂಗಾಲೀ ಬ್ರಾಹ್ಮಣರು ಅಹಿಂಸಾತತ್ವವು ಮೂಲದಲ್ಲಿಯೇ ತಪ್ಪಾದುದು ಹಾಗೂ ಹುರುಳಿಲ್ಲದ್ದು ಅನ್ನುತ್ತಾರೆ. ಅವರ ಅಭಿಪ್ರಾಯದಲ್ಲಿ "ಅಹಿಂಸಾ ಪರಮೋಧರ್ಮಃ" ಎಂದು ಕೈಗೊಂಡ ತೀರ್ಮಾನವು ಏಕಪಕ್ಷೀಯವಾಗಿದ್ದು ವೇದವಿರೋಧಿಗಳಾದ ಜೈನರು, ಬೌದ್ಧರು ಮತ್ತು ಬಹಳ ಅಗ್ಗದಲ್ಲಿ ಶ್ರೇಷ್ಠತೆಯನ್ನು ಪಡೆಯಲು ಹವಣಿಸುತ್ತಿದ್ದ ಕೆಲವೇ ಮಂದಿ ಹಿಂದು ಜನರು ಕೂಡಿಮಾಡಿದ ನಿರ್ಣಯವಾಗಿರುತ್ತದೆ. ಯಾರು ವೇದಗಳನ್ನು ಮತ್ತು ವೈದಿಕಧರ್ಮವನ್ನು ಒಪ್ಪುವುದಿಲ್ಲವೋ ಅಂಥವರು ಬ್ರಾಹ್ಮಣರೂ ಅಲ್ಲ ಹಿಂದೂಗಳೂ ಅಲ್ಲ. ವೇದಗಳನ್ನು ಮನ್ನಿಸದಿದ್ದುದರಿಂದಲೇ ಜೈನರು ಮತ್ತು ಬೌದ್ಧರು ಹಿಂದುಗಳಿಂದ ಬೇರಾಗಲು ಕಾರಣವಾಗಿತ್ತು. ಅಹಿಂಸಾ ತತ್ವವು ವೇದಗಳ ಧರ್ಮಕ್ಕೆ ವಿರುದ್ಧವಾಗಿದ್ದು. ಅದು ವೈದಿಕ ಋಷಿಗಳನ್ನು ದೂಷಿಸಿ ನಿಂದಿಸುತ್ತದೆ. ಮತ್ತು ಆ ಋಷಿಗಳ ಘನತೆಯನ್ನು ಅಲ್ಲಗಳೆಯುತ್ತದೆ. ವಾಸ್ತವಿಕವಾಗಿ ಅಹಿಂಸಾತತ್ವವು ಬರೀ ಟೊಳ್ಳಾಗಿರುತ್ತದೆ. ಏಕೆಂದರೆ ಬ್ರಹ್ಮಾಂಡದ ನಿರ್ಮಾಣದಲ್ಲಿ ಪಾಲುಗೊಂಡಿರುವ ಪ್ರತಿಯೊಂದು ಪರಮಾಣುವೂ ಜೀವಶಕ್ತಿಯಿಂದ ಕೂಡಿರುತ್ತದೆ. ಜಡವೆಂದು ತಿಳಿಯು

---

however, came to the rescue of Kesho Pandey, the brides father. He got his son married in the same mandap and all ended well. "The Hindu."

ಲಾದ ಕಲ್ಲುಬಂಡೆಗಳು ಕೂಡ ಬೆಳೆಯುತ್ತಲೇ ಇರುತ್ತವೆ. ಸರ್. ಜಗದೀಶ ಚಂದ್ರಬಸು ಎಂಬ ವಿಜ್ಞಾನಿಶ್ರೇಷ್ಠರೊಬ್ಬರು ಸಸ್ಯಾದಿಗಳಲ್ಲಿ ಜೀವವಿರುತ್ತದೆಂಬುದನ್ನು ಮಾತ್ರವಲ್ಲ ಅವುಗಳಲ್ಲಿ ಇತರ ಪ್ರಾಣಿಗಳಂತೆಯೇ ನೋವು ಹಾಗೂ—ಸುಖ–ದುಃಖಗಳ ಸಂವೇದನೆ (feelings) ಗಳು ಕೂಡ ಇವೆಯೆಂದು ಸಿದ್ಧಪಡಿಸಿದ್ದಾರೆ. ಅಂದರೆ ಮನುಷ್ಯನು ಕತ್ತಿಯನ್ನು ಹಿಡಿದು ಗಿಡಗಳನ್ನು ಕಡಿಯಲು ಬಂದಾಗ ಇಲ್ಲವೇ ವಿಷಜಂತುಗಳಾದ ಹಾವು ಮೊದಲಾದವುಗಳು ತಮ್ಮ ವಿಷವನ್ನು ಕಳೆಯಲು ಕಚ್ಚಲು ಬಂದಾಗ ಗಿಡಗಳು ಕಳವಳದಿಂದ ನಡುಗುತ್ತವೆಂದು ಚಿತ್ರಪ್ರದರ್ಶನದಿಂದ ತೋರಿಸಿದ್ದಾರೆ. ಒಂದು ಧಾನ್ಯದ ಕಾಳನ್ನು ಮಣ್ಣಿನಲ್ಲಿಟ್ಟು ನೀರನ್ನೆರೆದರೆ ಎರಡು-ಮೂರು ದಿನಗಳೊಳಗೆ ಮೊಳಕೆಯೊಡೆದು ಚಿಗುರತೊಡಗುತ್ತದೆ. ತರುವಾಯ ಬೆಳೆದು ಗಿಡವಾಗುತ್ತದೆ. ಮತ್ತು ಯೋಗ್ಯ ಕಾಲ ಬಂದೊಡನೆ ತನ್ನಂಥ ನೂರಾರು ಕಾಳುಗಳನ್ನು ಹೆರುತ್ತದೆ. ಆದರೆ ಅದೇ ಕಾಳನ್ನು ಬೇಯಿಸಿದ ತರುವಾಯ ನೆಟ್ಟರೆ ಅದು ಮೊಳೆಯುವುದಿಲ್ಲ. ಅಂದರೆ ಬೇಯಿಸುವ ಮೊದಲು ಧಾನ್ಯದ ಕಾಳಿನಲ್ಲಿ ಜೀವವಿರುತ್ತದೆಂದೂ, ಬೇಯಿಸಿದರೆ ಅದು ಸಾಯುತ್ತದೆಂದೂ ಸಿದ್ಧವಾಗುತ್ತದೆ. ಆದುದರಿಂದ ಧಾನ್ಯದ ಕಾಳುಗಳನ್ನು ಬೇಯಿಸುವಾಗ ಇಲ್ಲವೇ ಗಿಡಗಳನ್ನು ಕಡಿಯುವಾಗ ಅವುಗಳು ಅನುಭವಿಸುವ ವೇದನೆಯು ನಮ್ಮ ಕಣ್ಣುಗಳಿಗೆ ಕಾಣಿಸುವುದಿಲ್ಲವೆಂದೊಡನೆ ಅವುಗಳಿಗೆ ವೇದನೆಯೇ ಆಗುವುದಿಲ್ಲ—ಆದುದರಿಂದ ಅದು ಹಿಂಸೆಯಲ್ಲವೆನ್ನಲಾಗುವುದಿಲ್ಲ. ಹೀಗಿರುವಾಗ ಮಾಂಸಾಹಾರಿಗಳಲ್ಲಿ ಮತ್ತು ಶಾಕಾಹಾರಿಗಳಲ್ಲಿ ಹೆಚ್ಚಿನ ಪಾಪಿಗಳಾರೆಂದು ನಿರ್ಣಯಿಸುವುದಾರು? ಈ ತನಕದ ರೂಢಿಯಂತೆ ಮಾಂಸಾಹಾರಿಗಳು ಶಾಕಾಹಾರಿಗಳನ್ನು ತಮಗಿಂತ ದೊಡ್ಡ ಪಾಪಿಗಳೆನ್ನಬಹುದಲ್ಲವೇ?

ಮಗನ ಪ್ರಾಣವನ್ನುಳಿಸುವ ಬಯಕೆಯಿಂದ ತಾಯಿಯು ಬರಿಯ ಹಿಟ್ಟಿನ ಕೋಳಿಯೊಂದನ್ನು ಬಲಿಕೊಟ್ಟ ಪಾಪಕ್ಕಾಗಿ ತಾಯಿ ಮಕ್ಕಳಿಬ್ಬರೂ ಹಲವು ಜನ್ಮಗಳನ್ನೆತ್ತಿ ಬಳಲಬೇಕಾಯಿತೆಂದು ಕಥೆಯನ್ನು ಕಟ್ಟಿದ ಅಹಿಂಸಾವಾದಿಗಳು ಲಕ್ಷ್ಯಗಟ್ಟಳೆ ಧಾನ್ಯದ ಕಾಳುಗಳನ್ನು ಕೊಂದ ಪಾಪಕ್ಕಾಗಿ ಎಷ್ಟು ಕೋಟಿ ಜನ್ಮಗಳಲ್ಲಿ ಬಳಲಬೇಕಾಗಬಹುದೆಂದು ಹೇಳಲು ಸಾಧ್ಯವೇ? ತಾತ್ಪರ್ಯವೇನೆಂದರೆ ಭಾರತವರ್ಷದಲ್ಲಿನ ಕೆಲವೇ ಮಂದಿ ಅಹಿಂಸಾವಾದಿಗಳು ಅಥವಾ ನಾವು ಮೀನು ತಿನ್ನುವುದಿಲ್ಲ. ಮಾಂಸವನ್ನು ಮುಟ್ಟುವುದಿಲ್ಲ, ನಾವು ಶುದ್ಧಶಾಕಾಹಾರಿಗಳು ನೀವು ಮುಟ್ಟಿದುದನ್ನು ನಾವು ಸೇವಿಸಲಾರೆವು ಎಂದು ಜಂಭವನ್ನು ಕೊಚ್ಚಿ ಅನ್ಯರನ್ನು ಕೀಳುಗೈದು ನೋಯಿಸುವವರು, ಜಗತ್ತಿನ ಅಧಿಕಾಂಶ ಜನರನ್ನು ಮಾಂಸಾಹಾರಿ

ಗಳು, ಮ್ಲೇಂಛರು ಮುಂತಾಗಿ ಕರೆದು ಅವರನ್ನು ಪಾಪಿಗಳೆಂದು ತೀರ್ಮಾನಿಸು ವುದಕ್ಕಿಂತ ಹೆಚ್ಚಿನ ಮೂಢತನವು ಬೇರೆ ಯಾವುದೂ ಇರಲಾರದು. ಅರ್ಥಾತ್ ಶಾಕಾಹಾರಿಗಳಿಗೆ ಮೀನು, ಮಾಂಸಗಳು ಒಗ್ಗದಿರಬಹುದು ಅಂದೊಡನೆ ಅವರಿಗೆ ಇತರರನ್ನು ಮಾಂಸಾಹಾರಿಗಳೆಂದು ಕರೆದು ಕೀಳುಗೈಯುವ ಅಧಿಕಾರವಿಲ್ಲವೆಂದು ಅವರು ತಿಳಿದಿರುವುದು ಲೇಸು. ಜಗತ್ತಿನಲ್ಲಿ ಬೇರೆ ಬೇರೆ ದೇಶಗಳ, ಬೇರೆ ಬೇರೆ ಜನಾಂಗಗಳ, ಬೇರೆ ಬೇರೆ ಪಂಗಡಗಳ ರೀತಿ-ನೀತಿಗಳು, ಆಚಾರ ವಿಚಾರಗಳು ಕಟ್ಟುಕಟ್ಟಳೆಗಳು ಭಾರತೀಯರಿಂದ ಹಲವು ವಿಷಯಗಳಲ್ಲಿ ಭಿನ್ನವಾಗಿವೆ. ಆದುದ ರಿಂದ ಅವರ ಕಟ್ಟುಕಟ್ಟಳೆಗಳು ಭಾರತೀಯರಿಂದ ಭಿನ್ನವಾಗಿವೆಯೆಂದೊಡನೆ, ಆ ಕಟ್ಟುಕಟ್ಟಳೆಗಳನ್ನು ದೋಷಯುಕ್ತವಾದವುಗಳೆಂದು ನಿರ್ಣಯಿಸುವ ಅಧಿಕಾರವು ಭಾರತೀಯರಿಗೆ ಇಲ್ಲ. ಹಾಗೆಯೇ ಭಾರತೀಯರ ಕಟ್ಟುಕಟ್ಟಳೆಗಳನ್ನು ದೂಷಿಸುವ ಅಧಿಕಾರವು ಇತರ ದೇಶಿಯರಿಗೂ ಇಲ್ಲ. ಏಕೆಂದರೆ ಪ್ರತಿಯೊಂದು ಜನಾಂಗ ದವರ ಕಟ್ಟಳೆಗಳು ಅವರು ನೆಲಸಿರುವ ಪ್ರದೇಶದ ಪ್ರಾಕೃತಿಕ ಪರಿಸ್ಥಿತಿಯನ್ನವ ಲಂಬಿಸಿ ರೂಪುಗೊಂಡಿರುವುದರಿಂದ ಅವರವರ ಕಟ್ಟಳೆಗಳು ಅವರವರಿಗೆ ಯೋಗ್ಯ ದವುಗಳೇ ಆಗಿರುತ್ತವೆ. ಯೂರೋಪಿನ ಜನರು ಮಾಂಸಾಹಾರಿಗಳಾಗಿದ್ದು ಮದ್ಯವನ್ನು ಪಾನೀಯವನ್ನಾಗಿ ಬಳಸುತ್ತಾರೆ. ಹಾಗಿದ್ದರೂ ಅವರು ಭಾರತೀಯ ಶಾಕಾಹಾರಿಗಳನ್ನು ತಮಗಿಂತ ಶ್ರೇಷ್ಠರೆಂದು ತಿಳಿಯುವುದಿಲ್ಲ. ಬದಲಿಗೆ ತಮಗಿಂತ ಕೀಳೆಂದೇ ತಿಳಿಯುತ್ತಾರೆಂದು ಶಾಕಾಹಾರಿಗಳು ತಿಳಿದಿರ ಬೇಕು. ಯುರೋಪಿಯನರ ದೃಷ್ಟಿಯಲ್ಲಿ ಮನುಷ್ಯನ ಆಹಾರವು ಅವನ ಮೇಲು ಕೀಳುಗಳಿಗೆ ಕಾರಣವಾಗಿರುವುದಿಲ್ಲ. ಅಂದರೆ ಅವರು ಜನರ ಮೇಲು ಕೀಳುಗಳನ್ನು ಅಳೆಯುವ ಮಾನದಂಡವು ಆಹಾರವಾಗಿರುವುದಿಲ್ಲ. ಅವರಲ್ಲಿ ವಿದ್ಯೆ, ವೈಜ್ಞಾನಿಕ ಉನ್ನತಿ ಮತ್ತು ಧನ ಇವುಗಳೇ ಮನುಷ್ಯನ ಮೇಲು ಕೀಳು ಗಳನ್ನು ಅಳೆಯುವ ಮಾನದಂಡವಾಗಿರುತ್ತದೆ.

ಹಿಂಸೆ ಮತ್ತು ಅಹಿಂಸೆಗಳ ಕುರಿತು ಅಥವಾ ಮಾಂಸಾಹಾರ ಮತ್ತು ಶಾಕಾಹಾರಗಳ ಕುರಿತು ಇಷ್ಟು ಸ್ಪಷ್ಟವಾಗಿ ಮತ್ತು ತೀಕ್ಷ್ಣವಾಗಿ ವಿಮರ್ಶಿಸಿದುದರ ಮೇಲಿಂದ ವಿಮರ್ಶಕನು, ಮಾಂಸಾಹಾರಿಯೆಂದಾಗಲೀ, ಮಾಂಸಾಹಾರವನ್ನು ಪ್ರೋತ್ಸಾಹಿಸುವವನೆಂದಾಗಲೀ ಇಲ್ಲವೇ ನಾಸ್ತಿಕನೆಂದಾಗಲೀ ಎಣಿಸಬೇಕಾಗಿಲ್ಲ. ವಿಮರ್ಶಕನ ಉದ್ದೇಶವು ಲೋಕದಲ್ಲಿನ ವಾಸ್ತವಿಕ ಸ್ಥಿತಿಯನ್ನು ತಿಳಿಸುವುದಾಗಿ ದೆಯೇ ಹೊರತು, ಯಾರೊಬ್ಬರನ್ನು ನಿಂದಿಸುವುದಾಗಲೀ ಇಲ್ಲವೇ ಯಾರೊಬ್ಬರಿಗೆ ಬುದ್ಧಿ ಹೇಳುವುದಾಗಲೀ ಆಗಿರುವುದಿಲ್ಲ. ವಿಮರ್ಶಕನು ಆಚಾರನಿಷ್ಠನಾದ

ಬ್ರಾಹ್ಮಣನಾಗಿರುವುದು ಮಾತ್ರವಲ್ಲದೇ ತನ್ನ ಪೂರ್ವಜರಾದ ಋಷಿಗಳ ಕುರಿತು ಅತ್ಯಂತ ಅಭಿಮಾನವುಳ್ಳವನೂ ದೇವರ ಸರ್ವಜ್ಞತ್ವದಲ್ಲಿ ಮತ್ತು ಶಕ್ತಿಯಲ್ಲಿ ದೃಢವಾದ ವಿಶ್ವಾಸವುಳ್ಳವನೂ, ಜನ್ಮ-ಜನ್ಮಾಂತರಗಳಲ್ಲಿ ನಂಬಿಕೆಯುಳ್ಳವನೂ ಆಗಿದ್ದಾನೆ. ವಿಮರ್ಶಕನ ಅಭಿಪ್ರಾಯದಲ್ಲಿ ಪಾಪಪುಣ್ಯಗಳನ್ನು ನಿರ್ಣಯಿಸುವ ಕೆಲಸವು ಮನುಷ್ಯನ ಶಕ್ತಿಗೆ ಮೀರಿದುದಾಗಿದ್ದು. ಅದನ್ನು ನಿರ್ಣಯಿಸುವ ಸಂಪೂರ್ಣ ಅಧಿಕಾರವು ದೇವರಿಗೆ ಸೇರಿದುದಾಗಿದೆ. ದೇವರು ಮನುಷ್ಯನ ಕರ್ಮಗಳಿಗೆ ಅನುಸಾರವಾದ ಫಲವನ್ನು ವಿಧಿಸುವ ಶಕ್ತಿಯುಳ್ಳವನಾಗಿದ್ದಾನೆ. ಆ ಪರಶಕ್ತಿಯ ಕೈಯಲ್ಲಿನ ಸೂತ್ರದಲ್ಲಿ ನೇತಾಡುವ ಬೊಂಬೆಯಂತಿರುವ ಹುಲು ಮನುಷ್ಯನಿಗೆ ಯಾರೊಬ್ಬರ ಆಚಾರ-ವಿಚಾರಗಳನ್ನು ಅಥವಾ ಆಹಾರ-ಪಾನೀಯುಗಳನ್ನು ಸರಿಯಲ್ಲವೆಂದು ಹೇಳುವ ಹಾಗೂ ಪಾಪ-ಪುಣ್ಯಗಳನ್ನು ನಿರ್ಣಯಿಸುವ ಅಧಿಕಾರವಿಲ್ಲ. ಆದುದರಿಂದ ಮನುಷ್ಯರು ದೇವರ ಕೆಲಸದಲ್ಲಿ ಹಸ್ತಕ್ಷೇಪ ಮಾಡುವುದಾಗಲೀ, ಅವನ ಅಧಿಕಾರವನ್ನು ಕಸಿದುಕೊಳ್ಳುವ ಪ್ರಯತ್ನಮಾಡುವುದಾಗಲೀ ಸರಿಯಾಗಲಾರದು. ಹಾಗೆಯೇ ಒಂದು ಸಮಾಜದವರು ಇನ್ನೊಂದು ಸಮಾಜದವರ ಆಚಾರವಿಚಾರಗಳ ಕುರಿತಾಗಲೀ ಆಹಾರ-ಪಾನೀಯಗಳ ಕುರಿತಾಗಲೀ ವಿಮರ್ಶೆಮಾಡಿ ಟೀಕಿಸುವುದೂ ಸರಿಯೆನ್ನಲಾಗದು. ಏಕೆಂದರೆ ಉಪ್ಪು ತಿಂದವನು ನೀರು ಕುಡಿಯಬೇಕಾಗುತ್ತದೆಂಬುದು ಎಷ್ಟು ನಿಶ್ಚಿತವಿರುತ್ತದೋ ಪಾಪ ಮಾಡಿದವನು ಅದರ ಫಲವನ್ನು ಅನುಭವಿಸಲೇಬೇಕಾಗುತ್ತದೆಂಬುದು ಕೂಡ ಅಷ್ಟೇ ನಿಶ್ಚಿತವಿರುತ್ತದೆ. ಕಾಸರಕನ ಬೀಜವನ್ನು ನೆಟ್ಟು ಯಾರೊಬ್ಬನೂ ಇಂದಿನ ತನಕ ತೆಂಗಿನಕಾಯಿಯನ್ನು ಪಡೆದಿಲ್ಲ. ಆದುದರಿಂದ ಯಾರೊಬ್ಬರು-ಇತರರು ಮಾಂಸವನ್ನು ತಿಂದು ನರಕಕ್ಕೆ ಹೋಗುತ್ತಾರಲ್ಲಾ ಎಂದು ಹಳಹಳಿಸಬೇಕಾಗಿಲ್ಲ. ಅಂದರೆ ಪ್ರತಿಯೊಂದು ಸಮಾಜದವರಿಗೆ ತಮಗೆ ಸರಿದೋರಿದಂತೆ ಆಚರಿಸುವ ಹಾಗೂ ಹಿತದೋರಿದ ಆಹಾರವನ್ನು ಭಕ್ಷಿಸುವ ಪೂರ್ಣಸ್ವಾತಂತ್ರ್ಯವಿದೆಯೆಂದು ಒಪ್ಪಿಕೊಂಡರೆ ಕಲಹಕ್ಕೆ ಕಾರಣವೇ ಇರುವುದಿಲ್ಲ.

ಶಕಪೂರ್ವ ನಾಲ್ಕನೆಯ ಶತಮಾನದ ವರೆಗೆ ಅಂದರೆ ಮೌರ್ಯ ಚಕ್ರವರ್ತಿ ಚಂದ್ರಗುಪ್ತನ ಕಾಲದವರೆಗೆ ಭಾರತವರ್ಷದ ಜನಸಾಮಾನ್ಯರ ಮೇಲೂ ಅಧಿಕಾಂಶ ಬ್ರಾಹ್ಮಣರ ಮೇಲೂ ಅಹಿಂಸಾತತ್ವದ ಯಾವ ಪ್ರಭಾವವೂ ಆಗಿರಲಿಲ್ಲ. ಸಾಮಾನ್ಯ ಜನರು ಅಹಿಂಸಾತತ್ವದ ವಿಚಾರ-ವಿಮರ್ಶೆಗಳಿಂದ ಸಂಪೂರ್ಣ ನಿರ್ಲಿಪ್ತರಾಗಿದ್ದರು. ಆದುದರಿಂದ ಜನರಲ್ಲಿ ಭಕ್ಷ್ಯಾಭಕ್ಷ್ಯಗಳ ವಿಮರ್ಶೆಯಾಗಲೀ ಸ್ಪೃಶ್ಯಾಸ್ಪೃಶ್ಯಗಳ ಭಾವನೆಯಾಗಲೀ ತಲೆದೋರಿರಲಿಲ್ಲ.

ಹೀಗಾಗಿ ಜನರಲ್ಲಿ ಜಾತಿಭೇದಗಳ ಅಭೇದ್ಯ ಗೋಡೆಗಳು ಎದ್ದಿರಲಿಲ್ಲ. ಬ್ರಾಹ್ಮಣರು ಜರಗಿಸುತ್ತಿದ್ದ ಯಜ್ಞಗಳಲ್ಲಿ ಎಲ್ಲ ವರ್ಣಗಳ ಜನರು ಸೇರಿ ತಮ್ಮ ತಮ್ಮ ಭಾಗದ ಕೆಲಸಗಳನ್ನು ನೆರವೇರಿಸುತ್ತಿದ್ದರು. ಅಲ್ಲದೆ ಆಗಿನ ಕಾಲದಲ್ಲಿ ಸಿಂಧುವನ್ನು ದಾಟಿ ಹೋಗಬಾರದೆಂಬ ನಿರ್ಬಂಧವಿಲ್ಲದುದರಿಂದ ಬ್ರಾಹ್ಮಣರು ಪರದೇಶ ಪ್ರವಾಸವನ್ನು ಕೈಗೊಂಡು ಸರ್ವತ್ರ ಸಂಚರಿಸುತ್ತಿದ್ದರು. ಮತ್ತು ತಾವು ಸಂಚರಿಸುತ್ತಿದ್ದ ದೇಶಗಳ ಸಕಲವರ್ಗದ ಜನರೊಂದಿಗೆ ಕೂಡಿ ವ್ಯವಹರಿಸುತ್ತಿದ್ದರು. ಪಶ್ಚಿಮ ಆಸ್ಯ ಮತ್ತು ಮಧ್ಯ ಆಸ್ಯಗಳಲ್ಲಿ ನೆಲಸಿದ್ದ ಪಾರಸೀಕ, ಪಾರದ, ಪಹ್ಲವ, ಶಕ, ಅರ್ಕ, ಅಸುರ, ಯವನ, ಬಾಹ್ಲೀಕ, ಕಾಂಬೋಜ ಮೊದಲಾದ ಸಕಲ ಜನರು ಆರ್ಯವಂಶೀಯರೇ ಆಗಿದ್ದುದರಿಂದ ಭಾರತೀಯ ಬ್ರಾಹ್ಮಣರು ಅವರಲ್ಲಿ ಉಣ್ಣುತ್ತಿದ್ದರು-ಕುಡಿಯುತ್ತಿದ್ದರು. ಹಾಗೆ ಮಾಡಿದರೆ ಜಾತಿ ಹೋದೀತೆಂಬ ಅಂಜಿಕೆ ಇರಲಿಲ್ಲ. ಹಾಗಿದ್ದುದರಿಂದಲೇ ರಾಜಕುಮಾರನಾಗಿದ್ದ ಚಂದ್ರಗುಪ್ತನು ಮಗಧವನ್ನು ಜಯಿಸಿದ ತರುವಾಯ ಮಧ್ಯಆಸ್ಯದ ತನಕ ತನ್ನ ಸಾಮ್ರಾಜ್ಯವನ್ನು ವಿಸ್ತರಿಸಲು ಸಾಧ್ಯವಾಗಿದ್ದಿತು. ಅಷ್ಟೇ ಏಕೆ ಇಸ್ಲಾಮ್‌ಧರ್ಮವು ಪ್ರಬಲವಾಗಿ ಮುಸಲ್ಮಾನರು ಭಾರತವರ್ಷದ ಮೇಲೆ ಧಾಳಿ ಇಡಲು ಆರಂಭಿಸುವ ತನಕವೂ ಅಫಘಾನಿಸ್ಥಾನವು ಭಾರತವರ್ಷದೊಂದಿಗೆ ಕೂಡಿದ್ದು ಬ್ರಾಹ್ಮಣ ಅರಸರು ಅಲ್ಲಿ ಆಳುತ್ತಿದ್ದರು. ಆದುದರಿಂದಲೇ ಇಂದಿಗೂ ಅಫಘಾನಿಸ್ಥಾನದಲ್ಲಿ ಸಾರಸ್ವತ ಬ್ರಾಹ್ಮಣರ ಕೆಲವು ಕುಟುಂಬಗಳು ಉಳಿದಿವೆ. ಆ ಬ್ರಾಹ್ಮಣರ ಹೆಸರುಗಳು ಸಂಸ್ಕೃತದಲ್ಲಿರುತ್ತವಾದರೂ ಹೆಸರಿನ ಕೊನೆಯಲ್ಲಿ ಪಂಡಿತ ಇಲ್ಲವೇ ಭಟ್ಟ ಎಂಬ ಅರ್ಥದಲ್ಲಿ "ಮುಲ್ಲಾ" ಎಂಬ ಅರಬೀ ಶಬ್ದವು ಕೂಡಿರುತ್ತದೆ.

ಅಶೋಕ ಚಕ್ರವರ್ತಿಯ ತರುವಾಯ ಭಾರತವರ್ಷದಲ್ಲಿ ಹರಡಲಾದ ಅಹಿಂಸಾಧರ್ಮದ ಪರಿಣಾಮದಿಂದಾಗಿ ಜನರಲ್ಲಿ ಇತರ ಆಚರಣೆಗಳಿಗಿಂತ ಆಹಾರಕ್ಕೆ ಹೆಚ್ಚಿನ ಮಹತ್ವ ಬಂದಿತು. ಮತ್ತು ಭಕ್ಷ್ಯಾಭಕ್ಷ್ಯಗಳ ಕುರಿತಾದ ತೀಕ್ಷ್ಣವಾದ ವಿಚಾರ ವಿಮರ್ಶೆಗಳು ನಡೆಯತೊಡಗಿದವು. ಹಾಗೂ ಆಹಾರವು ಸಾತ್ವಿಕ, ರಾಜಸ ಮತ್ತು ತಾಮಸ ಎಂದು ವರ್ಗೀಕರಿಸಲ್ಪಟ್ಟಿತು. ಶಾಕಾಹಾರವು ಸಾತ್ವಿಕವೆಂದು ನಿರ್ಣಯಿಸಲಾಯಿತು. ಮತ್ತು ಜನರು ಶಾಕಾಹಾರ ಮಾತ್ರದಿಂದಲೇ ಇತರರಿಗಿಂತ ಶ್ರೇಷ್ಠರೆಂದು ಗಣಿಸಲ್ಪಡತೊಡಗಿದರು. ಹಾಗೂ ಆ ಶಾಕಾಹಾರಿಗಳು ತಮ್ಮ ವಿರೋಧಿಗಳಾದ ಮಾಂಸಾಹಾರಿಗಳನ್ನು ತಮಗಿಂತ ಕೀಳೆಂದು ಪ್ರಚಾರಮಾಡತೊಡಗಿದರು. ಅದು ಎಷ್ಟು ಮುಂದುವರಿಯಿತೆಂದರೆ ಸಿಂಧುನದದ ಪಶ್ಚಿಮ ಪಾರ್ಶ್ವದ ಜನರು ಮಂಸಾಹಾರಿಗಳೆಂಬ ಕಾರಣದಿಂದ

ಅವರನ್ನು ಮ್ಲೇಂಛರೆಂದು ತೀರ್ಮಾನಿಸಿದುದಲ್ಲದೆ ಅವರೊಂದಿಗೆ ಸಂಬಂಧ ಬೆಳೆಸಿದವರನ್ನು ಸಮಾಜದಿಂದ ಹೊರದಬ್ಬತೊಡಗಿದರು. ಅಷ್ಟೇ ಅಲ್ಲ ಕೊನೆಗೆ ಜನರು ಸಿಂಧುವನ್ನು ದಾಟಬಾರದೆಂಬ ನಿರ್ಬಂಧವನ್ನು ಹೇರಿದರು. ತರುವಾಯದವರು "ಸಿಂಧು" ಶಬ್ದಕ್ಕೆ ಸಮುದ್ರ ಎಂಬ ಅರ್ಥಮಾಡಿ ಸಮುದ್ರ ಪ್ರಯಾಣವನ್ನೂ ನಿಷೇಧಿಸಿದರು. ಹೀಗಾಗಿ ಭಾರತವರ್ಷದ ವಿಸ್ತಾರವು ಸಂಕುಚಿತವಾದುದಲ್ಲದೇ ಭಾರತೀಯರಿಗೆ ಹೊರಜಗತ್ತಿನೊಂದಿಗೆ ಮೊದಲಿದ್ದ ಸಂಪರ್ಕವು ಸಂಪೂರ್ಣವಾಗಿ ಕಡಿದುಹೋಯಿತು. ಮತ್ತು ಭಾರತೀಯರು ಕೂಪಮಂಡೂಕದಂತಾದರು. ಆದರ ತರುವಾಯದ ಘಟನೆಗಳೆಲ್ಲವೂ ಚರಿತ್ರೆಯ ಪುಸ್ತಕಗಳಲ್ಲಿ ಓದಲು ಸಿಗುತ್ತವೆ.

ಇದರಲ್ಲಿ ಸಾರಸ್ವತ ಬ್ರಾಹ್ಮಣರ ವಿಷಯದೊಂದಿಗೆ ಸಾರಸ್ವತ ಮೂಲದ ಕಾಳಾಮುಖ ಶೈವಪಂಥದ ಕಾಶ್ಮೀರೀ ಬ್ರಾಹ್ಮಣರ ಹಾಗೂ ಉತ್ತರ ಪ್ರದೇಶದ ಸಹವಾಸೀ ಬ್ರಾಹ್ಮಣರ ವಿಷಯಗಳು ಕೂಡ ಪ್ರಸಂಗಾನುಸಾರವಾಗಿ ಅಲ್ಲಲ್ಲಿ ಬಂದಿವೆ. ಇತರ ವರ್ಗದ ಬ್ರಾಹ್ಮಣರ ವಿಷಯಗಳು ಚಾರಿತ್ರಿಕ-ವಿವರಣೆಗೆ ಆವಶ್ಯಕವಿದ್ದಷ್ಟು ಮಾತ್ರ ಬಂದಿವೆಯೇ ಹೊರತು ಅವರ ವಿಷಯಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟಿಲ್ಲ, ಕಾಳಾಮುಖರು ಸಾರಸ್ವತ ಬ್ರಾಹ್ಮಣರ ನಿಕಟವರ್ತಿಗಳು ಅಂದರೆ ಸಾರಸ್ವತ ಬ್ರಾಹ್ಮಣರು ಇದ್ದಲ್ಲೆಲ್ಲ ಇದ್ದವರು. ಆದುದರಿಂದ ಸಾರಸ್ವತ ಬ್ರಾಹ್ಮಣರ ಇತಿಹಾಸದೊಂದಿಗೆ ಕಾಳಾಮುಖಬ್ರಾಹ್ಮಣರ ಇತಿಹಾಸವು ಹೆಣೆದುಕೊಂಡಿದೆ. ಹೀಗಾಗಿ ಒಂದು ಕಾಲದಲ್ಲಿ ಆಂಧ್ರ, ಕರ್ಣಾಟ, ತಮಿಳುನಾಡು, ತುಳುನಾಡು ಮೊದಲಾದ ರಾಜ್ಯಗಳಲ್ಲಿ ಅರಸರ ಕುಲಗುರುಗಳಾಗಿದ್ದು ಅವರಿಂದ "ದೇವರು" "ದಿವ್ಯಜ್ಞಾನಿ" "ಮುನಿ" ಮುಂತಾಗಿ ಕರೆಸಿಕೊಂಡು ಮೆರೆದ ಕಾಳಾಮುಖ ಬ್ರಾಹ್ಮಣರನ್ನು, ತರುವಾಯ ತಲೆಎತ್ತಿದ ವೈಷ್ಣವ ಬ್ರಾಹ್ಮಣರು, ಭೈರವೋಪಾಸಕರೆಂತಲೂ, ಕಾಪಾಲಿಕರೆಂತಲೂ, ವಾಮಮಾರ್ಗಿಗಳೆಂತಲೂ ಮಾಡಿದ ಪ್ರಚಾರದಲ್ಲಿ ಹುರುಳಿಲ್ಲವೆಂದು ತೋರಿಸಿಕೊಡುವ ಪ್ರಯತ್ನಮಾಡಿದ್ದೇನೆ. ಹಾಗೆಯೇ ವಿಜಯನಗರ ಸ್ಥಾಪನೆಗೆ ಶ್ರೀ ವಿದ್ಯಾರಣ್ಯರೊಬ್ಬರೇ ಕಾರಣರಾಗಿದ್ದರೆಂಬ ಕಥೆಗೆ ಯಾವುದೊಂದು ಆಧಾರವೂ ಇಲ್ಲವೆಂಬುದನ್ನು ಮತ್ತು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಲ್ಲಿ ಗೋವದ ಸಾರಸ್ವತ ಬ್ರಾಹ್ಮಣರು ಮಹತ್ತರವಾದ ಪಾತ್ರವನ್ನು ವಹಿಸಿದ್ದರೆಂಬುದನ್ನು ಪ್ರಮಾಣಗಳ ಸಹಿತವಾಗಿ ವಿವರಿಸಿದ್ದೇನೆ.

ಕಾಳಾಮುಖ ಬ್ರಾಹ್ಮಣರಿಗೆ ಸಂಬಂಧಪಟ್ಟ ಶಾಸನಗಳಲ್ಲಿ ಅವರನ್ನು

"ಬ್ರಾಹ್ಮಣ" ಎಂದು ಸ್ಪಷ್ಟವಾಗಿ ಉಲ್ಲೇಖಿಸಿಲ್ಲದುದರಿಂದ ಕೆಲವರು ಅವರನ್ನು ಬ್ರಾಹ್ಮಣರಿಂದ ಭಿನ್ನರು ಅಥವಾ ಬ್ರಾಹ್ಮಣರಲ್ಲವೆಂದು ಹೇಳಿದುದೂ ಉಂಟು. ಆದರೆ ಶಾಸನಗಳಲ್ಲಿ ಬಂದಿರುವ ಉಲ್ಲೇಖಗಳನ್ನು ಸೂಕ್ಷ್ಮರೀತಿಯಿಂದ ಪರಿಶೀಲಿಸಿದರೆ ಅವರು ಶುದ್ಧ ಬ್ರಾಹ್ಮಣರೆಂದು ತಾನಾಗಿ ಸಿದ್ಧವಾಗುತ್ತದೆ. "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಎಂಬ ಪುಸ್ತಕದಲ್ಲಿ ಬಂದಿರುವ ವಿವರಗಳಿಂದ ಮುಂದೆ ಕೊಟ್ಟಿರುವ ವಿಷಯಗಳು ಸ್ಪಷ್ಟವಾಗುತ್ತವೆ:— ೧. ಕಾಳಾಮುಖರಲ್ಲಿ ಬ್ರಹ್ಮಚಾರಿಗಳಿದ್ದರು. (ಪುಟ ೧೪೦) ೨. ಅವರು ತಮ್ಮ ಪಿತೃಗಳಿಗೆ ಪಿಂಡಪ್ರದಾನ ಮಾಡುತ್ತಿದ್ದರು. (ಪುಟ ೧೪೫) ೩. ವರ್ಣಾಶ್ರಮ ಧರ್ಮವನ್ನು ಪಾಲಿಸುತಿದ್ದರು. (ಪುಟ ೧೪೯) ೪. ಅವರು ವೇದ ವೇದಾಂಗಗಳನ್ನು ಕಲಿಯುತಿದ್ದರು. ಮತ್ತು ಇತರರಿಗೆ ಕಲಿಸುತಿದ್ದರು. (ಪುಟ ೧೫೦) ಇವಿಷ್ಟು ವಿವರಗಳು ಕಾಳಾಮುಖರು-ಬ್ರಾಹ್ಮಣರಾಗಿದ್ದರೆಂಬುದನ್ನು ಸಿದ್ಧಪಡಿಸಲು ಸಾಕಾಗಿವೆ.

ಅದಕ್ಕೆ ಪೋಷಕವಾಗಿ "ಮೈಸೂರ್ ಗಜೆಟಿಯರ್" ಅದರ ಪುಟ ೧೪೪೩ ರಲ್ಲಿ ಬಂದಿರುವ ಅಂಶವನ್ನು ಉದಹರಿಸಬಹುದು:—"ವಿಜಯನಗರದ ದೊರೆ ಮೊದಲನೆಯ ಬುಕ್ಕರಾಯನು ವಿಜಯನಗರದ ಮಹಾದಂಡನಾಯಕನಾಗಿದ್ದ ಚಾವುಂಡ ಮಾಧವನನ್ನು ಪಶ್ಚಿಮಕರಾವಳಿ ರಾಜ್ಯದ ಮಂಡಲೇಶ್ವರನನ್ನಾಗಿ ಮಾಡಿ ಅಲ್ಲಿನ ಆಳ್ವಿಕೆಯನ್ನು ಅವನಿಗೆ ವಹಿಸಿಕೊಡುತ್ತಾನೆ. ಆಗ ಮಾಧವನು ತನ್ನ ಆಳ್ವಿಕೆಯು ಸುಖಪ್ರದವಾಗಿಯೂ ಸುಸೂತ್ರವಾಗಿಯೂ ಸಾಗಬೇಕೆಂಬ ಬಯಕೆಯಿಂದ ತಾನು ಗುರುವೆಂದು ಮನ್ನಿಸುತಿದ್ದ ಕಾಳಾಮುಖ ಶೈವಪಂಥದ ಕಾಶೀಕಲಾಕ್ರಿಯಾಶಕ್ತಿ ಆಚಾರ್ಯರ ಆದೇಶದಂತೆ ಒಂದು ವರ್ಷ ಅವಧಿಯ ಶೈವವ್ರತದಲ್ಲಿ ದೀಕ್ಷಿತನಾಗುತ್ತಾನೆ. ಮತ್ತು ವ್ರತ ಸಮಾಪ್ತಿಯ ತರುವಾಯ ಶೈವಾಗಮದಲ್ಲಿ ನುರಿತವರೂ, ಶೈವಪಂಥದವರೂ ಆಗಿದ್ದ ಎಂಭತ್ತು ಮಂದಿ ಕಾಶ್ಮೀರೀ ಬ್ರಾಹ್ಮಣರಿಗೆ ನಾಗರಖಂಡದಲ್ಲಿನ ಮುಚ್ಚಂಡಿ ಎಂಬ ಗ್ರಾಮವನ್ನು ದಾನಮಾಡುತ್ತಾನೆ." ಹಿಂದಿನ ಅಂಶದಲ್ಲಿ ಉಲ್ಲೇಖಿಸಲ್ಪಟ್ಟಿರುವ ಕಾಶ್ಮೀರೀ ಶೈವಪಂಥದ ಬ್ರಾಹ್ಮಣರು ಕಾಳಾಮುಖ ವರ್ಗದವರೇ ಎಂದು ಬೇರೆಯಾಗಿ ಹೇಳಬೇಕಾಗಿಲ್ಲ. ಅಲ್ಲದೇ ಕಾಳಾಮುಖ ವರ್ಗದ ಕಾಶೀಕಲಾಕ್ರಿಯಾಶಕ್ತಿ ಆಚಾರ್ಯರು ಬ್ರಾಹ್ಮಣರಾಗಿರಲಿಲ್ಲವೆಂದಾದರೆ ಬ್ರಾಹ್ಮಣನಾಗಿದ್ದ ಚಾವುಂಡ ಮಾಧವನೂ, ಕ್ಷತ್ರಿಯರಾಗಿದ್ದ ವಿಜಯನಗರದ ದೊರೆಗಳೂ ಅವರನ್ನು ತಮ್ಮ ಗುರುಗಳೆಂದು ಸ್ವೀಕರಿಸುತ್ತಿರಲಿಲ್ಲ.

ಕಾಳಾಮುಖ ಬ್ರಾಹ್ಮಣರಿಗೆ ಸಂಬಂಧಪಟ್ಟ ಒಂದೆರಡು ಶಾಸನಗಳಲ್ಲಿ ಅವರನ್ನು "ಮೀಮಾಂಸಕ ಗೋತ್ರತ್ರಾಸಿ" ಎಂದು ಹೇಳಿರುವುದರಿಂದ, ಕಾಳಾಮುಖ ಬ್ರಾಹ್ಮಣರು ಮೀಮಾಂಸಾ ಶಾಸ್ತ್ರವನ್ನು ವಿರೋಧಿಸುತಿದ್ದರೆಂದು ಸಿದ್ಧವಾಗುತ್ತದೆ. ಅಂದರೆ ಅವರು ಸಾರಸ್ವತ ಬ್ರಾಹ್ಮಣರಂತೆ ಮೀಮಾಂಸಾ ಶಾಸ್ತ್ರವು ಪ್ರತಿಪಾದಿಸುವ ಯಜ್ಞಪ್ರಕ್ರಿಯೆ ಅಥವಾ ಕರ್ಮಕಾಂಡವನ್ನು ಕಲಿಯುತ್ತಿರಲಿಲ್ಲವೆಂದೂ, ಪಿತೃಶ್ರಾದ್ಧಗಳಲ್ಲಿ ಮತ್ತು ಯಜ್ಞಗಳಲ್ಲಿ ಪಶುಗಳ ಆಲಂಭನವನ್ನು ಖಂಡಿಸುತಿದ್ದರೆಂದೂ ಅನ್ನಬೇಕಾಗುತ್ತದೆ. ಅಲ್ಲದೇ ಅವರು ಕರ್ಮಕಾಂಡವನ್ನು ಕಲಿಯುತ್ತಿರಲಿಲ್ಲವಾದುದರಿಂದ ಯಾರೊಬ್ಬರ ಪೌರೋಹಿತ್ಯವನ್ನೂ ಮಾಡುತ್ತಿರಲಿಲ್ಲವೆನ್ನಬೇಕಾಗುತ್ತದೆ. ಆದುದರಿಂದ ಅವರಿಗೆ ಸಂಬಂಧಪಟ್ಟ ಶಾಸನಗಳಲ್ಲಿ ಅವರು ದೇವಾಲಯಗಳಲ್ಲಿ ಅರ್ಚಕರಾಗಿದ್ದ ಉಲ್ಲೇಖಗಳು ಕಂಡುಬರುತ್ತವೆಯೇ ಹೊರತು ಯಾರೊಬ್ಬರ ಪುರೋಹಿತರಾಗಿದ್ದ ಉಲ್ಲೇಖಗಳು ಕಂಡುಬರುವುದಿಲ್ಲ.

ರಾಜಗುರುದೇವ ಎಂಬ ಕಾಳಾಮುಖ ಶೈವಪಂಥದ ಒಬ್ಬ ಗುರುವಿನ ಪ್ರಶಸ್ತಿಯಲ್ಲಿ ಮುಂದಿನ ಅಂಶವಿದೆ:— **"ಸಾಹಸೋತ್ತುಂಗಂ ವೀರಾವತಾರಂ ವೀರಚೂಡಾಮಣಿ ಶೈವಪ್ರಾಕಾರಂ ಬಾಣಶಿಕ್ಷಾಗುರು ಕಲಿಯುಗ ದ್ರೋಣಾಚಾರ್ಯ ಸರ್ವಶಸ್ತ್ರ ಶಾಸ್ತ್ರವಿಶಾರದಂ ನಾರಾಚಪರಶುರಾಮಗಿರಿದುರ್ಗಭಂಜನಾಂಜನೇಯ ಕೊಂಕಣರಕ್ಷಾಳಂ ಕದಂಬಾನ್ವಯ ಸಮುದ್ಧರಣನಾಮಾದಿ ಸಮಸ್ತಪ್ರಶಸ್ತಿ ಸಹಿತಂ ಶ್ರೀಮತ್ ರಾಜಗುರುದೇವರ್."**[1]

ಗಂಗವಾಡಿಯ ಗಂಗವಂಶದವರ ಹಾಗೂ ಕಾಂಚಿಯ ಪಲ್ಲವರ ಮೂಲದ ಕುರಿತು ಹೆಚ್ಚಿನ ಪ್ರಮಾಣಗಳಾವುವೂ ದೊರೆತಿಲ್ಲದುದರಿಂದ ಈ ಪ್ರಬಂಧದಲ್ಲಿ ಅವರ ಕುರಿತು ಮಾಡಿದ ವರ್ಣನೆಗಳು ಬರಿಯ ಅನುಮಾನಗಳೇ ಆಗಿದ್ದರೂ ಅವುಗಳನ್ನು ವಾಸ್ತವಿಕ ಸತ್ಯವೆಂದು ಗ್ರಹಿಸಿದರೆ ತಪ್ಪಾಗದು. ಚಾವುಂಡ ಮಾಧವನ ಕುರಿತು ಕೊಟ್ಟಿರುವ ವಿವರಗಳು ಹೆಚ್ಚಿನ ಮಟ್ಟಿಗೆ ಮೈಸೂರ್ ಗಜೆಟಿಯರ್ ಎಂಬ ಬೃಹದ್ಗ್ರಂಥವನ್ನು ಆಧರಿಸಿಕೊಂಡಿವೆ. ಆದುದರಿಂದ ಆ ಗ್ರಂಥದೊಳಗಿನ ಕೆಲವು ಅವತರಣಿಕೆಗಳನ್ನು ಪ್ರಬಂಧದ ಕೊನೆಯಲ್ಲಿ ಪರಿಶಿಷ್ಟ ರೂಪದಿಂದ ಕೊಡಲಾಗಿದೆ.

---

1. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ 142.

ನಾನು ಈ ಪ್ರಬಂಧದಲ್ಲಿ ವ್ಯಕ್ತಗೊಳಿಸಿದ ಅಭಿಪ್ರಾಯಗಳು ಹಲವು ಗ್ರಂಥಗಳ ಅಧ್ಯಯನದ ಫಲವಾಗಿ ರೂಪುಗೊಂಡವುಗಳಾಗಿವೆ. ಆದರೆ ಆ ಗ್ರಂಥಗಳ ಅಧ್ಯಯನ ಕಾಲದಲ್ಲಿ ಕೆಲವು ಗ್ರಂಥಗಳಿಂದ ಟಿಪ್ಪಣಿಗಳನ್ನು ಬರೆದು ತೆಗೆಯಲು ಮರೆತುದರಿಂದ ಕೆಲವು ಅಭಿಪ್ರಾಯಗಳ ಸಮರ್ಥನೆಗೆ ಪ್ರಮಾಣ ಗಳನ್ನು ಉದಹರಿಸಲು ಸಾಧ್ಯವಾಗಲಿಲ್ಲ. ಮತ್ತು ಇನ್ನು ಉದಹರಿಸುವುದೂ ಸಾಧ್ಯವಲ್ಲ. ಆದುದರಿಂದ ಓದುಗರು ಅಂಥ ಅಭಿಪ್ರಾಯಗಳನ್ನು ಆಧಾರವಿಲ್ಲ ದವುಗಳೆಂದು ತಿಳಿದು ತ್ಯಜಿಸಿದರೂ ಅದರಿಂದಾಗಿ ಪ್ರಬಂಧದ ಮುಖ್ಯ ವಿಷಯಕ್ಕೆ ಯಾವ ಹಾನಿಯೂ ಉಂಟಾಗಲಾರದು. ಪ್ರಬಂಧದಲ್ಲಿನ ಅಧಿಕಾಂಶ ವಿವರ ಗಳಿಗೆ ಸಂಬಂಧಪಟ್ಟ ಗ್ರಂಥಗಳಿಂದ ಪ್ರಮಾಣಗಳನ್ನು ಉದಹರಿಸಿದ್ದೇನೆ. ಮತ್ತು ಆ ಗ್ರಂಥಗಳ ಪಟ್ಟಿಯನ್ನು ಇದರಲ್ಲಿ ಕೊಟ್ಟಿದ್ದೇನೆ. ಈ ಪ್ರಬಂಧವನ್ನು ಬರೆಯುವುದರಲ್ಲಿ ಆ ಗ್ರಂಥಗಳಿಂದ ನನಗೆ ತುಂಬಾ ಸಹಾಯ ದೊರೆತಿದೆ. ಆದುದರಿಂದ ನಾನು ಆ ಎಲ್ಲ ಗ್ರಂಥಗಳ ಲೇಖಕರಿಗೂ ತುಂಬಾ ಋಣಿ ಯಾಗಿದ್ದೇನೆ. ಹಾಗೆಯೇ ಈ ಪ್ರಬಂಧದಲ್ಲಿನ ಚಾರಿತ್ರಿಕ ವಿಭಾಗವನ್ನು ಓದಿ ನೋಡಿ ಅದರಲ್ಲಿನ ದೋಷಗಳನ್ನು ತೋರಿಸಿಕೊಟ್ಟು ತಿದ್ದುಪಡಿಗಳನ್ನು ಸೂಚಿಸಿ ಉಪಕಾರಮಾಡಿದ ಕೆನರಾ ಹಾಇಸ್ಕೂಲಿನ ನಿವೃತ್ತ ಮುಖ್ಯೋಪಾ ಧ್ಯಾಯ ಶ್ರೀಮಾನ್ ಗಂಗೊಳ್ಳಿ ರಾಘವೇಂದ್ರ ಶೆಣಾಇ (ಜಿ. ಆರ್. ಶೆಣಾಇ) ಎಮ್. ಎ. ಎಲ್. ಟಿ. ಅವರಿಗೆ ನನ್ನ ಹೃತ್ಪೂರ್ವಕವಾದ ಧನ್ಯವಾದಗಳು ಸಲ್ಲಬೇಕು. ಇನ್ನೂ ಈ ಪ್ರಬಂಧದಲ್ಲಿ ದೋಷಗಳು ಉಳಿದಿದ್ದರೆ ಅವುಗಳಿಗೆ ನಾನೇ ಹೊಣೆಯಾಗಿದ್ದೇನೆ. ಅಲ್ಲದೇ ದಕ್ಷಿಣ ಜಿಲ್ಲೆಯ ಪ್ರವಾಸದಲ್ಲಿ ತಾನು ಕಣ್ಣಾರೆ ಕಂಡ ಹಲವು ಸ್ಥಳಗಳ ಮಾಹಿತಿಯನ್ನು ನನಗೆ ಒದಗಿಸಿಕೊಟ್ಟು ಉಪಕಾರಮಾಡಿದ, ಹಾಗೂ ಭಾರತೀಯ ನಾಣ್ಯಗಳ ಸಂಶೋಧನೆಯಲ್ಲಿ ತೊಡಗಿರುವ ಶ್ರೀಮಾನ್ ಮಂಜೇಶ್ವರದ ಮುಕುಂದ ಪ್ರಭುಗಳಿಗೂ ನನ್ನ ಧನ್ಯವಾದಗಳು ಸಲ್ಲಬೇಕು, ಇನ್ನು ನನ್ನ ಈ ಪ್ರಬಂಧವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಶಾರದಾಪ್ರೆಸ್ಸಿನ ಮಾಲೀಕರಾಗಿರುವ ಕಾಮತ್ ಸಹೋದರ ರಿಗೂ, ಪ್ರೂಫ್ ಓದಿನೋಡುವುದರಲ್ಲಿ ಮಾತ್ರವಲ್ಲದೇ ಇತರ ಹಲವು ವಿಷಯ ಗಳಲ್ಲಿ ನನ್ನೊಂದಿಗೆ ಸಹಕರಿಸಿ ಉಪಕಾರಮಾಡಿದ ಶಾರದಾ ಪ್ರೆಸ್ಸಿನ ಶ್ರೀಮಾನ್ ಕೆ. ವೀ. ಜೋಶಿಯವರಿಗೂ, ನನಗೆ ಇತರ ಸಹಾಯಗಳನ್ನು ಮಾಡಿದ ಶ್ರೀ ಕೆ. ವಿ. ಬಾಳಿಗಾ ಅವರಿಗೂ ನನ್ನ ವಂದನೆಗಳು ಸಲ್ಲಬೇಕು. ಹಾಗೆಯೇ ನನ್ನ ಪ್ರಬಂಧದ ಮುಖಪುಟ(?)ದಲ್ಲಿ ಮುದ್ರಿಸಿದ ಸರಸ್ವತೀದೇವಿಯ ಚಿತ್ರವನ್ನೂ,

ನದಿಗಳಿರುವ ಭೂಪಟವನ್ನೂ ಬಹಳ ಚೆಲೋದಾಗಿ ಚಿತ್ರಿಸಿಕೊಟ್ಟಿರುವ ಶ್ರೀಮಾನ್ ವೀ. ಪೀ. ಸುಜೀರ್ ಅವರಿಗೂ, ಈ ಪ್ರಬಂಧದ ಪುಸ್ತಕದಲ್ಲಿ ತಮ್ಮ ಜಾಹೀರಾತುಗಳನ್ನು ಕೊಟ್ಟು ಅದನ್ನು ಬೆಳಕಿಗೆ ಬರುವಂತೆ ಮಾಡಿದ ಸಕಲ ಮಹನೀಯರಿಗೂ ನನ್ನ ಧನ್ಯವಾದಗಳು ಸಲ್ಲಬೇಕು.

ಕೊನೆಯದಾಗಿ ದಕ್ಷಿಣ ಕನ್ನಡ ಜಿಲ್ಲೆಯ ಡೆಪ್ಯೂಟಿ ಕಮಿಶನರ್ ಶ್ರೀಮಾನ್ ಎಚ್. ಎಲ್. ನಾಗೇಗೌಡ. ಆಯ್. ಎ. ಎಸ್., ಅವರನ್ನು ನಾನು ಅಭಿನಂದಿಸಲೇಬೇಕು. ಏಕೆಂದರೆ ಅವರ ಒತ್ತಾಯ ಮತ್ತು ಪ್ರೋತ್ಸಾಹವಲ್ಲ ದಿದ್ದರೆ ನನ್ನ ಈ ಕೃತಿಯು ಬೆಳಕನ್ನು ಕಾಣುತ್ತಿರಲಿಲ್ಲ. ಅಂದರೆ ನಾನು ಎರಡು ವರ್ಷಗಳ ಹಿಂದೆ "ಕೊಂಕಣಿ ಮತ್ತು ಮರಾಠಿ ಇವುಗಳ ತುಲನಾತ್ಮಕ ವಿಮರ್ಶೆ" ಎಂಬ ಅಂಶವನ್ನು ಮಾತ್ರ ಬರೆದು ಮುದ್ರಣಕ್ಕೆ ಕೊಡುವ ಧೈರ್ಯವಿಲ್ಲದೇ ಒಳಗೆ ಇಟ್ಟಿದ್ದೆ. ಶ್ರೀಯುತ ನಾಗೇ ಗೌಡರಿಗೆ ಇಂಥ ವಿಷಯಗಳಲ್ಲಿ ತುಂಬಾ ಆಸಕ್ತಿಯಿದೆಯೆಂದು ನನ್ನ ಕೆಲವು ಮಿತ್ರರು ಹೇಳಿದುದರಿಂದ ನಾನು ಒಳಗಿಟ್ಟಿದ್ದ ಭಾಷಾ ಪ್ರಬಂಧವನ್ನು ಅವರಿಗೆ ಓದಿನೋಡುವ ಸಲುವಾಗಿ ಕೊಟ್ಟೆ. ಅವರು ಅದನ್ನು ಓದಿನೋಡಿದ ತರುವಾಯ ಅದನ್ನು ಬಹಳವಾಗಿ ಪ್ರಶಂಸಿಸಿದರಲ್ಲದೇ ನಾನದನ್ನು ಪ್ರಕಟಿಸಲೇಬೇಕೆಂದು ಪ್ರೋತ್ಸಾಹಿಸಿದರು. ಅಷ್ಟೇ ಅಲ್ಲ ನಾನದನ್ನು ಪ್ರಕಟಿಸಲು ಧೈರ್ಯಪಡುವಂತಿಲ್ಲವಾದರೆ ತಾನದನ್ನು ಮೈಸೂರು ವಿಶ್ವವಿದ್ಯಾ ಲಯದ ಪ್ರಸಾರಾಂಗದ ಮೂಲಕ ಪ್ರಕಟಿಸುವ ವ್ಯವಸ್ಥೆಯನ್ನು ಮಾಡುವುದಾಗಿ ಆಶ್ವಾಸನವಿತ್ತರು. ಆ ತರುವಾಯ ನಮ್ಮಲ್ಲಿನ ಕೆಲವು ವ್ಯಾಪಾರಿಗಳು ನನ್ನ ಪುಸ್ತಕದಲ್ಲಿ ತಮ್ಮ ಜಾಹೀರಾತುಗಳನ್ನು ಕೊಡುವ ಉದಾರತೆಯನ್ನು ತೋರಿದು ದರಿಂದ ಪ್ರೋತ್ಸಾಹಿತನಾಗಿ ಭಾಷಾ ವಿಮರ್ಶೆಯೊಂದಿಗೆ ಸಾರಸ್ವತ ಬ್ರಾಹ್ಮಣರ ಚರಿತ್ರೆಯನ್ನೂ ಸೇರಿಸಿ ಪ್ರಕಟಿಸುವುದೆಂದು ನಿರ್ಧರಿಸಿದೆ. ಹೀಗಾಗಿ ಈ ಪ್ರಬಂಧವು ಬೆಳಕನ್ನು ಕಂಡಿತೆನ್ನಬಹುದು.

ನಾನು ಈ ಪ್ರಬಂಧವನ್ನು ನಮ್ಮ ಸಮಾಜದಲ್ಲಿನ ಯಾವನೊಬ್ಬ ಹಿರಿಯ ವ್ಯಕ್ತಿಗೆ ಸಮರ್ಪಿಸಬೇಕೆಂದು ಸಂಕಲ್ಪಿಸಿದ್ದೆ. ಅದಕ್ಕನುಸಾರವಾಗಿ ನಾನದನ್ನು ವಯೋವೃದ್ಧರೂ, ಉದ್ಯಮಶೀಲರೂ ಆಗಿರುವ ಶ್ರೀಮಾನ್ ಸುಜೀರ ಚೆರಪ್ಪ ವೈಕುಂಠನಾಯಕ (=ಸೀ. ವೀ. ನಾಯಕ) ಅವರಿಗೆ ಸಮರ್ಪಿಸಿದ್ದೇನೆ. ಶ್ರೀ ನಾಯಕರು ನನ್ನ ಅಜ್ಜ ದಿವಂಗತ ಬಸ್ತಿ ವಿಟ್ಠಳ ಶೆಣೈ ಅವರ ಧರ್ಮಪತ್ನಿ ದಿವಂಗತೆ ನೇತ್ರಾವತಿ ಅಮ್ಮನವರ ತಮ್ಮನಾಗಿದ್ದಾರೆ. ಶ್ರೀ ನಾಯಕರು ವಯಸ್ಸಿನಲ್ಲಿ ಮುದುಕನಾಗಿದ್ದರೂ. ಸ್ವಸಮಾಜದ ಕಾರ್ಯಗಳಲ್ಲಿ ತರುಣ

ರಂತೆಯೇ ಉತ್ಸಾಹಿಗಳಾಗಿದ್ದಾರೆ. ಹಾಗೂ ಸತ್ಕಾರ್ಯಗಳಿಗೆ ಬಿಡುಗೈಯಿಂದ ಧನಸಹಾಯಮಾಡುವವರಾಗಿದ್ದಾರೆ. ಆದುದರಿಂದ ನನ್ನ ಪುಸ್ತಕಪ್ರಕಾಶನಕ್ಕಾಗಿಯೂ ಅವರಿಂದ ಧನಸಹಾಯ ದೊರೆತಿದೆಯೆಂದು ಬೇರೆಯಾಗಿ ಹೇಳಬೇಕಾಗಿಲ್ಲ.

ಎಲ್ಲಕ್ಕಿಂತ ವಿಶೇಷವಾದುದೆಂದರೆ—ಆಕಸ್ಮಿಕವಾಗಿ ಮಂಗಳೂರಿನ ಶಾರದಾ ಪ್ರೆಸ್ಸಿಗೆ ಬಂದಿದ್ದ ಮಂಗಳೂರು ಗಣೇಶಬೀಡಿ ಉದ್ಯಮದಲ್ಲಿ ಪಾಲುಗಾರರಾಗಿರುವ ಮೈಸೂರಿನ ಶ್ರೀಮಾನ್ ಬಿ. ಮಾಧವ ಶೆಣಾಇ ಅವರು, ಶಾರದಾ ಪ್ರೆಸ್ಸಿನಲ್ಲಿ ಶ್ರೀಮಾನ್ ಕೆ. ವೀ. ಜೋಶೀ ಅವರ ಮುಖಾಂತರ ನನ್ನ ಪ್ರಬಂಧದ ವಿವರಗಳನ್ನು ಕೇಳಿದವರು, ಅತ್ಯಂತ ಸಂತೋಷಪಟ್ಟು ನನ್ನ ಈ ಪುಸ್ತಕ ಪ್ರಕಾಶನದ ಸಾಹಸದಲ್ಲಿ ನನಗೆ ಕಿಂಚಿತ್ತಾದರೂ ಆರ್ಥಿಕ ಹಾನಿಯು ತಟ್ಟದಂತೆ ನಾನು ಯಾಚಿಸದೆನೇ—ನನ್ನನ್ನು ಕರೆಯಿಸಿ ಒಂದು ಸಾವಿರ ರೂಪಾಯಿಗಳನ್ನು ಪುರಸ್ಕಾರವಾಗಿ ಕೊಟ್ಟುದಾಗಿದೆ. ಅಂಥ ಪುರಸ್ಕಾರದ ಮೂಲಕ ಆವರು ತನ್ನ ಹೃದಯದಲ್ಲಡಗಿದ್ದ ಸ್ವಸಮಾಜದ ಮೇಲಿನ ಪ್ರೇಮವನ್ನು ವ್ಯಕ್ತಗೊಳಿಸಿದ್ದಾರೆ. ಮಾತ್ರವಲ್ಲದೇ ಸಾರಸ್ವತ ಬ್ರಾಹ್ಮಣರ ಸಮಾಜದಲ್ಲಿ ಸತ್ಕಾರ್ಯಗಳಿಗಾಗಿ ಯಾಚಿಸದೆನೇ ಧನಸಹಾಯಮಾಡುವ ದಾನಿಗಳೂ ಇದ್ದಾರೆಂಬುದನ್ನು ಸಿದ್ಧಪಡಿಸಿದ್ದಾರೆ. ಅವರ ಅಂಥಹ ಉದಾರತೆಯನ್ನು ಎಷ್ಟು ಹೊಗಳಿದರೂ ಕಡಿಮೆಯೆಂದು ತಿಳಿದು ಅವರ ಉಪಕಾರಸ್ಮರಣೆಗಾಗಿ ಈ ಪುಸ್ತಕದಲ್ಲಿ ಅವರ ಭಾವಚಿತ್ರವನ್ನು ಪ್ರಕಟಿಸಿದ್ದೇನೆ.

ಅಶೋಕನಗರ ಮಂಗಳೂರು-೬.
ಶಕ ೧೮೮೦ ಕೀಲಕ.

**ಬಸ್ತಿ ಪುಂಡಲೀಕ ಶೆಣಾಇ**

# ಅವತರಣಿಕೆ

Dr. A. K. Priolkar ಎಂಬವರಿಂದ ಪ್ರಕಟಿಸಲ್ಪಟ್ಟ "Quater–centinary of Printing Press in India" ಎಂಬ ಪುಸ್ತಕದಲ್ಲಿ ಪ್ರಕಟವಾದ J. H. dacunha Riveara ಎಂಬ ಪೊರ್ತುಗೀಸ್ ಅಧಿಕಾರಿಯೊಬ್ಬರು ಬರೆದ ಕೊಂಕಣಿಯ ಐತಿಹಾಸಿಕ ಪ್ರಬಂಧದ ಇಂಗ್ಲೀಷು ಭಾಷಾಂತರದಿಂದ ಆರಿಸಿ ತೆಗೆದ ಅಂಶಗಳು.

ಪುಟ ೧. In spite of the great impetus which the language received in the first century of Portugese dominion, there rose against the language an implacable war with attempts to entirely extinguish and proscribe it. Although it was impossible to achieve the end fully as it is beyond human power to suppress a language, it has however corrupted and adulterated and its literary records practically destroyed to the serious loss to the intelectual and moral culture of the people.

ಪುಟ ೯. Truth demands that we acknowledge that the most ancient book published by our missionaries the Purana of Father Thomas Stephens has been accepted by censors as written in the "Brahmana – Marathi" language, a description which does not contradict our view; because it may be explicable by the clear knowledge they had of the application of Marathi and because neither at that time nor later had experts accepted a special and fixed name for this language of Konkan.

Two observations, however, are, entirely true. The first is of Mr. Filipe Nery Pires, when he says that the Brahmana (=Konkani) dialect or language as found in old books differs very mnch from the one now actually is in vogue in Goa, which being corrupted to the highest point of degradation, cannot be classified among the orient languages.

The second observation is of Rev. Mitchell who says:- It is evident from all the books that we have seen of Marathi (=otherwise Konkani) in Romanised characters, the Portuguese eclasiastics never reduced to a system the

oithography of Marathi (otherwise Konkani) the same work contains a word spelt in different ways some times in four or five different forms and each of these words is so confusedly spelt in various books that it can be understood with difficulty. What is patent in these works is the absence of accentuation and indeed this is the source of much confusion.

ಪುಟ ೧೪. We shall now endeavour to investigate the causes which under the Portuguese regime, were either favourable or contrary to the culture of Konkani language. In the first ardour of conquest temples were destroyed, and books written in vernacular tongue containing or suspected of containing idolatrous precept and doctrines were burnt. There was even the desire to exterminate all that part of the population which could not be quickly converted, this was not the desire not only during that period, but there was at least one person who after a lapse of two centuries, advised the government with almost magisterial gravity to make use of such a policy.

ಪುಟ ೧೫. It is true that the Bishop Dr. Fr. Joas Albuquerque towards the end of the year 1548, with intention of ending idolatry was busy confiscating literature written by the Hindus, but there after the councils and Goan constitution recommended and ordered the use and study of the language of the land.

# ೧

1510ನೆಯ ಇಸವಿಯಲ್ಲಿ ಪೋರ್ತುಗೀಸರು ಗೋವವನ್ನು ಆಕ್ರಮಿಸಿ ಹಿಡಿದುಕೊಂಡ ತರುವಾಯ ಗೋವದ ಜನರನ್ನು ಬಲಾತ್ಕಾರದಿಂದ ಮತಾಂತರ ಗೊಳಿಸಲು ನಡಿಸಿದ ಹಲವು ಅತ್ಯಾಚಾರ ಮತ್ತು ದುಷ್ಕೃತ್ಯಗಳಲ್ಲಿ ಕೊಂಕಣಿ ಭಾಷೆಯಿಂದ ಬರೆದಿದ್ದ ಸಕಲ ಗ್ರಂಥಗಳನ್ನು ಮನೆ-ಮನೆಯಿಂದ ದೋಚಿಕೊಂಡು–ಸುಟ್ಟು ಭಸ್ಮಮಾಡಿದುದು ಹಾಗೂ ಆ ಭಾಷೆಯ ಒಂದೇ ಒಂದು ಗ್ರಂಥವಾದರೂ ಗೋವದ ಜನರ ಬಳಿಯಲ್ಲಿ ಉಳಿಯದಂತೆ ಮಾಡಿದುದು ಅತ್ಯಂತ ದೊಡ್ಡ ದುಷ್ಕೃತ್ಯವೂ ಗೋವದ ಸಂಸ್ಕೃತಿ ಮತ್ತು ಸಾಹಿತ್ಯಗಳ ಮೇಲೆ ಮಾಡಿದ ಮರಣಾಂತಿಕ ಆಘಾತವೂ ಆಗಿತ್ತು. ಹೀಗಾಗಿ ಇಂದು ನಮ್ಮ ಬಳಿಯಲ್ಲಿ ಪ್ರಾಚೀನ ಕೊಂಕಣಿಯ ಒಂದೇ ಒಂದು ಗ್ರಂಥವಾದರೂ ಇಲ್ಲವಲ್ಲಾ ಎಂದು ಕೊರಗಬೇಕಾಗಿದೆ.

ಗ್ರಂಥಗಳನ್ನು ದೋಚಿಕೊಂಡು–ಅವುಗಳನ್ನು ನಾಶಪಡಿಸಿದ ತರುವಾಯ 1684ನೆಯ[1] ಇಸವಿಯಲ್ಲಿ ಗೋವದ ಜನರೆಲ್ಲರೂ ಮೂರು ವರ್ಷಗಳೊಳಗೆ ಪೋರ್ತುಗೀಸ್ ಭಾಷೆಯನ್ನು ಕಲಿತು, ತಮ್ಮ ಸಕಲ ವ್ಯವಹಾರಗಳಿಗೂ ಪೋರ್ತುಗೀಸ್ ಭಾಷೆಯನ್ನೇ ಉಪಯೋಗಿಸಬೇಕೆಂತಲೂ ತಮ್ಮ ತಾಯಿನುಡಿಯಾದ ಕೊಂಕಣಿಯ ಬಳಕೆಯನ್ನು ಸಂಪೂರ್ಣವಾಗಿ ನಿಲ್ಲಿಸಿಬಿಡಬೇಕೆಂತಲೂ ಶಾಸನವನ್ನು ಮಾಡಿದರು. ಆ ಶಾಸನವು ಕಾರ್ಯರೂಪಕ್ಕೆ ಬರದಿದ್ದರೂ, ಪೋರ್ತುಗೀಸರು ಸತತವಾಗಿ ಭಾಷೆಯಲ್ಲಿನ ಶಬ್ದಗಳ ರೂಪವನ್ನು ಕೆಡಿಸುತ್ತ ಹೋದುದರಿಂದಲೂ, ತಮ್ಮ ಭಾಷೆಯ ಶಬ್ದಗಳನ್ನು ಆ ಭಾಷೆಯಲ್ಲಿ ಮಿತಿಮೀರಿ ತುರುಕಿದುದರಿಂದಲೂ ಇಂದು ಗೋವದಲ್ಲಿ ಬಳಕೆಯಲ್ಲಿರುವ ಕೊಂಕಣಿಯು ತನ್ನ ಮೂಲರೂಪವನ್ನು ಕಳೆದುಕೊಂಡು ಅತ್ಯಂತ ವಿಕೃತರೂಪವನ್ನು ತಳೆದಿದೆ.

ಆದುದರಿಂದ ಈಗ ಯಾರೇ ಆಗಲಿ ಕೊಂಕಣಿಯ ಕುರಿತು ಮನಸ್ಸಿಗೆ ತೋಚಿದಂತೆ ಅನ್ನಬಹುದಾಗಿದೆ. ಲಿಪಿಯ ವಿಕಾಸ ಮತ್ತು ಇತಿಹಾಸಗಳ ಅರಿವಿಲ್ಲದವನೊಬ್ಬನು ಕೊಂಕಣಿಯನ್ನು ಕನ್ನಡದ್ದೆಂದು ತಿಳಿಯಲಾದ ಲಿಪಿಯಿಂದಲಾಗಲಿ, ರೋಮನ್ ಲಿಪಿಯಿಂದಲಾಗಲಿ ಬರೆಯುತ್ತಿರುವುದನ್ನು ಕಂಡು ಕೊಂಕಣಿಗೆ ಸ್ವಂತದ ಲಿಪಿಯಿಲ್ಲವೆನ್ನುತ್ತಾನಾದರೆ ಭಾಷಾಶಾಸ್ತ್ರದ ತಿಳಿವಿಲ್ಲದ

1. Discovery of Goa by Alfred Braganza M. A.

ಬೇರೊಬ್ಬನು ಕೊಂಕಣಿಗೆ ವ್ಯಾಕರಣವಿಲ್ಲವೆನ್ನುತ್ತಾನೆ. ಈ ಬಗೆಯ ಅಜ್ಞಾನವು ಅನ್ಯಭಾಷೆಯನ್ನಾಡುವ ಜನರಲ್ಲಿರುವುದಾದರೆ ಅದನ್ನು ತಪ್ಪೆನ್ನಲಾಗುವುದಿಲ್ಲ. ಏಕೆಂದರೆ ಕೊಂಕಣಿಯಿಂದ ಅವರಿಗೇನೂ ಆಗಬೇಕಿಲ್ಲ. ಆದರೆ ಅಂಥ ಅಜ್ಞಾನವು ಅನ್ಯರಿಗಿಂತಲೂ ಹೆಚ್ಚು ಸ್ವಯಂ ಕೊಂಕಣಿಗರಲ್ಲಿಯೇ ಎಷ್ಟರಮಟ್ಟಿಗೆ ತುಂಬಿದೆ ಯೆಂದರೆ ಕೊಂಕಣಿಯಲ್ಲಿ ಈ ತನಕ ಮೂವತ್ತು ಶಬ್ದಕೋಶಗಳೂ. ಇಪ್ಪತ್ತೇಳು ವ್ಯಾಕರಣಗ್ರಂಥಗಳೂ[1] ಪ್ರಕಟವಾಗಿವೆಯೆಂಬುದನ್ನಾಗಲಿ, ಭಾರತವರ್ಷದಲ್ಲಿ ಮುದ್ರಿತವಾದ ವ್ಯಾಕರಣಗಳಲ್ಲಿ ಕೊಂಕಣಿ ವ್ಯಾಕರಣವೇ ಮೊತ್ತಮೊದಲಿನದೆಂದಾ ಗಲಿ[2] ಅವರು ಅರಿಯರು. ಅಷ್ಟೇ ಅಲ್ಲ ವರ್ತಮಾನಪತ್ರಿಕೆಗಳಲ್ಲಿ ದೊಡ್ಡ ದೊಡ್ಡ ಪ್ರಬಂಧ ಬರೆಯ ಬಲ್ಲಂಥ ಕೊಂಕಣಿ ವಿದ್ವಾಂಸರು ಕೂಡ–ಭಾಂಗರ. ಬಾಇಂ. ವ್ಹೋಡ, ವಾಡ. ಮೆರವಣಿಕಾ ಮುಂತಾದ ಅಚ್ಚ ಕೊಂಕಣಿಶಬ್ದಗಳನ್ನು ಕನ್ನಡ ದವುಗಳೆನ್ನುವಷ್ಟು ಅಜ್ಞಾನದಿಂದ ಕೂಡಿದ್ದಾರೆ. ಕೊಂಕಣಿಯಲ್ಲಿ ಅನೇಕ ಕನ್ನಡ ಶಬ್ದಗಳಿವೆಯೆಂಬುದರಲ್ಲಿ ಸಂದೇಹವೇ ಇಲ್ಲ. ಆದರೆ ಕೊಂಕಣಿಯಲ್ಲಿ ಕನ್ನಡ ಶಬ್ದ ಗಳಿರುವಂತೆಯೇ ಕನ್ನಡದಲ್ಲಿಯೂ ಅನೇಕಾನೇಕ ಕೊಂಕಣಿ ಶಬ್ದಗಳಿವೆಯೆಂಬು ದನ್ನು ಮರೆಯತಕ್ಕದ್ದಲ್ಲ.

ಸಾಧಾರಣ ಎಂಭತ್ತು ವರ್ಷಗಳ ಈಚೆ ಕಡೆಯಿಂದ ಕೆಲವು ಮರಾಠಿ ಪಂಡಿತರು ಗೋವದಲ್ಲಿ ಬಳಕೆಯಲ್ಲಿರುವ ಈಗಿನ ಕೊಂಕಣಿಯರೂಪದ ಮೇಲಿಂದ ಕೊಂಕಣಿಯು ಮರಾಠಿಯಿಂದಲೇ ಹುಟ್ಟಿದುದೆಂತಲೂ, ಪೊರ್ತುಗೀಸರ ಪ್ರಭಾವ ದಿಂದ ಕುಲಗೆಟ್ಟು ನಾಶದ ಹಾದಿಯನ್ನು ಹಿಡಿದಿರುವ ಆ ನುಡಿಯನ್ನು ಕಾಪಾಡು ವುದು ಮತ್ತು ಅದನ್ನು ಶುದ್ಧೀಕರಿಸಿ ಮರಾಠಿಯ ಸಾಲಿಗೆ ತರುವುದು ತಮ್ಮ ಪವಿತ್ರ ಕರ್ತವ್ಯವೆಂದೆನ್ನುತ್ತಲೂ ಗೋವದಲ್ಲಿನ ಕೆಲವು ಮರಾಠೀ ಭಕ್ತರ ನೆರವಿ ನಿಂದ ಗೋವದಲ್ಲಿ ಮರಾಠಿ ಕಲಿಸುವ ಪಾಠಶಾಲೆಗಳನ್ನು ತೆರೆಯುವ. ಮರಾಠೀ ವರ್ತಮಾನ ಪತ್ರಿಕೆಗಳನ್ನು ಹೊರಡಿಸುವ, ಮರಾಠೀ ಪುಸ್ತಕಗಳನ್ನು ಪ್ರಕಟಿಸಿ ಮರಾಠೀ ಸಂಸ್ಕೃತಿಯನ್ನು ಜನರಲ್ಲಿ ಪ್ರಚಾರಕ್ಕೆ ತರುವ, ಹಾಗೂ ಗೋವದಲ್ಲಿ ಆಗಾಗ್ಗೆ ಮರಾಠಿ ಸಾಹಿತ್ಯಪರಿಷತ್ತು. ಭಾಷಣ-ಗೋಷ್ಠಿ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳನ್ನು ನಡಿಸುವಂಥ ಕಾರ್ಯಕ್ರಮುಗಳನ್ನು ಸಾಗಿಸುತ್ತ ಬಂದಿದ್ದರು.

ಈ ನಡುವೆ ಗೋವದಲ್ಲಿನ ಕೆಲವು ಮಾತೃ-ಭಾಷಾ-ಭಕ್ತರು ಒಟ್ಟುಗೂಡಿ ಮರಾಠಿಗರು ಗೋವದಲ್ಲಿ ಈ ಬಗೆಯ ಉಪದ್ವ್ಯಾಪಗಳನ್ನು ನಡಿಸಿ ಶುದ್ಧೀ

---

1. Ibid. 2. ಕೊಂಕಣಿ ಭಾಷೇಚೆಂ ಚೈತ.

ಕರಣದ ಹೆಸರಿನಲ್ಲಿ ಕೊಂಕಣಿಯನ್ನು ನಾಮಶೇಷವನ್ನಾಗಿ ಮಾಡಲು ಹವಣಿಸುವುದು ತರವಲ್ಲವೆಂತಲೂ ಕೊಂಕಣಿಯು ಮರಾಠಿಯಿಂದ ಹುಟ್ಟಿದುದಾಗಲೀ, ಮರಾಠಿಯು ಗ್ರಾಮ್ಯರೂಪವಾಗಲೀ ಅಲ್ಲವೆಂತಲೂ, ಕೊಂಕಣಿಯು ಮರಾಠಿಗಿಂತ ಪ್ರಾಚೀನವಾದುದೆಂತಲೂ ಅನ್ನುತ್ತ ಮರಾಠಿಗರು ಗೋವದಲ್ಲಿ ಸಾಗಿಸುತ್ತಿದ್ದ ಕೊಂಕಣಿಯ ಶುದ್ಧೀಕರಣವನ್ನು ಅಥವಾ ಮರಾಠೀಕರಣವನ್ನು ತೀವ್ರವಾಗಿ ವಿರೋಧಿಸತೊಡಗಿದರು. ಆ ವಿರೋಧದಿಂದ ವಾದ-ಪ್ರತಿವಾದಗಳು ಮತ್ತು ದ್ವೇಷ-ಅಸೂಯೆಗಳು ಬೆಳೆದುವೇ ಹೊರತು ಮೂಲಭಾಷೆಯು ಯಾವುದೆಂಬ ನಿರ್ಣಯವಾಗಲಿಲ್ಲ. ಮತ್ತು ಮರಾಠಿಗರ ಕಾರ್ಯಕ್ರಮವೂ ನಿಲ್ಲಲಿಲ್ಲ. ಎರಡೂ ಪಕ್ಷದ ಜನರು ಪಾಶ್ಚಿಮಾತ್ಯರು ಬರೆದ ಗ್ರಂಥಗಳಿಂದ—ವಿವಾದಾಸ್ಪದ ಅಭಿಪ್ರಾಯಗಳಲ್ಲಿ ತಮಗೆ ಅನುಕೂಲವೆಂದು ತೋರಿದ ಅಂಶಗಳನ್ನು ಉದಹರಿಸಿ ತಮ್ಮ ತಮ್ಮ ಪಕ್ಷವನ್ನು ಸಮರ್ಥಿಸುತ್ತಿದ್ದರೇ ಹೊರತು. ಎರಡೂ ಭಾಷೆಗಳಲ್ಲಿನ ಶಬ್ದಭಾಂಡಾರವನ್ನಾಗಲೀ. ಶಬ್ದಗಳ ಅರ್ಥವನ್ನಾಗಲೀ. ಕ್ರಿಯೆಗಳ ಆಖ್ಯಾತ ರೂಪಗಳನ್ನಾಗಲೀ ತುಲನೆಮಾಡಿ ಶಾಸ್ತ್ರೀಯ ರೀತಿಯಿಂದ ಒಂದು ನಿರ್ಣಯಕ್ಕೆ ಬರಲು ಪ್ರಯತ್ನಿಸುತ್ತಿರಲಿಲ್ಲ. ಮರಾಠಿ ಪಂಡಿತರಲ್ಲಿ ಕೆಲವರು ಕೊಂಕಣಿಯ ಶಬ್ದಗಳು ಪ್ರಾಚೀನ ಮರಾಠಿಗ್ರಂಥಗಳಲ್ಲಿದ್ದವುಗಳೆಂದು ಹೇಳಿ ಜ್ಞಾನೇಶ್ವರೀ ಮೊದಲಾದ ಗ್ರಂಥಗಳಿಂದ ಉದ್ಧರಣಗಳನ್ನು ಕೊಟ್ಟು ಕೊಂಕಣಿಗರನ್ನು ವಿರೋಧಿಸುತ್ತಿದ್ದರು. ಆದರೆ ಜ್ಞಾನೇಶ್ವರಿಯು ಕೊಂಕಣಿಯಲ್ಲಿಯೇ ರಚಿಸಲ್ಪಟ್ಟಿದ್ದಿತೆಂದೂ, ಸಂತಏಕನಾಥರು ಅದನ್ನು ಅರೆಮರಾಠಿಯದನ್ನಾಗಿ ಮಾಡಿದರೆಂದೂ. ಪ್ರಮಾಣಗಳ ಸಹಿತವಾಗಿ ತೋರಿಸಿಕೊಟ್ಟು ಮರಾಠಿಗರ ಬಾಯಿ ಮುಚ್ಚಿಸುವಷ್ಟು ಭಾಷಾಜ್ಞಾನವು ಪರಕೀಯ ಭಾಷೆಯಿಂದಲೇ ಸಕಲ ವಿಷಯಗಳನ್ನು ಕಲಿತಿದ್ದ ಕೊಂಕಣಿ ವಿದ್ವಾಂಸರಲ್ಲಿ ಇರಲಿಲ್ಲ.

ಆ ಕಾಲದಲ್ಲಿ ಆ ಭಾಷಾ ವಿವಾದಕ್ಕೆ ಅಷ್ಟೊಂದು ಮಹತ್ವವೂ ಇರಲಿಲ್ಲ. ಆದುದರಿಂದ ಹೆಚ್ಚು ಜನರ ಲಕ್ಷ್ಯವೂ ಆ ಕಡೆಗೆ ಹೊರಳಿರಲಿಲ್ಲ. ಆದರೆ ಗೋವದಲ್ಲಿ ಸ್ವಾತಂತ್ರ್ಯ ಚಳವಳಿಯು ಆರಂಭವಾಗಿ ಗೋವವು ಸ್ವತಂತ್ರವಾಗುವ ಲಕ್ಷಣಗಳು ಕಂಡುಬರತೊಡಗಿದ ತರುವಾಯದಿಂದ ಆ ಭಾಷಾ ಸಮಸ್ಯೆಗೆ ಎಂದೂ ಇಲ್ಲದಿದ್ದ ಮಹತ್ವವು ಪ್ರಾಪ್ತವಾಯಿತು. ಮರಾಠಿಗರ ಪ್ರಚಾರ ಕಾರ್ಯವು ತೀವ್ರವಾಯಿತು ಹಾಗೂ ಮೊದಲು ಮೆದುವಾಗಿದ್ದ ಮರಾಠಿಗರ ಸ್ವರವು ತುಸು-ತುಸುವೇ ಗಡುಸಾಗತೊಡಗಿತು. ಕೊನೆಗೆ ಭಾರತ ರತ್ನ ಜವಾಹರಲಾಲರ ದೃಢವಾದ ರಾಜಕೀಯ ನಿಲುವಿನಿಂದಾಗಿ ಕೆಲವೇ ದಿನಗಳ ಯುದ್ಧದಿಂದ ಗೋವವು

ಸ್ವತಂತ್ರವಾಗಿ ಭಾರತದೊಂದಿಗೆ ಕೂಡಿ ಒಂದಾಯಿತು. ಆ ತರುವಾಯದಿಂದ ಮರಾಠಿಗರ ವಾದಸರಣಿಯು ಬದಲಾಗಿದೆ.

ಒಬ್ಬ ಮರಾಠಿಗನು ಗೋವವು ಮಹಾರಾಷ್ಟ್ರದೊಂದಿಗೆ ಕೂಡಿದರೆ ಗೋವದ ಜನರಿಗೆ ದೊರೆಯಬಹುದಾದ ಹಲವು ಸೌಕರ್ಯಗಳನ್ನು ಸಿಹಿಯಾದ ಮಾತುಗಳಿಂದ ಬಣ್ಣಿಸಿ ಕೊಂಕಣಿಗರ ಮನಸ್ಸನ್ನು ಮಹಾರಾಷ್ಟ್ರದ ಕಡೆಗೆ ಒಲಿಸಲು ಹವಣಿಸಿದರೆ, ಇನ್ನೊಬ್ಬನು ಗೋವವು ಮಹಾರಾಷ್ಟ್ರದಲ್ಲಿ ಸೇರದೇ ಸ್ವತಂತ್ರವಾಗಿ ಉಳಿದರೆ ಪರದೇಶೀ ಸಂಸ್ಕೃತಿಗೆ ಮರುಳಾದ ಕೊಂಕಣಿ ಕ್ರೈಸ್ತರಿಂದ ಕೊಂಕಣಿ ಹಿಂದುಗಳಿಗೆ ಸಂಭವಿಸಬಹುದಾದ ಕಾಲ್ಪನಿಕ ಕಷ್ಟ-ನಿಷ್ಠುರಗಳನ್ನು ಬಣ್ಣಿಸಿ ಗೋವದ ರಾಜಕೀಯದಲ್ಲಿ ಧರ್ಮದ್ವೇಷದ ವಿಷಬೀಜವನ್ನು ಬಿತ್ತುತ್ತಾನೆ. ಸಾಹಿತಿಯಾಗಿರುವ ಬುದ್ಧಿವಂತನೊಬ್ಬನು ಕೊಂಕಣಿಯು ಮರಾಠಿಯ ಉಪಭೇದವಾಗಿದ್ದಿತೇ ಹೊರತು ಅದಕ್ಕೆ ಸ್ವತಂತ್ರವಾದ ಸಾಹಿತ್ಯಿಕ ಅಸ್ತಿತ್ವವೇ ಇರಲಿಲ್ಲವೆಂತಲೂ, ಕೊಂಕಣಿಯಲ್ಲಿ ಉಚ್ಚಮಟ್ಟದ ಸಾಹಿತ್ಯವನ್ನು ರಚಿಸಲು ಸಾಧ್ಯವೇ ಇಲ್ಲವೆಂತಲೂ ಅಪಕ್ವ ಹಾಗೂ ಅಪೂರ್ಣವಾದ ಆ ಕಾಡು ಕೊಂಕಣಿಯ ಮೇಲಿನ ವೃಥಾಭಿಮಾನವನ್ನು ತೊರೆದು, ಕೊಂಕಣಿಗರೆಲ್ಲರೂ ವಿಶಾಲಹೃದಯರಾಗಿ, ಮರಾಠಿಯನ್ನು ಕಲಿತು ಬೃಹನ್ಮಹಾರಾಷ್ಟ್ರವನ್ನು ಕಟ್ಟುವುದರಲ್ಲಿ ನೆರವಾಗಿ ಧನ್ಯರಾಗಿರೆಂದು ಉಪದೇಶಿಸುತ್ತಾನೆ.

ಇದರಲ್ಲಿ ಮರಾಠಿಗರ ರವಷ್ಟಾದರೂ ತಪ್ಪಿರಲಿಲ್ಲ. ಏಕೆಂದರೆ ಗೋವದಲ್ಲಿ ಪೊರ್ತುಗೀಸರ ಆಳ್ವಿಕೆಯು ಮೊದಲಾದ ತರುವಾಯ ಗೋವದಲ್ಲಿನ ಹಿಂದುಗಳಾಗಲಿ ಗೋವದಿಂದ ವಲಸೆ ಬಂದು ಹೊರನಾಡುಗಳಲ್ಲಿ ನೆಲಸಿದ ಹಿಂದುಗಳಾಗಲಿ ಕಳೆದ ಆರುವತ್ತು ವರ್ಷಗಳ ಹಿಂದಿನ ತನಕ ಸಾಹಿತ್ಯರಚನೆಗೆ ಕೈಹಾಕಿದುದಾಗಲಿ, ಕೊಂಕಣಿಯದೆಂದು ಹೆಮ್ಮೆಯಿಂದ ಹೇಳಿಕೊಳ್ಳಬಹುದಾದಂಥ ಒಂದೇ ಒಂದು ಗ್ರಂಥವನ್ನು ಬರೆದುದಾಗಲಿ ಇಲ್ಲವೇ ಇಲ್ಲ. ತರುವಾಯದ ಕಾಲದಲ್ಲಿ ಕೊಂಕಣಿಯ ಧ್ವಜವನ್ನು ಎತ್ತಿಹಿಡಿದು ಭಾಷಣಗಳ ಮತ್ತು ಲೇಖನಗಳ ಮೂಲಕ ಮರಾಠಿಯ ರಥಿಕ ಮಹಾರಥಿಕರೊಡನೆ ಒಬ್ಬಂಟಿಗನಾಗಿ ಕಾದಾಡಿ ಈಗ ಕೀರ್ತಿಶೇಷರಾಗಿರುವ ಪುಣ್ಯಸ್ಮರಣ "ಶಣೈ ವಾಮನ ರಘುನಾಥವರ್ದೆ ವಾಲಾವಲೀಕರ್" ಎಂಬ ಘನವಿದ್ವಾಂಸರು "ಶಣೈಗೋಂಯಬಾಬ್" ಎಂಬ ಹೆಸರಿನಿಂದ ಕೊಂಕಣಿಯಲ್ಲಿ ಚಿಕ್ಕಕಥೆ, ಪ್ರಹಸನ, ನಾಟಕ, ಜೀವನಚರಿತ್ರೆ, ವ್ಯಾಕರಣ, ಸಂಶೋಧನಾತ್ಮಕ ಪ್ರಬಂಧ, ಕವನ ಮೊದಲಾದ ಸಾಧಾರಣ ಅರ್ಧಶತಕದಷ್ಟು ಅಪ್ರತಿಮ ಗ್ರಂಥಗಳನು ಬರೆದು ಪ್ರಕಟಿಸಿ ಕೊಂಕಣಿಯಲ್ಲಿ ಕೂಡ, ಮರಾಠಿಗರು

ಮಾಡುವಂತೆ ಸಂಸ್ಕೃತದ ಕಠಿನ ಶಬ್ದಗಳನ್ನು ಬಲಾತ್ಕಾರವಾಗಿ ತುರುಕದೆನೇ, ಉಚ್ಚಮಟ್ಟದ ಸಾಹಿತ್ಯವನ್ನು ರಚಿಸಲು ಸಾಧ್ಯವಿದೆಯೆಂಬುದನ್ನು ಎದುರಾಳಿಗಳ ಕಣ್ಣುಗಳು ಕೋರಯಿಸುವಂತೆ ಸಿದ್ಧಮಾಡಿ ತೋರಿಸಿದರು.

ಶಣ್ಯೆಗೋಂಯಬಾಬರ ಸಿಂಹನಾದಕ್ಕೆ ಎಚ್ಚೆತ್ತ ದಕ್ಷಿಣ ಕನ್ನಡ ಜಿಲ್ಲೆಯ ಕೆಲವರು ಅಂದರೆ ಬಂಟವಾಳದ ಶ್ರೀಮಾನ್ ಬೋಳಂತೂರು ಕೃಷ್ಣಪ್ರಭುಗಳು ಚಂದ್ರಹಾಸ ನಾಟಕವನ್ನೂ, ಕುಂಬಳೆಯ ಶ್ರೀಮಾನ್ ನರಸಿಂಹಲಕ್ಷ್ಮಣ ನಾಯಕರು ಸಾವಿತ್ರೀಸತ್ಯವಾನ್ ನಾಟಕವನ್ನೂ ಬರೆದು ಪ್ರಕಟಿಸಿದರು. ಮತ್ತು ಕೆಲವು ಉತ್ಸಾಹೀ ತರುಣರು ಆ ನಾಟಕಗಳನ್ನು ಆಡಿತೋರಿಸಿದರು. ಅದೇ ಕಾಲದಲ್ಲಿ ಶ್ರೀಮಾನ್ ಬಂಗ್ಲೆನಾರಾಯಣ ಕಾಮತರು ಗೀತಾಮೃತಸಾಕೀ ಎಂಬ ಹೆಸರಲ್ಲಿ ಭಗವದ್ಗೀತೆಯ ಪದ್ಯಾತ್ಮಕ ಕೊಂಕಣಿ ಭಾಷಾಂತರವನ್ನು ಪ್ರಕಟಿಸಿದರು. ಶ್ರೀಮಾನ್ ಕೃಷ್ಣಪ್ರಭುಗಳು ಆ ತರುವಾಯ ಪ್ರಹ್ಲಾದ ಚರಿತ್ರ ಮತ್ತು ಧ್ರುವ ಚರಿತ್ರ ಎಂಬ ಎರಡು ನಾಟಕಗಳನ್ನು ಮತ್ತು ಕೆಲವು ಚಿಕ್ಕ ಚಿಕ್ಕ ಕವಿತೆಗಳನ್ನು ರಚಿಸಿದ್ದಾರೆ. ಕುಂಬಳೆಯ ನಾಯಕರು ಮಾನಸಚರಿತ್ರ ನಾಟಕವನ್ನು ರಚಿಸಿದ್ದಾರೆ. ಅದಾದ ಬಹಳ ವರ್ಷಗಳ ತರುವಾಯ ಶ್ರೀಮಾನ್ ಬೋಳಂತೂರ ಮಾಧವ ಪ್ರಭುಗಳು ಹಲವು ಚಿಕ್ಕ ಕಥೆಗಳನ್ನು ಪ್ರಕಟಿಸಿದರು. ಶ್ರೀಯುತ ಜಿ. ಎನ್. ಲಕ್ಷ್ಮಣ ಪೈಯವರು ಬರೆದು ಪ್ರಕಟಿಸಿದ "ಆಮ್ಗೆಲೊ ಸಮಾಜು" ಎಂಬ ನಾಟಕವು ದಕ್ಷಿಣ ಕನ್ನಡದವರ ಗ್ರಂಥರಚನೆಯ ಪರಂಪರೆಯಲ್ಲಿ ಕೊನೆಯದೆನ್ನಬಹುದು. ದಿವಂಗತ ವಿ. ಎಸ್. ಕುಡ್ವರವರು ಕೆಲವು ವರ್ಷಗಳ ತನಕ "ಸಾರಸ್ವತ" ಎಂಬ ಸಾಪ್ತಾಹಿಕವನ್ನು ನಡಿಸಿದರು. ಈಗ ಪ್ರಕೃತದಲ್ಲಿ ಶ್ರೀಮಾನ್ ಬಿ. ವಿ. ಬಾಳಿಗರು "ಪಂಚ್ಕಾದಾಯಿ" ಎಂಬ ಮಾಸಪತ್ರಿಕೆಯನ್ನು ನಡಿಸುವ ಸಾಹಸಕ್ಕೆ ಕೈ ಇಕ್ಕಿದ್ದಾರೆ. ಆದರೆ ಶೆಣ್ಯೆಗೋಂಯಬಾಬರ ಗರ್ಜನೆಗೆ ಎಚ್ಚೆತ್ತ ಗೋವದ ಹಲವು ತರುಣರು ಅವರ ಬರವಣಿಗೆಗಳಿಂದ ಸ್ಫೂರ್ತಿಪಡೆದು—ಸಾಹಿತ್ಯರಚನೆಯಲ್ಲಿ ಮುಂದುವರಿಯುತ್ತಲೇ ಇದ್ದಾರಾದುದರಿಂದ ಗ್ರಂಥಗಳ ಸಂಖ್ಯೆಯು ಬೆಳೆಯುತೊಡಗಿದೆಯಾದರೂ ಮರಾಠಿಯ ಸಾಹಿತ್ಯ ಪರ್ವತದ ಮುಂದೆ ಅವನ್ನು ಸಾಸಿವೆಕಾಳಿಗೆ ಹೋಲಿಸಬಹುದಾಗಿದೆ.

ಮರಾಠಿಗರು ಗೋವದಲ್ಲಿನ ಕೊಂಕಣಿಯನ್ನು ಮಾತ್ರ ಕೇಳಿ ಮತ್ತು ನೋಡಿಬಲ್ಲರೇ ಹೊರತು ಗೋವದಿಂದ ಬಹುದೂರ ದಕ್ಷಿಣದಲ್ಲಿ ಬಳಕೆಯಲ್ಲಿರುವ ಕೊಂಕಣಿಯ ಪರಿಚಯವು ಅವರಿಗೆ ಸ್ವಲ್ಪವಾದರೂ ಇಲ್ಲವೆಂದು ಅವರ ಲೇಖನ ಮತ್ತು ಭಾಷಣಗಳ ವರದಿಗಳ ಮೇಲಿಂದ ತಿಳಿದುಬರುತ್ತದೆ. ದಕ್ಷಿಣ

ಪ್ರದೇಶಗಳಲ್ಲಿ ಬಳಕೆಯಲ್ಲಿರುವ ಕೊಂಕಣಿಯ ಸರಿಯಾದ ಪರಿಚಯ ಅವರಿಗೆ ಇದ್ದುದಾದರೆ ಕೊಂಕಣಿಯು ಮರಾಠಿಯಿಂದ ಹುಟ್ಟಿದುದೆನ್ನುವ ತಪ್ಪನ್ನು ಸತ್ಯ ಪ್ರೇಮಿಯಾಗಿದ್ದ ಯಾವನೊಬ್ಬ ಮರಾಠಿಗನೂ ಮಾಡುತಿರಲಿಲ್ಲ.

ಮರಾಠಿಯು ಕೊಂಕಣಿಗಿಂತ ಶುದ್ಧವಾದುದು, ಪ್ರಾಚೀನವಾದುದು ಮತ್ತು ಶಬ್ದಪ್ರಚುರವಾದುದು ಎಂಬ ತಪ್ಪು ತಿಳಿವಳಿಕೆಯು ಸಾಮಾನ್ಯ ಜನರಲ್ಲಿಯೇ ಅಲ್ಲ ವಿದ್ಯಾವಂತರೆನ್ನಬಹುದಾದ ಜನರಲ್ಲಿ ಕೂಡ ಬಲವಾಗಿ ಬೇರೂರಿದೆ. ಕೊಂಕಣಿಗೆ ಲಿಪಿ ಎಲ್ಲಿದೆ? ಎಂಬುದೇ ಅವರ ಮೊತ್ತಮೊದಲಿನ ಪ್ರಶ್ನೆಯಾಗಿರುತ್ತದೆ. ಅದು ಬೇರೇನನ್ನೂ ಸೂಚಿಸದೇ ಅಂಥ ಪ್ರಶ್ನೆ ಕೇಳುವವರು ಒಮ್ಮೆಯಾದರೂ ತಮ್ಮ ತಾಯಿನುಡಿಯ ಕುರಿತಾಗಿ ಚಿಂತಿಸಿಲ್ಲವೆಂಬುದನ್ನು ಮಾತ್ರ ವ್ಯಕ್ತಗೊಳಿಸುತ್ತದೆ. ಕೊಂಕಣಿಯು ಸಾಹಿತ್ಯಿಕ ಭಾಷೆಯಾಗಿದ್ದು ಹಿಂದಿನವರು ಆ ಭಾಷೆಯಲ್ಲಿ ಗ್ರಂಥಗಳನ್ನು ರಚಿಸಿದ್ದರೆಂಬುದನ್ನಾಗಲೀ, ನಾಗರೀ ಲಿಪಿಯು ಮರಾಠಿಗೆನೇ ಮೀಸಲಾಗಿದೆಯೇ ಎಂಬುದನ್ನಾಗಲೀ ಕನ್ನಡದ್ದೆಂದು ಹೇಳಲಾಗುವ ಲಿಪಿಯು ಗೋವದಲ್ಲಿ ಬಳಕೆಯಲ್ಲಿದ್ದ ಲಿಪಿಯ ರೂಪಾಂತರವೆಂಬುದನ್ನಾಗಲೀ ಅಥವಾ ಆ ಲಿಪಿಯು ಕನ್ನಡಕ್ಕಾಗಿಯೇ ನಿರ್ಮಿತವಾಗಿದ್ದಿತೇ ಎಂಬುದನ್ನಾಗಲೀ ವಿಚಾರಿಸುವ ಗೋಜಿಗೆ ಹೋಗಿಲ್ಲ. ನಾಗರೀ ವರ್ಣಮಾಲೆಯು, ಸಂಸ್ಕೃತಭಾಷೆಯನ್ನು ಬರೆಯಲಿಕ್ಕಾಗಿ ನಿರ್ಮಿತವಾದ ಬ್ರಾಹ್ಮೀ ವರ್ಣಮಾಲೆಯ ಉತ್ತರ ಭಾರತೀಯ ರೂಪಾಂತರವಾಗಿರುವಂತೆಯೇ ಕನ್ನಡದ್ದೆಂದು ಹೇಳಲಾಗುವ ವರ್ಣಮಾಲೆಯು ಕೂಡ ಸಂಸ್ಕೃತ ಮತ್ತು ಪ್ರಾಕೃತಗಳನ್ನು ಬರೆಯಲಿಕ್ಕಾಗಿ ಬ್ರಾಹ್ಮೀವರ್ಣಮಾಲೆಯನ್ನು ರೂಪಾಂತರಿಸಿ ನಿರ್ಮಿಸಿದ ದಕ್ಷಿಣ ಭಾರತೀಯ ವರ್ಣಮಾಲೆಯಾಗಿರುತ್ತದೆ. ಆ ವರ್ಣಮಾಲೆಯಿಂದ ಬರೆದ ಮೊತ್ತಮೊದಲಿನ ಶಾಸನಗಳೆಲ್ಲವೂ ಸಂಸ್ಕೃತ ಭಾಷೆಯಿಂದಲೇ ಇರುವುದರಿಂದ ಆ ಸತ್ಯವನ್ನು ಯಾರಿಂದಲೂ ಅಲ್ಲಗಳೆಯಲು ಸಾಧ್ಯವಿಲ್ಲ. ಆದುದರಿಂದ ಯಾರೊಬ್ಬರು ಆ ವರ್ಣಮಾಲೆಯ ಮೇಲೆ ಸ್ವಾಧಿಕಾರವನ್ನು ಸ್ಥಾಪಿಸಲು ಸಾಧ್ಯವಿಲ್ಲ. ಆ ವರ್ಣಮಾಲೆಯು ಕನ್ನಡಿಗರದಾಗಿರುವುದೆಂದು ಹೇಳುವುದಕ್ಕಿಂತ ಕೊಂಕಣಿಗರದೆಂದು ಹೇಳುವುದು ಹೆಚ್ಚು ಸಮಂಜಸವಾಗಿರುತ್ತದೆ. ಏಕೆಂದರೆ ಆ ವರ್ಣಮಾಲೆಯ ಮೊದಲಿನ ರೂಪವು ಗೋವದಲ್ಲಿ ಮಾತ್ರ ಬಳಕೆಯಲ್ಲಿತ್ತು.

ಗೋವದಲ್ಲಿ ಗೋಮಾಂತಕೀ ಲಿಪಿಯು (=ಈಗಿನ ಕನ್ನಡ ಲಿಪಿಯ ಮೊದಲಿನರೂಪ) ಬಳಕೆಯಲ್ಲಿದ್ದಿತು. ಸಾಧಾರಣ ಶಕದ ಹದಿನೈದನೆಯ ಶತಮಾನದಲ್ಲಿ ಅಲ್ಲಿ ನಾಗರೀ ಲಿಪಿಯೂ ಬಳಕೆಗೆ ಬಂತು. ಕೊನೆಗೆ ಗೋಮಾಂತ

ಕಿಯು ರೂಪಾಂತರವಾಗಿ ಈಗಿನ ಕನ್ನಡ ಲಿಪಿಯು ಬಳಕೆಗೆ ಬಂತು. ಅಂದರೆ ಗೋವದಲ್ಲಿ ಎರಡು ಬಗೆಯ ಲಿಪಿಗಳು ಬಳಕೆಯಲ್ಲಿದ್ದವೆಂಬುದರ ಲಿಖಿತಪ್ರಮಾಣಗಳಿವೆ. ಅಂದರೆ ಈಗ ಕನ್ನಡದ್ದೆಂದು ಹೇಳಲಾಗುವ ಲಿಪಿಯು ಮೊದಲಿನಿಂದಲೂ ಕೊಂಕಣಿಯನ್ನು ಬರೆಯಲು ಬಳಸಲ್ಪಟ್ಟಿದೆ: ಈಗಲೂ ಬಳಸಲ್ಪಡುತ್ತದೆ. ಮುಂದೆಯೂ ಬಳಸಲ್ಪಡಬಹುದು. ಅದರಿಂದಾಗಿ ಕೊಂಕಣಿಗರು ಯಾರಿಗೂ ಋಣಿಗಳಾಗುವಂತಿಲ್ಲ ಏಕೆಂದರೆ ಅದು ಅವರ ಸ್ವಂತದ ನಿರ್ಮಾಣವಾಗಿದೆ ಮತ್ತು ಅವರಿಗೆ ಆ ವರ್ಣಮಾಲೆಯ ಮೇಲೆ ಇತರರಿಗಿಂತ ಹೆಚ್ಚಿನ ಅಧಿಕಾರವಿದೆ. ಹಿಂದೆ ಆ ವರ್ಣಮಾಲೆಯು ಕೊಂಕಣಿಯನ್ನು ಬರೆಯಲು ಮಾತ್ರವಲ್ಲ ಮರಾಠಿಯನ್ನು ಬರೆಯಲು ಕೂಡ ಬಳಸಲ್ಪಡುತಿತ್ತು. ಅಂದರೆ ಗೋಮಾಂತಕೀ ಲಿಪಿಯಿಂದ ಮರಾಠಿಭಾಷೆಯಲ್ಲಿ ಬರೆದ ವಿದುರನೀತಿ ಮತ್ತು ಕಥಾಕಲ್ಪತರು ಎಂಬ ಎರಡು ಪ್ರಾಚೀನಗ್ರಂಥಗಳು ಮಂಗಳೂರಿನ ಕೆನರಾ ಹಾಇಸ್ಕೂಲಿನ ಪುಸ್ತಕಾಲಯದಲ್ಲಿವೆ.

ಮರಾಠಿಯು ಕೊಂಕಣಿಗಿಂತ ಪ್ರಾಚೀನವಾದುದು ಮತ್ತು ಶುದ್ಧವಾದುದು ಎಂಬ ತಿಳುವಳಿಕೆಯು ನಿರಾಧಾರವಾದುದು ಮತ್ತು ಭ್ರಾಮಕವಾದುದೆಂದೂ, ಕೊಂಕಣಿಯೇ ಮರಾಠಿಗಿಂತ ಪ್ರಾಚೀನವಾದುದಾಗಿದ್ದು ಮರಾಠಿಗಿಂತ ಶುದ್ಧವಾದುದೆಂದೂ ಪ್ರಮಾಣಗಳ ಸಹಿತವಾಗಿ ಸಿದ್ಧಪಡಿಸಲಾಗುವುದು. ಶಕದ ಹದಿನೆರಡನೆಯ ಶತಮಾನಕ್ಕಿಂತ ಹಿಂದೆ ಕೊಂಕಣಿ ಮತ್ತು ಮರಾಠಿಗಳಲ್ಲಿ ಹೆಚ್ಚಿನ ಅಂತರವಿರಲಿಲ್ಲ. ಸಾಧಾರಣ ಹದಿನಾಲ್ಕನೆಯ ಶತಮಾನದ ಸುಮಾರಿಗೆ ಅವೆರಡರಲ್ಲಿಯೂ ಸ್ಪಷ್ಟವಾದ ಅಂತರವು ಕಾಣಬರತೊಡಗಿತು. ಮತ್ತು ಆ ಮೊದಲು ರಚಿಸಲ್ಪಟ್ಟ ಹಾಗೂ ಮಹಾರಾಷ್ಟ್ರದಲ್ಲಿ ಇದ್ದ ಗ್ರಂಥಗಳ ಭಾಷೆಯನ್ನು ತರುವಾಯದವರು ತಮ್ಮ ಕಾಲದ ಬಳಕೆಗೆ ಸರಿಬರುವಂತೆ ತಿದ್ದಿದರು. ಆದುದರಿಂದಲೇ ಹಳೆಯ ಮರಾಠಿಯದೆಂದು ಹೇಳುವ ಗ್ರಂಥಗಳಲ್ಲಿ ಕೊಂಕಣಿಯ ಶಬ್ದಗಳು ಇರುವುದಾಗಿದೆ.

ಮರಾಠಿಯು ಕೊಂಕಣಿಗಿಂತ ಶುದ್ಧವಾದುದೆಂದು ಕೆಲವರು ಭ್ರಮಿಸಿದುದರ ಕಾರಣವು ಅರ್ವಾಚೀನವಾದ ಅಥವಾ ಹೊಸಮರಾಠಿಯಲ್ಲಿ ದಿನನಿತ್ಯದ ಬಳಕೆಗೆ ಬೇಕಾಗುವ ಪ್ರಾಕೃತ ಶಬ್ದಗಳಿಲ್ಲದುದರಿಂದ. ಆ ಕೊರತೆಯನ್ನು ನೀಗಿಸಲು ಆಧುನಿಕ ಸಾಹಿತ್ಯಕಾರರು ತಮ್ಮ ರಚನೆಗಳಲ್ಲಿ ಅರ್ಥಮಾಡಲು ಕಠಿನವಾಗಿರುವಂಥ ದೊಡ್ಡದೊಡ್ಡ ಸಂಸ್ಕೃತ ಶಬ್ದಗಳನ್ನು ಮಿತಿಮೀರಿ ಬಳಸುವುದೇ ಆಗಿರುತ್ತದೆ. ಮರಾಠಿಗರು ಒಂದು ಚಿಕ್ಕ ಅರ್ಥವನ್ನು ಸೂಚಿಸಲಿಕ್ಕೆ ಕೂಡ ಎಷ್ಟು

ದೊಡ್ಡ ಶಬ್ದವನ್ನು ಬಳಸುತ್ತಾರೆಂಬುದಕ್ಕೆ ಒಂದು ಚಿಲೋ ಉದಾಹರಣೆ ಯೆಂದರೆ—"ಏಕಸಮಯಾವಚ್ಛೇದೇಂಕರೂನ್"=ಒಮ್ಮೆಲೇ" ಎಂಬುದಾಗಿರುತ್ತದೆ. ಅದಕ್ಕೆ ಪ್ರತಿಯಾಗಿ ಕೊಂಕಣಿಯಲ್ಲಿ "ಸವೇಂಚಿ=ಒಮ್ಮೆಲೇ. ಏಕಕಾಲದಲ್ಲಿಯೇ" ಎಂಬ—ಚಿಕ್ಕ ಶಬ್ದವಿದೆ. ಆ ಶಬ್ದವು ಮರಾಠಿ ಶಬ್ದಕೋಶಗಳಲ್ಲಿ ದೊರಕುತ್ತದಾದರೂ ಅದರ ಅರ್ಥವನ್ನು ಒಬ್ಬೊಬ್ಬರು ಒಂದೊಂದು ರೀತಿಯಾಗಿ ಕೊಟ್ಟಿದ್ದಾರೆ. ಆದರೆ ಅದು ಜ್ಞಾನೇಶ್ವರಿಯಲ್ಲಿ ಕೊಂಕಣಿ ಅರ್ಥದಲ್ಲಿಯೇ ಬಳಸಲ್ಪಟ್ಟಿದೆ. ಸವೇಂಚಿ ಎಂಬ ಶಬ್ದವು ಸಂಸ್ಕೃತದ "ಸಮವ್" ಮತ್ತು ಪ್ರಾಕೃತದ "ಚಿ" ಎಂಬ ಅವಧಾರಣಾರ್ಥಕ ಅವ್ಯಯಗಳ ಕೂಡಿಕೆಯಿಂದ ಹುಟ್ಟಿದೆ.

ಮರಾಠಿಯು ಶಬ್ದಪ್ರಚುರವಾದ ಅಥವಾ ವಿಶಾಲವಾದ ಭಾಷೆಯೆಂದು ಮೇಲೆಮೇಲೆ ತೋರಿದರೂ ಅದರ ಶಬ್ದಭಂಡಾರವನ್ನು ಸರಿಯಾಗಿ ವಿಮರ್ಶಿಸಿದರೆ ಅದರ ಶಬ್ದಸಂಪತ್ತಿನಲ್ಲಿ ಪ್ರಾಕೃತದ ಭಂಡವಾಳವು ಬಹಳ ಕಡಿಮೆ ಇದ್ದು ಸಾಲ ಕೊಂಡ ಅಥವಾ ಎರವಲು ಪಡೆದ ಶಬ್ದಗಳು ಮತ್ತು ಪ್ರಾಕೃತ ಭಾಷೆಯನ್ನಾಡತೊಡಗಿದ ಅನ್ಯವರ್ಗದ ಜನರಿಂದಾಗಿ ಸೇರಿದ ಶಬ್ದಗಳು ಬಹಳ ಹೆಚ್ಚಾಗಿವೆಯೆಂದು ಕಂಡುಬಾರದೆ ಇರದು.

ಕೊಂಕಣಿ ಮತ್ತು ಮರಾಠಿಗಳು ಒಂದೇ ಮೂಲದಿಂದ ಹುಟ್ಟಿದ ಎರಡು ಸೋದರಿ ಭಾಷೆಗಳೆಂದು ಕೆಲವರ ಅಭಿಪ್ರಾಯವಿದೆ. ಅದರ ಅರ್ಥವು ಒಂದೇ ಮೂಲದಿಂದ ಸಮಾನಕಾಲದಲ್ಲಿ ಹುಟ್ಟಿ ಬೇರೆ ಬೇರೆಯಾಗಿ ಬೆಳೆದ ಭಾಷೆಗಳೆಂದಿರುವುದರಿಂದ ಅದು ಸಂಪೂರ್ಣ ತಪ್ಪು ಅಭಿಪ್ರಾಯವೆನ್ನಬೇಕಾಗುತ್ತದೆ. ಏಕೆಂದರೆ ಆ ಎರಡು ಭಾಷೆಗಳಲ್ಲಿ ಉಪಲಬ್ಧವಿರುವ ಪ್ರಮಾಣಗಳು ಆ ಅಭಿಪ್ರಾಯಕ್ಕೆ ವಿರುದ್ಧವಾಗಿವೆ. ಅಲ್ಲದೇ ಹಾಗಾಗುವ ಸಂಭವವು ತೀರ ಕಡಿಮೆ. ಅದು ಪ್ರಾಕೃತಿಕ ನಿಯಮಕ್ಕೂ ಭಾಷಾ-ವಿಕಾಶ ಶಾಸ್ತ್ರಕ್ಕೂ ವಿರುದ್ಧವಾಗಿದೆ. ಒಂದೇ ಭಾಷೆಯು ವಿಶಾಲವಾದ ಪ್ರದೇಶದಲ್ಲಿ ಹಬ್ಬಿ ಅದರ ಮೂಲಸ್ಥಾನದಿಂದ ದೂರವಾಗುತ್ತ ಹೋದಂತೆ ಅಲ್ಲಲ್ಲಿ ಚಿಕ್ಕಪುಟ್ಟ ಪ್ರಾದೇಶಿಕ ಭೇದಗಳು ತಲೆದೋರಿ, ಕಾಲಕ್ರಮೇಣ—ಆಯಾಪ್ರದೇಶಗಳಲ್ಲಿ ಬಳಕೆಯಲ್ಲಿರುವ ಇತರ ಭಾಷೆಗಳ ಶಬ್ದಗಳು ಅದರಲ್ಲಿ ಸೇರಿ—ಅದು ಮೂಲದಿಂದ ಕವಲೊಡೆಯುವುದು ಪ್ರಾಕೃತಿಕ ನಿಯಮವಾಗಿದೆ. ಇವುಗಳಲ್ಲಿ ಮೂಲಭಾಷೆಯು ಯಾವುದು ತರುವಾಯ ಹುಟ್ಟಿದುದು ಯಾವುದು ಎಂಬುದನ್ನು ಕಂಡುಹಿಡಿಯುವುದೇ ಭಾಷಾ ವಿಜ್ಞಾನದ ಮುಖ್ಯತತ್ವವಾಗಿರುತ್ತದೆ. ಆದುದರಿಂದ ಕೊಂಕಣಿ ಮತ್ತು ಮರಾಠಿಗಳಲ್ಲಿ

ಪ್ರಾಚೀನವಾದುದು ಯಾವುದು ಎಂಬುದನ್ನು ಕಂಡುಹಿಡಿಯುವುದೇ ಈ ಲೇಖನದ ಉದ್ದೇಶವಾಗಿರುತ್ತದೆ.

## ೨

ಕೊಂಕಣಿ ಮತ್ತು ಮರಾಠಿಗಳೊಳಗಿನ ಸಂಬಂಧದ ಕುರಿತು ಸರಿಯಾದ ಹಾಗೂ ಚೆಲೋದಾದ ಒಂದು ಉದಾಹರಣೆಯನ್ನು ಕೊಟ್ಟು ವಿವರಿಸುವುದಾದರೆ ಪ್ರಾಚೀನ ಹಿಂದೀ ಮತ್ತು ಅರ್ವಾಚೀನ ಹಿಂದೀ: ಅಥವಾ ಹಳೆಯ ಹಿಂದೀ ಮತ್ತು ಹೊಸ ಹಿಂದೀಗಳ ನಡುವೆ ಯಾವ ಬಗೆಯ ಸಂಬಂಧವಿದೆಯೋ ಅದೇ ಬಗೆಯ ಸಂಬಂಧವು ಕೊಂಕಣಿ ಮತ್ತು ಮರಾಠಿಗಳಲ್ಲಿ ಇದೆಯೆನ್ನಬಹುದು. ಎರಡು ಭಾಷೆಗಳಲ್ಲಿಯೂ ಬಳಸಲ್ಪಡುವ ಶಬ್ದಭಾಂಡಾರವು ಅಧಿಕಾಂಶದಲ್ಲಿ ಒಂದೇಯಾಗಿದೆ ಪ್ರಾಕೃತ ಶಬ್ದಗಳ ಶುದ್ಧರೂಪಗಳು ಮತ್ತು ಸರಿಯಾದ ಅರ್ಥಗಳು ಕೊಂಕಣಿಯಲ್ಲಿವೆ. ಪ್ರಾದೇಶಿಕ ಭೇದಗಳ ವಿಚಾರವು ಇಲ್ಲಿ ಪ್ರಕೃತವಲ್ಲ. ಮೊದಲು ಉತ್ತರಪ್ರದೇಶದಲ್ಲಿ ಪ್ರಾಕೃತ ಹಾಗೂ ಅಪಭ್ರಂಶ ವಿಭೇದಗಳಿಂದ ವಿಕಸಿತವಾಗಿ ಸ್ಥಿರತೆಯನ್ನು ಪಡಿದಿದ್ದ "ವ್ರಜಭಾಷೆ ಅಥವಾ ಹಳೆಹಿಂದಿ" ಇತ್ತು. ಅದರಿಂದಲೇ ತುಸು ರೂಪಾಂತರ ಹೊಂದಿ ಸಾರ್ವತ್ರಿಕವಾದ "ಖಡೀಬೋಲೀ" ಅಥವಾ ಪ್ರಚಲಿತ ಹೊಸ ಹಿಂದಿಯು ಬಳಕೆಗೆ ಬಂತು. ಹಾಗೆಯೇ ದಕ್ಷಿಣ ಭಾರತದಲ್ಲಿನ ಮಹಾರಾಷ್ಟ್ರದಲ್ಲಿ ಹಳೆಯ ಮಹಾರಾಷ್ಟ್ರೀ ಪ್ರಾಕೃತ (=ಕೊಂಕಣಿ) ಇತ್ತು. ಅದರಿಂದಲೇ ತುಸು ರೂಪಾಂತರಹೊಂದಿ ಹೊಸ ಮರಾಠಿಯು ಬಳಕೆಗೆ ಬಂತು.

ಹಳೆಯ ಹಿಂದಿಯಲ್ಲಿ "ಕುದುರೆಯು ಬಂತು" ಅನ್ನಲು **'ಘೋಡೋ ಆಯೋ'** ಅನ್ನುತ್ತಾರಾದರೆ ಈಗಿನ ಹೊಸ ಹಿಂದಿಯಲ್ಲಿ **'ಘೋಡಾ ಆಯಾ'** ಅನ್ನುತ್ತಾರೆ. ಅದರಂತೆಯೇ ಕೊಂಕಣಿಯಲ್ಲಿ ಅಥವಾ ಹಳೆಯ ಮರಾಠಿಯಲ್ಲಿ **'ಘೋಡೊ ಆಯಲೊ'** ಅಂದರೆ ಈಗಿನ ಹೊಸ ಮರಾಠಿಯಲ್ಲಿ **'ಘೋಡಾ ಆಲಾ'** ಅನ್ನುತ್ತಾರೆ. ಅದೇ ರೀತಿಯಲ್ಲಿ ಹಳೆಯ ಹಿಂದಿಯಲ್ಲಿ "ಕುದುರೆಯು" ಹೋಯಿತು ಅನ್ನಲು **'ಘೋಡೋ ಗಯೋ'** ಅಂದರೆ "ಹೊಸ ಹಿಂದಿಯಲ್ಲಿ **'ಘೋಡಾ ಗಯಾ'** ಅನ್ನುತ್ತಾರೆ. ಹಾಗೂ ಕೊಂಕಣಿಯಲ್ಲಿ **'ಘೋಡೊ ಗೆಲೊ'** ಅಂದರೆ ಮರಾಠಿಯಲ್ಲಿ **'ಘೋಡಾ ಗೇಲಾ'** ಅನ್ನುತ್ತಾರೆ. ಹಿಂದಿನ ಉದಾಹರಣೆಗಳಿಂದ ಹಳೆಯ ಭಾಷೆಗಳಲ್ಲಿ ಓಕಾರಾಂತವಾಗಿರುವ (ಪುಲ್ಲಿಂಗ)

ಶಬ್ದಗಳು ಅವುಗಳಿಂದ ರೂಪಾಂತರವಾಗಿ ಹುಟ್ಟಿದ ಹೊಸ ಭಾಷೆಗಳಲ್ಲಿ ಆಕಾರಾಂತವಾಗಿರುತ್ತವೆಂದು ತಿಳಿದುಬರುವುದಲ್ಲದೇ ಕೊಂಕಣಿ ಮತ್ತು ಮರಾಠಿಗಳೊಳಗಿನ ಸಂಬಂಧವು ಹಾಗೂ ಭೇದವು ಯಾವ ಬಗೆಯದೆಂದು ಸ್ಪಷ್ಟವಾಗಿ ತಿಳಿದು ಬರುತ್ತದೆ.

ಕೊಂಕಣಿ ಮತ್ತು ಮರಾಠಿಗಳೊಳಗೆ ಇರುವ ಮುಖ್ಯವಾದ ಒಂದೇ ಒಂದು ಭೇದವೆಂದರೆ—ಕೊಂಕಣಿಯ ಪ್ರಥಮಾವಿಭಕ್ತಿಯ ಏಕವಚನದಲ್ಲಿ ಓಕಾರಾಂತವಾಗಿರುವ ಪುಲ್ಲಿಂಗ ನಾಮಪದಗಳೂ, ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಯ ಬಹುವಚನಗಳಲ್ಲಿ ಓಕಾರಾಂತವಾಗಿರುವ ಸ್ತ್ರೀಲಿಂಗ ನಾಮಪದಗಳೂ, ಓಕಾರಾಂತವಾಗಿರುವ ಸಕಲ ಕ್ರಿಯಾರೂಪಗಳೂ ಮರಾಠಿಯಲ್ಲಿ ಆಕಾರಾಂತವಾಗಿಯೂ, ಕೊಂಕಣಿಯಲ್ಲಿ ಆಕಾರಾಂತವಾಗಿರುವ ಕ್ರಿಯಾರೂಪಗಳು ಮರಾಠಿಯಲ್ಲಿ ಓಕಾರಾಂತವಾಗಿಯೂ ಮಾರ್ಪಡುತ್ತವೆ. ಮತ್ತು ಹಾಗೆ ಮಾರ್ಪಡಲೇ ಬೇಕು. ಹಾಗೆ ಮಾರ್ಪಡದಿದ್ದಲ್ಲಿ ಅಂಥ ಶಬ್ದವು ಕೊಂಕಣಿರೂಪದಲ್ಲಿಯೇ ಉಳಿದುಕೊಂಡಿದೆಯೆಂದು—ಅಥವಾ ಕೊಂಕಣಿಯದೇ ಎಂದು ಸಿದ್ಧವಾಗುತ್ತದೆ.

ಪ್ರಾಚೀನ ಪ್ರಾಕೃತ ಭಾಷೆಗಳಲ್ಲಿ ಸಂಸ್ಕೃತದಲ್ಲಿನ ಅಕಾರಾಂತ ಪುಲ್ಲಿಂಗ ನಾಮದ ಪ್ರಥಮಾ ವಿಭಕ್ತಿಯ ಏಕವಚನ ಹಾಗೂ, ಅಕಾರಾಂತ ಶಬ್ದದ ತರುವಾಯ ವಿಸರ್ಗವಿರುವಂಥ ಶಬ್ದಗಳು ಓಕಾರಾಂತವಾಗುತ್ತಿದ್ದವು. ಉದಾ:— ರಾಮಃ = ರಾಮೋ, ಗತಃ = ಗತೋ ಅತಃ = ಅತೋ ನದ್ಯಃ = ನದ್ಯೋ ಇತ್ಯಾದಿ. ತರುವಾಯ ಕಾಲಸಂದಂತೆ ಹಾಗೂ—ಪೂರ್ವಕ್ಕೆಸಾಗಿದಂತೆ—ಮೊದಲಿನ ಪ್ರಾಕೃತಗಳಿಂದ ಕವಲೊಡೆದ ಹೊಸನುಡಿಗಳಲ್ಲಿ—ಮೊದಲಿನ ಓಕಾರಾಂತ ಶಬ್ದವು ಆಕಾರಾಂತವಾಗಿ ಮಾರ್ಪಡತೊಡಗಿತು. ಹೀಗಾಗಿ ಹಳೆ ಹಿಂದಿಯಿಂದ ಹೊಸ ಹಿಂದಿಯೂ, ಹಳೆ ಮರಾಠಿ (= ಕೊಂಕಣಿ) ಯಿಂದ ಹೊಸ ಮರಾಠಿಯೂ ಹುಟ್ಟಿದವು. ಹೊಸ ಹಿಂದಿಯನ್ನಾಡುವವರು ಹಳೆ ಹಿಂದಿಯನ್ನು ತಮ್ಮ ನುಡಿಯ ತಾಯಿಯೆನ್ನಲು ಸಂಕೋಚಪಡುವುದಿಲ್ಲ, ಬದಲಿಗೆ ಬಹಳ ಹೆಮ್ಮೆಪಡುತ್ತಾರೆ. ಆದರೆ ಲೋಕವೆಲ್ಲವೂ ತಮ್ಮಿಂದಲೇ ಬೆಳಗುತ್ತಿದೆಯೆಂದು ಸಾಧಿಸಲು ಹವಣಿಸುತ್ತಿರುವ ಕೆಲವೇ ಮಂದಿ ಮರಾಠಿ ವಿದ್ವಾಂಸರು ಪ್ರಾಚೀನ ಸಾಹಿತ್ಯವನ್ನು ಕಳೆದುಕೊಂಡು ಬಡವಾದ ಕೊಂಕಣಿಯನ್ನು ಮರಾಠಿಯ ತಾಯಿಯೆನ್ನಲು ನಾಚುತ್ತಾರಲ್ಲದೇ ತಾಯಿಯ ಕತ್ತನ್ನು ಹಿಸುಕಿ, ಮಗಳಾಗಿರುವ ಮರಾಠಿಗೆ ತಾಯಿಯ ಪಟ್ಟವನ್ನು ಕಟ್ಟಲು ಹೆಣಗಾಡುತ್ತಾರೆ. ಅದು ಸಾಗದ ಕೆಲಸವೆಂಬ ಮಾತು ಬೇರೆ. ಹೇಗಿದ್ದರೂ "ಊರಿಗೆ ಅರಸನಾದರೂ ತಾಯಿಗೆ

ಮಗ" ಎಂಬ ಕನ್ನಡ ನಾಣ್ಣುಡಿಯನ್ನು ಅಂದರೆ ಮರಾಠಿಯು ಎಷ್ಟೇ ಬೆಳೆದಿದ್ದರೂ ಅದು ಕೊಂಕಣಿಯ ಮಗಳೆಂಬ ಸತ್ಯವನ್ನು ಮರಾಠಿಗರು ಎಷ್ಟು ಪ್ರಯಾಸ ಪಟ್ಟರೂ ಅಲ್ಲಗಳೆಯಲು ಸಾಧ್ಯವಿಲ್ಲ.

ಸಂಕ್ಷಿಪ್ತವಾಗಿ ಹೇಳುವುದಾದರೆ-ಯಾವ ಭಾಷೆಯನ್ನು ಇಂದು ಕೊಂಕಣಿ ಯೆಂದು ಕರೆಯಲಾಗುತ್ತಿದೆಯೊ ಅದು ಅತ್ಯಂತ ಪ್ರಾಚೀನವಾಗಿದ್ದು—ವೈದಿಕ. ಆದ್ಯಪ್ರಾಕೃತ, ಶೌರಸೇನೀ, ಹೊಸಪ್ರಾಕೃತ ಅಥವಾ ಮಹಾರಾಷ್ಟ್ರೀ ಎಂಬ ವಿಭೇದಗಳ ಇಂದಿನ ಪ್ರತಿನಿಧಿಯಾಗಿರುತ್ತದೆ. ಕಾಲಹಪ್ರವಾಹದೊಂದಿಗೆ ಸಾವಿ ರಾರು ವರ್ಷಗಳಿಗೆ ಮುಂದೆ ಹರಿದು ಬಂದಿರುವ ಇಂದಿನ ಕೊಂಕಣಿಯು ಬಹಳಷ್ಟು ಮಾರ್ಪಾಟುಗಳನ್ನು ಹೊಂದಿದ್ದರೂ, ಹಿಂದೆ ಹೇಳಿದ ನಾಲ್ಕೂ ವಿಭೇದಗಳ ಕೆಲವು ಲಕ್ಷಣಗಳು ಮತ್ತು ರೂಪಾಂತರಗಳು ಅದರಲ್ಲಿ ಇಂದಿಗೂ ಉಳಿದುಕೊಂಡಿವೆ. ಅಲ್ಲದೇ ಶಬ್ದಗಳು ರೂಪಾಂತರವಾದ ರೀತಿಯನ್ನು ಸ್ಪಷ್ಟ ವಾಗಿ ತಿಳಿಸುವಂಥ ಹಲವು ಶಬ್ದಗಳೂ ಅದರಲ್ಲಿ ಇವೆ. ಅದೇ ಕೊಂಕಣಿಯು ಮಧ್ಯಪ್ರದೇಶದಲ್ಲಿ-ಹಿಂದೀ ಮತ್ತು ಮುಂಡ ಭಾಷೆಗಳ ಪ್ರಭಾವಕ್ಕೊಳಗಾಗಿ ಮರಾಠಿಯಾಗಿ ಮಾರ್ಪಟ್ಟಿತು ಮತ್ತು ಅದರ ಗಾಳಿಯು ಗೋವದ ವರೆಗೆ ಬೀಸಿತು—ಅಂದರೆ ಕೆಲವು ಹಿಂದೀ ಶಬ್ದಗಳು ಕೊಂಕಣಿಯಲ್ಲಿಯೂ ಸೇರಿ ಕೊಂಡವು. ಅಂದರೆ ಮಧ್ಯಪ್ರದೇಶದ ಜನರು ನುಡಿಯತೊಡಗಿದ ಕೊಂಕಣಿಯೇ ಮರಾಠಿಯಾಗಿ ಮಾರ್ಪಟ್ಟಿತು. ಆದುದರಿಂದಲೇ ಕೊಂಕಣಿಯಲ್ಲಿ ಇಲ್ಲದ- ಬನ್ = ಆಗು; ಹೋ = ಆಗು ಮತ್ತು ಹುಟ್ಟು; ಬೋಲ್ = ನುಡಿ. ಜಾ = ಹೋಗು. ರಹ = ಇರು ಮೊದಲಾದ ಹಿಂದೀ ಕ್ರಿಯೆಗಳು ಹಾಗೂ ಕೊಂಕಣಿ ಅಲ್ಲದ ಪೋಟೆಂ = ತೋರ. ಮೊಟಪಂ = ಗಿಡ್ಡ ; ಲಾಂಬ = ಉದ್ದ ಮತ್ತು ದೂರ ಮುಂತಾದ ಹಿಂದೀ ಶಬ್ದಗಳು ಮರಾಠಿಯಲ್ಲಿ ಮತ್ತು ಗೋವದ ಕೊಂಕಣಿಯಲ್ಲಿ ಇರುವುದಾಗಿದೆ.

ಮರಾಠಿಯಲ್ಲಿರುವ ನೂರಾರು ಕ್ರಿಯಾಪದಗಳು ಮತ್ತು ಶಬ್ದಗಳು ಸಂಸ್ಕೃತ ಮೂಲದವುಗಳಲ್ಲ: ಮತ್ತು ಅವುಗಳು ಯಾವ ಮೂಲದವುಗಳೆಂದು ಎಂಥ ನಿಪುಣನಾದ ಭಾಷಾವಿಜ್ಞಾನಿಯಿಂದಲೂ ನಿರ್ಧರಿಸಲು ಸಾಧ್ಯವಿಲ್ಲವೆನ್ನ ಬಹುದು. ಹಾಗಾಗಿಯೇ ಕೆಲವರು ಮರಾಠಿಯನ್ನು ಬಹಳ ಪ್ರಾಚೀನ ಭಾಷೆ ಯಾಗಿರಬೇಕೆಂದು ಹೇಳಲು ಕಾರಣವಾಗಿತ್ತು. ಅಂದರೆ ಆ ಪದಗಳಿಗೆ ಕನ್ನಡ ವಲ್ಲಾಗಲೀ ಸಂಸ್ಕೃತವಲ್ಲಾಗಲೀ ಮೂಲವು ದೊರೆಯುವುದಿಲ್ಲ. ಮುಂಡ ಭಾಷೆಗಳಲ್ಲಿ ದೊರೆಯಬಹುದೆಂದು ತೋರುತ್ತದೆ. ಆಚಾರ್ಯ ರಾಮಕೃಷ್ಣ

ಗೋಪಾಳ ಭಾಂಡಾರ್ಕರ್ ಅವರ ಅಭಿಪ್ರಾಯದಲ್ಲಿ ಅನ್ಯಭಾಷೆಯಾಡುವ ಜನರ ಬಾಯಲ್ಲಿ ಸಿಕ್ಕಿದ ಸಂಸ್ಕೃತ ಶಬ್ದಗಳು ಆ ರೀತಿಯಲ್ಲಿ ಹೊಲಬರಿಯಲಾಗದಂತೆ ರೂಪುಗೆಟ್ಟಿದ್ದವೆಂದಿರುತ್ತದೆ.[1] ಅದಕ್ಕಿಂತಲೂ—ಅನ್ಯಭಾಷೆಯ ಜನರು ಸಂಸ್ಕೃತ ಜನ್ಯ ಭಾಷೆಗಳನ್ನು ನುಡಿಯತೊಡಗಿದುದರಿಂದ, ಅವರ ಮೂಲಭಾಷೆಯ ಶಬ್ದಗಳು ಸಂಸ್ಕೃತ ಜನ್ಯ ಶಬ್ದಗಳೊಂದಿಗೆ ಕೂಡಿ, ಕಾಲಕ್ರಮೇಣ ಪ್ರಾಕೃತ ಶಬ್ದಗಳಂತಾದವೆನ್ನುವುದು ಸರಿಯಾದೀತು. ಅಂದರೆ ಆ ಜನರು ಪ್ರಾಕೃತಭಾಷೆಯನ್ನು ಆಡತೊಡಗಿದುದರಿಂದ ಅವರಿಗೆ ತಮ್ಮ ಮೂಲಭಾಷೆಯ ಸಂಬಂಧವು ತಪ್ಪಿಹೋಗುವುದು ಸ್ವಾಭಾವಿಕವಾಗಿತ್ತು. ಮತ್ತು ಅಂಥ ಸಂಬಂಧವು ತಪ್ಪಿದುದರಿಂದ ಆ ಶಬ್ದಗಳು ವಿಕೃತವಾದವೆಂದು ಹೇಳುವುದೇ ಸಮರ್ಪಕವಾಗಿದೆ. ಆದುದರಿಂದ ಮರಾಠಿಯಲ್ಲಿ ಕನ್ನಡ ಶಬ್ದಗಳ ಸಂಖ್ಯೆಯು ಸಾಕಷ್ಟು ಇದ್ದರೂ, ಅವುಗಳು ಹೆಚ್ಚಿನ ಮಾರ್ಪಾಟುಗಳಿಗೆ ಒಳಗಾಗದಿರುವುದನ್ನು ಕಾಣುವಾಗ—ಮರಾಠಿಯಲ್ಲಿರುವ ಮೂಲ ಕಂಡುಕೊಳ್ಳಲು ಕಠಿನವಾಗಿರುವ ಶಬ್ದಗಳು–ಮಹಾರಾಷ್ಟ್ರದ ಉತ್ತರಗಡಿಗೆ ಹೊಂದಿಕೊಂಡಿರುವ—ಮಧ್ಯಪ್ರದೇಶದ ಮೂಲ ನಿವಾಸಿಗಳಾದ ಮುಂಡಜನರ ಭಾಷೆಗಳಿಂದಲೇ ಬಂದಿರುವ ಸಂಭವವು ಹೆಚ್ಚಾಗಿದೆ. ಹಾಗೆಯೇ ಮಹಾರಾಷ್ಟ್ರಕ್ಕೆ ಪಶ್ಚಿಮದಲ್ಲಿ ಗುಜರಾತವೂ ಹತ್ತಿಕೊಂಡಿರುವುದರಿಂದ ಮರಾಠಿಯಲ್ಲಿ ಗುಜರಾತೀ ಶಬ್ದಗಳ ಸಂಖ್ಯೆಯೂ ಸಾಕಷ್ಟಿದೆ. ತಾತ್ಪರ್ಯವೇನೆಂದರೆ ನಾನಾ ಭಾಷಾವರ್ಗದ ಶಬ್ದಗಳನ್ನು ತನ್ನಲ್ಲಿ ಅಳವಡಿಸಿಕೊಂಡು ಮೊದಲು–ಕೊಂಕಣಿಯಲ್ಲಿ ಓಕಾರಾಂತವಾಗಿದ್ದ ಪುಲ್ಲಿಂಗ ನಾಮಪದಗಳು ಹಿಂದೀ ಭಾಷೆಯ ಪ್ರಭಾವದಿಂದಾಗಿ ಆಕಾರಾಂತವಾಗಿ ಮಾರ್ಪಟ್ಟು ಬಳಕೆಗೆ ಬಂದ ಭಾಷೆಯೇ ಇಂದಿನ–ಮರಾಠಿಯಾಗಿರುತ್ತದೆ.

ಕೊಂಕಣಿ ಮತ್ತು ಮರಾಠಿಗಳಲ್ಲಿ ಪ್ರಾಚೀನವಾದುದು ಯಾವುದೆಂದು ನಿರ್ಣಯಿಸುವಲ್ಲಿ ಭಾರತೀಯ ಭಾಷಾವಿದರು ಭಾಷೆಗಳಲ್ಲಾದ ಮಾರ್ಪಾಟುಗಳನ್ನು ಆಯಾಕಾಲದಲ್ಲಿ ಕಂಡುಹಿಡಿದು, ಆ ಮಾರ್ಪಾಟುಗಳು ತಲೆದೋರಿದ ಪ್ರದೇಶದ. ಇಲ್ಲವೇ ನುಡಿಯುತ್ತಿರುವ ಜನರ ಹೆಸರನ್ನು ಆ ವಿಭೇದಕ್ಕೆ ಕೊಟ್ಟು ಬರೆದಿಟ್ಟ ವ್ಯಾಕರಣಗ್ರಂಥಗಳು ಬಹಳ ನೆರವನ್ನು ನೀಡುತ್ತವೆ. ಭಾರತೀಯ

1. The extensive corruption of Sanskrit sounds, therefore must be accounted for, by the supposition that the language had to be spoken by races whose original tongue it was not. p. 4. Early History of the Deccan.

ಇತಿಹಾಸಕ್ಕೆ ಸಂಬಂಧಪಟ್ಟ ಘಟನೆಗಳ ಕಾಲನಿರ್ಣಯಕ್ಕೆ ಭಗವಾನ್ ಬುದ್ಧನ ಜನ್ಮಕಾಲ ಕ್ರಿ.ಪೂ. 567 ಮತ್ತು ಮಹಾ ನಿರ್ವಾಣಕಾಲ ಕ್ರಿ.ಪೂ. 487 ಒಂದು ದೃಢವಾದ ಮಾನಸ್ತಂಭವಾಗಿರುವಂತೆಯೇ ವ್ಯಾಕರಣಾಚಾರ್ಯನಾದ ಮಹರ್ಷಿ ಪಾಣಿನಿಯ ಜನ್ಮ ಮತ್ತು ಅವಸಾನ ಕಾಲವು ಕ್ರಿ.ಪೂ. 490-410 ಎಂಬುದು ಭಾಷೆಯ ಇತಿಹಾಸವನ್ನು ತಿಳಿಯಲು ಒಂದು ಆಧಾರಸ್ತಂಭವಾಗಿರುತ್ತದೆ.

ಆಚಾರ್ಯಪಾಣಿನಿಯ ಕಾಲದಲ್ಲಿ, ಅವನು ಯಾವ ಭಾಷೆಯ ವ್ಯಾಕರಣವನ್ನು ರಚಿಸುತಲಿದ್ದನೊ. ಆ ಭಾಷೆಯ ಹೊರತಾಗಿ ಬೇರೆ ಭಾಷೆಯು ಆರ್ಯವರ್ಗದ ಜನರಲ್ಲಿ ಬಳಕೆಯಲ್ಲಿರಲಿಲ್ಲವೆಂದು ಅವನು ಅನೇಕಸರ್ತಿ ತನ್ನ ವ್ಯಾಕರಣದಲ್ಲಿ "ಭಾಷಾಯಾಮ್" ಅಂದರೆ "ಭಾಷೆಯಲ್ಲಿ" ಎಂಬ ಶಬ್ದದ ಪ್ರಯೋಗ ಮಾಡಿರುವುದರ ಮೇಲಿಂದ ಸಿದ್ಧವಾಗುತ್ತದೆ. ಮಾತ್ರವಲ್ಲದೇ ಪಾಣಿನಿಯ ಕಾಲದಲ್ಲಿ ಭಾಷೆಗೆ ಯಾವುದೊಂದು ಹೆಸರು ಇರಲಿಲ್ಲವೆಂದು ಕೂಡ ಸಿದ್ಧವಾಗುತ್ತದೆ. ಉದಾ:-**ಭಾಷಾಯಾಂ ಸದವಸಶ್ರುವಃ ॥ ೩-೨-೧೦೮ ॥ ಸಖ್ಯಶಿಶ್ವೀತಿ ಭಾಷಾಯಾಮ್ ॥ ೪-೧-೬೨ ॥ ಪೂರ್ವಂತು ಭಾಷಾಯಾಮ್ ॥ ೮-೨-೯೮ ॥ ಇತ್ಯಾದಿ.** ಆಚಾರ್ಯಪಾಣಿನಿಯು "ಭಾಷೆಯಲ್ಲಿ" ಎಂದು ಹೇಳಿದುದರ ಮುಖ್ಯ ಕಾರಣವೇನೆಂದರೆ ಪದ್ಯಗಳಲ್ಲಿ ಛಂದೋನಿಯಮಗಳನ್ನು ಪಾಲಿಸಬೇಕಾಗಿರುವುದರಿಂದ, ಅಂದರೆ ವರ್ಣಗಳ ಸಂಖ್ಯೆ ಮತ್ತು ಗಣಗಳ ವ್ಯವಸ್ಥೆಯನ್ನು ಕಾಪಾಡಬೇಕಾಗಿರುವುದರಿಂದ ಒಮ್ಮೊಮ್ಮೆ ವ್ಯಾಕರಣ ನಿಯಮಗಳನ್ನು ಮುರಿಯಬೇಕಾಗುತಿತ್ತು. ಅಂದರೆ ವ್ಯಾಕರಣ-ನಿಯಮದ ಭಂಗವಾಗುತಿತ್ತು. ಅಂಥ ಭಂಗವು ಅಪವಾದವೇ ಹೊರತು ಸಾಮಾನ್ಯನಿಯಮವಾಗಲಾರದು. ಆದುದರಿಂದ ಆಚಾರ್ಯನು ಸಾಮಾನ್ಯ ನಿಯಮಗಳನ್ನು ಹೇಳುವಾಗ "ಭಾಷಾಯಾಮ್ ಎಂದು ಹೇಳಿ ಅಪವಾದಗಳನ್ನು "ಛಂದಸಿ" = ಛಂದಸ್ಸುಗಳಲ್ಲಿ = ಪದ್ಯದಲ್ಲಿ ಎಂದೂ "ಛಂದಸಿ ಬಹುಲಮ್" ಪದ್ಯದಲ್ಲಿ ನಾನಾ ರೀತಿಯಾಗುತ್ತದೆಂದೂ ಹೇಳಿದ್ದಾನೆ. ಅವನು ವೇದದಲ್ಲಿ ಎಂದು ಹೇಳದೇ ಛಂದಸ್ಸಿನಲ್ಲಿ ಎಂದು ಹೇಳಿದುದು ಬಹಳ ಮಹತ್ವವುಳ್ಳುದಾಗಿದೆ. ಏಕೆಂದರೆ ಹಾಗೆ ಹೇಳಿದುದರ ಅರ್ಥವು ವೇದಗಳ ಭಾಷೆ ಮತ್ತು ಅವನ ಕಾಲದಲ್ಲಿ ಬಳಕೆಯಲ್ಲಿದ್ದ ಭಾಷೆಯು ಒಂದೇಯಾಗಿದ್ದಿತೆಂದು ಸೂಚಿಸುವುದರೊಂದಿಗೆ. ಭಾಷಾಯಾಮ್-ಎಂಬುದರ ಅರ್ಥವು ಗದ್ಯದಲ್ಲಿ ಎಂತಲೂ. ಛಂದಸಿ ಎಂಬುದರ ಅರ್ಥವು ಪದ್ಯದಲ್ಲಿ ಅಥವಾ ವೇದ ಮಂತ್ರಗಳಲ್ಲಿ ಎಂದುಕೂಡ ಸೂಚಿಸುತ್ತದೆ. ಅರ್ಥಾತ್ ಪಾಣಿನಿಯವ್ಯಾಕರಣವು ಅವನ ಕಾಲದಲ್ಲಿ ಬಳಕೆಯಲ್ಲಿದ್ದ ಭಾಷೆಯ-ಅಂದರೆ ಹಿಂದಿನಿಂದ ಸಾಗಿ ಬಂದಿದ್ದ

ವೈದಿಕಸಾಹಿತ್ಯದ ಭಾಷೆಯ—ನಿಯಮಗಳನ್ನು ನಿರ್ಧರಿಸುವ ಸಲುವಾಗಿಯೇ ನಿರ್ಮಿಸಲ್ಪಟ್ಟಿದ್ದಿತೆಂದು ಸಿದ್ಧವಾಗುತ್ತದೆ. ಮತ್ತು ವೇದಗಳಲ್ಲಿನ ಬ್ರಾಹ್ಮಣ ಭಾಗವು—ಗದ್ಯರೂಪದಲ್ಲಿರುವುದರಿಂದ–"ಭಾಷಾ" ಎಂಬುದರ ಅರ್ಥ–"ಗದ್ಯ" ಮತ್ತು "ಛಂದಸ್" ಎಂಬುದರ ಅರ್ಥ "ಪದ್ಯ" ಎಂಬುದಾಗಿ ನಿರ್ಧರಿಸಿದುದು ಸರಿಯಾದುದೆಂದೂ ಸಿದ್ಧವಾಗುತ್ತದೆ.

ಭಗವಾನ್ ಬುದ್ಧನ ಯಜ್ಞವಿರೋಧೀ ಪ್ರಚಾರದಿಂದಾಗಿ, ಆಚಾರ್ಯ ಪಾಣಿನಿಯ ಕಾಲದಲ್ಲಿ ವೇದಗಳ ಅಧ್ಯಯನವು ಶಿಥಿಲವಾಗತೊಡಗಿದುದರಿಂದ, ಭಾಷೆಯು ಅನಿಯಂತ್ರಿತವಾಗಿ ಹಾಳಾಗಿ ಹೋಗುವ ಪರಿಸ್ಥಿತಿಯು ಬಂದಿರಲೂ ಬಹುದು. ಮತ್ತು ಅದನ್ನು ನಿಯಂತ್ರಿಸುವ ಸಲುವಾಗಿಯೇ ಅವನು ತನ್ನ ವ್ಯಾಕರಣವನ್ನು ರಚಿಸಿರಲೂ ಬಹುದು. ಆದರೆ ಅವನ ಕಾಲದಲ್ಲಿ ವೇದಗಳ ಭಾಷೆಯ ಹೊರತು ಬೇರೆ ಭಾಷೆಯು ಬಳಕೆಯಲ್ಲಿದ್ದಿತೆಂದು ಹೇಳಲು ಯಾವುದೊಂದು ಪ್ರಮಾಣವೂ ಇಲ್ಲ. ಮತ್ತು ಪಾಶ್ಚಿಮಾತ್ಯ ವಿದ್ವಾಂಸರ ಕಲ್ಪನೆಗಳಿಗೆ ಬುಡವೂ ಇಲ್ಲ. ಆಚಾರ್ಯಪಾಣಿನಿಯು ಬಹಳ ಪರಿಶ್ರಮದಿಂದ ಅಷ್ಟು ವಿಶಾಲವಾದ ವ್ಯಾಕರಣವನ್ನು ರಚಿಸಿದ್ದನಾದರೂ ಅವನ ತರುವಾಯ ಯಜ್ಞವಿರೋಧಿಗಳಾದ ಜೈನರು ಮತ್ತು ಬೌದ್ಧರು ಬಲಗೊಂಡು–ಅವರು ತಮ್ಮ ಧಾರ್ಮಿಕ ಗ್ರಂಥಗಳ ರಚನೆಗೆ ಶುದ್ಧ ವೇದಭಾಷೆಯನ್ನು ಬಳಸದೇ ಅದನ್ನು ತುಸು ರೂಪಾಂತರಿಸಿ ಬಳಸ ತೊಡಗಿದುದರಿಂದ—ವೇದಭಾಷೆಯಲ್ಲೊಂದು ಹೊಸ ಕವಲು ಹುಟ್ಟಿತು. ಮತ್ತು ಮಥುರಾ ಮತ್ತು ಅದರ ಸುತ್ತಮುತ್ತಲೆಲ್ಲಾ ಬಳಕೆಗೆ ಬಂತು. ಏಕೆಂದರೆ ಆ ಕಾಲದಲ್ಲಿ ಮಥುರಾ ಪಟ್ಟಣವು ಬೌದ್ಧಧರ್ಮದ ಕೇಂದ್ರವಾಗಿದ್ದು, ಅಲ್ಲಿನ ಹಲವು ಮಂದಿ ವಿದ್ಯಾವಂತರಾದ ಬ್ರಾಹ್ಮಣರು ಬೌದ್ಧಮತವನ್ನು ಸ್ವೀಕರಿಸಿದ್ದರು. ಅವರು ಆ ಹೊಸ ಭಾಷೆಯಲ್ಲಿ ಬುದ್ಧನ ಪ್ರವಚನಗಳನ್ನು ಬರೆದು ಸಂಗ್ರಹಿಸಿದ್ದರು. ಬುದ್ಧದೇವನ ಜೀವಿತಕಾಲದಲ್ಲಿಯೇ, ವೇದಭಾಷೆಯು ಕವಲೊಡೆದಿತ್ತೆಂತಲೂ, ಬುದ್ಧದೇವನು—ಜನಸಾಮಾನ್ಯರ ಭಾಷೆಯಾಗಿದ್ದ—ಮಾಗಧಿಯಲ್ಲೊ, ಅರ್ಧಮಾಗಧಿಯಲ್ಲೊ ತನ್ನ ಪ್ರವಚನಗಳನ್ನು ನಡಿಸುತಿದ್ದನೆಂದೂ ಕೆಲವು ಪಾಶ್ಚಿಮಾತ್ಯ ವಿದ್ವಾಂಸರ ಅಭಿಪ್ರಾಯವಿದೆ. ಆದರೆ ಅವರ ಅಭಿಪ್ರಾಯವು ಬರಿಯ ಕಲ್ಪನೆಯಾಗಿರುತ್ತದೆಯೇ ಹೊರತು ಪ್ರಮಾಣಗಳಿಂದ ಪೋಷಿತವಾಗಿಲ್ಲ.

ಆಚಾರ್ಯಪಾಣಿನಿಗಿಂತ ಮೊದಲು ವೇದಭಾಷೆಯು ಕವಲೊಡೆದಿದ್ದುದಾದರೆ, ಅವನು ತನ್ನ ವ್ಯಾಕರಣದಲ್ಲಿ ಅದರ ಉಲ್ಲೇಖವನ್ನು ಮಾಡದಿರುತಿರ

ಲಿಲ್ಲ. ಬುದ್ಧದೇವನ ಪ್ರವಚನಗಳನ್ನು ಬರೆದು ಸಂಗ್ರಹಿಸಲು ಬಳಸಿದ ಭಾಷೆಯು ವೇದಗಳ ಭಾಷೆಗೆ ಬಹಳ ಸಮೀಪವಾಗಿದ್ದುದರಿಂದ ಆ ಕಾಲದಲ್ಲಿ ಅದಕ್ಕೆ ಯಾವುದೊಂದು ಹೆಸರು ಬಂದಿದ್ದಿತೆಂದು ಹೇಳಲು ಆಧಾರಗಳು ದೊರೆಯುವುದಿಲ್ಲ. ಪಾಶ್ಚಾತ್ಯ ವಿದ್ವಾಂಸರು ಬುದ್ಧದೇವನ ಪ್ರವಚನಗಳ ಭಾಷೆಯನ್ನು "ಪಾಲಿ" ಎಂದು ಕರೆದಿದ್ದಾರೆ. ಆದರೆ ಆ "ಪಾಲಿ" ಎಂಬ ಶಬ್ದದ ಅರ್ಥದ ಬಗ್ಗೆ ವಿದ್ವಾಂಸರಲ್ಲಿ ಏಕಾಭಿಪ್ರಾಯವಿಲ್ಲ. ಆದುದರಿಂದ ಕೆಲವುಮಂದಿ ಭಾರತೀಯ ವಿದ್ವಾಂಸರು ಬುದ್ಧದೇವನ ಪ್ರವಚನಗಳ ಭಾಷೆಯನ್ನು ಪ್ರಾಚೀನ ಪ್ರಾಕೃತವೆಂದು[1] ಕರೆದಿದ್ದಾರೆ. ಅಂದರೆ ಬುದ್ಧದೇವನ ಪ್ರವಚನಗಳು ಯಾವ ಭಾಷೆಯಲ್ಲಿ ಬರೆಯಲ್ಪಟ್ಟಿವೆಯೋ ಆ ಭಾಷೆಯು ವೇದಭಾಷೆಯಲ್ಲಿ ಒಡೆದ ಮೊತ್ತಮೊದಲಿನ ಕವಲಾಗಿರುತ್ತದೆ. ಅದರ ತರುವಾಯ, ಅದರಿಂದಲೇ ತುಸು ರೂಪಾಂತರವಾಗಿ ಬೇರೊಂದು ಕವಲು ಹೊರಟಿತು. ಆ ರೂಪಾಂತರವು ಶೂರಸೇನ ರಾಜ್ಯದಲ್ಲಿ ಅಂದರೆ ಮಥುರಾ, ವೃಂದಾವನ ಮತ್ತು ಅದರ ಸುತ್ತಮುತ್ತಲಿನ ಪ್ರದೇಶದಲ್ಲಿ ತಲೆದೋರಿತ್ತು. ಆದುದರಿಂದ ಆ ಹೊಸ ಕವಲಿಗೆ ಶೌರಸೇನೀ ಎಂಬ ಹೆಸರು ಬಂದಿತು. ಆ ಹೊಸಕವಲು–ವೇದಗಳ ಭಾಷೆಯಿಂದ ತುಂಬಾ ರೂಪಾಂತರಗಳನ್ನು ಹೊಂದಿತ್ತು. ಮುಂದೆ ಶೂರಸೇನ ಪ್ರಾಂತವು ವ್ರಜಮಂಡಲವೆಂದು ಪ್ರಸಿದ್ಧಿಗೆ ಬಂತು.

ಶೌರಸೇನೀ ವಿಭೇದದ ತರುವಾಯ ಅದರಿಂದಲೇ ಕೆಲವು ಮಾರ್ಪಾಟುಗಳಿಗೊಳಗಾಗಿ "ಮಾಗಧೀ" ಎಂಬ ಮೂರನೆಯ ಕವಲೊಡೆಯಿತು. ಅದು ಮಗಧದೇಶದಲ್ಲಿ ಬಳಸಲ್ಪಡುತಿತ್ತು. ಶೌರಸೇನಿಯಿಂದ–ಬಹಳಷ್ಟು ಮಾರ್ಪಾಟುಗಳನ್ನು ಹೊಂದಿ ಬಳಕೆಗೆ ಬಂದ ಬೇರೊಂದು ಕವಲು "ಪೈಶಾಚಿ" ಎಂಬ ಹೆಸರಿನಿಂದ ಭಾರತವರ್ಷದ ವಾಯುವ್ಯ ಪ್ರದೇಶದ–ನಿಮ್ನವರ್ಗದವರಲ್ಲಿ ಬಳಸಲ್ಪಡುತಿತ್ತು. ಶೌರಸೇನಿಯು ಮಾತಾಡುವ ಅಥವಾ ಗದ್ಯದ ಭಾಷೆಯಾಗಿದ್ದಿತು. ಕ್ರಮೇಣ ಅದನ್ನು ಕಾವ್ಯಗಳಲ್ಲಿಯೂ ಬಳಸತೊಡಗಿದರು. ಆಗ ಕವಿಗಳು ಅದರಲ್ಲಿ ಕೆಲವು ಹೊಸ ಮಾರ್ಪಾಟುಗಳನ್ನು ಮಾಡಿದರು. ಅಂದರೆ—ಶಬ್ದಗಳಲ್ಲಿನ ಕೆಲವು ವ್ಯಂಜನಗಳನ್ನು ಲೋಪಮಾಡಿ ಅವುಗಳಲ್ಲಿನ ಸ್ವರಗಳನ್ನು ಮಾತ್ರ

---

1. ಪಾಲೀಭೀ ಪ್ರಾಕೃತಕೇ ಅಂದರಹೀ ಆತೀ ಹೈ. ಇಸೇ ಪ್ರಾಚೀನ ಪ್ರಾಕೃತ ಕಹತೇ ಹೈಂ. ಪ್ರಾಕೃತ ವ್ಯಾಕರಣ (ಹಿಂದಿ) ಪುಟ 4. ಆಚಾರ್ಯ ಮಧುಸೂದನ ಪ್ರಸಾದ ಮಿಶ್ರ. ಎಮ್. ಎ.

ಉಳಿಸತೊಡಗಿದರು. ಏಕೆಂದರೆ ಹಾಗೆ ಮಾಡುವುದರಿಂದ ಅವರ ಕವಿತಾ ಚಾತುರ್ಯವನ್ನು ಶ್ಲೇಷಗಳ ಮೂಲಕ ವ್ಯಕ್ತಗೊಳಿಸುವುದು ಸುಲಭವಾಗುತಿತ್ತು. ಅಂದರೆ ಶಬ್ದಗಳಲ್ಲಿನ ವ್ಯಂಜನಗಳನ್ನು ಲೋಪಮಾಡಿ ಅವುಗಳಲ್ಲಿನ ಸ್ವರಗಳನ್ನು ಮಾತ್ರ ಉಳಿಸಿದರೆ ಕೆಲವೊಮ್ಮೆ ಹಲವು ಶಬ್ದಗಳ ರೂಪವು ಒಂದೇಯಾಗಿರುತಿತ್ತು. ಉದಾ:—ಗತ: = ಹೋದನು; ಗಜ: = ಆನೆ, ಗಯ: = "ಗಯ" ಎಂಬ ಹೆಸರಿನ ಮನುಷ್ಯ, ಎಂಬ ಮೂರು ಶಬ್ದಗಳೂ—ಆ ಹೊಸ ವಿಭೇದದಲ್ಲಿ "ಗಓ" ಇಲ್ಲವೇ "ಗಯೋ" ಎಂಬ ಒಂದೇ ರೂಪವನ್ನು ತಾಳುತಿದ್ದವು. ಈ ವಿಭೇದಗಳೆಲ್ಲವೂ ಬಳಕೆಗೆ ಬಂದ ತರುವಾಯ, ಅವುಗಳನ್ನು ವಿವರಿಸಲು ವ್ಯಾಕರಣ ಗ್ರಂಥಗಳು ಹುಟ್ಟಿದವು. ಕಟ್ಟಕಡೆಯಲ್ಲಿ ವಿವರಿಸಿದ ಹೊಸ ವಿಭೇದವನ್ನು ವ್ಯಾಕರಣಕಾರರು "ಪ್ರಾಕೃತ" ಎಂಬ ಹೆಸರಿನಿಂದ ಕರೆದಿದ್ದಾರೆ. ಆ ತರುವಾಯದಿಂದ ವೇದಗಳ ಭಾಷೆಯನ್ನು "ಸಂಸ್ಕೃತ" ಎಂದೂ ಆ ಭಾಷೆಯಿಂದ ರೂಪಾಂತರವಾಗಿ ಹುಟ್ಟಿದ ವಿಭೇದಗಳನ್ನು "ಪ್ರಾಕೃತ"ವೆಂಬ ಸಾಮಾನ್ಯ ಹೆಸರಿನಿಂದಲೂ ಕರೆಯುತೊಡಗಿದರು. ಪ್ರಾಕೃತ ವ್ಯಾಕರಣಕಾರರ ಮತದಂತೆ "ಪ್ರಾಕೃತ" ಎಂಬ ಶಬ್ದದ ಅರ್ಥವು "ಪ್ರಕೃತಿ"ಯು ಅಂದರೆ ಮೂಲವು "ಸಂಸ್ಕೃತ"ವಾಗಿದ್ದು ಅದರಿಂದ ರೂಪಾಂತರವಾದ ಭಾಷೆಯೆಂದಿರುತ್ತದೆ. ಮತ್ತು ಅದು ಸರಿಯಾಗಿಯೂ ಇದೆ.

ಹಿಂದೆ ವಿವರಿಸಿದ ರೀತಿಯಲ್ಲಿ ಭಾಷೆಯ ರೂಪವು ಕಾಲಕಾಲಕ್ಕೆ ಪರಿವರ್ತಿತವಾಗುತ್ತ ಹೋದಹಾಗೆ, ಆ ಪರಿವರ್ತನೆಯು ಯಾವ ಪ್ರದೇಶದಲ್ಲಿ ಘಟಿಸಿದ್ದಿತೋ, ಆ ಪ್ರದೇಶದ ಹೆಸರು ಆ ಪರಿವರ್ತಿತ ರೂಪಕ್ಕೆ ಬಂದಿತು. ಇಂಥ ಹೆಸರುಗಳು ಪ್ರಾಕೃತ ವ್ಯಾಕರಣ ಗ್ರಂಥಗಳಲ್ಲಿ ಸಾಧಾರಣ ಇಪ್ಪತ್ತೇಳು ಇವೆ. ಆದರೆ ಅವೆಲ್ಲವುಗಳ ವಿವರವು ನಮಗೆ ಬೇಕಾಗಿಲ್ಲ. ಆದುದರಿಂದ ಅವುಗಳಲ್ಲಿ ಮುಖ್ಯವಾದ 1. ಪ್ರಾಚೀನ ಪ್ರಾಕೃತ. 2. ಶೌರಸೇನೀ. 3. ಮಾಗಧೀ. 4. ಪೈಶಾಚೀ. 5. ಪ್ರಾಕೃತ. 6. ಅಪಭ್ರಂಶ. 7. ಆವಂತಿ, 8. ಢಕ್ಕ ಮತ್ತು 9. ಚಾಂಡಾಲೀಗಳೆಂಬ ಒಂಭತ್ತು ವಿಭೇದಗಳ ಕುರಿತು ಮಾತ್ರ ಆವಶ್ಯಕವಿರುವ ಕೆಲವು ವಿಷಯಗಳನ್ನು ಈ ಲೇಖದಲ್ಲಿ ಚರ್ಚಿಸಲಾಗುವುದು. ಅಂಥ ಪ್ರಾಕೃತ ವಿಭೇದಗಳನ್ನು ವಿವರಿಸುವ ವ್ಯಾಕರಣ ಗ್ರಂಥಗಳು ಹಲವು ಇವೆಯಾದರೂ, ನಾನು ಈ ಪ್ರಬಂಧದ ನೆರವಿಗಾಗಿ ಒಂದರಿಂದ ಇನ್ನೊಂದಕ್ಕೆ ಸಾಧಾರಣ ಏಳು ನೂರು ವರ್ಷಗಳ ಅಂತರವಿರುವ ಮೂರು ವ್ಯಾಕರಣ ಗ್ರಂಥಗಳನ್ನು ಆರಿಸಿದ್ದೇನೆ. ಅವುಗಳ ಹೆಸರುಗಳು ಮುಂದಿನಂತಿವೆ.—1. ಆಚಾರ್ಯಕಾತ್ಯಾಯನನ

"ಸುಸಂಧಿಕಲ್ಪ" 2. ಆಚಾರ್ಯವರರುಚಿಯ "ಪ್ರಾಕೃತಪ್ರಕಾಶ" ಮತ್ತು 3. ಆಚಾರ್ಯಸಿದ್ಧಹೇಮಚಂದ್ರಸೂರಿಯ "ಪ್ರಾಕೃತ" ಅಧ್ಯಾಯ.

1. ಆಚಾರ್ಯ ಕಾತ್ಯಾಯನ, ಅಥವಾ ಕಾಚ್ಚಾಯನ. ಇವನು ಬರೆದ "ಸುಸಂಧಿಕಪ್ಪ" ಎಂಬ ಪ್ರಾಕೃತ ವ್ಯಾಕರಣ ಗ್ರಂಥದೊಳಗೆ ಬಂದಿರುವ ಉದಾಹರಣೆಗಳ ಮೇಲಿಂದ ಇವನು ಮೌರ್ಯಚಕ್ರವರ್ತಿ ಅಶೋಕನ ಕಾಲದವನೆಂದು ತಿಳಿದುಬರುತ್ತದೆ. ಕೆಲವರು ಇವನನ್ನು ಬುದ್ಧದೇವನ ಪ್ರಿಯ ಶಿಷ್ಯರಲ್ಲಿ ಒಬ್ಬನೆಂದು ಹೇಳಿದುದೂ ಉಂಟು. ಆದರೆ ವ್ಯಾಕರಣ ಗ್ರಂಥದಲ್ಲಿ ಸಿಂಹಳದ ಅರಸನಾಗಿದ್ದ "ದೇವಾನಾಂ ಪಿಯತಿಸ್ಸ" ಎಂಬ ಹೆಸರು ಬಂದಿರುವುದರಿಂದ ಆಚಾರ್ಯ ಕಾತ್ಯಾಯನನು, ಅಶೋಕಚಕ್ರವರ್ತಿಯ ಸಮಕಾಲಿಕನೆಂದಾಗಲೀ ಅವನ ತರುವಾಯದವನೆಂದಾಗಲೀ ಹೇಳಲೇಬೇಕಾಗುತ್ತದೆ. ಅಂದರೆ ಚಕ್ರವರ್ತಿ ಅಶೋಕನ ಕಾಲವು ಕ್ರಿಸ್ತಪೂರ್ವ 274ರಿಂದ 237ರ ವರೆಗೂ ದೇವಾನಾಂಪಿಯತಿಸ್ಸನ ಕಾಲವು ಕ್ರಿ.ಪೂ. 247ರಿಂದ 207ರ ವರೆಗೆ ಆಗಿರುತ್ತದೆ. ವ್ಯಾಕರಣದೊಳಗೆ ಬಂದಿರುವ ಅಧಿಕಾಂಶ ಉದಾಹರಣೆಗಳು ವರ್ತಮಾನ ಕಾಲದಲ್ಲಿರುವುದರ ಮೇಲಿಂದ ಕಾತ್ಯಾಯನನ ಕಾಲವು ಕ್ರಿ.ಪೂ. 270ರಿಂದ 210ರ ವರೆಗಿರಬಹುದೆಂದು ನಿರ್ಧರಿಸಿದರೆ ತಪ್ಪಾಗಲಾರದು. ಅಲ್ಲದೇ ಆ ವ್ಯಾಕರಣದಲ್ಲಿನ ಉದಾಹರಣೆಗಳ ಮೇಲಿಂದ ಕಾತ್ಯಾಯನನು ಮಥುರಾ ಪಟ್ಟಣದ ನಿವಾಸಿಯಾಗಿದ್ದನೆಂದು ತಿಳಿಯಬೇಕಾಗುತ್ತದೆ.

ಕಾತ್ಯಾಯನನು ತನ್ನ ವ್ಯಾಕರಣ–ಸೂತ್ರಗಳನ್ನು ಬುದ್ಧದೇವನ ಪ್ರವಚನಗಳನ್ನು ಬರೆದಿಟ್ಟ ಭಾಷೆಯಲ್ಲಿಯೇ ರಚಿಸಿದ್ದಾನಲ್ಲದೇ ಆ ಸೂತ್ರಗಳ ಪ್ರಯೋಗಗಳನ್ನು ಉದಾಹರಣೆಗಳ ಮೂಲಕ ತೋರಿಸಿ ಟೀಕಾ-ವ್ಯಾಖ್ಯಾನಗಳನ್ನು ಬರೆದಿದ್ದಾನೆ. ಆ ವ್ಯಾಕರಣದಲ್ಲಿ–1. ಸಂಧಿಕಪ್ಪ; 2. ನಾಮಕಪ್ಪ; 3. ಕಾರಕಕಪ್ಪ. 4. ಸಮಾಸಕಪ್ಪ; 5. ತದ್ಧಿತಕಪ್ಪ; 6. ಆಖ್ಯಾತಕಪ್ಪ; 7. ಕಿತ ಅಥವಾ ಕಿಬ್ಬಿಧಾನಕಪ್ಪ ಎಂಬುದಾಗಿ ಏಳು ಕಲ್ಪಗಳಿವೆ. ಈ ಗ್ರಂಥದ ಮಂಗಲಾಚರಣ– ಪದ್ಯದಲ್ಲಿ "ವಕ್ಖಾಮಿ ಸುತ್ತಹಿತಂ ಏತ್ಥ ಸುಸಂಧಿಕಪ್ಪಂ" ಅಂದರೆ "ಇದರಲ್ಲಿ ಸೂತ್ರಗಳ ರೂಪದಿಂದ ಸುಸಂಧಿ ಕಲ್ಪವನ್ನು ಹೇಳುತ್ತೇನೆ" ಎಂದಿರುವುದರಿಂದ ಆ ವ್ಯಾಕರಣಗ್ರಂಥದ ಹೆಸರು "ಸುಸಂಧಿಕಲ್ಪ"ವೆಂದು ತಿಳಿಯಬೇಕಾಗಿದೆ.

ಅದರಲ್ಲಿ ಎರಡನೆಯ ಕಲ್ಪದ ಮೊದಲನೆಯ ಅಧ್ಯಾಯದ ಮೊದಲನೆಯ "ಸೂತ್ರವು" ಜಿನವಚನಯುಕ್ತಂ ಹಿ" ಎಂದು ಹೇಳಿರುವುದರಿಂದ ಅದರಲ್ಲಿನ ನಿಯಮಗಳು ಬುದ್ಧದೇವನ ಹೆಸರಿನಲ್ಲಿದ್ದ ಬೌದ್ಧಧರ್ಮಸಾಹಿತ್ಯದ ಭಾಷೆಯನ್ನು

ವ್ಯಾಕರಿಸಲಿಕ್ಕಾಗಿಯೇ ನಿರ್ಮಿಸಲ್ಪಟ್ಟಿದ್ದವೆಂದು ತಿಳಿಯಬೇಕು. ಅನ್ನುವಾಗ ಬೌದ್ಧಸಾಹಿತ್ಯದ ಗ್ರಂಥಗಳನ್ನು ಅಧ್ಯಯನಮಾಡಿದ ತರುವಾಯವೇ ಆ ವ್ಯಾಕರಣ ಗ್ರಂಥವು ರಚಿಸಲ್ಪಟ್ಟಿದ್ದಿತೆಂದು ಹೇಳಬೇಕಾಗುತ್ತದೆ.

ಬುದ್ಧದೇವನ ಮಹಾನಿರ್ವಾಣದ ತರುವಾಯವೂ ಮಥುರಾ ಪಟ್ಟಣವು ಬೌದ್ಧಧರ್ಮದ ಪ್ರಬಲ ಕೇಂದ್ರವಾಗಿದ್ದಿತು. ಚಕ್ರವರ್ತಿ ಅಶೋಕನನ್ನು ಬೌದ್ಧ ಧರ್ಮದಲ್ಲಿ ದೀಕ್ಷಿತನನ್ನಾಗಿ ಮಾಡಿದವನು ಮಥುರಾಪಟ್ಟಣದಲ್ಲಿನ ಥೇರತಿಸ್ಸ ನೆಂದು ಹೆಸರಾದ ಉಪಗುಪ್ತನೆಂಬವನಾಗಿದ್ದನು. ಆದುದರಿಂದ ಬುದ್ಧದೇವನ ಪ್ರವಚನಗಳನ್ನು ಬರೆದು ಗ್ರಂಥಗಳನ್ನಾಗಿ ಮಾಡಿದವರು ಮಥುರಾಪಟ್ಟಣದಲ್ಲಿನ ಬುದ್ಧ-ಶ್ರಮಣರೇ, ಎಂತಲೂ, ಆ ಪ್ರವಚನಗಳ ಭಾಷೆಯು ಕೂಡ ಅವರದೇ ಎಂತಲೂ. ಅದು ಅಶೋಕಚಕ್ರವರ್ತಿಯ ಕಾಲದಲ್ಲಿ ಪಶ್ಚಿಮ ಭಾರತದಲ್ಲಿನ ಜನಸಾಮಾನ್ಯರ ಭಾಷೆಯಾಗಿದ್ದಿತೆಂತಲೂ ಹೇಳಿದರೆ ತಪ್ಪಾಗಲಾರದು. ಭಗವಾನ್ ಬುದ್ಧನು ಆರ್ಯವರ್ಗದ ಶಕವಂಶೀಯರಲ್ಲಿ ಮಗಶಾಖೆಯವನಾಗಿದ್ದನು. ಆ ಮಗಶಾಖೆಯವರು ನೆಲಸಿದ್ದುದರಿಂದಲೇ, ಮೊದಲು ಕೀಕಟವೆಂದು ಕರೆಯಲಾಗು ತಿದ್ದ ಪ್ರದೇಶದ ಹೆಸರು "ಮಗಧ"ವೆಂದು ಮಾರ್ಪಟ್ಟಿತ್ತು. ಮತ್ತು ಮಗಧ ದೇಶದ ಜನರು ಆಡಿದ ನುಡಿಯ ಹೆಸರು "ಮಾಗಧೀ" ಎಂದಾಗಿತ್ತು.

ಬುದ್ಧದೇವನ ಜೀವಿತಕಾಲದಲ್ಲಿಯೂ, ಅವನ ತರುವಾಯ ಆಚಾರ್ಯ ಪಾಣಿನಿಯ ಕಾಲದಲ್ಲಿಯೂ ಆರ್ಯವರ್ಗದ ಜನರೆಲ್ಲರೂ ವೇದಭಾಷೆಯನ್ನೇ ಆಡುತಿದ್ದರೆಂದು ಪಾಣಿನೀಯ ವ್ಯಾಕರಣದಲ್ಲಿನ ಪ್ರಮಾಣಗಳಿಂದ ಸಿದ್ಧವಾಗು ತ್ತದೆ. ಆಚಾರ್ಯ ಪಾಣಿನಿಯು ವೇದಭಾಷೆಯು ಪ್ರಚಲಿತವಿದ್ದ ಪ್ರತಿಯೊಂದು ಪ್ರದೇಶವನ್ನು ಸ್ವಯಂ ಸಂದರ್ಶಿಸಿ, ಅಲ್ಲಲ್ಲಿ ಸ್ವಲ್ಪಸಮಯವಾದರೂ ನೆಲಸಿದ್ದು. ಅಲ್ಲಲ್ಲಿನ ಎಲ್ಲ ವೈಶಿಷ್ಟ್ಯಗಳ ಪರಿಚಯವನ್ನು ಪಡೆದ ತರುವಾಯವೇ ತನ್ನ ವ್ಯಾಕರಣ ವನ್ನು ರಚಿಸಿದ್ದನೆಂದು ತಿಳಿದುಬರುತ್ತದೆ. ನಂದವಂಶದ ಅರಸ ಮಹಾನಂದಿ ಅಥವಾ ಮಹಾನಂದ ಅಥವಾ ನಂದನೆಂಬವನು ಆಚಾರ್ಯಪಾಣಿನಿಯ ಮಿತ್ರ ನಾಗಿದ್ದನೆಂದೂ, ಆಚಾರ್ಯಪಾಣಿನಿಯು ಸ್ವಲ್ಪ ಕಾಲ ಮಹಾನಂದನ ಅತಿಥಿ ಯಾಗಿ ಮಗಧದಲ್ಲಿದ್ದನೆಂದೂ ಒಂದು ಪ್ರಾಚೀನ ಐತಿಹ್ಯವಿದೆ.[1] ಆದುದರಿಂದ ಇಂದು ನಮಗೆ ದೊರೆಯುವ ಬುದ್ಧನ ಪ್ರವಚನಗಳ ಭಾಷೆಯು ಆಚಾರ್ಯ ಪಾಣಿನಿಯ ತರುವಾಯವೇ ಬಳಕೆಗೆ ಬಂದುದೆಂಬುದರಲ್ಲಿ ಸಂದೇಹವುಳಿಯುವು

1. ಪಾಣಿನಿಕಾಲೀನ ಭಾರತವರ್ಷ (ಹಿಂದಿ) ಪುಟ ೪೭೩. ಶ್ರೀ ವಾಸುದೇವ ಶರಣ ಅಗ್ರವಾಲ.

ದಿಲ್ಲ. ಆ ಪ್ರವಚನಗಳ ಭಾಷೆಯು ಸಾಹಿತ್ಯಿಕ (Classical) ಸಂಸ್ಕೃತಕ್ಕೆ ಅತ್ಯಂತ ನಿಕಟವಾಗಿರುತ್ತದೆ. ಅಥವಾ ಬುದ್ಧದೇವನ ಪ್ರವಚನಗಳ ಭಾಷೆಯು ಸಂಸ್ಕೃತವು ತಾಯಿನುಡಿಯಾಗಿದ್ದ ಜುಕ್ಕಳು ಆಡಿದ ತೊದಲು ಸಂಸ್ಕೃತದಂತೆ, ಅಥವಾ ಆ ಪ್ರವಚನಗಳನ್ನು ಮೊದಲು ಸಂಸ್ಕೃತದಲ್ಲಿ ರಚಿಸಿ. ತರುವಾಯ ಪ್ರಾಕೃತಕ್ಕೆ ಪರಿವರ್ತಿಸಿದಂತೆ ಇದೆಯೆನ್ನಬಹುದು. ಆ ಪ್ರವಚನಗಳ ಭಾಷೆ ಮತ್ತು ಅಶೋಕಚಕ್ರವರ್ತಿಯ ಕೆಲವು ಶಿಲಾಶಾಸನಗಳಲ್ಲಿನ ಭಾಷೆಯು ಸಾಧಾರಣ ಸಮಾನವಾಗಿದೆಯೆನ್ನಬಹುದು. ಬುದ್ಧದೇವನ ಪ್ರವಚನಗಳ. ಭಾಷೆಯು ಅಥವಾ ಪ್ರಾಚೀನ ಪ್ರಾಕೃತದ ಮುಖ್ಯ ಲಕ್ಷಣಗಳು, ಅಂದರೆ ಸಂಸ್ಕೃತ ಶಬ್ದಗಳು ಪ್ರಾಕೃತ ವಾಗಿ ಮಾರ್ಪಡುವ ಮುಖ್ಯ ಸೂತ್ರಗಳು ಮುಂದಿನಂತಿವೆ:—

೧. ಸಂಸ್ಕೃತದಲ್ಲಿನ ಅಕಾರಾಂತ ನಾಮಪದಗಳು ಪ್ರಥಮಾ ವಿಭಕ್ತಿಯ ಏಕವಚನದಲ್ಲಿ ವಿಸರ್ಗದಿಂದ ಕೂಡುತ್ತವಾದುದರಿಂದ. ಅಥವಾ ಅಕಾರಾಂತ ಶಬ್ದಗಳ ತರುವಾಯ ವಿಸರ್ಗ ಬಂದರೆ ಅದು ಹಿಂದಿನ ಅಕಾರದೊಂದಿಗೆ ಕೂಡಿ "ಓ"ಕಾರವಾಗಿ ಮಾರ್ಪಡುತ್ತದೆ:—ಆ ಬಗ್ಗೆ ಸೂತ್ರ ॥ಸೋ ॥೨–೧–೫೩॥ ಉದಾ:—ಘೋಟಕಃ = ಘೋಟಕೋ = ಕುದುರೆ ವಂಶಃ = ವಂಸೋ = ೧. ಬಿದಿರು. ೨. ಕುಲ. ಪುರುಷಃ = ಪುರಿಸೋ. ಅತಃ = ಅತೋ = ಆದುದರಿಂದ ತತಃ = ತತೋ = ಅಲ್ಲಿಂದ. ಆದುದರಿಂದ. ಆತ್ಮನಃ = ಅತ್ತನೋ = ತನ್ನಿಂದ ಇತ್ಯಾದಿ.

೨. ಹಾಗೆ ಓಕಾರಾಂತವಾದ ಪುಲ್ಲಿಂಗ ನಾಮಪದದ ಪ್ರಥಮಾ ವಿಭಕ್ತಿಯ ಏಕವಚನ ಶಬ್ದಗಳು ಬಹುವಚನದಲ್ಲಿ ಆಕಾರಾಂತವಾಗಲೀ ಏಕಾರಾಂತವಾಗಲೀ ಆಗುತ್ತವೆ: ಉದಾ:–ಘೋಟಕಾ = ಘೋಟಕೇ = ಕುದುರೆಗಳು. ಪುರಿಸಾ = ಪುರಿಸೇ = ಗಂಡಸರು, ವಂಸಾ = ವಂಸೇ = ಬಿದಿರುಗಳು.

೩. ಶಬ್ದಗಳಲ್ಲಿನ ಶ ಮತ್ತು ಷಗಳ ಬದಲಿಗೆ 'ಸ' ಬರುತ್ತದೆ. ಉದಾ:– ಪುರುಷಃ = ಪುರಿಸೋ, ವಂಶಃ = ವಂಸೋ, ಕಶ್ಯಪಃ = ಕಸ್ಸಪೋ ಇತ್ಯಾದಿ.

೪. ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳ ಬಹುವಚನದಲ್ಲಿ ಎಲ್ಲ ಸ್ತ್ರೀಲಿಂಗ ನಾಮಪದಗಳ ತರುವಾಯ "ಓ" ಬಂದು ಸೇರುತ್ತದೆ. ಮತ್ತು ಅದು "ಇ" ಸ್ವರದ ತರುವಾಯ "ಯೋ" ಆಗುತ್ತದೆ. ಮಾಲಾಓ = ಮಾಲೆಗಳು, ಮಾಲೆಗಳನ್ನು. ಸ್ತ್ರೀ = ಇತ್ಥೀ ಇತ್ಥಿಯೋ = ಸ್ತ್ರೀಯರು. ಸ್ತ್ರೀಯರನ್ನು. ನದ್ಯಃ = ನಜ್ಜೋ = ಹೊಳೆಗಳು. ಹೊಳೆಗಳನ್ನು. ಇತ್ಯಾದಿ.

೫. ತ್ಯ ಇದ್ದುದು ಚ್ಚ ಮತ್ತು ದ್ಯ ಇದ್ದುದು "ಜ್ಜ" ಆಗುತ್ತದೆ.

ಉದಾ:—ಮೃತ್ಯು = ಮಚ್ಚು; ಸತ್ಯಂ = ಸಚ್ಚಂ; ನದ್ಯ: = ನಜ್ಜೋ; ಗದ್ಯಂ = ಗಜ್ಜಂ. ಇತ್ಯಾದಿ.

೬. ಸಂಯುಕ್ತಾಕ್ಷರಗಳ ಮೊದಲು ದೀರ್ಘಸ್ವರವಿದ್ದರೆ ಅದು ಹ್ರಸ್ವವಾಗುತ್ತದೆ; ಉದಾ:—ಪಾಂಡಿತ್ಯಮ್ = ಪಂಡಿಚ್ಚಂ ಆತ್ಮಾ = ಅತ್ತಾ.

೭. ಸಂಯುಕ್ತಾಕ್ಷರಗಳಲ್ಲಿ ಭಿನ್ನವರ್ಗದ ವ್ಯಂಜನಗಳಿದ್ದರೆ, ಅವುಗಳಲ್ಲಿ ಯಾವುದಾದರೂ ಒಂದು ಲೋಪವಾಗಿ ಉಳಿದುದಕ್ಕೆ ದ್ವಿತ್ವಬರುತ್ತದೆ. ಉದಾ:– ಧರ್ಮಃ = ಧಮ್ಮೋ ಆತ್ಮಾ = ಅತ್ತಾ ರಾತ್ರಿ = ರತ್ತಿ ಶುಷ್ಕಮ್ = ಸುಕ್ಖಂ = ಒಣಗಲು.

ಇವುಗಳು ಪ್ರಯೋಗಿಸಲ್ಪಟ್ಟ ಉದಾಹರಣೆಯಾಗಿ ಬುದ್ಧದೇವನ ಕೆಲವು ವಚನಗಳನ್ನು ಕೊಡಲಾಗುವುದು:—

**೧. ನಹಿ ವೇರೇನ ವೇರಾನಿ ಸಂಮಂತೀಧ ಕುದಾಚನಂ ।**
**ಅವೇರೇನ ಚ ಸಂಮಂತಿ ಏಸ ಧಮ್ಮೋ ಸನಾತನೋ ॥**

**ಸಂ.—ನ ಹಿ ವೈರೇಣ ವೈರಾಣಿ ಶಾಮ್ಯಂತೀಹ ಕದಾಚನ ।**
**ಅವೈರೇಣ ಚ ಶಾಮ್ಯಂತಿ ಏಷ ಧರ್ಮಃ ಸನಾತನಃ ॥**

ಅರ್ಥ—ಹಗೆಯಿಂದ ಹಗೆಯು ಎಂದಿಗೂ ತಣಿಯುವುದಿಲ್ಲ. (ಹಗೆಗೆ ಪ್ರತಿಯಾಗಿ) ಹಗೆಮಾಡದಿರುವುದರಿಂದಲೇ ಅದು ತಣಿಯುತ್ತದೆ. ಇದುವೇ ಹಿಂದಿನಿಂದ ಸಾಗಿಬಂದ ಕಟ್ಟಳೆಯಾಗಿರುತ್ತದೆ.

**೨. ಇಧ ಮೋದತಿ ಪೇಚ್ಚ ಮೋದತಿ ಕತಪುಂಞೋ**
**ಉಭಯತ ಮೋದತಿ ।**
**ಸೋ ಮೋದತಿ ಸೋ ಪಮೋದತಿ ದಿಸ್ವಾ**
**ಕಮ್ಮವಿಸುದ್ಧಿಂ ಅತ್ತನೋ ॥**

**ಸಂ.—ಇಹಮೋದತೇ ಪ್ರೇತ್ಯ ಮೋದತೇ ಕೃತಪುಣ್ಯ ಉಭಯತ್ರ**
**ಮೋದತೇ ।**
**ಸ ಮೋದತೇ ಸ ಪ್ರಮೋದತೇ ದೃಷ್ಟ್ವಾ ಕರ್ಮವಿ**
**ಶುದ್ಧಿಮಾತ್ಮನಃ ॥**

ಅರ್ಥ—ಈ ಲೋಕದಲ್ಲಿಯೂ ಆನಂದಿಸುತ್ತಾನೆ. ಪರಲೋಕದಲ್ಲಿಯೂ ಆನಂದಿಸುತ್ತಾನೆ. ಪುಣ್ಯಮಾಡಿದವನು ಎರಡು ಕಡೆಗಳಲ್ಲಿಯೂ ಆನಂದಿಸುತ್ತಾನೆ.

ಅವನು ತನ್ನ ಕರ್ಮದ ವಿಶುದ್ಧತೆಯನ್ನು ಕಂಡು ಆನಂದಿಸುತ್ತಿರುವುದೇ ಅಲ್ಲ ಪರಮಾನಂದವನ್ನು ಭೋಗಿಸುತ್ತಾನೆ.

೩. ಅಪ್ಪಮಾದೋ ಅಮತಪದಂ ಪಮಾದೋ
ಮಚ್ಚುನೋ ಪದಂ ॥
ಅಪ್ಪಮತ್ತಾ ನ ಮೀಯಂತಿ ಯೇ ಪಮತ್ತಾ
ಯಥಾ ಮತಾ ॥

ಸಂ.—ಅಪ್ರಮಾದೋಽಮೃತಪದಂ ಪ್ರಮಾದೋ ಮೃತ್ಯೋಃ
ಪದಮ್ ।
ಅಪ್ರಮತ್ತಾ ನ ಮ್ರಿಯಂತೇ ಯೇ ಪ್ರಮತ್ತಾ
ಯಥಾ ಮೃತಾಃ ॥

ಅರ್ಥ—(ಆಚರಣೆಯಲ್ಲಿ) ಎಚ್ಚರಗೆಡದಿರುವುದು ಅಂದರೆ ಸದಾಕಾಲ ಜಾಗರೂಕನಾಗಿರುವುದು ಅಮರಪದಕ್ಕೆ ಕಾರಣವಾಗುತ್ತದೆ. ಮತ್ತು ಎಚ್ಚರ ಗೆಡುವುದು ಮರಣಕ್ಕೆ ಕಾರಣವಾಗುತ್ತದೆ. ಅಂದರೆ ಆಚರಣೆಯಲ್ಲಿ ಎಚ್ಚರಗೆಟ್ಟವ ರಿಗೆ ಜನನ-ಮರಣಗಳ ಸುತ್ತು ತಪ್ಪಿದುದಲ್ಲ. ಎಚ್ಚರಗೆಡದಿರುವವರು ಸಾಯು ವುದಿಲ್ಲ. ಯಾರು ಎಚ್ಚರಗೆಡುತ್ತಾರೋ ಅವರು ಸತ್ತಂತೆಯೇ. ಅಂದರೆ—ಸಾವು ನಿಶ್ಚಯ.

ಬುದ್ಧದೇವನ ವಚನಗಳಲ್ಲಿ ಪರಸ್ಮೈಪದ ಪ್ರತ್ಯಯಗಳು ಕರ್ತ್ರರ್ಥ ದಲ್ಲಿಯೂ ಆತ್ಮನೇ ಪದಪ್ರತ್ಯಯಗಳು ಕರ್ಮಾರ್ಥದಲ್ಲಿಯೂ ಬಳಸಲ್ಪಟ್ಟಿವೆ. ಆದುದರಿಂದಲೇ ಆತ್ಮನೇ ಪದದ ವರ್ಗದವುಗಳಾದ ಮೃ = ಸಾಯು ಮತ್ತು ಮುದ್ = ಆನಂದಪಡು ಎಂಬ ಧಾತುಗಳು—ಪರಸ್ಮೈಪದದಲ್ಲಿ ಬಳಸ ಲ್ಪಟ್ಟಿವೆ.

ನಮಗೆ ಈಗ ದೊರೆಯುವ ಪ್ರಾಕೃತ ವಿಭೇದಗಳಲ್ಲಿ ಬುದ್ಧದೇವನ ಪ್ರವಚನಗಳ ಭಾಷೆಯೇ ಮೊತ್ತಮೊದಲಿನ ಪ್ರಾಕೃತವಾಗಿರುತ್ತದೆ. ಚಕ್ರವರ್ತಿ ಅಶೋಕನ ಕಾಲದಲ್ಲಿ ಆ ಭಾಷೆಯು ಬಳಕೆಯಲ್ಲಿತ್ತು ಮತ್ತು ಅದರಲ್ಲಿ ಕೆಲವು ಮಾರ್ಪಾಟುಗಳು ಆಗಿದ್ದವೆಂದು ಅವನ ಶಾಸನಗಳ ಲೇಖಗಳಿಂದ ತಿಳಿದುಬರು ತ್ತದೆ. ಅವನ ಕೆಲವು ಶಾಸನಗಳಲ್ಲಿ ಅಂದರೆ ಭಾಬ್ರೂ, ರೂಪನಾಥ ಮೊದಲಾದೆಡೆ ಗಳಲ್ಲಿನ ಶಾಸನಗಳಲ್ಲಿ ಮಾಗಧೀ ಭಾಷೆಯ ಲಕ್ಷಣಗಳು ಕಂಡುಬರುವುದರಿಂದ ಅವನ ಕಾಲದಲ್ಲಿ ಬುದ್ಧದೇವನ ಪ್ರವಚನಗಳ ಭಾಷೆಯೊಂದೇ ಅಲ್ಲದೇ ಮಾಗಧೀ

ಭಾಷೆಯೂ ಬಳಕೆಯಲ್ಲಿದ್ದಿತೆಂದು ಸಿದ್ಧವಾಗುತ್ತದೆ. ಬುದ್ಧದೇವನ ಪ್ರವಚನಗಳಲ್ಲಿ ಓಕಾರಾಂತವಾಗಿರುವ ಶಬ್ದಗಳು ಏಕಾರಾಂತವಾಗಿ, ರಕಾರವು ಲಕಾರವಾಗಿ ಮತ್ತು ತಕಾರವು ಟಕಾರವಾಗಿ ಮಾರ್ಪಡುವುದು ಮಾಗಧೀಭಾಷೆಯ ಮುಖ್ಯ ಲಕ್ಷಣವಾಗಿರುತ್ತದೆ.

ಹಿಂದೆ ಉದಹರಿಸಿದ ಬುದ್ಧದೇವನ ವಚನಗಳಲ್ಲಿ ಧಮ್ಮೋ, ಪಮಾದೋ, ಸೋ ಮೊದಲಾದ ಶಬ್ದಗಳು ಪ್ರಥಮಾವಿಭಕ್ತಿಯ ಏಕವಚನಗಳಾಗಿದ್ದು ಓಕಾರಾಂತವಾಗಿವೆಯೆಂಬುದನ್ನೂ, ಅವುಗಳು ಸಂಸ್ಕೃತದಲ್ಲಿ ಅಕಾರಾಂತ ನಾಮಪದಗಳಾಗಿದ್ದವೆಂಬುದನ್ನೂ ಸರಿಯಾಗಿ ಲಕ್ಷ್ಯದಲ್ಲಿಡಬೇಕು. ಏಕೆಂದರೆ ಸಂಸ್ಕೃತದಲ್ಲಿನ ಅಕಾರಾಂತ ನಾಮಪದಗಳ ಓಕಾರಾಂತ ಪ್ರಯೋಗವು ಕೊಂಕಣಿಯಲ್ಲಿದೆಯೇ ಹೊರತು ಮರಾಠಿಯಲ್ಲಿ ಇಲ್ಲದಿರುವುದು—ಕೊಂಕಣಿಯು ಮರಾಠಿಗಿಂತ ಪ್ರಾಚೀನವಾದುದೆಂಬುದರ ಪೊತ್ತಮೊದಲಿನ ಒಂದು ಪ್ರಮಾಣವಾಗಿದೆ. ಅಲ್ಲದೇ ಹಿಂದಿನ ವಚನಗಳಲ್ಲಿ ಬಂದಿರುವ "ಸೋ = ಅವನು" ಎಂಬ ಸರ್ವನಾಮವು—"ತೊ" ಎಂದು ಮಾರ್ಪಡುತ್ತದೆಂಬುದನ್ನೂ ಲಕ್ಷಿಸಬೇಕು ಕೊಂಕಣಿಯಲ್ಲಿ ಶಬ್ದಗಳ ಕೊನೆಯಲ್ಲಿನ ದೀರ್ಘಸ್ವರಗಳು ಕೊಂಚ ಸಂವೃತವಾಗಿ ಉಚ್ಚರಿಸಲ್ಪಡುತ್ತವೆಂಬುದನ್ನೂ ಇಲ್ಲಿ ಲಕ್ಷ್ಯದಲ್ಲಿಡಬೇಕು. ಇಲ್ಲಿ ಮುಂದೆ ಉದಾಹರಣೆಗಾಗಿ ಅಶೋಕ ಚಕ್ರವರ್ತಿಯ ಎರಡು ಶಾಸನಗಳ ಯಥಾಪ್ರತಿಗಳು ಕೊಡಲಾಗುವವು. ಅವುಗಳಲ್ಲಿ ಮೊದಲನೆಯದರ ಭಾಷೆಯು ಪ್ರವಚನಗಳಲ್ಲಿ ಬಳಸಿದ ಪ್ರಾಕೃತವಾಗಿದ್ದು—ಆ ಶಾಸನವು ಬಂಡೆಕಲ್ಲಿನಲ್ಲಿ ಕೆತ್ತಿಸಿದ ೧೪ ಶಾಸನಗಳಲ್ಲಿ ಒಂದಾಗಿದೆ. ಮತ್ತು ಪಶ್ಚಿಮ ಗುಜರಾತದ ಗಿರಿನಾರ ಬೆಟ್ಟದ ಬಳಿಯಲ್ಲಿನ ಬಂಡೆಯಲ್ಲಿ ಕೆತ್ತಲಾಗಿದೆ. ಎರಡನೆಯದು ಮಾಗಧಿಭಾಷೆಯಲ್ಲಿದ್ದು ಮೇರಠದಲ್ಲಿನ ಒಂದು ಶಿಲಾಸ್ತಂಭದಲ್ಲಿ ಕೆತ್ತಲ್ಪಟ್ಟಿದ್ದಿತು. ಅಕ್ಬರ ಬಾದಶಹನ ಕಾಲದಲ್ಲಿ ಆ ಕಂಭವು—ಅದರಲ್ಲಿನ ಬರವಣಿಗೆಯನ್ನು ಓದಿಸುವ ಸಲುವಾಗಿ ದಿಲ್ಲಿಗೆ ಹೊತ್ತು ತರಲಾಗಿತ್ತು.

**೧. "ಇಯಂ ಧಮ್ಮಲಿಪಿ ದೇವಾನಂ ಪಿಯೇನ ಪಿಯದಸಿನಾ ರಾಞಾ ಲೇಖಾಪಿತಾ; ಇಧ ನ ಕಿಂಚಿ ಜೀವಂ ಆರಭಿತ್ಪಾ ಪ್ರಜೂಹಿತವ್ಯಂ. ನ ಚ ಸಮಾಜೋ ಕತವ್ಯೋ. ಬಹುಕಂ ದೋಸಂ ಸಮಾಜಮ್ಹಿ ಪಸತಿ ದೇವಾನಂ ಪಿಯೋ ಪಿಯದಸಿ ರಾಜಾ. ಅಸ್ತಿಪಿತು ಏಕಚಾ ಸಮಾಜಾ ಸಾಧುಮತಾ ದೇವಾನಂ ಪಿಯಸ ಪಿಯದಸಿನೋ ರಾಞೋ; ಪುರಾ ಮಹಾನಸಮ್ಹಿ ದೇವಾನಂ**

**ಪಿಯಸ ಪಿಯದಸಿನೋ ರಾಞೋ ಅನುದಿವಸಂ ಬಹೂನಿ ಪ್ರಾಣಸತಸಹಸ್ರಾನಿ ಆರಭಿಸು ಸೂಪಾಥಾಯ. ಸೇ ಅಜ ಯದಾ ಅಯಂ ಧಮ್ಮಲಿಪಿ ಲಿಖಿತಾ ತೀ ಏವ ಪ್ರಾಣಾ ಆರಭಿರೇ ಸೂಪಾಥಾಯ; ದ್ವೋ ಮೋರಾ; ಏಕೋ ಮಗೋ; ಸೋಪಿ ಮಗೋ ನ ಧುವೋ; ಏತೇ ಪಿ ಪಾಣಾ ಪಚ್ಛಾ ನ ಆರಭಿರೇ".**

ಅರ್ಥ—ಈ ಧರ್ಮಲೇಖವು ದೇವತೆಗಳಿಗೆ ಪ್ರಿಯನಾದ ಪ್ರಿಯದರ್ಶಿ ರಾಜನಿಂದ ಬರೆಯಿಸಲ್ಪಟ್ಟಿತು. (ಏನೆಂದರೆ) ಇಲ್ಲಿ(=ಅಶೋಕನ ರಾಜ್ಯದಲ್ಲಿ) ಯಾವುದೊಂದು ಪ್ರಾಣಿಯನ್ನು ಆಲಂಭನಮಾಡಿ(=ಕೊಂದು) ಯಜ್ಞಗಳನ್ನು ಜರಗಿಸಬಾರದು. ಮತ್ತು ಸಮಾಜಗಳನ್ನು (=ಮಾಂಸದ ಅಡಿಗೆಯುಳ್ಳ ಭೋಜನಕೂಟ) ನಡಿಸಬಾರದು. ಏಕೆಂದರೆ ದೇವತೆಗಳಿಗೆ ಪ್ರಿಯನಾದ ಪ್ರಿಯ ದರ್ಶಿ ರಾಜನು ಅಂಥ ಸಮಾಜಗಳಲ್ಲಿ ತುಂಬಾ ದೋಷ (ಪಾಪ) ಗಳನ್ನು ಕಾಣು ತ್ತಾನೆ. ಆದರೂ ಕೆಲವು ಸಮಾಜಗಳು ದೇವತೆಗಳಿಗೆ ಪ್ರಿಯನಾದ ಪ್ರಿಯದರ್ಶಿ ರಾಜನಿಗೆ ಒಳಿತೆಂದು ತೋರುತ್ತವೆ. ಮೊದಲು ದೇವತೆಗಳಿಗೆ ಪ್ರಿಯನಾದ ಪ್ರಿಯ ದರ್ಶಿ ರಾಜನ ಪಾಕಶಾಲೆಯಲ್ಲಿ ಪ್ರತಿದಿನವೂ ಮೇಲೋಗರದ ಸಲುವಾಗಿ ಲಕ್ಷ ಗಟ್ಟಳೆ ಪ್ರಾಣಿಗಳು ಕೊಲ್ಲಲ್ಪಡುತ್ತಿದ್ದವು. ಅದು ಈಗ ಈ ಲೇಖವನ್ನು ಬರೆಯು ತ್ತಿದ್ದಾಗ ಬರೇ ಮೂರು ಪ್ರಾಣಿಗಳು ಅಂದರೆ ಎರಡು ನವಿಲುಗಳು ಮತ್ತು ಒಂದು ಜಿಂಕೆ ಕೊಲ್ಲಲ್ಪಡುತ್ತವೆ. ಆ ಜಿಂಕೆಯು ಕೂಡ ನಿಶ್ಚಯವಿಲ್ಲ. ಈ ಮೂರು ಪ್ರಾಣಿಗಳು ಕೂಡ ಈ ತರುವಾಯ ಕೊಲ್ಲಲ್ಪಡುವುದಿಲ್ಲ.

ಹಿಂದಿನ ಶಾಸನದ ಮೇಲಿಂದ ಬುದ್ಧದೇವನ ಪ್ರವಚನಗಳ ಭಾಷೆಯು ಅಶೋಕ ಚಕ್ರವರ್ತಿಯ ಕಾಲದಲ್ಲಿ ಬಳಕೆಯಲ್ಲಿದ್ದ ಭಾಷೆಯೆಂದು ಸಿದ್ಧವಾಗು ತ್ತದೆ. ಅಷ್ಟೇ ಅಲ್ಲ ಕೆಲವು ಅಂಶಗಳಲ್ಲಿ ಪ್ರವಚನಗಳ ಭಾಷೆಗಿಂತ ಹೆಚ್ಚು ಸ್ಪಷ್ಟವೂ ಶುದ್ಧವೂ ಆಗಿರುವಂತೆ ತೋರುತ್ತದೆ.

**೨. "ದೇವಾನಂ ಪಿಯೇ ಪಿಯದಸಿ ಲಾಜಾ ಹೇವಂ ಆಹಾ- ಧಮ್ಮೇ ಸಾಧು ಕಿಯಂ ಚು ಧಮ್ಮೇ ತಿ? ಅಪಾಸಿನವೇ, ಬಹು- ಕಯಾನೇ, ದಯಾದಾನೇ, ಸಚೇ, ಸೋಚಯೇ; ಚಖುದಾನೇ ಪಿ ಬಹುವಿಧೇ ದಿಂನೇ ದುಪದ-ಚತುಪದೇಸು; ಪಖಿವಾಲಿಚಲೇಷು; ವಿವಿಧೇ ಮೇ ಅನುಗಹೇ ಕಟೇ; ಆಪಾನದಖಿನಾಯೇ ಅಂನಾನಿ ಪಿ ಚ ಮೇ ಬಹೂನಿ ಕಯಾನಾನಿ ಕಟಾನಿ; ಏತಾಯೇ ಮೇ ಅಠಾಯೇ ಇಯಂ ಧಮ್ಮಲಿಪಿ ಲಿಖಾಪಿತಾ; ಹೇವಂ ಅನುಪಟಿ-**

**ಪಜಂತು ಚಿಲಥಿತಿಕಾ ಚ ಹೋತು ತಿ. ಯೋ ಚ ಹೇವಂ ಸಂಪಟಿ ಪಜೀಸತಿ ಸೇ ಸುಕಟಂ ಕಛತಿ ತಿ."**

ಅರ್ಥ—ದೇವತೆಗಳಿಗೆ ಪ್ರಿಯನಾದ ಪ್ರಿಯದರ್ಶಿರಾಜನು ಹೀಗೆ ಹೇಳುತ್ತಾನೆ—ಧರ್ಮವು ಒಳಿತಾದುದು. ಧರ್ಮವೆಂದರೇನು? ಕೊಲ್ಲದಿರುವುದು. ಕಲ್ಯಾಣಕಾರಕಗಳಾದ ಹೆಚ್ಚು ಹೆಚ್ಚು ಕೆಲಸಗಳನ್ನು ಮಾಡುವುದು; ದಯೆ. ದಾನ ಸತ್ಯ ಮತ್ತು ಶೌಚ (ಗಳನ್ನು ಆಚರಿಸುವುದು.) ದ್ವಿಪದ. ಚತುಷ್ಪದ. ಪಕ್ಷಿ. ವಾರಿಚರ ಪ್ರಾಣಿಗಳ ಮೇಲೆ ನಾನು ಬಹಳ ಅನುಗ್ರಹ ಮಾಡಿದ್ದೇನೆ. ಪ್ರಾಣ ದಕ್ಷಿಣೆಯಿಂದ ಮೊದಲುಗೊಂಡು ಬೇರೆ ಹಲವು ಕಲ್ಯಾಣಗಳನ್ನು ಮಾಡಿದ್ದೇನೆ. (ಜನರು ಕೂಡ ಇದರಂತೆಯೇ ಆಚರಿಸಲಿ =) ಇದು ಚಿರಸ್ಥಾಯಿಯಾಗಲಿ ಎಂಬ ಉದ್ದೇಶದಿಂದ ಈ ಧರ್ಮಲೇಖವನ್ನು ಬರೆಯಿಸಿದ್ದೇನೆ. ಯಾರು ಇದರಂತೆ ಆಚರಿಸುತ್ತಾರೋ ಅವರು ಸುಕೃತವನ್ನು ಮಾಡುತ್ತಾರೆ (=ಪುಣ್ಯವನ್ನು ಗಳಿಸುತ್ತಾರೆ).

ಈ ಶಾಸನದಲ್ಲಿನ ಮಾಗಧಿಯು ಆರಂಭಿಕ ಸ್ಥಿತಿಯಲ್ಲಿದೆಯೇ ಹೊರತು ಪೂರ್ಣ ವಿಕಸಿತವಾಗಿಲ್ಲ. ಮೊದಲಿನ ಶಾಸನದಲ್ಲಿ ಓಕಾರಾಂತವಾಗಿದ್ದ ಧಮ್ಮೋ. ಪಿಯೋ ಮೊದಲಾದ ಶಬ್ದಗಳು ಧಮ್ಮೇ, ಪಿಯೇ ಎಂದು ಏಕಾರಾಂತವಾಗಿರುತ್ತವೆ. ಹಾಗೂ ರಾಜಾ, ವಾರಿಚರ ಮೊದಲಾದ ಶಬ್ದಗಳಲ್ಲಿನ ರಕಾರವು ಲಕಾರವಾಗಿ, ಲಾಜಾ, ವಾಲಿಚಲ ಮುಂತಾಗಿ ಮಾರ್ಪಟ್ಟಿವೆ. ಭೂತಕಾಲಿಕ ಕೃದಂತದಲ್ಲಿನ "ತ"ಕಾರವು ಟಕಾರವಾಗಿದೆ. ಉದಾ—ಅನುಗಹೋ ಕತೋ ಇದ್ದುದು ಅನುಗಹೇ ಕಟೇ ಆಗಿದೆ. ಸುಕತಂ ಇದ್ದುದು ಸುಕಟಂ ಆಗಿದೆ.

ಮೊದಲಿನ ಶಾಸನದಲ್ಲಿ ಸಂಸ್ಕೃತದಲ್ಲಿನ ಅಕಾರಾಂತ ಪುಲ್ಲಿಂಗನಾಮಗಳೂ ಅವುಗಳಿಗೆ ಸಂಬಂಧಪಟ್ಟ ವಿಶೇಷಣಗಳೂ ಓಕಾರಾಂತವಾಗಿವೆ. ಉದಾ:—ಸಮಾಜೋ ಕತವ್ಯೋ; ಏಕೋಮಗೋ ಸೋ ಪಿ ನ ಧುವೋ ಇತ್ಯಾದಿ. ಹಾಗೆಯೇ ನಪುಂಸಕಲಿಂಗದ "ತತ್" ಶಬ್ದವು "ಸೇ" ಆಗಿದೆ. ಇದು ತರುವಾಯ ಕೊಂಕಣಿಯಲ್ಲಿ "ತೆಂ" ಎಂದು ಮಾರ್ಪಡುತ್ತದೆ. ಸರ್ವನಾಮದ ತೃತೀಯ ಪುರುಷದ ತೊ=ಅವನು, ಮತ್ತು ತೆಂ=ಅದು ಎಂಬ ರೂಪಗಳು ಕೊಂಕಣಿಯಲ್ಲಿ ಮತ್ತು ಕೊಂಕಣಿಯಿಂದ ಹುಟ್ಟಿದ ಮರಾಠಿಯಲ್ಲಿ ಹೊರತು ಭಾರತವರ್ಷದಲ್ಲಿನ ಇತರ ಯಾವ ಪ್ರಾಕೃತ ಭಾಷೆಗಳಲ್ಲಿಯೂ ಇಲ್ಲ. ಹಾಗೆಯೇ ಕೊಂಕಣಿಯಲ್ಲಿ ಅವನು ಎನ್ನಲು "ತೊ" ಇರುವಂತೆಯೇ ಇವನು ಎನ್ನಲು "ಹೊ" ಎಂಬ ಸರ್ವನಾಮವಿದೆ. ಆದರೆ ಮರಾಠಿಯಲ್ಲಿ ಕೊಂಕಣಿಯಲ್ಲಿನ "ಹೊ" ಎಂಬ

ಸರ್ವನಾಮವು "ಹಾ" ಎಂದು ಮಾರ್ಪಟ್ಟಿದೆ ಪರಂತು "ತೋ" ಹಾಗೆಯೇ ಉಳಿದಿದೆ. ಇದರ ಮೇಲಿಂದಲೂ—ಕೊಂಕಣಿಯೇ ಮರಾಠಿಗಿಂತ ಪ್ರಾಚೀನವಾದುದೆಂದು ಸಿದ್ಧವಾಗುತ್ತದೆ.

೨. ಆಚಾರ್ಯ ವರರುಚಿ:—ಇವನ ಸರಿಯಾದ ಕಾಲವಾಗಲೀ, ಇವನು ಯಾರೆಂದಾಗಲೀ ಇಂದಿನ ತನಕ ಸರಿಯಾಗಿ ತಿಳಿದುಬಂದಿಲ್ಲ. ವರರುಚಿ ಎಂಬ ಹೆಸರನ್ನವಲಂಬಿಸಿ ತಲೆಬುಡವಿಲ್ಲದ ಹಲವು ಕಥೆಗಳು ಪ್ರಚಲಿತವಿವೆ. ಹೇಗಿದ್ದರೂ ಇವನ ಹೆಸರಿನಿಂದ ಪ್ರಸಿದ್ಧಿಗೆ ಬಂದಿರುವ "ಪ್ರಾಕೃತ ಪ್ರಕಾಶ" ಎಂಬ ವ್ಯಾಕರಣ ಗ್ರಂಥವೊಂದು ಕ್ರಿಸ್ತನ ನಾಲ್ಕನೆಯ ಶತಮಾನದಲ್ಲಿ ರಚಿಸಲ್ಪಟ್ಟಿದ್ದಾಗಿರಬಹುದೆಂದು ಅನುಮಾನಿಸಿದ್ದಾರೆ. ಇದರಲ್ಲಿನ ಸೂತ್ರಗಳೆಲ್ಲವೂ ಆಚಾರ್ಯಪಾಣಿನಿಯ ಅಷ್ಟಾಧ್ಯಾಯಿ ಸೂತ್ರಗಳನ್ನು ಆಧರಿಸಿ ರಚಿಸಲ್ಪಟ್ಟಿವೆ. ಪ್ರಾಕೃತ ಪ್ರಕಾಶ ಗ್ರಂಥವು ಆಚಾರ್ಯಕಾತ್ಯಾಯನನ ಸುಸಂಧಿಕಲ್ಪದಷ್ಟು—ಪರಿಪೂರ್ಣವೂ, ವ್ಯಾಪಕವೂ ಆಗಿರುವುದಿಲ್ಲ. ಆರನೆಯ ಶತಮಾನದವನಾದ ಹಾಗೂ ಕಾವ್ಯಾಲಂಕಾರವೆಂಬ ಗ್ರಂಥವನ್ನು ರಚಿಸಿ ಪ್ರಖ್ಯಾತನಾದ ಭಾಮಹನೆಂಬ ಕಾಶ್ಮೀರೀ ಪಂಡಿತನು ಪ್ರಾಕೃತ ಪ್ರಕಾಶದಲ್ಲಿನ ಸೂತ್ರಗಳಿಗೆ ಟೀಕಾ ವ್ಯಾಖ್ಯಾನಗಳನ್ನು ಬರೆದಿದ್ದಾನೆ.

ಪ್ರಾಕೃತ ಪ್ರಕಾಶವೆಂಬ ಗ್ರಂಥದಲ್ಲಿ ಹದಿನೆರಡು ಪರಿಚ್ಛೇದಗಳಿವೆ. ಮೊದಲನೆಯ ಒಂಭತ್ತು ಪರಿಚ್ಛೇದಗಳಲ್ಲಿ "ಪ್ರಾಕೃತ" ಎಂಬ ವಿಭೇದದ ನಿಯಮಗಳಿವೆ. ಹತ್ತನೆಯದರಲ್ಲಿ "ಪೈಶಾಚೀ". ಹನ್ನೊಂದನೆಯ ಪರಿಚ್ಛೇದದಲ್ಲಿ "ಮಾಗಧೀ" ಮತ್ತು ಕೊನೆಯದಾದ ಹದಿನೆರಡನೆಯ ಪರಿಚ್ಛೇದದಲ್ಲಿ "ಶೌರಸೇನೀ" ಎಂಬ ವಿಭೇದಗಳ ನಿಯಮಗಳಿವೆ. ಆದರೆ ಪೈಶಾಚೀ ಮತ್ತು ಮಾಗಧೀ ವಿಭೇದಗಳಿರುವ ಪರಿಚ್ಛೇದಗಳಲ್ಲಿ ಎರಡನೆಯ ಸೂತ್ರವು ಪ್ರಕೃತಿಃ ಶೌರಸೇನೀ ॥ ೨ ॥ ಎಂದು ಹೇಳುತ್ತದೆ. ಅಂದರೆ ಆ ವಿಭೇದಗಳ ಮೂಲವು ಶೌರಸೇನೀ ಭಾಷೆಯಾಗಿರುತ್ತದೆಂದು ಹೇಳುತ್ತದೆ. ಅರ್ಥಾತ್ ಸಂಸ್ಕೃತದಿಂದ ರೂಪಾಂತರವಾಗಿ "ಶೌರಸೇನೀ" ಯಾಗಿ ಮಾರ್ಪಟ್ಟ ಶಬ್ದಗಳು—ಪೈಶಾಚೀ ಮತ್ತು ಮಾಗಧೀ ಪರಿಚ್ಛೇದಗಳಲ್ಲಿ ಹೇಳಿರುವ ನಿಯಮಗಳಿಗೆ ಅನುಸಾರವಾಗಿ ಪೈಶಾಚಿಯಾಗಿಯೊ, ಮಾಗಧಿಯಾಗಿಯೋ ಮಾರ್ಪಡುತ್ತವೆ. ಹೀಗಿರುವಾಗ, ಪೈಶಾಚೀ ಮತ್ತು ಮಾಗಧಿಯ ನಿಯಮಗಳು ಬರುವ ಮೊದಲೇ ಶೌರಸೇನಿಯ ನಿಯಮಗಳು ಬರಬೇಕಾಗಿದ್ದವು. ಹಾಗಿರದೇ ಶೌರಸೇನೀ ಪರಿಚ್ಛೇದವು ಕಟ್ಟಕಡೆಯಲ್ಲಿರುವುದನ್ನು ಪರಿಶೀಲಿಸುವಾಗ ಯಾರೋ ಉದ್ದೇಶಪೂರ್ವಕವಾಗಿ ಆ ಪರಿಚ್ಛೇದಗಳನ್ನು ತಿರುಗುಮುರುಗು

ಮಾಡಿದ್ದಾರೆಂದು ಹೇಳಬೇಕಾಗುತ್ತದೆ; ಏಕೆಂದರೆ ಶೌರಸೇನಿಯ ನಿಯಮಗಳನ್ನು ಹೇಳುವಮೊದಲೇ ಅದರಿಂದ ಹುಟ್ಟಿದ ಪೈಶಾಚೀ ಮತ್ತು ಮಾಗಧಿಗಳ ನಿಯಮ ಗಳನ್ನು ಹೇಳುವುದೆಂದರೆ ತಂದೆಯು ಹುಟ್ಟುವ ಮೊದಲೇ ಮಗನು ಹುಟ್ಟಿದ ನೆಂದು ಹೇಳಿದಂತಾಗುತ್ತದೆ.

ಪ್ರಾಕೃತಭಾಷೆಗಳು ವಿಕಾಸಹೊಂದಿದ ರೀತಿಯನ್ನು ಸರಿಯಾಗಿ ಪರಿಶೀಲಿ ಸಿದರೆ ಕ್ರಿಸ್ತನ ನಾಲ್ಕನೆಯ ಶತಮಾನದಲ್ಲಿ "ಪ್ರಾಕೃತ" ವಿಭೇದವು ವ್ಯವಸ್ಥಿತವಾದ ರೂಪವನ್ನು ಪಡೆದಿತ್ತೆಂದು ಹೇಳಲಾಗುವುದಿಲ್ಲ. ಅಲ್ಲದೇ ಪ್ರಾಕೃತ ಪ್ರಕಾಶದ ಮೊದಲನೆಯ ಪರಿಚ್ಛೇದದ ಆರಂಭವು ಕೂಡ ಕ್ರಮವಾಗಿ ಆಗಿಲ್ಲ. ಅಂದರೆ ಯಾವ ಭಾಷೆಯ ನಿಯಮಗಳು ಹೇಳಲಾಗುತ್ತಿವೆ ಎಂದು ಹೇಳದೇನೇ ಗ್ರಂಥವು ಆರಂಭವಾಗಿದೆ. ನಾಂದೀ ಶ್ಲೋಕದಲ್ಲಿ "ಪ್ರಾಕೃತ" ಎಂಬ ಶಬ್ದವಿದ್ದರೂ ಅದು ಸೂತ್ರರೂಪದಿಂದ ಉಕ್ತವಾಗಿಲ್ಲ. ಶೌರಸೇನೀ ಪರಿಚ್ಛೇದವು "ಶೌರಸೇನೀ ॥ ೧ ॥ ಎಂದು ಪ್ರಾರಂಭಿಸಲ್ಪಟ್ಟು "ಪ್ರಕೃತಿಃ ಸಂಸ್ಕೃತಮ್ ॥ ೨ ॥ ಅಂದರೆ ಮೂಲವು ಸಂಸ್ಕೃತವಾಗಿದೆಯೆಂದು ಕ್ರಮವಾಗಿ ನಿಯಮಗಳು ಹೇಳಲ್ಪಟ್ಟಿವೆ. ಆಚಾರ್ಯಹೇಮಚಂದ್ರನು ತನ್ನ ಪ್ರಾಕೃತ ಅಧ್ಯಾಯವನ್ನು ಅಥಪ್ರಾಕೃತಮ್ ॥ ೧ ॥ ಎಂದು ಆರಂಭಿಸಿದ್ದಾನೆ. ಆದರೆ ಪ್ರಾಕೃತ ಪ್ರಕಾಶದಲ್ಲಿ ಅಂಥ ಯಾವ ಸೂಚನೆಯನ್ನೂ ಕೊಡದೇ ಆದೇರತಃ ॥ ೧ ॥ ಎಂದು ಸೂತ್ರವು ಹೇಳಲ್ಪಟ್ಟಿದೆ. ವಾಸ್ತವವಾಗಿ ಆ ಪರಿಚ್ಛೇದಗಳು ಶೌರಸೇನೀ, ಮಾಗಧೀ, ಮತ್ತು ಪೈಶಾಚೀ ಎಂದು ಇರಬೇಕಾಗಿದ್ದವು. ಮತ್ತು ಹೇಮಚಂದ್ರನ ವ್ಯಾಕರಣದಲ್ಲಿ ಆ ವಿಭೇದ ಗಳು ಅದೇ ಕ್ರಮದಲ್ಲಿ ಬಂದಿವೆ.

ವರರುಚಿಯ ವ್ಯಾಕರಣವು "ಪ್ರಾಕೃತ" ಎಂಬ ವಿಭೇದವು ಬಳಕೆಗೆ ಬರುವ ಮೊದಲೇ ರಚಿಸಲ್ಪಟ್ಟಿರಬೇಕು. ತರುವಾಯ ಅದಕ್ಕೆ ಟೀಕೆ ಬರೆದ ಪಂಡಿತ ಭಾಮಹನು, ತನ್ನ ಕಾಲದಲ್ಲಿ ಬಳಕೆಯಲ್ಲಿದ್ದ ಕೆಲವು ಮಾರ್ಪಾಟುಗಳ ಸೂತ್ರ ಗಳನ್ನು ಅದರಲ್ಲಿ ಸೇರಿಸಿ ಅದಕ್ಕೆ ಪ್ರಾಕೃತ ಎಂಬ ಹೆಸರನ್ನು ಕೊಟ್ಟಿರಬಹುದು. ಆದರೆ ಅವನು ಪರಿಚ್ಛೇದಗಳನ್ನು ತಿರುಗುಮುರುಗುಮಾಡಿರಲಾರ. ಮಾಗಧಿಯು ಶೌರಸೇನಿಯಿಂದಲೇ ರೂಪಾಂತರವಾದುದೆಂದು ತಿಳಿದುಬರುವುದರಿಂದ ಚಕ್ರ ವರ್ತಿ ಅಶೋಕನ ಕಾಲದಲ್ಲಿ ಶೌರಸೇನಿಯು ಬಳಕೆಗೆ ಬಂದಿರಬಹುದು. ಶೌರಸೇನೀ ಮತ್ತು ಪ್ರವಚನಗಳ ಭಾಷೆಯಲ್ಲಿನ ಮುಖ್ಯಭೇದವೆಂದರೆ, ಬೇರೆ ವ್ಯಂಜನ ಗಳೊಂದಿಗೆ ಕೂಡಿರದ 'ತ' ಮತ್ತು ಶಬ್ದದ ಆದಿಯಲ್ಲಿರದ 'ತ'ಕಾರವು ದಕಾರ ವಾಗಿ ಮಾರ್ಪಡುವುದು; ಕ,ಗ, ಚ,ಜ, ಪ, ಯ ಎಂಬ ವ್ಯಂಜನಗಳು ಲೋಪವಾಗಿ

ಅವುಗಳಲ್ಲಿನ ಸ್ವರ ಮಾತ್ರ ಉಳಿಯುವುದು. ಮತ್ತು ಟ ಇದ್ದುದು ಡ ಆಗಿ ಮಾರ್ಪಡುವುದಾಗಿರುತ್ತದೆ. ಉದಾ:—ಪ್ರವಚನಗಳ ಭಾಷೆಯಲ್ಲಿ ಘೋಟಕೋ ಗಚ್ಛತಿ ಇದ್ದರೆ ಅದು ಶೌರಸೇನೀಯಲ್ಲಿ ಘೋಡಓ ಗಚ್ಛದಿ ಆಗುವುದು.

ಪ್ರಾಕೃತ ಪ್ರಕಾಶದಲ್ಲಿ ಪ್ರಾಕೃತ ಎಂಬ ವಿಭೇದವನ್ನು ಸೇರಿಸಿದವನು ಪಂಡಿತ ಭಾಮಹನಾಗಿರಬಹುದಾದರೂ ಅದರಲ್ಲಿನ ಪರಿಚ್ಛೇದಗಳನ್ನು ಹಿಂದು ಮುಂದು ಮಾಡಿದವನು ಅವನಾಗಿರದೇ ಯಾವನೋ ಅರ್ವಾಚೀನ ಮಹಾರಾಷ್ಟ್ರೀಯ ಪಂಡಿತನಾಗಿರಬೇಕೆಂದು ಹೇಳಬಹುದಾಗಿದೆ. ಏಕೆಂದರೆ ಅವನಿಗೆ ತನ್ನ ತಾಯಿ ನುಡಿಯಾಗಿರುವ ಮಹಾರಾಷ್ಟ್ರಿಯು ಬಹಳ ಪ್ರಾಚೀನವಾದುದೆಂದು ಸಾಧಿಸ ಬೇಕೆಂಬ ಉದ್ದೇಶವಿದ್ದಿತು. ಆದುದರಿಂದ ಅವನು ಪ್ರಾಕೃತ ಪ್ರಕಾಶದಲ್ಲಿನ ಪರಿ ಚ್ಛೇದಗಳನ್ನು ಹಿಂದು-ಮುಂದಾಗಿ ಮಾಡಿ ಶೌರಸೇನೀ ಪರಿಚ್ಛೇದದ ಕೊನೆಯಲ್ಲಿ "ಶೇಷಂ ಮಹಾರಾಷ್ಟ್ರೀವತ್" ಎಂಬ ಒಂದು ಸೂತ್ರವನ್ನು ಸೇರಿಸಿದ್ದಾನೆ. ಮತ್ತು "ಅನುಕ್ತಂ ಕಾರ್ಯಂ ಮಹಾರಾಷ್ಟ್ರೀವಜ್ ಜ್ಞೇಯಮ್" ಎಂತಲೂ "ಮಹಾರಾಷ್ಟ್ರೀ ಪದೇನಾತ್ರ ಪ್ರಾಕೃತಸ್ಯ ಗ್ರಹಣಂ ಬೋಧ್ಯಮ್" ಎಂತಲೂ ಟೀಕೆಯನ್ನು ಬರೆದಿದ್ದಾನೆ. ಅಂದರೆ "ಉಳಿದುದು ಮಹಾರಾಷ್ಟ್ರೀಯಂತೆ" ಎಂಬುವರ ತಾತ್ಪರ್ಯವು "ಈ ಪರಿಚ್ಛೇದದಲ್ಲಿ ಹೇಳದಿರುವ ನಿಯಮಗಳು ಮಹಾರಾಷ್ಟ್ರಿಯಂತೆ ತಿಳಿಯಬೇಕು" ಮತ್ತು "ಮಹಾರಾಷ್ಟ್ರೀ ಎಂದರೆ ಪ್ರಾಕೃತ ಎಂದು ತಿಳಿಯತಕ್ಕದ್ದು" ಎಂದು ಹೇಳಿದ್ದಾನೆ.

ಪ್ರಾಕೃತ ಪ್ರಕಾಶದಲ್ಲಿ ಮೊದಲು ಎಲ್ಲಿಯೂ "ಮಹಾರಾಷ್ಟ್ರ" ಇಲ್ಲವೇ "ಮಹಾರಾಷ್ಟ್ರೀ" ಎಂಬ ಶಬ್ದಗಳು ಬಂದಿರದೇ ಕಟ್ಟಕಡೆಗೆ ಆಕಸ್ಮಿಕವಾಗಿ ಎಂಬಂತೆ ಮಹಾರಾಷ್ಟ್ರೀವತ್ ಎಂಬ ಶಬ್ದವು ಬಂದಿರುವುದನ್ನು, ಮತ್ತು ಪ್ರಾಕೃತ ಪ್ರಕಾಶದ ಆರಂಭದಲ್ಲಿ, ಭಾಮಹನದೆಂದು ಎಣಿಸಲಾದ ನಾಂದೀ ಶ್ಲೋಕದಲ್ಲಿ ಹಾಗೂ ಮಹಾರಾಷ್ಟ್ರೀವತ್ ಎಂಬ ಸೂತ್ರದ ಟೀಕೆಯಲ್ಲಿ ಹೊರತು ಬೇರೆ ಲ್ಲಿಯೂ "ಪ್ರಾಕೃತ" ಎಂಬ ಶಬ್ದವು ಇಲ್ಲದಿರುವುದನ್ನು ಪರಿಶೀಲಿಸುವಾಗ ಆವೆರಡು ಶಬ್ದಗಳೂ ವರರುಚಿಯ ತರುವಾಯದವರು ಅವನ ಗ್ರಂಥದಲ್ಲಿ ಸೇರಿ ಸಿದವುಗಳೆಂದು ಹೇಳಬೇಕಾಗುತ್ತದೆ. ಮತ್ತು ಪ್ರಾಕೃತಪ್ರಕಾಶದಲ್ಲಿ "ಮಹಾ ರಾಷ್ಟ್ರೀವತ್" ಎಂಬ ಸೂತ್ರವನ್ನು ಸೇರಿಸಿದವನೇ ಅದರಲ್ಲಿನ ಪರಿಚ್ಛೇದಗಳನ್ನು ಹಿಂದುಮುಂದಾಗಿ ಮಾಡಿದವನೆಂದು ತಿಳಿಯಬೇಕಾಗುತ್ತದೆ. ಅಲ್ಲದೇ ಯಾವು ದೊಂದು ಭಾಷೆಯು ಬಳಕೆಗೆ ಬಂದು ಸ್ಥಿರತೆಯನ್ನು ಪಡೆದ ಬಹುಕಾಲ ತರುವಾ ಯವೇ ಆ ಭಾಷೆಯ ನಿಯಮಗಳನ್ನು ಕಂಡುಹಿಡಿದು ವ್ಯಾಕರಣಗ್ರಂಥವನ್ನು

ರಚಿಸಲಾಗುತ್ತದೆಂಬ ತಥ್ಯವನ್ನು ಗ್ರಹಿಸಿದರೆ, ವರರುಚಿಯ ಕಾಲದಲ್ಲಿ ಬಳಕೆಯಲ್ಲಿದ್ದ ಶೌರಸೇನಿಯಲ್ಲಿ ಕೆಲವು ಹೊಸ ಮಾರ್ಪಾಟುಗಳು ತಲೆದೋರಿರಬಹುದಾಗಿದ್ದರೂ ಪ್ರಾಕೃತವೆಂದು ಕರೆಯಲಾದ ವಿಭೇದವು ಸ್ಪಷ್ಟರೀತಿಯಿಂದ ಬಳಕೆಗೆ ಬಂದಿರಲಾರದು. ಆದುದರಿಂದ ವರರುಚಿಯ ಮೂಲಗ್ರಂಥದಲ್ಲಿ ಶೌರಸೇನೀ, ಮಾಗಧೀ ಮತ್ತು ಪೈಶಾಚೀಗಳೆಂಬ ಮೂರೇ ವಿಭೇದಗಳು ಇದ್ದಿರಬಹುದು ಹೊರತು ಪ್ರಾಕೃತವೆಂಬ ವಿಭೇದವು ಇರಲಾರದು. ಅಂದರೆ ಆರನೆಯ ಶತಮಾನದವನಾದ ಪಂಡಿತ ಭಾಮಹನು, ಐದನೆಯ ಶತಮಾನದಲ್ಲಿ—ರಾಜಾಪ್ರವರಸೇನನು ರಚಿಸಿದ ದಶಮುಖವಧ ಕಾವ್ಯ ಅಥವಾ ಸೇತುಬಂಧ ಹಾಗೂ ಇತರ ನಾಟಕಗಳಲ್ಲಿನ ಪ್ರಯೋಗಗಳನ್ನು ಪರಿಶೀಲಿಸಿದ ತರುವಾಯ, ಆ ಪ್ರಯೋಗಗಳ ಆಧಾರದಿಂದ ಹೊಸಸೂತ್ರಗಳನ್ನು ರಚಿಸಿ–"ಪ್ರಾಕೃತ" ಎಂಬ ಹೆಸರಿನಿಂದ ವರರುಚಿಯ ಗ್ರಂಥದಲ್ಲಿ ಸೇರಿಸಿದ್ದನೆಂದು ತಿಳಿದರೆ ತಪ್ಪಾಗದು.

ಹಾಗೆಯೇ "ಶೇಷಂ ಮಹಾರಾಷ್ಟ್ರೀವತ್" ಎಂಬ ಸೂತ್ರವು ಹದಿಮೂರನೆಯ ಶತಮಾನಕ್ಕಿಂತ ಮೊದಲು ಪ್ರಾಕೃತ ಪ್ರಕಾಶದಲ್ಲಿ ಸೇರಿರಲಾರದು. ಏಕೆಂದರೆ ಹದಿನೆರಡನೆಯ ಶತಮಾನದವನೂ, ಗುಜರಾತದ ನಿವಾಸಿಕನೂ ಆಗಿದ್ದ ಆಚಾರ್ಯ ಹೇಮಚಂದ್ರನು ತನ್ನ ವ್ಯಾಕರಣದಲ್ಲಿ ಮಹಾರಾಷ್ಟ್ರೇ ॥ ೮–೧–೬೯॥ ಮತ್ತು ಮಹಾರಾಷ್ಟ್ರೇ ಹರೋ॥ ೮–೨–೧೧೯॥ ಎಂದು ಮಹಾರಾಷ್ಟ್ರ ಎಂಬ ಶಬ್ದವನ್ನು ಎರಡು ಸರ್ತಿ ಉಲ್ಲೇಖಿಸಿದ್ದರೂ, ಅವನು ಮಹಾರಾಷ್ಟ್ರೀ ಎಂಬ ಶಬ್ದವನ್ನು ತನ್ನ ವ್ಯಾಕರಣದಲ್ಲಿ ಬಳಸಿಲ್ಲ. ಅಂದರೆ ಆತನ ಕಾಲದಲ್ಲಿ ಪ್ರಾಕೃತ ವಿಭೇದವನ್ನು "ಮಹಾರಾಷ್ಟ್ರೀ" ಎಂದು ಕರೆಯುತಿದ್ದರೆಂದಾದರೆ ವ್ಯಾಕರಣಾಚಾರ್ಯನಾದ ಅವನು–"ಮಹಾರಾಷ್ಟ್ರೀ" ಶಬ್ದವನ್ನು ತನ್ನ ವ್ಯಾಕರಣವಲ್ಲಿ ಉಲ್ಲೇಖಿಸದಿರುತಿರಲಿಲ್ಲ. ಹೇಮಚಂದ್ರನ ಪ್ರಾಕೃತಕ್ಕೆ ಇಂಗ್ಲೀಷಿನಲ್ಲಿ ಟಿಪ್ಪಣಿ ಬರೆದ ಡಾ. ಪಿ. ಎಲ್ ವೈದ್ಯ ಎಂಬ ಮರಾಠಿಗರು ತನ್ನ ಟಿಪ್ಪಣಿಗಳಲ್ಲಿ ಪ್ರಾಕೃತವನ್ನು ಹಲವು ಸರ್ತಿ "ಮಹಾರಾಷ್ಟ್ರೀ" ಎಂದು ಕರೆದರೂ ಮೂಲದಲ್ಲಿ ಮಹಾರಾಷ್ಟ್ರೀ ಶಬ್ದವು ಬಳಸಲ್ಪಟ್ಟಿಲ್ಲವೆಂಬುದನ್ನು ಅವರು ಕಡಿಗಣಿಸಿದ್ದಾರೆ.

೩. ಆಚಾರ್ಯ ಸಿದ್ಧಹೇಮಚಂದ್ರಸೂರಿ. ಮಹಾವಿದ್ವಾಂಸನಾಗಿದ್ದ ಈ ಜೈನಸಾಧುವು ಶಕ ೧೦೧೧ರಿಂದ ೧೦೯೪ರ ತನಕ ಜೀವಿಸಿದ್ದು ಗುರ್ಜರದೇಶವನ್ನಾಳುತಿದ್ದ ಚಾಲುಕ್ಯರಾಜ ಜಯಸಿಂಹನ ಆಸ್ಥಾನದಲ್ಲಿ–ಆಸ್ಥಾನಪಂಡಿತನೂ, ಕವಿಯೂ ಆಗಿದ್ದ. ಆತನು ರಚಿಸಿದ ನಾಲ್ಕು ಗ್ರಂಥಗಳು—೧. ದ್ವ್ಯಾಶ್ರಯ ಮಹಾಕಾವ್ಯ ೨. ಅಭಿಧಾನ ಚಿಂತಾಮಣಿ. ೩. ಅನೇಕಾರ್ಥಸಂಗ್ರಹ ಮತ್ತು ೪.

ಸಿದ್ಧಹೇಮ–ಶಬ್ದಾನುಶಾಸನ–ಎಂಬವುಗಳು ಈಗಲೂ ಉಪಲಬ್ಧವಾಗಿವೆ. ಅವನು ರಚಿಸಿದ ಸಿದ್ಧಹೇಮ ಶಬ್ದಾನುಶಾಸನವೆಂಬುದು ಸಂಸ್ಕೃತದ ವ್ಯಾಕರಣವಾಗಿದ್ದು ಅದರ ಎಂಟನೆಯ ಅಧ್ಯಾಯವು—ಅವನ ಹೆಸರಿನಲ್ಲಿ ಪ್ರಖ್ಯಾತಿಪಡೆದ ಪ್ರಾಕೃತವ್ಯಾಕರಣವಾಗಿರುತ್ತದೆ. ಆ ಎಂಟನೆಯ ಅಧ್ಯಾಯದಲ್ಲಿ ನಾಲ್ಕುಪಾದಗಳಿವೆ ಮತ್ತು ಅವುಗಳಲ್ಲಿ ೧. ಪ್ರಾಕೃತ, ೨. ಶೌರಸೇನೀ; ೩. ಮಾಗಧೀ: ೪. ಪೈಶಾಚೀ; ೫. ಚೂಲಿಕಾ ಪೈಶಾಚೀ ಮತ್ತು ೬. ಅಪಭ್ರಂಶ ಎಂಬುದಾಗಿ ಪ್ರಾಕೃತದ ಆರುವಿಭೇದಗಳು ವಿಸ್ತಾರವಾಗಿ ವಿವರಿಸಲ್ಪಟ್ಟಿವೆ ಮತ್ತು 'ಆರ್ಷವ್' ಎಂಬುದಾಗಿ ಅರ್ಧಮಾಗಧಿಯ ಸಂಬಂಧದಲ್ಲಿ ನಡುನಡುವೆ ಅಸ್ಪಷ್ಟವಾಗಿ ಕೆಲವು ಸೂಚನೆಗಳನ್ನು ಕೊಟ್ಟಿದ್ದಾನೆ. ಅದರಲ್ಲಿ ಅಪಭ್ರಂಶ ವಿಭೇದದ ಹಲವು ಸುಂದರ ಕವಿತೆಗಳು ಉದಾಹರಣೆಯಾಗಿ ಬಂದಿವೆ. ಹಿಂದಿನ ವಿಭೇದಗಳಲ್ಲಿ ಹೇಳಿದ ಯಾವುದೊಂದು ನಿಯಮಕ್ಕೆ ಒಳಪಡದ ನಾನಾ ಬಗೆಯ ಶಬ್ದರೂಪಗಳು ಅಪಭ್ರಂಶ ವಿಭಾಗದಲ್ಲಿ ಬಂದಿವೆ. ಆದುದರಿಂದ ಭಾರತವರ್ಷದಲ್ಲಿ ಬಳಕೆಯಲ್ಲಿರುವ ಸಕಲಪ್ರಾಕೃತ ವಿಭೇದಗಳ ಒಂದೆರಡು ಶಬ್ದಗಳು ಅಪಭ್ರಂಶ ವಿಭಾಗದಲ್ಲಿ ದೊರೆಯುತ್ತವೆ. ಹಾಗಿದ್ದರೂ ಅಪಭ್ರಂಶ ವಿಭಾಗದಲ್ಲಿ ಪ್ರಾಚೀನ ಹಿಂದೀ ಭಾಷೆಯ ರೂಪಗಳು ಅತ್ಯಧಿಕ ಸಂಖ್ಯೆಯಲ್ಲಿವೆ.

ಸಂಸ್ಕೃತದಿಂದ ರೂಪಾಂತರ ಹೊಂದಿದ ಮೊತ್ತಮೊದಲಿನ ಪ್ರಾಕೃತ ವಿಭೇದವು ಬುದ್ಧದೇವನ ಪ್ರವಚನಗಳ ಭಾಷೆಯಾಗಿರುವುದರಿಂದ, ಅದರಲ್ಲಿನ ರೂಪಾಂತರಗಳು ಶೌರಸೇನಿಯಲ್ಲಿಯೂ ಇವೆ. ಆದುದರಿಂದ ಹಿಂದೆ ಕೊಟ್ಟಿರುವ ಆ ರೂಪಾಂತರಗಳ ನಿಯಮಗಳನ್ನು ಬಿಟ್ಟು—ಶೌರಸೇನಿಯಲ್ಲಿ ಮತ್ತು ಹೊಸ ಪ್ರಾಕೃತದಲ್ಲಿ ಅಥವಾ ಕೆಲವರು ಮಹಾರಾಷ್ಟ್ರೀ ಪ್ರಾಕೃತವೆಂದು ಕರೆದ ವಿಭೇದದಲ್ಲಿ ಆಗುವ ವಿಶಿಷ್ಟರೂಪಾಂತರಗಳನ್ನು ಮಾತ್ರ ಇಲ್ಲಿ ಮುಂದೆ ವಿವರಿಸಲಾಗುವುದು:—

೧. ಶಬ್ದದ ಆದಿಯಲ್ಲಿರುವ ಮತ್ತು ಭಿನ್ನವರ್ಗದ ವ್ಯಂಜನದೊಂದಿಗೆ ಕೂಡಿರುವುದನ್ನು ಬಿಟ್ಟು ಇತರ ಸ್ಥಾನಗಳಲ್ಲಿರುವ "ತ"ಕಾರವು "ದ"ಕಾರವಾಗಿ ಮಾರ್ಪಡುತ್ತದೆ. ಟ ಮತ್ತು ಠಗಳು ಡ ಮತ್ತು ಢ ಆಗಿ ಮಾರ್ಪಡುತ್ತವೆ. ಉದಾ:—ಮಾರುತಿ = ಮಾರುದಿ: ಗಚ್ಛತಿ = ಗಚ್ಛದಿ = ಹೋಗುತ್ತಾನೆ-ಳೆ-ತ್ತದೆ ಮಹಾನ್ತ = ಮಹಂದ = ದೊಡ್ಡ: ನಿಶ್ಚಿನ್ತ = ನಿಶ್ಚಿಂದ: ಅಟತಿ = ಅಡದಿ = ಅಲೆಯುತ್ತಾನೆ-ಳೆ-ತ್ತದೆ: ಪಠತಿ = ಪಢದಿ = ಓದುತ್ತಾನೆ. ಅಸ್ತುತ್ತಾನೆ. ಘೋಟಕಃ = ಘೋಡಓ = ಕುದುರೆ.

೨. "ರ್ಯ" ಇದ್ದುದು ಯ್ಯ ಇಲ್ಲವೇ ಜ್ಜ ಆಗುತ್ತದೆ. ಉದಾ:—ಆರ್ಯಃ = ಅಜ್ಜೋ; ಆರ್ಯಪುತ್ರಃ = ಅಯ್ಯಉತ್ತೋ; ಕಾರ್ಯವ್ = ಕಜ್ಜಂ.

೩. ಅಧಿಕಾಂಶ ಶಬ್ದಗಳಲ್ಲಿನ ಕ,ಗ,ಚ,ಜ,ತ,ದ,ಪ,ಯ ಎಂಬ ವ್ಯಂಜನಗಳು ಲೋಪವಾಗಿ ಅವುಗಳಲ್ಲಿನ ಸ್ವರಗಳು ಮಾತ್ರ ಉಳಿಯುತ್ತವೆ. ಇದು ಹೊಸ ಪ್ರಾಕೃತದ ಮುಖ್ಯ ಲಕ್ಷಣವಾಗಿದೆ. ಉದಾ:—ಸಂಸ್ಕೃತ–ಗತಃ = ಶೌರಸೇನೀ = ಗದೋ = ಹೊಸಪ್ರಾಕೃತ–ಗಓ ಇಲ್ಲವೇ ಗಯೋ. ಸಾಗರಃ = ಸಾಅರೋ ಇಲ್ಲವೇ ಸಾಯರೋ = ಕಡಲು; ವಚನವ್ = ವಅಣಂ = ನುಡಿ; ಮಾತು.

೪. "ನ" ಇದ್ದುದು "ಣ" ಆಗುತ್ತದೆ.—ನಯನವ್ = ಣಅಣಂ = ಕಣ್ಣು; ನಟಃ = ಣಡೋ

೫. "ಯ" ಇದ್ದುದು "ಜ" ಆಗುತ್ತದೆ; ಉದಾ:–ಯಮ = ಜಮೋ; ಯಮುನಾ = ಜಉಣಾ.

೬. ಥ ಇದ್ದುದು ಹ ಇಲ್ಲವೇ ಧ ಆಗುತ್ತದೆ. ನಾಥಃ = ಣಾಹೋ ಇಲ್ಲವೇ ಣಾಧೋ ಕಥಮ್ = ಕಹಂ ಇಲ್ಲವೇ ಕಧಂ? = ಹೇಗೆ

೭. ಒಮ್ಮೊಮ್ಮೆ ಭ ಇದ್ದುದು ಹ ಆಗುತ್ತದೆ: ಉದಾ:—ಭವತಿ = ಹೋದಿ ಇಲ್ಲವೇ ಭೋದಿ.

೮. ಖ,ಘ,ಥ,ಧ,ಭ ಇವುಗಳ ಬದಲಿಗೆ "ಹ" ಬರುತ್ತದೆ. ಉದಾ:—ನಖ = ಣಹ = ಉಗುರು ಮೇಘ = ಮೇಹ = ಮುಗಿಲು. ಕಥಾ = ಕಹಾ = ಕತೆ; ಬಧಿರಃ = ಬಹಿರೋ = ಕಿವುಡ; ನಭ = ಣಹ = ಬಾನು.

೯. ಶೌರಸೇನಿಯ ಪೂರ್ವಕಾಲಿಕ ಕೃದಂತವು ಕ್ರಿಯೆಗೆ "ತಾ" "ದೂಣ" ಇಲ್ಲವೇ "ಇಯ" ಕೂಡಿ ಸಿದ್ಧವಾಗುತ್ತದೆ. ಉದಾ:—ಭೂ = ಆಗು. ಇದರ ಕೃದಂತವು–ಭವಿಯ; ಇಲ್ಲವೇ ಭೋತ್ತಾ ಇಲ್ಲವೇ ಭೋದೂಣ ಎಂದಾಗುತ್ತದೆ. ಪಠ = ಓದು ಇದರ ಕೃದಂತವು ಪಢಿಯ = ಪಢಿದೂಣ = ಪಢಿತ್ತಾ = ಓದಿ; ಅಥವಾ ಓದಿದ ತರುವಾಯ.

೧೦. ಕೃ = ಮಾಡು ಮತ್ತು ಗಮ್ = ಹೋಗು ಧಾತುಗಳ ಪೂರ್ವಕಾಲಿಕ ಕೃದಂತಗಳು ವರರುಚಿಯ ಪ್ರಾಕೃತ ಪ್ರಕಾಶದಲ್ಲಿನ ವೈಕಲ್ಪಿಕ ನಿಯಮದಂತೆ(೧೨–೧೦) "ಕದುಅ" ಮತ್ತು "ಗದುಅ" ಎಂದಾಗುತ್ತವೆ. ಹೇಮಚಂದ್ರನ ಸೂತ್ರದಂತೆ (೮–೪–೧೭೨) "ಕಡುಅ" ಮತ್ತು "ಗಡುಅ" ಎಂದಾಗುತ್ತವೆ. ಇಲ್ಲದಿದ್ದರೆ ಹಿಂದಿನ ೯ನೆಯ ನಿಯಮದಂತೆ ಕರಿದೂಣ ಮತ್ತು ಗಚ್ಛಿದೂಣ ಎಂದಾಗುತ್ತವೆ.

೧೧. ಹೊಸ ಪ್ರಾಕೃತದಲ್ಲಿನ ಪೂರ್ವಕಾಲಿಕ ಕೃದಂತವು ವರರುಚಿಯ ನಿಯಮದಂತೆ ಕ್ರಿಯೆಗೆ "ಊಣ" ಕೂಡಿ ಸಿದ್ಧಿಸುತ್ತದೆ. ಉದಾ—ಘೇ ಊಣ = ತೆಗೆದುಕೊಂಡು; ಕಾಊಣ = ಮಾಡಿ; ದಾಊಣ = ಕೊಟ್ಟು ಇತ್ಯಾದಿ. ಹೇಮಚಂದ್ರನ ಸೂತ್ರದಂತೆ ಊಣ ಮಾತ್ರವಲ್ಲದೇ ತೂಣ ಮತ್ತು ಆಣಗಳು ಕೂಡುತ್ತವೆ. ಉದಾ:—ಘೇತೂಣ; ಭೇತ್ತೂಣ ಇಲ್ಲವೇ ಭೇತ್ತುಆಣ = ಒಡೆದು, ಭೇದಿಸಿ.

೧೨. ಶಬ್ದಗಳಲ್ಲಿನ "ದ"ಕಾರವು ಒಮ್ಮೊಮ್ಮೆ "ಲ"ಕಾರವಾಗುತ್ತದೆ. ಉದಾ:—ದೋಹದ: = ದೋಹಲೋ = ಬಸುರಿಯಬಯಕೆ. ಆರ್ದ್ರವ್ = ೧. ಒದ್ದಂ ಇಲ್ಲವೇ ಒಲ್ಲಂ = ಚಂಡಿ ೨. ಅದ್ದಂ ಇಲ್ಲವೇ ಅಲ್ಲಂ = ಹಸಿಶುಂಠಿ.

ಇವುಗಳಲ್ಲದೇ ಅಪಭ್ರಂಶವಿಭೇದದಲ್ಲಿ ಮುಂದಿನ ಕೆಲವು ವಿಶೇಷತೆಗಳಿವೆ.

೧. ಅಕಾರಾಂತ ನಾಮಪದಗಳು ಪುಲ್ಲಿಂಗ ಮತ್ತು ನಪುಂಸಲಿಂಗವೆಂಬ ಭೇದವಿಲ್ಲದೇ ಪ್ರಥಮಾವಿಭಕ್ತಿಯ ಏಕವಚನದಲ್ಲಿ "ಉ"ಕಾರಾಂತವಾಗುತ್ತವೆ. ಹಳೆಯ ಹಿಂದಿಯಲ್ಲಿ ಈ ನಿಯಮವು ಬಳಕೆಯಲ್ಲಿತ್ತು. ಸಂತ ತುಲಸೀದಾಸರು ತನ್ನ ರಾಮಚರಿತಮಾನಸದಲ್ಲಿ ಅಂಥ ಪ್ರಯೋಗಗಳನ್ನು ಬಹಳ ಹೆಚ್ಚು ಸರ್ತಿ ಮಾಡಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಸಾರಸ್ವತ ಬ್ರಾಹ್ಮಣರು ನುಡಿಯುವ ಕೊಂಕಣಿಯಲ್ಲಿ ಪುಲ್ಲಿಂಗ ಶಬ್ದಗಳು ಮಾತ್ರ ಉಕಾರಾಂತವಾಗುತ್ತವೆ.

೨. ವರ್ತಮಾನಕಾಲಿಕ ಕ್ರಿಯಾರೂಪಗಳು ಸಾಮಾನ್ಯವಾಗಿ ಹೊಸ ಪ್ರಾಕೃತದಂತೆಯೇ ಆಗುತ್ತವಾದರೂ ಕೆಲವು ಸಂದರ್ಭಗಳಲ್ಲಿ ೧. ಉ; ಹುಂ. ೨. ಓ. ಹು. ೩. ಹಿಂ ಪ್ರತ್ಯಯಗಳಿಂದ ಕೊನೆಗೊಳ್ಳುತ್ತವೆ.

೩. ಭೂತಕಾಲಿಕ ಕೃದಂತಗಳು ಹೊಸ ಪ್ರಾಕೃತದಂತೆಯೇ ಆಗುತ್ತವಾದರೂ ಅವುಗಳು ಓಕಾರಾಂತವಾಗಿರದೇ ಏಕವಚನದಲ್ಲಿ ಉಕಾರಾಂತವಾಗಿಯೂ ಬಹುವಚನದಲ್ಲಿ ಆಕಾರಾಂತವಾಗಿಯೂ ಇರುತ್ತವೆ.

೪. ಪೂರ್ವಕಾಲಿಕ ಕೃದಂತಗಳು—ಇ. ಪ್ಪಿ. ಪ್ಪಿಣು ಮೊದಲಾದ ಪ್ರತ್ಯಯಗಳಿಂದ ಕೊನೆಗೊಳ್ಳುತ್ತವೆ. ಉದಾ:—ಕರಿ = ಮಾಡಿ: ಮೇಲ್ಲಿವಿ = ಬಿಟ್ಟು. ಲಾಇವಿ = ತಗಲಿ: ಬ್ರೋಪ್ಪಿ ಇಲ್ಲವೇ ಬ್ರೋಪ್ಪಿಣು = ನುಡಿದು ಇತ್ಯಾದಿ.—

ಪ್ರಾಚೀನ ಸಂಸ್ಕೃತ ಕವಿಗಳು ತಾವು ರಚಿಸಿದ ನಾಟಕಗಳಲ್ಲಿ ಹಲವು ಬಗೆಯ ಪ್ರಾಕೃತ ವಿಭೇದಗಳನ್ನು ಬಳಸಿದ್ದಾರೆ. ಅವರು ಗದ್ಯದಲ್ಲಿ ಶೌರಸೇನಿಯನ್ನೂ ಪದ್ಯದಲ್ಲಿ ಹೊಸಪ್ರಾಕೃತವನ್ನೂ ಬಳಸಿದ್ದಾರೆ. ಸಂಸ್ಕೃತ ನಾಟಕಗಳಲ್ಲಿ ಉಚ್ಚ

ವರ್ಗದ ಸ್ತ್ರೀಯರು, ವಿದೂಷಕ, ದ್ವಾರಪಾಲ, ಪ್ರತೀಹಾರಿ ಮೊದಲಾದವರು ಶೌರಸೇನಿಯಲ್ಲಿ ಮಾತಾಡುತ್ತಾರೆ. ಮಕ್ಕಳು, ಸೇವಕರು, ಮತ್ತು ಕೆಳವರ್ಗದ ಜನರು ಮಾಗಧಿಯಲ್ಲಿ ನುಡಿಯುತ್ತಾರೆ. ತೀರ ಕೀಳುವರ್ಗದ ಜನರು ಪೈಶಾಚೀ ಆಡುತ್ತಾರೆ. ಮಹಾಕವಿ ಶೂದ್ರಕನು ತಾನು ರಚಿಸಿದ ಮೃಚ್ಛಕಟಿಕ ನಾಟಕದಲ್ಲಿ ಕೆಲವು ಪಾತ್ರಗಳ ಮುಖಾಂತರ ಆವಂತೀ, ಢಕ್ಕ ಮತ್ತು ಚಾಂಡಾಲೀ ಭಾಷೆಗಳನ್ನು ಆಡಿಸಿದ್ದಾನೆ. ಶೌರಸೇನೀ ಮತ್ತು ಹೊಸಪ್ರಾಕೃತಗಳ ಮಿಶ್ರಣವೇ ಆವಂತಿಯೆಂಬುದಾಗಿ ಭಾಷಾವಿದರ ಅಭಿಪ್ರಾಯವಿದೆ. ಅಪಭ್ರಂಶವಿಭೇದವು ಬಹಳ ಅರ್ವಾಚೀನವಾದುದು. ಹೀಗಿದ್ದರೂ, ಯಾರೋ ಒಬ್ಬರು ಮಹಾಕವಿ ಕಾಳಿದಾಸನ ವಿಕ್ರಮೋರ್ವಶೀಯನಾಟಕದಲ್ಲಿ–ಅಪಭ್ರಂಶ ಭಾಷೆಯನ್ನು ಸೇರಿಸಿದ್ದಾರೆ. ಇಲ್ಲಿ ಮುಂದೆ ಮಹಾಕವಿಗಳಾದ ಭಾಸ, ಕಾಳಿದಾಸ, ರಾಜಾಶೂದ್ರಕ, ಮತ್ತು ಭವಭೂತಿ—ಇವರುಗಳ ನಾಟಕಗಳಿಂದ ಒಂದೆರಡು ಉದಾಹರಣೆಗಳು ಕೊಡಲಾಗುವವು:—

ಭಾಸಕವಿಯ ಸ್ವಪ್ನವಾಸವದತ್ತನಾಟಕದಲ್ಲಿ ವಿದೂಷಕನ ಉದ್ಗಾರವಿದು– "**ಕಹಿಂ, ವಾಸವದತ್ತಾ?**" ವಾಸವದತ್ತೆಯು ಎಲ್ಲಿ? ಇದು ಅಚ್ಚ ಕೊಂಕಣಿಯಾಗಿದೆ. ಎಲ್ಲಿ? ಎಂಬ ಅರ್ಥದಲ್ಲಿ ಕಹಿಂ (= ಖಿಇಂ) ಎಂಬ ಶಬ್ದವು ಕೊಂಕಣಿಯಲ್ಲಿ ಮಾತ್ರ ಇದೆಯೇ ಹೊರತು ಮರಾಠಿಯಲ್ಲಿ ಇಲ್ಲ. ಮರಾಠಿಯಲ್ಲಿ ಕುಠಾಂ (=ಕುಠೇಂ) ಎಂಬ ರೂಪವಿದೆ.

ವಾಸವದತ್ತೆ—"**ಗದಾ ಏಸಾ; ಅಹೋ ಅಚ್ಚಾಹಿದಂ; ಅಯ್ಯ-ಉತ್ತೋ ಪರಕೇರಓ ಸಂವುತ್ತೋ; ಅವಿದಾ ಸಯ್ಯಾಏ ಮಮ ದುಕ್ಖಂ ವಿಣೋದೇಮಿ ಯದಿ ಣಿದ್ದಂ ಳಭಾಮಿ.** ಅರ್ಥ ಹೋದಳಿವಳು ! ಆಹಾ ಅಪ್ರಿಯವಾದುದು ಘಟಿಸಿತು; ಆರ್ಯಪುತ್ರನು ಪರಕೀಯರವನಾದ." ಅಯ್ಯೋ ನನ್ನ ಈ ದುಃಖವನ್ನು ನಿದ್ರೆಬಿದ್ದರೆ ಹಾಸಿಗೆಯಲ್ಲಾದರೂ ಕಳೆಯುತ್ತೇನೆ (೩ನೆಯ ಅಂಕದ ಕೊನೆ)

ಈ ಅಂಶದಲ್ಲಿ "ಅಯ್ಯಉತ್ತೋ ಪರಕೇರಓ ಸಂವುತ್ತೋ" ಎಂಬುದು ಪ್ರಥಮಾವಿಭಕ್ತಿಯ ಏಕವಚನದ ಪ್ರಯೋಗವಾಗಿದೆ. ಮತ್ತು ಅದು ಸಂಸ್ಕೃತದ "ಆರ್ಯಪುತ್ರಃ ಪರಕೀಯಃ ಸಂವೃತ್ತಃ" ಎಂಬುವರ ಶೌರಸೇನೀ ರೂಪಾಂತರವಾಗಿದೆ. ಆರ್ಯಪುತ್ರಃ ಶಬ್ದವು ವಿಶೇಷ್ಯವಾಗಿದ್ದು ಉಳಿದೆರಡು ಶಬ್ದಗಳು ಅದರ ವಿಶೇಷಣಗಳಾಗಿವೆ. ಅಂದರೆ ಆ ಮೂರೂ ಶಬ್ದಗಳು ಪ್ರಥಮಾವಿಭಕ್ತಿಯ ಏಕವಚನದಲ್ಲಿವೆ. ಮತ್ತು ಮೂರೂ ಶಬ್ದಗಳು ಓಕಾರಾಂತವಾಗಿವೆ.

ಮಹಾಕವಿ ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕದಲ್ಲಿನ ಉದಾಹರಣೆಗಳು ಮುಂದಿನಂತಿವೆ.—

ನಟಿ—"**ಅಜ್ಜಉತ್ತ ಇಯಂ ಮ್ಹಿ! ಆಣವೇದು ಅಜ್ಜೋ ಕೋ ಣಿಓಓ ಅಣುಚಿಟ್ಠಿಅದುತ್ತಿ ॥**" ಅರ್ಥ—ಇಗೋ ಬಂದೆ-ಆರ್ಯಪುತ್ರ! (ಇಲ್ಲಿದ್ದೇನೆ ಆರ್ಯಪುತ್ರ) ಯಾವ ಕೆಲಸವನ್ನು ನೆರವೇರಿಸಬೇಕೆಂದು ಆರ್ಯನು ಆಜ್ಞಾಪಿಸಲಿ; ಇದರಲ್ಲಿ ಕಃ = ಕೋ = ಯಾವನು? ಯಾವ? ನಿಯೋಗಃ = ಣಿಓಓ = ಕಾರ್ಯ ಆರ್ಯಃ = ಅಜ್ಜೋ ಎಂಬ ಶಬ್ದಗಳು ಪುಲ್ಲಿಂಗವಾಗಿದ್ದು ಪ್ರಥಮಾವಿಭಕ್ತಿಯ ಏಕವಚನದಲ್ಲಿವೆ ಮತ್ತು ಓಕಾರಾಂತವಾಗಿವೆ. ಈ ಅಂಶವು ಶೌರಸೇನಿಯಲ್ಲಿದೆ. ನಟಿಯು ಹಾಡುವ ಮುಂದಿನ ಪದ್ಯವು ಹೊಸ ಪ್ರಾಕೃತ ಅಥವಾ ಕೆಲವರು ಅಂದಂತೆ ಮಹಾರಾಷ್ಟ್ರಿಯಲ್ಲಿದೆ—

**ಇಸಿ ಚುಂಬಿಆಇಂ ಭಮರೇಹಿಂ ಸುಉಮಾರದರ-**
**ಕೇಸರಸಿಹಾಇಂ ।**
**ಓದಂಸಯಂತಿ ದಯಮಾಣಾಪಮದಾಓ ಸಿರೀಸಕುಸುಮಾಇಂ॥**

ಅರ್ಥ—ಶಿರೀಷಕುಸುಮಗಳ ಅತ್ಯಂತ ಕೋಮಲವಾದ ಕೇಸರಶಿಖೆಗಳು ಭ್ರಮರಗಳಿಂದ ತುಸುಮಾತ್ರವೇ ಚುಂಬಿಸಲ್ಪಟ್ಟಿದ್ದರೂ (ಭ್ರಮರಗಳ ಚುಂಬನದಿಂದ ಅವುಗಳು ಘಾಸಿಗೊಳ್ಳುತ್ತವಲ್ಲ ಎಂದು) ಕನಿಕರಗೊಂಡ ಪ್ರಮದೆಯರು ಆ ಹೂವುಗಳನ್ನು ಕಿತ್ತು ತಮ್ಮ ಕಿವಿಗಳಲ್ಲಿ ತೂಗಿಸುತ್ತಾರೆ.

ಹಿಂದಿನ ಅಂಶದಲ್ಲಿ ಸಂಸ್ಕೃತದ ಪ್ರಮದಾಃ = ಪ್ರಮದೆಯರು ಎಂಬ ಸ್ತ್ರೀಲಿಂಗನಾಮಪದವು ಪ್ರಾಕೃತದ ಪ್ರಥಮಾವಿಭಕ್ತಿಯ ಬಹುವಚನದಲ್ಲಿ "ಪಮದಾಓ" ಎಂದು ಓಕಾರಾಂತವಾಗಿದೆ. ಅದು ಕೊಂಕಣಿಯಲ್ಲಿ "ಪ್ರಮದೊ" ಎಂಬುವಾಗಿ ಮಾರ್ಪಡುತ್ತದೆ. ಮರಾಠಿಯಲ್ಲಿ ಹಾಗಾಗುವುದಿಲ್ಲ; ಮತ್ತು ಪ್ರಾಕೃತದಲ್ಲಿನ "ಕುಸುಮಾಇಂ" ಎಂಬ ರೂಪವು ಈಗಿನ ಕೊಂಕಣಿಯಲ್ಲಿ "ಕುಸುಮಾಂ" ಎಂದು ಉಚ್ಚರಿಸಲ್ಪಡುತ್ತದೆ. ಆದರೆ ದಕ್ಷಿಣ ಕನ್ನಡ ಜಿಲ್ಲೆಯ ಸಾರಸ್ವತ ಬ್ರಾಹ್ಮಣರು ಅದನ್ನು "ಕುಸುಮುಂ" ಎಂದು ಸಂವೃತವಾಗಿ ಉಚ್ಚರಿಸುತ್ತಾರೆ. ಮರಾಠಿಯಲ್ಲಿನ ಉಚ್ಚಾರವೂ ಹಾಗೆಯೇ ಇದೆ. ಆದರೆ ಬರವಣಿಗೆಯಲ್ಲಿ ಮಾತ್ರ "ಕುಸುಮೇಂ" ಎಂಬ ರೂಪವನ್ನು ಬಳಸುತ್ತಾರೆ. ಕೊಂಕಣಿ ಮತ್ತು ಮರಾಠಿ ಶಬ್ದಗಳ ಕೊನೆಯಲ್ಲಿ ಬರುವ ಅನುಸ್ವಾರದ ಉಚ್ಚಾರವು "ಅಮ್" ಎಂಬ ಹಾಗಿರದೇ ಅದನ್ನು ಉಚ್ಚರಿಸುವಾಗ ಬಾಯಿ

ಯನ್ನು ತೆರೆದು ಮೂಗಿನ ದಾರಿಯಾಗಿ ಉಚ್ಚರಿಸಬೇಕೆಂದು ವಾಚಕರು ತಿಳಿದಿರಬೇಕು.

ಶಕುಂತಳೆ:—"**ಣ ಕೇವಲಂ ತಾದಣಿಓಓ ಏವ್ವ; ಅತ್ಥಿ ಮೇ ಸೋದರಸಣೇಹೋ ಏದೇಸು**" ಅರ್ಥ–ತಂದೆಯವರು ವಿಧಿಸಿದ ಕೆಲಸವೊಂದೇ ಅಲ್ಲ: ನನಗೆ ಇವುಗಳಲ್ಲಿ—ಸೋದರಪ್ರೇಮವೂ ಇದೆ. ಈ ಅಂಶದಲ್ಲಿಯೂ ನಿಯೋಗ:=ಣಿಓಓ. ಸ್ನೇಹ:=ಸಣೇಹೋ ಎಂಬ ಪುಲ್ಲಿಂಗ ಶಬ್ದಗಳು ಓಕಾರಾಂತವಾಗಿವೆ.

ಮಹಾಕವಿ ಕಾಳಿದಾಸನ ಮಾಲವಿಕಾಗ್ನಿ ಮಿತ್ರ ನಾಟಕದಲ್ಲಿ ಮಾಲವಿಕೆಯು ಆಡುವ ಮಾತುಗಳು–ಮುಂದಿನಂತಿವೆ:—

"**ಅಅಂ ಸೋ ಲಲಿಅದೋಹಲಾಪೇಕ್ಖೀ ಅಗ್ಗಹೀದ ಕುಸುಮ-ಣೇಹತ್ಥೋ ಉಕ್ಕಂಠಿದಾಏ ಮಹ ಅಣುಕರೇದಿ ಅಸೋಓ.**" ಅರ್ಥ–ಲಲಿತವಾದ ದೋಹದವನ್ನು ಬಯಸುವ ಅಶೋಕವೃಕ್ಷವು ಹೂಗಳಪರಿಧಾನವನ್ನು ಉಡದೇ (ಪ್ರಿಯದರ್ಶನೋತ್ಸುಕಳಾಗಿ) ಉತ್ಕಂಠಿತಳಾದ ನನ್ನನ್ನು ಅನುಕರಿಸಿದಂತಿದೆ.

ಹಿಂದಿನ ಅಂಶದಲ್ಲಿ ಸಂಸ್ಕೃತದ ಅಕಾರಾಂತ ನಾಮಪದಗಳಾಗಿರುವ. ಸ:. ಅಶೋಕ: ಮೊದಲಾದ ಶಬ್ದಗಳು–ಸೋ; ಅಸೋಓ ಎಂದು ಓಕಾರಾಂತವಾಗಿವೆ. ದೋಹದ ಶಬ್ದದಲ್ಲಿನ "ದ"ಕಾರವು "ಲ"ಕಾರವಾಗಿ ಮಾರ್ಪಟ್ಟಿದೆ. "ನೇಪಥ್ಯ" ಶಬ್ದದಲ್ಲಿನ "ಪ"ಕಾರವು "ಣೇಹತ್ಥೋ" ಎಂಬುದಾಗಿ "ಹ"ಕಾರವಾಗಿ ಮಾರ್ಪಟ್ಟಿದೆ. ಈ ಮಾರ್ಪಾಟುಗಳೂ. ಹಿಂದೆ ಹೇಳಿದ ಲಸಯ ನಿಯಮವೂ ಕೊಂಕಣಿಯಲ್ಲಿ ಹಲವು ಮಾರ್ಪಾಟುಗಳಿಗೆ ಕಾರಣವಾಗಿವೆ.

ಪ್ರಾಚೀನಕಾಲದಲ್ಲಿ ಬ್ರಾಹ್ಮೀವರ್ಣಗಳು ಗೆರೆ ಎಳೆಯುವುದರಿಂದಲೇ ರೂಪುಗೊಳ್ಳುತಿದ್ದುದರಿಂದ ಗೆರೆ ಎಳೆಯು ಎಂಬ ಅರ್ಥದಲ್ಲಿ ರಿಖ್ ಇಲ್ಲವೇ ವಿರಿಖ್ ಎಂಬ ಕ್ರಿಯೆಯು ಬಳಸಲ್ಪಡುತಿತ್ತು. ಆದುದರಿಂದಲೇ ಆ ಕ್ರಿಯೆಯ ನಾಮರೂಪವಾಗಿರುವ "ರೇಖಾ" ಎಂಬ ಶಬ್ದದ ಅರ್ಥವು "ಗೆರೆ"ಯೆಂದಿರುತ್ತದೆ. ಮುಂದೆ ಆ ಕ್ರಿಯೆಯು ಅಕ್ಷರಗಳನ್ನು ಎಳೆಯು ಎಂಬ ಅರ್ಥದಲ್ಲಿಯೂ ಬಳಸಲ್ಪಡತೊಡಗಿತು. ಅದುವೇ ಮುಂದೆ ವಿರೇಖ್ ಎಂದು ಮಾರ್ಪಟ್ಟು ಕೊಂಕಣಿಯಲ್ಲಿ ಬರುವಾಗ ವರೇಹ್ ಆಗಿ ತೆಲುಗಿನಲ್ಲಿ ವ್ರೇಹ್ ಇಲ್ಲವೇ ವ್ರೇಯ್ ಆಗಿತ್ತು. ಅದು ಕೊಂಕಣಿಯಲ್ಲಿ ವರೇಹಿಯಾಗಿ ಬರೆಹಿಯಾಗಿವೆ: ಇವರ ಕೊಂಕಣಿ ನಾಮರೂಪವು ಬರೌಪ ಎಂದಿರುತ್ತದೆ. ಆದರೆ ಕೆಲವರು ಕ್ರಿಯಾರೂಪ

ವನ್ನು ಬರೆಯಿ ಇಲ್ಲವೇ ಬರಯಿ ಎಂದೂ. ನಾಮರೂಪವನ್ನು ಬರ್ಪ ಎಂದೂ ಬಳಸುತ್ತಾರೆ. ಕನ್ನಡದಲ್ಲಿನ ಬರೆಯು ಬರಹ. ಬರಾವು. ಬರೆಹ ಮೊದಲಾದವುಗಳ ಮೂಲವೂ ಅದೇ 'ಬರೆಯ್' ಮತ್ತು 'ಬರೆಹ್' ಎಂಬ ರೂಪಗಳಾಗಿರುತ್ತವೆ. ಕೊಂಕಣಿ "ಬರ್ಪ" ಶಬ್ದದಲ್ಲಿನ "ಪ"ಕಾರವು "ಹ"ಕಾರದಿಂದ ಮಾರ್ಪಟ್ಟುದಲ್ಲ. ಅದು ಕೊಂಕಣಿಯಲ್ಲಿನ ಭಾವಾರ್ಥಕ ನಾಮಪದದ ಪ್ರತ್ಯಯವಾಗಿರುತ್ತದೆ. ಬರ್ಪ ಶಬ್ದದ ಮೂಲರೂಪವು "ಬರೆಹಪ" ಎಂದಾಗುತ್ತದೆ. ಸಂಸ್ಕೃತದ ದೋಹದ ಶಬ್ದವು ಶೌರಸೇನಿಯಲ್ಲಿ ದೋಹಲೋ: ಕೊಂಕಣಿಯಲ್ಲಿ ಡಾಹಾಳೂ ಆಗುತ್ತದೆ. ಮರಾಠಿಯಲ್ಲಿ ಡೋಹಾಳಾ ಆಗಿದೆ. ಅದರಂತೆಯೇ ಸಂಸ್ಕೃತದಲ್ಲಿನ ಭೂತಕಾಲಿಕ ಕೃದಂತದ "ತ" ಪ್ರತ್ಯಯವು ಶೌರಸೇನಿಯಲ್ಲಿ "ದ" ಆಗಿ ಮಾರ್ಪಟ್ಟ ತರುವಾಯ ಕೊಂಕಣಿಯಲ್ಲಿ "ಲ" ಆಗಿ ಮಾರ್ಪಡುತ್ತದೆ.—ಅವುಗಳ ಉದಾಹರಣೆಗಳು ಮುಂದಿನಂತಿವೆ:—

| ಸಂಸ್ಕೃತ | ಶೌರಸೇನಿ | ಕೊಂಕಣಿ | ಮರಾಠಿ | ಕನ್ನಡ |
|---|---|---|---|---|
| ಕೃತಮ್ | ಕಿದಂ | ಕೆಲೆಂ | ಕೇಲೇಂ | ಮಾಡಲ್ಪಟ್ಟಿತು. |
| ಮೃತಮ್ | ಮಿದಂ | ಮೆಲೆಂ | ಮೇಲೇಂ | ಸತ್ತಿತು. |
| ಗತಃ | ಗದೋ | ಗೆಲೊ | ಗೇಲಾ | ಹೋದನು. |
| ಆಗತಃ | ಆಅದೋ | ಆಯಲೊ | ಆಲಾ | ಬಂದನು. |

ಹಿಂದಿನ ವಿವರಣೆಯು ಸಂಸ್ಕೃತವು ಪ್ರಾಕೃತವಾಗಿ ಮಾರ್ಪಡುವ ರೀತಿಯನ್ನು ತೋರಿಸುತ್ತದಲ್ಲದೇ ಸಂಸ್ಕೃತವಿದ್ದುದು ಮರಾಠಿಯಾಗಿ ಮಾರ್ಪಡುವ ಮೊದಲು ಶೌರಸೇನೀ ಮತ್ತು ಕೊಂಕಣಿಗಳೆಂಬ ಎರಡು ಹಂತಗಳನ್ನು ದಾಟಬೇಕಾಗಿತ್ತೆಂಬುದನ್ನು ಕೂಡ ಸಿದ್ಧಪಡಿಸುತ್ತದೆ.

ಮಹಾಕವಿ ಶೂದ್ರಕನ ಮೃಚ್ಛಕಟಿಕ ನಾಟಕದಲ್ಲಿ ಶೌರಸೇನೀ. ಪ್ರಾಕೃತ. ಮಾಗಧೀ. ಢಕ್ಕ. ಅವಂತೀ ಮತ್ತು ಚಾಂಡಾಲೀ ಎಂಬ ಆರು ಪ್ರಾಕೃತ ವಿಭೇದಗಳು ಬಳಸಲ್ಪಟ್ಟಿವೆ. ಹೀಗಿದ್ದರೂ—ಆ ಎಲ್ಲ ವಿಭೇದಗಳಲ್ಲಿ ಕೆಲವು ಶಬ್ದಗಳು 'ಸಾಮಾನ್ಯವಾಗಿರುತ್ತವೆಂಬುದನ್ನು ಲಕ್ಷ್ಯದಲ್ಲಿಡಬೇಕು. ಆ ಆರು ಭಾಷೆಗಳ ಒಂದೊಂದು ಉದಾಹರಣೆಯು ಮುಂದೆ ಕೊಡಲಾಗುವುದು—

ವಿದೂಷಕ (ಶೌರಸೇನೀ) "**ಭೋ ವಅಸ್ಸ! ಮರಣಾದೋ, ದಾಲಿದ್ದಾದೋ ವಾ ಕದರಂ ದೇ ರೋಅದಿ?** ಅರ್ಥ ಎಲೋ-ಮಿತ್ರಾ! ನಿನಗೆ ಮರಣ ಮತ್ತು ದಾರಿದ್ರ್ಯಗಳಲ್ಲಿ ಯಾವುದು ಮೆಚ್ಚಿಗೆ?

ಶಕಾರ (ಮಾಗಧೀ) "**ಭಾವೇ, ಭಾವೆ! ಜದಾ ದಹಿಭತ್ತಲುದ್ಧಾಏ ಮಜ್ಜಾಲೀಏ ಶಲಪಲಿವತ್ತೇ ಹೋದಿ, ತಧಾ ದಾಶೀಏ ಧೀಏ ಶಲಪಲಿವತ್ತೇ ಕಡೇ**" ಇದರ ಸಂಸ್ಕೃತ ಛಾಯೆಯು ಮುಂದಿನಂತಿದೆ:— "ಭಾವ, ಭಾವ! ಯಥಾ ದಧಿಭಕ್ತಲುಬ್ಧಾಯಾ ಮಾರ್ಜಾರಿಕಾಯಾಃ ಸ್ವರಪರಿವೃತ್ತಿರ್ಭವಿಷ್ಯತಿ ತಥಾ ದಾಸ್ಯಾಃ ಪುತ್ರ್ಯಾ ಸ್ವರಪರಿವೃತ್ತಿಃ ಕೃತಾ" ಅರ್ಥ–ಭಾವಾ. ಭಾವಾ! ಮೊಸರನ್ನಕ್ಕೆ ಆಶೆಪಟ್ಟ ಕಾಮಿಯು (ಹೆಣ್ಣು ಬೆಕ್ಕು) ಧಾಟಿಯನ್ನು ಬದಲಾಯಿಸುವಂತೆ ಈ ದಾಸೀಪುತ್ರಿಯೂ ಧಾಟಿಯನ್ನು ಬದಲಾಯಿಸಿದ್ದಾಳೆ.

ಮಾಥುರ (ಢಕ್ಕ) "**ಅಲೇ! ವಿಪ್ಪದೀಉ ಪಾದು ಪಡಿಮಾಶುಣ್ಣು ದೇಉಲು; ಧುತ್ತು ಜೂದಕರು ವಿಪ್ಪದೀವೇಹಿಂ ಪಾದೇಹಿಂ ದೇಉಲಂ ಪವಿಟ್ಠೋ**" ಇದರ ಸಂಸ್ಕೃತ ಛಾಯೆ—"ಅರೇ! ವಿಪ್ರತೀಪೌ ಪಾದೌ ಪ್ರತಿಮಾಶೂನ್ಯಂ ದೇವಕುಲಂ, ಧೂರ್ತೋ ದ್ಯೂತಕರೊ ವಿಪ್ರತೀಪಾಭ್ಯಾಂ ಪಾದಾಭ್ಯಾಂ ದೇವಕುಲಂ ಪ್ರವಿಷ್ಟಃ" ಅರ್ಥ—ಅರೇರೇ ಕಾಲುಗಳು ದೇವಾಲಯದ ಕಡೆಗೆ ಸಾಗಿವೆ; ದೇವಾಲಯದೊಳಗೆ ಪ್ರತಿಮೆ ಕೂಡಇರಲಿಲ್ಲ. (ಅಂದರೆ ದೇವಾಲಯದೊಳಗೆ ಪ್ರತಿಮೆಯಸ್ಥಾನದಲ್ಲಿ ಅವನು ಪ್ರತಿಮೆಯಂತೆಯೇ ನಿಂತಿದ್ದಾನೆ) ಧೂರ್ತನಾದ ದ್ಯೂತಕರನು ದೇವಾಲಯದಕಡೆಗೆ ಕಾಲುಗಳನ್ನಿಟ್ಟು ದೇವಾಲಯವನ್ನು ಹೊಕ್ಕಿದಂತಿದೆ.

ದ್ಯೂತಕರ **ಭಟ್ಟಾ! ಜಾವದೇವ ಅಮ್ಹೇ ದದ್ದುರೇಣ ಕಲಹಾ. ಯಿದಾ ತಾವದೇವ ಸೋ ಗೋಹೋ ಅವಕ್ಕಂತೋ**" ಸಂಸ್ಕೃತ ಛಾಯೆ—"ಭರ್ತಃ! ಯಾವದೇವ ವಯಂ ದರ್ದುರೇಣ ಕಲಹಾಯಿತಾಸ್ತಾವದೇವ ಸ ಪುರುಷೋಽಪಕ್ರಾಂತಃ" ಅರ್ಥ—ಒಡೆಯಾ–! ದರ್ದುರನಿಂದಾಗಿ ನಾವು ಜಗಳವಲ್ಲಿ ತೊಡಗಿದ್ದಾಗ ಆ ಮನುಷ್ಯ ಹೋಗಿಬಿಟ್ಟ.

ಹಿಂದಿನ ಅಂಶದಲ್ಲಿ "ಪುರುಷ" ಎಂಬ ಶಬ್ದದ ಬದಲಿಗೆ ಬಂದಿರುವ "ಗೋಹೋ" ಶಬ್ದವು "ಘೋವೊ" ಇಲ್ಲವೇ "ಘೋವ" ಎಂಬ ರೂಪದಿಂದ–ಕೊಂಕಣಿ ಕ್ರೈಸ್ತರಲ್ಲಿಯೂ. ಕೆಲವು ಕೆಳವರ್ಗದ ಹಿಂದುಗಳಲ್ಲಿಯೂ "ಗಂಡ" ಮತ್ತು ಗಂಡಸು ಎಂಬ ಅರ್ಥದಲ್ಲಿ ಬಳಸಲ್ಪಡುತ್ತದೆ. ಅದು ಸಂಸ್ಕೃತ "ಗೃಹಃ = ಸಹಾಯಕ; ಆಳು; ಮನೆಯವ" ಎಂಬ ಶಬ್ದದ ಪ್ರಾಕೃತರೂಪವಾಗಿರುತ್ತದೆ.

ವೀರಕ (ಆವಂತಿ) **ಅರೇ ರೇ, ಅರೇ ಜಅಜಅಮಾಣ-ಚಂದಣಅ-ಮಂಗಲ-ಫುಲ್ಲಭದ್ದಪ್ರಮುಹಾ!** ಎಲ ಎಲವೋ ಜಯಜಯಮಾನ-ಚಂದನಕ-ಮಂಗಲಪುಷ್ಪಭದ್ರ! ಪ್ರಮುಖರೇ—

**ಕಿಂ ಅಚ್ಛಧ ವೀಸದ್ಧಾ ಜೋ ಸೋ ಗೋವಾಲದಾರಓ ಬದ್ಧೋ।**
**ಭೇತ್ತೂಣ ಸಮಂ ವಚ್ಚಇ ಣರವಇಹಿಅಅಂ ಅ ಬಂಧಣಂ**
**ಚಾವಿ ॥**

**ಸಂಸ್ಕೃತ—ಕಿಂ ಸ್ಥ ವಿಶ್ರಬ್ಧಾ ಯಃ ಸ ಗೋಪಾಲದಾರಕೋ ಬದ್ಧಃ।**
**ಭಿತ್ವಾ ಸಮಂ ವ್ರಜತಿ ನರಪತಿಹೃದಯಂ ಚ ಬಂಧನಂ**
**ಚಾಪಿ ॥**

ಅರ್ಥ—ಗೋಪಾಲಕನು ಬಂಧನದಲ್ಲಿಯೇ ಇದ್ದಾನೆಂದು ನಂಬಿ ಏಕೆ ಸುಮ್ಮಗಿದ್ದೀರಿ. (ಅರಸನಿಂದ) ಬಂಧಿಸಲ್ಪಟ್ಟಿದ್ದ ಅವನು ಬಂಧನವನ್ನೂ, ಅರಸನ ಹೃದಯವನ್ನೂ, ಏಕಕಾಲದಲ್ಲಿಯೇ ಒಡೆದು ಹೋಗುತಿದ್ದಾನೆ.

ಆವಂತೀ ಭಾಷೆಯು ಶೌರಸೇನೀ ಮತ್ತು ಹೊಸಪ್ರಾಕೃತಗಳ ಮಿಶ್ರಣ ದಿಂದ ಹುಟ್ಟಿದ ಭಾಷೆಯೆಂದು ಹಿಂದೆ ಹೇಳಿದೆ. ಹಿಂದಿನ ಉದ್ಧರಣದಲ್ಲಿ ಅಚ್ಛಧ =ಇದ್ದೀರಿ ಎಂಬುದು ಶೌರಸೇನೀ ಭಾಷೆಯದಾಗಿದ್ದು ಭೆತ್ತೂಣ=ಒಡೆದು ವಚ್ಚಇ=ಹೋಗುತ್ತಾನೆ ಅಥವಾ ಹೋಗುತಿದ್ದಾನೆ ಎಂಬ ಎರಡು ಪ್ರಯೋಗ ಗಳು ಹೊಸಪ್ರಾಕೃತದ ವಿಶೇಷತೆಗಳಾಗಿವೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಳಕೆ ಯಲ್ಲಿದ್ದ ಕೊಂಕಣಿಯು ಆವಂತೀ ಭಾಷೆಯಿಂದಲೇ ಮುಂದುವರಿದು ಬಂದ ಭಾಷೆ ಯೆಂದು ಸಿದ್ಧಪಡಿಸುವ ಉದಾಹರಣೆಗಳು ಆ ಭಾಷೆಯಲ್ಲಿ ಈಗಲೂ ಉಳಿದು ಕೊಂಡಿವೆ. ಅಂದರೆ ಪೋರ್ತುಗೀಸರು ಗೋವ ಹಿಡಿದ ತರುವಾಯ ಗೋವದ ಜನರು ವಲಸೆ ಬಂದು ದಕ್ಷಿಣ ಕನ್ನಡದಲ್ಲಿ ನೆಲಸುವ ಮೊದಲು-ಆವಂತೀ ಭಾಷೆಯೇ ಅಲ್ಲಿ ಬಳಕೆಯಲ್ಲಿತ್ತೆನ್ನಬಹುದು. ಉದಾಹರಣೆಗಾಗಿ ಹೇಳುವುದಾದರೆ ಹಿಂದಿನ ಅಂಶದಲ್ಲಿ ಭೆತ್ತೂಣ ಎಂಬುದು "ಭೆತ್ತೂನ" ಎಂಬ ರೂಪದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇಂದಿಗೂ ಬಳಕೆಯಲ್ಲಿದೆ. 'ವಚ್ಚಇ' ಇದ್ದುದು ಹಿಂದೆ 'ವಚ್ಚೇ' ಎಂಬ ರೂಪದಲ್ಲಿ ಬಳಸಲ್ಪಡುತಿತ್ತು. ಈಗ 'ವಚ್ಚಾ' ಎಂಬ ರೂಪದಲ್ಲಿ ಬಳಸಲ್ಪಡುತ್ತದೆ. ಆದರೆ ಆ ಎರಡು ಕ್ರಿಯಾಪದಗಳೂ ಮರಾಠಿಯಲ್ಲಿ ಇಲ್ಲ. ಅಚ್ಛಧ ಎಂಬ ಕ್ರಿಯೆಯು ಕೊಂಕಣಿಯ ಅಸ್ಸಥ ಇಲ್ಲವೇ ಅಸ್ಸಾಥ ಎಂಬ ರೂಪ ದಲ್ಲಿ ಬಳಸಲ್ಪಡುತ್ತದೆ.

ಹಿಂದಿನ ಅಂಶದಿಂದ ಆವಂತಿಭಾಷೆಯ ಮಾದರಿಯನ್ನು ಕಂಡಂತಾಯಿತು. ಕೆಲವು ಆಚಾರ್ಯರ ಅಭಿಪ್ರಾಯದಲ್ಲಿ ಆವಂತೀಭಾಷೆಯು ಶೌರಸೇನಿಯ ಒಳ

ಭೇದವಾಗಿದ್ದು ಢಕ್ಕ ಮತ್ತು ಚಾಂಡಾಲಿ ವಿಭೇದಗಳು ಮಾಗಧಿಯ ಒಳಭೇದ ಗಳೆಂದು ಇದೆ1

ಚಾಂಡಾಲರು (-ಚಾಂಡಾಲೀ) **"ಓಶಲಧ ಅಜ್ಜಾ! ಓಶಲಧ। ಏಶೇ ಚಾಲುದತ್ತೇ"** ಸಂಸ್ಕೃತ–ಅಪಸರತ–ಆರ್ಯಾ: ಅಪಸರತ। ಏಷ ಚಾರುದತ್ತ। ಅರ್ಥ—ದೂರ ಸರಿಯಿರಿ ಆರ್ಯರೇ ದೂರಸರಿಯಿರಿ: ಈತ ಚಾರುದತ್ತ.

**ದತ್ತಕಲವೀಲದಾಮೋ ಗಹಿದೇ ಅಮ್ಹೇಹಿಂ ವಜ್ಝಪುಲಿಶೇಹಿಂ।**
**ದೀವೇ ವ್ವ ಮಂದಣೇಹೇ ಥೋಹಂ ಥೋಹಂ ಖಅಂ ಜಾದಿ ॥**

ಸಂಸ್ಕೃತ—ದತ್ತಕರವೀರದಾಮೋ ಗೃಹೀತ ಆವಾಭ್ಯಾಂ ವಧ್ಯಪುರುಷಾಭ್ಯಾಮ್।
ದೀಪ ಇವ ಮಂದಸ್ನೇಹಃ ಸ್ತೋಕಂ ಸ್ತೋಕಂ ಕ್ಷಯಂ ಯಾತಿ ॥

ಅರ್ಥ—ಕಣಗಿಲೆಹೂಗಳ ಮಾಲೆಹಾಕಿ ಕೊಲೆಗಡುಕರಾದ ನಮ್ಮಿಬ್ಬರಿಂದ ಹಿಡಿಯಲ್ಪಟ್ಟ ಇವನು ಎಣ್ಣೆ ಕಡಿಮೆಯಾದ ದೀಪದಂತೆ ಕೊಂಚ ಕೊಂಚವಾಗಿ ಕ್ಷೀಣಿಸುತಿದ್ದಾನೆ.

ಚಾಂಡಾಲ—**"ಅಲೇ ವಜ್ಝಪಾಲಿಆಏ ಲೆಕ್ಖಅಂ ಕಲೇಮ್ಹ"**= ಸಂಸ್ಕೃತ—ಅರೇ ವಧ್ಯ ಪಾಲಿಕಾಯಾ ಲೇಖಕಂ ಕುರ್ಮಃ ॥ಅರ್ಥ—ಎಲವೋ ಕೊಲೆಯ ಸರದಿಯು ಯಾರದೆಂದು ಲೆಕ್ಕಮಾಡುವ:

ಹಿಂದಿನ ಅಂಶದಲ್ಲಿ ಕೊಂಕಣಿಯಲ್ಲಿನ ಲೇಕ (=ಲೆಕ್ಕ: ಲೆಕ್ಖಕ)=ಗಣನೆ; ಎಣಿಕೆ ಎಂಬರ್ಥದ ಹಾಗೂ ಪಾಳಿ=ಸರದಿ ಎಂಬರ್ಥದ ಎರಡೂ ಶಬ್ದಗಳ– ಪ್ರಯೋಗವಾಗಿದೆ. ಮರಾಠಿಯಲ್ಲಿ "ಪಾಳೀ" ಶಬ್ದವಿದ್ದರೂ "ಲೇಕ" ಶಬ್ದವಿಲ್ಲ.

ಹಿಂದೆ ಉವಹರಿಸಿದ ಪ್ರಾಕೃತ ವಿಭೇದಗಳು—ನಾಟ್ಯಶಾಸ್ತ್ರದ ನಿಯಮ ಗಳಿಗೆ ಅನುಸಾರವಾಗಿ ಬೇರೆಬೇರೆ ಪಾತ್ರಗಳ ಬಾಯಿಯಿಂದ ಅವರವರ ಸ್ಥಾನ ಮಾನಗಳಿಗೆ ತಕ್ಕಂತೆ ಬೇರೆ ಬೇರೆ ಭಾಷೆಗಳನ್ನು ನುಡಿಸಬೇಕಾಗಿರುವುದರಿಂದ ನಾಟಕವನ್ನು ರಚಿಸುವ ಕವಿಯು ಆಯಾ ಭಾಷೆಯ ವಾಕ್ಯಗಳನ್ನು ರಚಿಸಬೇಕಾ ಗಿದೆ. ಆದುದರಿಂದ ಯಾವುದೊಂದು ವಿಭೇದದಲ್ಲಿ ಬಳಸಲ್ಪಟ್ಟ ಯಾವುದೊಂದು ವಿಶಿಷ್ಟಶಬ್ದವು ಅದೇ ವಿಭೇದದ್ದೆಂದು ತಿಳಿಯಬಾರದು. ಆ ಶಬ್ದವು ಬೇರೆ ಭಾಷೆ ಯಲ್ಲಿಯೂ ಬರಬಹುದು.

---

1. ಪ್ರಾಕೃತ ವ್ಯಾಕರಣ ಭೂಮಿಕಾ; ಪು. ೭. ಆಚಾರ್ಯ ಶ್ರೀ ಮಧುಸೂದನ ಪ್ರಸಾದ ಮಿಶ್ರ.

ಮುಂದಿನ ಉದಾಹರಣೆಯು ಮಹಾಕವಿ ಭವಭೂತಿಯ ಉತ್ತರ ರಾಮ-ಚರಿತದಲ್ಲಿ ಸೀತಾದೇವಿಯ ನುಡಿಯಾಗಿದೆ:—

**"ಹದ್ಧೀ! ಹದ್ಧೀ! ಮಂ ಮಂದಭಾಇಣಿಂ ವಾಹರಿಅ ಆಮೀ-ಲಿದಣೇತ್ತಣೀಲುಪ್ಪಲೋ ಮುಚ್ಛಿದೋ ಏವ್ವ । ಹಾ ಕಹಂ ಧರಣಿ-ಪಿಟ್ಠೇ ಣಿರುದ್ಧಣಿಸ್ಸಾಸಣೀಸಹಂ ವಿಪಲ್ಲತ್ಥೋ! ಭಅವದಿ ತಮಸೇ! ಪರಿತ್ತಾಏಹಿ, ಪರಿತ್ತಾಏಹಿ ಜೀವಾವೇಹಿ ಅಜ್ಜ ಉತ್ತಂ"**

ಸಂಸ್ಕೃತ—ಹಾಧಿಕ್. ಹಾಧಿಕ್! ಮಾಂ ಮಂದಭಾಗಿನೀಂ ವ್ಯಾಹೃತ್ಯ ಮೀಲಿತನೇತ್ರನೀಲೋತ್ಪಲೋ ಮೂರ್ಚ್ಛಿತ ಏವ. ಹಾ ಕಥಂ ಧರಣೀಪೃಷ್ಠೇ ನಿರುದ್ಧನಿಶ್ವಾಸನಿಃಸಹಮಪಿಪರ್ಯಸ್ತಃ ॥ ಭಗವತಿ ತಮಸೇ ಪರಿತ್ರಾಯಸ್ವ ಪರಿತ್ರಾಯಸ್ವ. ಜೀವಯಾರ್ಯಪುತ್ರಮ್॥ ಅರ್ಥ—ಛೀ. ಛೀ ಮಂದಭಾಗ್ಯಳಾದ ನನ್ನ ಹೆಸರನ್ನು ಉಚ್ಚರಿಸುತ್ತಿರುವಂತೆಯೇ ನಯನಕಮಲಗಳನ್ನು ಮುಚ್ಚಿ ಮೂರ್ಛಿತನಾಗಿಯೇ ಬಿಟ್ಟ. ಅಯ್ಯೋ ಧರಣೀತಲದಲ್ಲಿ ಹೇಗೆ ಸಹಿಸಲಾಗದ ರೀತಿಯಲ್ಲಿ ಉಸಿರಾಡಿಸದೇ ಉರುಳಿಬಿದ್ದಿದ್ದಾನೆ. ಭಗವತಿ ತಮಸೆಯೇ ಕಾಪಾಡು, ಕಾಪಾಡು. ಆರ್ಯಪುತ್ರನನ್ನು ಬದುಕಿಸು.

ಹಿಂದೆ ಉದಹರಿಸಿದ ಪ್ರಾಕೃತವಿಭೇದಗಳಲ್ಲಿ ಮಾಗಧೀವರ್ಗದ ಭಾಷೆಗಳಲ್ಲಿ ಸಂಸ್ಕೃತದ ಅಕಾರಾಂತ ಪುಲ್ಲಿಂಗನಾಮದ ಪ್ರಥಮಾವಿಭಕ್ತಿಯ ಏಕವಚನವು ಏಕಾರಾಂತವಾಗಿಯೂ. ಇತರ ಭಾಷೆಗಳಲ್ಲಿ ಓಕಾರಾಂತವಾಗಿಯೂ ಮಾರ್ಪಟ್ಟಿದೆಯೇ ಹೊರತು ಯಾವುದೊಂದು ವಿಭೇದದಲ್ಲಿಯೂ ಮರಾಠಿಯಲ್ಲಿರುವಂತೆ ಅಕಾರಾಂತವಾಗಿಲ್ಲ. ಇದರ ಮೇಲಿಂದ ಸಂಸ್ಕೃತದ ಅಕಾರಾಂತ ಪುಲ್ಲಿಂಗ ನಾಮ ಪದದ ಪ್ರಥಮಾವಿಭಕ್ತಿಯ ಏಕವಚನವು ಅಕಾರಾಂತವಾಗಿರುವ ಭಾಷೆಗಳು ಬಹಳ ಅರ್ವಾಚೀನವಾದವುಗಳೆಂದು ಸಿದ್ಧವಾಗುತ್ತದೆ.

೭

ಕ್ರಿಸ್ತನ ೪೧೦ರಿಂದ ೪೪೫ರ ತನಕ ಮಧ್ಯಪ್ರದೇಶದ ಅರಸನಾಗಿ ಆಳಿದ ವಾಕಾಟಕ ವಂಶದ ದಾಮೋದರಸೇನನು ಅಥವಾ ಎರಡನೆಯ ಪ್ರವರಸೇನನು ಪ್ರಾಕೃತಭಾಷೆಯಲ್ಲಿ "ದಹಮುಹವಹೋ" ಅಂದರೆ ಸಂಸ್ಕೃತದಲ್ಲಿ "ದಶಮುಖ

ವಧಃ" ಎಂಬ ಹೆಸರಿನ ಅತ್ಯುತ್ತಮವಾದ ಕಾವ್ಯವನ್ನು ರಚಿಸಿದ್ದಾನೆ. ಕೆಲವರು ಅದನ್ನು "ಸೇತುಬಂಧ" ಎಂಬ ಹೆಸರಿನಿಂದಲೂ ಕರೆದಿದ್ದಾರೆ. ಆ ಕಾವ್ಯದ ಶೈಲಿಯನ್ನು ಪರಿಶೀಲಿಸಿ, ಅದರ ರಸಮಾಧುರ್ಯವನ್ನು ಸವಿದ ರಸಿಕರು ಆ ಕಾವ್ಯವನ್ನು ಮಹಾಕವಿ ಕಾಳಿದಾಸನ ಕೃತಿ ಅಂದಿದ್ದಾರೆ. ಬೇರೆ ಕೆಲವರು ಅದರ ಭಾಷೆಯನ್ನು ಮಹಾರಾಷ್ಟ್ರೀ ಪ್ರಾಕೃತ ಎಂದಿದ್ದಾರೆ. ಆದರೆ ಆ ಭಾಷೆಯನ್ನು ಏಕೆ ಮಹಾರಾಷ್ಟ್ರೀ ಎಂದನ್ನುತಿದ್ದರೆಂದಾಗಲೀ, ಆ ಕಾಲದಲ್ಲಿ ಮಧ್ಯಪ್ರದೇಶವು ಮಹಾರಾಷ್ಟ್ರದಲ್ಲಿ ಸೇರಿದ್ದಿತೋ ಎಂಬುದಾಗಲೀ ತಿಳಿದುಬಂದಿಲ್ಲ.

ಇತಿಹಾಸ ಸಂಶೋಧಕರಾದ ಹಾಗೂ ಸಂಸ್ಕೃತದ ದೊಡ್ಡ ವಿದ್ವಾಂಸರಾದ ಆಚಾರ್ಯ ರಾಮಕೃಷ್ಣ ಗೋಪಾಳ ಭಾಂಡಾರ್ಕಾರರವರು–ಅದು ಮಹಾರಾಷ್ಟ್ರದ ಭಾಷೆಯಾಗಿದ್ದುರಿಂದ ಅದನ್ನು ಮಹಾರಾಷ್ಟ್ರೀ ಅನ್ನುತ್ತಿದ್ದರೆಂದು ಹೇಳಿದ್ದಾರೆ.[1] ಮಹಾಕವಿದಂಡಿಯು ತನ್ನ ಕಾವ್ಯಾದರ್ಶದಲ್ಲಿ **"ಮಹಾರಾಷ್ಟ್ರಾಶ್ರಯಾಂ ಭಾಷಾಂ ಪ್ರಕೃಷ್ಟಂ ಪ್ರಾಕೃತಂ ವಿದುಃ। ಸಾಗರಃ ಸೂಕ್ತಿರತ್ನಾನಾಂ ಸೇತುಬಂಧಾದಿಯನ್ಮಯಮ್" ॥ ೧-೩೪ ॥** ಅಂದರೆ ಮಹಾರಾಷ್ಟ್ರದಲ್ಲಿ ಆಶ್ರಯಿಸಿರುವ ಭಾಷೆಯನ್ನು ಉತ್ಕೃಷ್ಟವಾದ ಪ್ರಾಕೃತವೆಂದು ತಿಳಿಯುತ್ತಾರೆ. ಅದು ಸೂಕ್ತಿಗಳೆಂಬ ರತ್ನಗಳ ಸಮುದ್ರವಾಗಿದ್ದು ಸೇತುಬಂಧ ಮೊದಲಾದ ಕಾವ್ಯಗಳಿಂದ ತುಂಬಿದೆ ಅಂದಿದ್ದಾನೆ. ಸೇತುಬಂಧ ಕಾವ್ಯದ ಭಾಷೆಯನ್ನು ಮಹಾರಾಷ್ಟ್ರೀ ಪ್ರಾಕೃತವೆಂದು ಕರೆಯಲು–ಹಿಂದಿನ ಶ್ಲೋಕವೇ ಕಾರಣವಾಗಿತ್ತೆನ್ನುವುದರಲ್ಲಿ ಸಂದೇಹವಿಲ್ಲ. ಕಾವ್ಯವನ್ನು ರಚಿಸಿದ ರಾಜಾಪ್ರವರಸೇನನು ಅದರಲ್ಲಿನ ಪ್ರತಿಯೊಂದು ಆಶ್ವಾಸದ ಕೊನೆಯಲ್ಲಿ "ದಶಮುಹವಹೋ" ಎಂತಲೂ–ಕಾವ್ಯದಲ್ಲಿನ ಕೊನೆಯಪದ್ಯದಲ್ಲಿ "ರಾವಣವಹ" ಎಂತಲೂ ಹೇಳಿದ್ದಾನೆಯೇ ಹೊರತು ಸೇತಂಬಂಧವೆಂದು ಎಲ್ಲಿಯೂ ಹೇಳಿಲ್ಲ. ಹೀಗಿರುವಾಗ–ಮಹಾಕವಿದಂಡಿಯು ಅವನ್ನು "ಸೇತುಬಂಧ"ವೆಂದುದು ವಾಸ್ತವವೇ? ಎಂಬುದನ್ನೂ, ಅವನ ಕಾಲದಲ್ಲಿ ಪ್ರಾಕೃತ ಭಾಷೆಯ ಬೇರೆ ಕಾವ್ಯಗಳಿದ್ದವೇ? ಎಂಬುದನ್ನೂ ವಿಮರ್ಶಿಸಬೇಕಾಗಿದೆ.

ಮಹಾಕವಿದಂಡಿಯು ದಕ್ಷಿಣಭಾರತದ ಪೂರ್ವಕರಾವಳಿಯ[illegible] ಕಾಂಚೀ ನಗರವನ್ನು ರಾಜಧಾನಿಯನ್ನಾಗಿಮಾಡಿ ಆಳುತಿದ್ದ ಪಲ್ಲವರಾಜ ನರಸಿಂಹವರ್ಮನ

---

1. Of the Prakrits, the Principal one was called Maharastri, because we are told it was the language of Maharastra. We have a poem in this dialect entitled Setubandha attributed to Kalidasa and mentioned by Dandin. Early History of the Deccan p.

(೬೨೦–೬೬೮) ಆಸ್ಥಾನ ಕವಿಯಾಗಿದ್ದ. ಆಗ ಚಾಳುಕ್ಯರಾಜ ಪುಲಕೇಶಿಯು ಮಹಾರಾಷ್ಟ್ರವನ್ನು ಆಳುತ್ತಿದ್ದ. ಹಾಗೆಯೇ ಹರ್ಷಚರಿತವನ್ನು ರಚಿಸಿದ ಮಹಾಕವಿ ಬಾಣನು ಉತ್ತರಭಾರತದಲ್ಲಿ ಥಾನೇಶ್ವರವನ್ನು ರಾಜಧಾನಿಯನ್ನಾಗಿ ಮಾಡಿ ಆಳುತ್ತಿದ್ದ ಹರ್ಷವರ್ಧನನ (೬೦೬–೬೪೬) ಆಸ್ಥಾನ ಕವಿಯಾಗಿದ್ದ. ಹರ್ಷಚರಿತದ ಕಥೆಯು ಗದ್ಯರೂಪದಲ್ಲಿದ್ದು ಮೊದಲಿನ ಮಂಗಲಾಚರಣ ಮತ್ತು ಪ್ರಸ್ತಾವನಾ ರೂಪದಲ್ಲಿ ಇಪ್ಪತ್ತು ಶ್ಲೋಕಗಳಿವೆ. ಅವುಗಳಲ್ಲಿನ ಹದಿನಾಲ್ಕನೆಯ ಶ್ಲೋಕವು ಮುಂದಿನಂತಿದೆ:—"ಕೀರ್ತಿಃ ಪ್ರವರಸೇನಸ್ಯ ಪ್ರಯಾತಾ ಕುಮುದೋಜ್ವಲಾ ॥ ಸಾಗರಸ್ಯಪರಂಪಾರಂ ಕಪಿಸೇನೇವ ಸೇತುನಾ॥ ಅಂದರೆ—"ಶ್ರೀ ರಾಮಚಂದ್ರನು ಕಟ್ಟಿಸಿದ ಸೇತುವಿನ ಮೂಲಕ ಕಪಿ ಸೈನ್ಯವು ಸಮುದ್ರದ ಆಚೆದಡದಲ್ಲಿದ್ದ ಲಂಕೆಯನ್ನು ತಲಪಿದಂತೆಯೇ ಪ್ರವರಸೇನನ ಕುಮುದದಂತೆ ಬೆಳ್ಳನೆ ಬೆಳಗುವ ಕೀರ್ತಿಯು (ಸೇತುಬಂಧದಿಂದಾಗಿ) ಸಮುದ್ರದ ಆಚೆ ಇರುವ ದೇಶಗಳಿಗೆ ಪ್ರಯಾಣಿಸಿತು" ಎಂದರ್ಥ. ಹಿಂದಿನ ಪದ್ಯದಲ್ಲಿ "ಸೇತು" ಶಬ್ದವು ಶ್ಲೇಷಾರ್ಥದಲ್ಲಿ ಬಳಸಲ್ಪಟ್ಟಿದೆಯೆಂಬುದರಿಂದ ಮಹಾಕವಿ ದಂಡಿಯು ದಶಮುಖವಧವನ್ನು–ಸೇತುಬಂಧವೆಂದನೆಂದು–ತಿಳಿಯಲು ಪ್ರಮಾಣಗಳಿಲ್ಲ. ಏಕೆಂದರೆ–ಮಹಾಕವಿ ಬಾಣನೂ–ಮಹಾಕವಿ ದಂಡಿಯೂ ಸಮಕಾಲಿಕರಾಗಿದ್ದರೂ–ಒಬ್ಬನಿಂದ ಮತ್ತೊಬ್ಬನು ಸಾವಿರಾರು ಮೈಲು ದೂರವಿದ್ದ. ಆದುದರಿಂದ ಮಹಾಕವಿ ಬಾಣನು–ಹರ್ಷಚರಿತವನ್ನು ರಚಿಸಿದೊಡನೆಯೇ ಅದನ್ನು ಓದಿನೋಡಲೆಂದು ಮಹಾಕವಿದಂಡಿಯ ಬಳಿಗೆ ಕಳುಹಿಸಿಕೊಟ್ಟಿದ್ದನೆನ್ನುವ ಪ್ರಮಾಣಗಳಿಲ್ಲ. ಹಾಗೆಯೇ ಮಹಾಕವಿದಂಡಿಯ ಕಾಲದಲ್ಲಿ–ಪ್ರಾಕೃತಭಾಷೆಯ ಬೇರೆ ಕಾವ್ಯಗಳಿದ್ದವೆಂಬುದಕ್ಕೂ ಪ್ರಮಾಣಗಳಿಲ್ಲ. ತಾತ್ಪರ್ಯವೇನೆಂದರೆ ನಮ್ಮಲ್ಲಿನ ಸಕಲ ಪ್ರಾಚೀನ ಗ್ರಂಥಗಳಲ್ಲಿ ಅರ್ವಾಚೀನ ಜನರು ಹಸ್ತಕ್ಷೇಪ ಮಾಡಿ ಹಲವು ಹೊಸ ಶ್ಲೋಕಗಳನ್ನು ಸೇರಿಸಿರುವಂತೆಯೇ ಹಿಂದೆ ಉದಹರಿಸಿದ ಎರಡು ಶ್ಲೋಕಗಳು ಕೂಡ ಅರ್ವಾಚೀನರು ಮಾಡಿದ ಪ್ರಕ್ಷೇಪಗಳೆನ್ನಬಹುದು. ಏಕೆಂದರೆ ವಾಸ್ತವವಾಗಿ ಮರಾಠಿಭಾಷೆಗೂ ಸೇತುಬಂಧದ ಪ್ರಾಕೃತ ಭಾಷೆಗೂ ನೇರವಾದ ಯಾವ ಸಂಬಂಧವೂ ಇಲ್ಲವೆಂದು ತಿಳಿದುಬರುತ್ತದೆ.

ಅಂದರೆ ಇಂದು ಮಹಾರಾಷ್ಟ್ರೀ ಅಥವಾ ಮರಾಠೀ ಎಂದು ಕರೆಯಲ್ಪಡುವ ಭಾಷೆ ಮತ್ತು ಸೇತುಬಂಧದ ಭಾಷೆಗಳೊಳಗೆ ಯಾವುದಾದರೂ ನೇರವಾದ ಸಂಬಂಧವಿದೆಯೇ ಎಂಬುವನ್ನು ಕೂಡ ವಿಮರ್ಶಿಸಬೇಕಾಗಿದೆ. ಭಾಷೆಗಳೊಳಗಿನ ಸಂಬಂಧವನ್ನು ಮತ್ತು ಸಾಮ್ಯವನ್ನು ನಿರ್ಧರಿಸುವಲ್ಲಿ ಅವುಗಳಲ್ಲಿನ

ಆಖ್ಯಾತರೂಪಗಳು ಮತ್ತು ವಿಭಕ್ತಿರೂಪಗಳು ಮುಖ್ಯ ಸಾಧನಗಳಾಗಿರುತ್ತವೆ. ಸೇತುಬಂಧದ ಭಾಷೆಯಲ್ಲಿ—ಸಂಸ್ಕೃತದಲ್ಲಿನ ಭೂತಕಾಲಿಕ ಕೃದಂತಗಳೆಲ್ಲವೂ ಅವುಗಳಲ್ಲಿನ "ತ"ಕಾರವನ್ನು ಕಳೆದುಕೊಂಡು ಪುಲ್ಲಿಂಗರೂಪದಲ್ಲಿ ಓಕಾರಾಂತವಾಗಿ ಮಾರ್ಪಡುತ್ತವೆ. ಮತ್ತು ಅಕಾರಾಂತ ಪುಲ್ಲಿಂಗ ನಾಮಪದಗಳೆಲ್ಲವೂ ಪ್ರಥಮಾವಿಭಕ್ತಿಯ ಏಕವಚನದಲ್ಲಿ ಓಕಾರಾಂತವಾಗುತ್ತವೆ. ಉದಾ:—ಗತ: = ಗಓ = ಹೋದನು. (೧–೧೪) ಚಲಿತ: = ಚಲಿಓ = ನಡೆದನು (೧–೪೯) ಪ್ರಜ್ವಲಿತ: = ಪಜ್ವಲಿಓ = ಬೆಳಗಿದನು (೧–೫೧) ಇತ್ಯಾದಿ. ಆದರೆ ಮರಾಠಿಯಲ್ಲಿ ಆ ಕ್ರಿಯಾಪದಗಳು "ಲಾ"ದಿಂದ ಕೊನೆಗೊಳ್ಳುತ್ತವೆ: ಉದಾ:–ಗೇಲಾ: ಚಾಲಲಾ: ಮತ್ತು ಪಜಳಲಾ. ಇತ್ಯಾದಿ. ಪುಲ್ಲಿಂಗನಾಮಗಳು–ವೇಷ್ಟ: = ವೇಢೋ = ಸುತ್ತು = ಮರಾಠಿ = ವೇಢಾ. ವಂಶ: = ವಂಸೋ = ಬಿದಿರು: = ಮರಾಠಿ–ವಾಸಾ: ಎಂದು ಅಕಾರಾಂತವಾಗುತ್ತವೆ.

ಅದೇ ರೀತಿಯಲ್ಲಿ ಸೇತುಬಂಧದ ಭಾಷೆಯಲ್ಲಿ ಎಲ್ಲ ಸ್ತ್ರೀಲಿಂಗ ನಾಮಪದಗಳು ಪ್ರಥಮಾ–ಹಾಗೂ ದ್ವಿತೀಯಾ ವಿಭಕ್ತಿಯ ಬಹುವಚನಗಳಲ್ಲಿ ಓಕಾರಾಂತವಾಗುತ್ತವೆ ಹಾಗೂ ಇತರ ನಾಮಪದಗಳು ದ್ವಿತೀಯಾವಿಭಕ್ತಿಯ ಬಹುವಚನದಲ್ಲಿ ಏಕಾರಾಂತವಾಗುತ್ತವೆ. ಉದಾ:—ಸಂಸ್ಕೃತ–ದಿಶಾ: = ದಿಸಾಓ = ದಿಕ್ಕುಗಳು ಮತ್ತು ದಿಕ್ಕುಗಳನ್ನು: ಮುಕ್ತಾನ್ = ಮುಕ್ಕೇ = ಬಿಟ್ಟವರನ್ನು ಇತ್ಯಾದಿ. ಆದರೆ ಮರಾಠಿಯಲ್ಲಿ ದಿಶಾ ಎಂಬ ಸ್ತ್ರೀಲಿಂಗ ಶಬ್ದವು ರೂಪಾಂತರವಾಗದೇ ಮೂಲರೂಪದಲ್ಲಿಯೇ (= ದಿಶಾ) ಏಕವಚನ ಮತ್ತು ಬಹುವಚನದಲ್ಲಿ ಬಳಸಲ್ಪಡುತ್ತದೆ. ಮತ್ತು ಮುಕ್ತಾನ್ ಎಂಬುದರ ಬದಲಿಗೆ "ಮುಕ್ತಾಂಲಾ" ಎಂಬ ರೂಪವು ಬಳಸಲ್ಪಡುತ್ತದೆ. ಮುಂದೆ ಉದಾಹರಣೆಗಾಗಿ ಸೇತುಬಂಧ ಕಾವ್ಯದಲ್ಲಿನ ಕೆಲವು ಪದ್ಯಗಳು ಕೊಡಲಾಗುವವು—

**ವಚ್ಚಇ ಅ ಚಡುಲಕೇಸರಸಡುಜ್ಜಲಾಲೋಅವಾಣರ**
**ಪರಿಕ್ಖಿತ್ತೋ ।**
**ಸರ್ವದಿಸಾ ಆಅಡ್ಢಿಅಪಲಅಪಲಿತ್ತಗಿರಿಸಂಕುಲೋ´ವ್ವ**
**ಸಮುದ್ದೋ ॥೧-೫೨॥**

ಸಂಸ್ಕೃತಛಾಯೆ–ವ್ರಜತಿ ಚ ಚಟುಲಕೇಸರಸಟೋಜ್ವಲಾಲೋಕವಾನರ
ಪರಿಕ್ಷಿಪ್ತ: ॥
ಸರ್ವದಿಗಾಕೃಷ್ಟಪ್ರಲಯಪ್ರದೀಪ್ತಗಿರಿಸಂಕುಲ ಇವಸಮುದ್ರ: ॥

ಅರ್ಥ—ಅಂತಿಂದಿತ್ತ ಅಲೆದಾಡುವ ಅಥವಾ ಹೊಯ್ದಾಡುವ (ಗಡ್ಡದ) ದಟ್ಟವಾದ ಕೇಸರಗಳಿಂದ ಉಜ್ವಲವುಖಕಾಂತಿಯನ್ನು ಬೀರುವ ಕಪಿಗಳ ಸಮೂಹದಿಂದ ಆವೃತನಾದ ಶ್ರೀ ರಾಮಚಂದ್ರನು. ಎಲ್ಲಾ ದಿಕ್ಕುಗಳಿಂದ ಒಮ್ಮೆಲೇ ಬೀಸತೊಡಗಿದ ಗಾಳಿಯ ರಭಸಕ್ಕೆ ತಿರುಗುತ್ತ ಮೇಲಕ್ಕೆದ್ದ ಪರ್ವತೋನ್ನತವಾದ ತೆರೆಗಳು ಸೂರ್ಯನ ಪ್ರಕಾಶದಿಂದ ಪ್ರಲಯಕಾಲದಲ್ಲಿ ಉರಿದೆದ್ದ ಬೆಟ್ಟಗಳೊ ಎಂಬಂತೆ ಕಾಣುತ್ತಿರುವ ಸಮುದ್ರದೋಪಾದಿಯಲ್ಲಿ. ಹೋಗುತಿದ್ದಾನೆ.

**ಭೆತ್ತೂಣ ತುರಿಯಮುಕ್ಕೇ ಅಣುಲೋಮಪಹಾವಿಏ**
**ಸಿಲಾ ಸಂಘಾಏ ।**
**ಪಢಮಂ ಸಾಹೇಂತಿ ಪರಂ ವಿಹಡಿಅ ವಾಣರಮಣೋರಹಾ**
**ರಾಮಸರಾ ॥ ೧೪-೪ ॥**

ಸಂಸ್ಕೃತ—ಭಿತ್ವಾ ತ್ವರಿತಮುಕ್ತಾನನುಲೋಮಪ್ರಧಾವಿತಾಞ್ ಶಿಲಾ ಸಂಘಾತಾನ್॥
ಪ್ರಥಮಂ ಸಾಧಯಂತಿ ಪರಂ ವಿಘಟಿತವಾನರಮನೋರಥಾ ರಾಮಶರಾ: ॥

ಅರ್ಥ—ಕಪಿಗಳು (ವೈರಿಗಳನ್ನು ಕೊಲ್ಲಬೇಕೆಂದು) ತೀವ್ರಗತಿಯಿಂದ ಎಸೆದ ಹಾಗೂ ವೈರಿಗಳ ಕಡೆಗೆ ಅತಿವೇಗದಿಂದೋಡುವ ಬಂಡೆಕಲ್ಲುಗಳ ಗುಂಪನ್ನು. ಶ್ರೀ ರಾಮಚಂದ್ರನು ಅವುಗಳ ತರುವಾಯ ಬಿಟ್ಟ ಬಾಣಗಳು ಬೆನ್ನಟ್ಟಿಹೋಗಿ. ಅವುಗಳನ್ನೊಡೆದು-ಮುಂದೆಸಾಗಿ. ಅವುಗಳಿಗಿಂತ ಮೊದಲೇ ವೈರಿಗಳನ್ನು ನಾಶಗೊಳಿಸಿ ಕಪಿಗಳ ಮನೋರಥವನ್ನು ಭಂಗಿಸುತ್ತವೆ.

**ಧುಅಮೇಹಮಹುಅರಾಓಘಣಸಮಆಅಡ್ಢಓಣಅ**
**ವಿಮುಕ್ಕಾಓ ।**
**ಣಹಪಾಅವಸಾಹಾಓ ಣಿಅಅಟ್ಠಾಣಂ ವ ಪಡಿಗಆಓ**
**ದಿಸಾಓ ॥ ೧.೧೯ ॥**

ಸಂಸ್ಕೃತ—ಧುತಮೇಘಮಧುಕರಾ ಘನಸಮಯಾಕೃಷ್ಟಾವನತವಿಮುಕ್ತಾ: ॥
ನಭ:ಪಾದಪಶಾಖಾ ನಿಜಕಸ್ಥಾನಮಿವ ಪ್ರತಿಗತಾ ದಿಶ: ॥

ಅರ್ಥ—ಆಕಾಶವೇ ಮರವಾಗಿದ್ದು. ದಿಕ್ಕುಗಳೇ ಕೊಂಬೆಗಳಾಗಿದ್ದರೆ ಹೇಗೋ. ಹಾಗೆ ಅತ್ತಿತ್ತ ಅಡ್ಡಾಡುವ ಮೋಡಗಳೇ ಕೊಂಬೆಗಳನ್ನು ಮುತ್ತಿ.

ಅವುಗಳ ಭಾರದಿಂದ, ಕೊಂಬೆಗಳು ಬಗ್ಗಿ ಭೂಮಿಗಿಳಿದರೆ ಹೇಗೋ, ಹಾಗೆ, ಅಂದರೆ ಮಳೆಗಾಲದಲ್ಲಿ ಮೋಡಗಳು ಆಕಾಶದಲ್ಲಿ ದಟ್ಟವಾಗಿ ಕವಿದಾಗ, ಆಕಾಶವೇ ಕೆಳಗಿಳಿದಂತೆ ತೋರುವುದರಿಂದ, ಮೋಡಗಳೆಂಬ ತುಂಬಿಗಳ ಭಾರಕ್ಕೆ, ದಿಕ್ಕುಗಳೆಂಬ ಕೊಂಬೆಗಳು ಬಗ್ಗಿದಂತೆಯೂ. ಮಳೆಯಾದ ತರುವಾಯ ಮೋಡ ಗಳು ಇಲ್ಲವಾಗಿ (ಆಕಾಶವು ನಿರಭ್ರವಾಗಿ ಮೇಲಕ್ಕೇರಿದಂತೆ ತೋರುವುದರಿಂದ) ಭಾರಕಳೆದ ದಿಕ್ಕುಗಳೆಂಬ ಕೊಂಬೆಗಳು ಸ್ವಸ್ಥಾನಕ್ಕೆ ಹೋದಂತೆಯೂ ಆಗುವುದ ರಿಂದ—"ಆಕಾಶವೆಂಬ ಮರದ ದಿಕ್ಕುಗಳೆಂಬ ಕೊಂಬೆಗಳ ಮೇಲೆ ಕೂತ ಮೋಡ ಗಳೆಂಬ ತುಂಬಿಗಳ ಭಾರಕ್ಕೆ ಬಗ್ಗಿದ ಕೊಂಬೆಗಳು ತುಂಬಿಗಳು ಇಲ್ಲವಾದೊಡನೆ ನೆಟ್ಟಗಾದವು ಅಥವಾ ಸ್ವಸ್ಥಾನಕ್ಕೆ ತೆರಳಿದವು. (ರೂಪಕಾಲಂಕಾರ)

ಹಿಂದಿನ ಪದ್ಯಗಳಲ್ಲಿ ವಚ್ಚ = ಹೋಗು: ಭೇತ್ = ಒಡೆಯು, ಹೋಳು ಮಾಡು ಮುಕ್ಕಾನ್ = ಮುಕ್ಕೇ = ಬಿಟ್ಟವುಗಳನ್ನು (= ಎಸೆದವುಗಳನ್ನು) ದಿಸಾಓ = ದಿಕ್ಕುಗಳು ಮುಂತಾದ ಕ್ರಿಯಾಪದಗಳು ಮತ್ತು ವಿಭಕ್ತಿರೂಪಗಳು ಮರಾಠಿ ಯಲ್ಲಿ ಹಿಂದೆ ಇರಲಿಲ್ಲ ಮತ್ತು ಇಂದು ಇಲ್ಲ. ಆದುದರಿಂದ ಸೇತುಬಂಧದ ಭಾಷೆಗೂ ಮರಾಠಿಗೂ ಯಾವ ನೇರಾದ ಸಂಬಂಧವೂ ಇರಲಿಲ್ಲವೆಂದು ಸಿದ್ಧ ವಾಗುತ್ತದೆ.

ಆದರೆ ಇಂದು ಬಳಕೆಯಲ್ಲಿರುವ ಕೊಂಕಣಿಯು ಹಲವು ಮಾರ್ಪಾಟು ಗಳನ್ನು ಹೊಂದಿದ್ದರೂ ಕೂಡ ಅದರಲ್ಲಿ ಸೇತುಬಂಧದ ಭಾಷೆಯಲ್ಲಿನ ಕೆಲವು ಕುರುಹುಗಳು ಉಳಿದಿವೆ. ಅಂದರೆ ಕೊಂಕಣಿಯಲ್ಲಿ ಸಂಸ್ಕೃತದಿಂದ ಮಾರ್ಪಟ್ಟ ಹಲವು ಅಕಾರಾಂತ ಪುಲ್ಲಿಂಗನಾಮಪದಗಳು ಇಂದಿಗೂ ಓಕಾರಾಂತವಾಗಿಯೇ ಬಳಸಲ್ಪಡುತ್ತವೆ. ಉದಾ:—ವಂಶಃ = ವಾಂಸೊ = ಬಿದಿರು. ವಲಯಃ = ವಲಓ = ವಾಳೊ = ಕಾಲ್ಬಳೆ. ಘೋಟಕಃ = ಘೋಡಓ = ಘೋಡೊ = ಕುದುರೆ. ಗೋಪಾಲಃ = ಗೋವಾಳೊ = ಗೊಲ್ಲ ಇತ್ಯಾದಿ. ಹಾಗೂ–ಸೇತು ಬಂಧ ಕಾವ್ಯದಲ್ಲಿ ಬಳಸಲ್ಪಟ್ಟ ವಚ್ಚ = ಹೋಗು; ಭೇತ = ಒಡೆಯು: ಹೋಳು ಮಾಡು: ಪಲೋಅ = ಪಳೋಯ್ = ನೋಡು ಮುಂತಾದ ಕ್ರಿಯಾಪದ ಗಳೂ ಇವೆ.

ಯಾವುದೊಂದು ವರ್ಗದಲ್ಲಿ ಸೇರಿರುವ ಹಲವು ಭಾಷೆಗಳಲ್ಲಿ ಮೂಲ ಅಥವಾ ಪ್ರಾಚೀನ ಭಾಷೆಯು ಯಾವುದೆಂದು ಮತ್ತು ಒಂದು ಭಾಷೆಗೆ ಅತ್ಯಂತ ನಿಕಟವಾದ ಬೇರೆ ಇನ್ನೊಂದು ಭಾಷೆ ಯಾವುದೆಂದು ಕಂಡುಹಿಡಿಯುವಲ್ಲಿ, ಶಬ್ದಗಳ ಶುದ್ಧರೂಪ, ಸರ್ವನಾಮಗಳು, ಸಂಖ್ಯಾವಾಚಕಗಳು, ಸಂಬಂಧಿಕರ

ಹೆಸರುಗಳು, ಅವಯವಗಳ ಹೆಸರುಗಳು, ದೈನಂದಿನ ಉಪಯೋಗಿಸುವ ವಸ್ತುಗಳ ಹೆಸರುಗಳು, ಆಖ್ಯಾತರೂಪಗಳು ಮತ್ತು ವಿಭಕ್ತಿರೂಪಗಳು ಮುಖ್ಯ ಪ್ರಮಾಣಗಳು ಅಥವಾ ಸಾಧನಗಳಾಗಿರುತ್ತವೆ. ಮತ್ತು ಅವುಗಳಲ್ಲಿ ಬಳಸಲ್ಪಡುವ ಶಬ್ದಗಳು ಸಂಸ್ಕೃತ ಭಾಷೆಗೆ ಎಷ್ಟು ಸಮೀಪವಾಗಿರುತ್ತವೋ–ಆ ಪ್ರಮಾಣದಲ್ಲಿ ಅವುಗಳು ಪ್ರಾಚೀನವಾದವುಗಳೆಂದು ಸಿದ್ಧವಾಗುತ್ತವೆ. ಸಾಮಾನ್ಯವಾಗಿ ನಾಮಪದ ಮೊದಲಾದ ಶಬ್ದಗಳು ಒಂದು ಭಾಷೆಯಿಂದ ಇನ್ನೊಂದು ಭಾಷೆಯೊಳಗೆ ಸೇರಿಕೊಳ್ಳುತ್ತವಾದರೂ ಆಖ್ಯಾತರೂಪಗಳು ಮತ್ತು ವಿಭಕ್ತಿರೂಪಗಳು ಹಾಗೆ ಸೇರಿಕೊಳ್ಳುವುದಿಲ್ಲ. ಆದುದರಿಂದ ಎರಡು ಭಾಷೆಗಳಲ್ಲಿನ ಆಖ್ಯಾತ ಮತ್ತು ವಿಭಕ್ತಿರೂಪಗಳಲ್ಲಿ ಸಾದೃಶ್ಯವಿದ್ದರೆ–ಮೊದಲು ಆ ಭಾಷೆಗಳು ಒಂದೇಯಾಗಿದ್ದವೆಂತಲೂ, ಒಂದು ಇನ್ನೊಂದರ ಕವಲೆಂದೂ ಸಿದ್ಧವಾಗುತ್ತದೆ.

ಮಹಾರಾಷ್ಟ್ರೀ ಪ್ರಾಕೃತವೆಂದು ಕರೆವ ಸೇತುಬಂಧಕಾವ್ಯದ ಭಾಷೆಯು ಮರಾಠಿಯ ಮೂಲವೆಂದು ಮುಂದೆತಂದ ವಾದದಲ್ಲಿ ಹುರುಳಿಲ್ಲವೆಂದು ಕಂಡುಕೊಂಡ ಬಳಿಕ, ಕೆಲವು ಮರಾಠಿ ಪಂಡಿತರು–ಮಹಾರಾಷ್ಟ್ರೀ ಪ್ರಾಕೃತವು ಮರಾಠಿಯ ಮೂಲವಲ್ಲ. ಪರಂತು ಮಹಾರಾಷ್ಟ್ರೀ ಪ್ರಾಕೃತದಿಂದ ಹುಟ್ಟಿದ ಅಪಭ್ರಂಶ ಭಾಷೆಯಿಂದ ಈಗಿನ ಮರಾಠಿಯು ಹುಟ್ಟಿದುದೆಂದು ಹೇಳತೊಡಗಿದರು. "ಶಾಲೇಯ ವ್ಯುತ್ಪತ್ತಿದೀಪಿಕಾ" ಎಂಬ ಮರಾಠಿ ಪುಸ್ತಕದಲ್ಲಿ ಅದರ ಕರ್ತೃವಾದ ಶ್ರೀಮಾನ್ ಯಶವಂತ ಗಣೇಶ ಘಫೇ ಎಂಬವರು ಮುಂದಿನಂತೆ ತನ್ನ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾರೆ:–**"ಸಂಸ್ಕೃತಾಪಾಸೂನ್ ನಿಘಾಲೇಲ್ಯಾ ಮಹಾರಾಷ್ಟ್ರೀ ಭಾಷೇಪಾಸೂನ್ ಪುಡೇಂ ಅಪಭ್ರಂಶ ಭಾಷಾ ಹೋಊನ್ ತೀಪಾಸೂನ್ ಆಪಲೀ ಮರಾಠೀ ಭಾಷಾ ಉತ್ಪನ್ನ ಝಾಲೀ." (ಪುಟ ೫)** ಅಂದರೆ ಸಂಸ್ಕೃತದಿಂದ ಹೊರಟ ಮಹಾರಾಷ್ಟ್ರೀ ಭಾಷೆಯಿಂದ ಮುಂದೆ ಅಪಭ್ರಂಶ ಭಾಷೆಯು ಹುಟ್ಟಿ ಅದರಿಂದ ನಮ್ಮ ಮರಾಠಿ ಭಾಷೆಯು ಉತ್ಪನ್ನವಾಯಿತು" ಎಂದರ್ಥ.

ಆದರೆ ಅವರು ಹಾಗೆ ಹೇಳುವಾಗ ಅಪಭ್ರಂಶ ಭಾಷೆಯಲ್ಲಿ ಮರಾಠಿಯಲ್ಲಿನ ಎಲ್ಲ ಸರ್ವನಾಮಗಳಾಗಲೀ, ಆಖ್ಯಾತ ಮತ್ತು ವಿಭಕ್ತಿರೂಪಗಳಾಗಲೀ ಇವೆಯೇ ಎಂಬುದನ್ನು ವಿಮರ್ಶಿಸಲಿಲ್ಲವೆಂದು ಹೇಳಬಹುದು. ಏಕೆಂದರೆ ಅಪಭ್ರಂಶ ಭಾಷೆಯಲ್ಲಿನ ಭೂತಕಾಲಿಕ ಕ್ರಿಯಾರೂಪಗಳು–ಗೇಲಾ, ಮೇಲಾ, ಆಲಾ ಇತ್ಯಾದಿ ಆಗುವುದಿಲ್ಲ. ಹಾಗೆಯೇ ಸೋಡೂನ್, ಕರೂನ್ ಮುಂತಾದ ರೂಪಗಳೂ ಅಪಭ್ರಂಶ ಭಾಷೆಯಲ್ಲಿ ಇಲ್ಲ. ಮತ್ತು ಮಾಝಾ ನನ್ನ; ತುಝಾ =

ನಿನ್ನ ಮುಂತಾದ ವಿಭಕ್ತಿರೂಪಗಳೂ ಇಲ್ಲ. ಅಂದರೆ ಮರಾಠಿಪಂಡಿತರು ತಮ್ಮ ತಾಯಿನುಡಿಯಾಗಿರುವ ಮರಾಠಿಯು ಬಡಕೊಂಕಣಿಯಿಂದ ಹುಟ್ಟಿದುದೆಂದು ಒಪ್ಪಿಕೊಳ್ಳುವುದು ತಮ್ಮ ಗೌರವಕ್ಕೆ ಕುಂದು ಅಥವಾ ಕಡಿಮೆಯೆಂದು–ಭಾವಿಸುತ್ತಿರಬಹುದು. ಇರಲಿ ಮರಾಠಿಯು ಅಪಭ್ರಂಶ ಭಾಷೆಯಿಂದ ಹುಟ್ಟಿದುದೆಂಬುದರಲ್ಲಿ ಸತ್ಯಾಂಶವಿಷ್ಟಿದೆಯೆಂದು ವಿಮರ್ಶಿಸುವ—

ಹೇಮಚಂದ್ರನ ಪ್ರಾಕೃತವ್ಯಾಕರಣದ ರಚನೆಯಾಗುವ ಕಾಲದಲ್ಲಿ ಹಿಂದೀ. ಗುಜರಾತಿ, ಕೊಂಕಣಿ. ಬಂಗಾಲಿ ಮುಂತಾದ ಭಾಷೆಗಳು ಬಳಕೆಗೆ ಬಂದಿದ್ದವು. ಆದುದರಿಂದ ಹೇಮಚಂದ್ರನ ಅಪಭ್ರಂಶ ವಿಭಾಗದಲ್ಲಿ ಭಾರತವರ್ಷದಲ್ಲಿ ಬಳಕೆಯಲ್ಲಿರುವ ಸಕಲ ಸಂಸ್ಕೃತಜನ್ಯ ಭಾಷೆಗಳ ಶಬ್ದಗಳೂ ದೊರೆಯುತ್ತವೆ. ಕಾರಣವೇನೆಂದರೆ ಆ ಭಾಷೆಗಳಲ್ಲಿರುವ ಕೆಲವು ಹೊಸ ಶಬ್ದರೂಪಗಳು–ಹಿಂದಿನ ಪ್ರಾಕೃತವ್ಯಾಕರಣಗಳಲ್ಲಿ ಹೇಳಿರುವ ನಿಯಮಗಳಿಗೆ ಅನುಸಾರವಾಗಿ ಸಿದ್ಧವಾದವುಗಳಲ್ಲ. ಹೀಗಾಗಿ ಹೇಮಚಂದ್ರನು ಅಂಥ ಹೊಸ ಶಬ್ದಗಳನ್ನು ಯಾವ ವಿಭೇದದಲ್ಲಿ ಸೇರಿಸುವುದೆಂದು ನಿರ್ಧರಿಸಲಾಗದುದರಿಂದ ಆ ಎಲ್ಲ ಶಬ್ದಗಳನ್ನು ಅಪಭ್ರಂಶ ವಿಭಾಗದಲ್ಲಿ ಸೇರಿಸಿದನೆನ್ನಬಹುದು. ಆ ಅಪಭ್ರಂಶ ವಿಭಾಗದಲ್ಲಿ ಹಲವು ಕೊಂಕಣಿರೂಪಗಳೂ ಪ್ರಯೋಗಗಳೂ ದೊರೆಯುತ್ತವೆ. ಆದರೆ ಅಪಭ್ರಂಶ ವಿಭಾಗದಲ್ಲಿನ ಅಧಿಕಾಂಶ ಶಬ್ದಗಳು ಮತ್ತು ಪ್ರಯೋಗಗಳು ಹಿಂದೀ ಮತ್ತು ಗುಜರಾತಿಗಳ ಮೂಲವಾಗಿದ್ದವೇ ಹೊರತು ಕೊಂಕಣಿಯದಲ್ಲ. ಅನ್ಯವಾಗ ಮರಾಠಿಗೂ ಅದಕ್ಕೂ ಯಾವ ಬಗೆಯ ನೇರಾದ ಸಂಬಂಧವೂ ಇಲ್ಲ. ಮರಾಠಿಯಲ್ಲಿ ಅಪಭ್ರಂಶ ವಿಭಾಗದಲ್ಲಿ ಕಾಣಬರುವ ಕೆಲವು ಶಬ್ದಗಳ ರೂಪಾಂತರಗಳು ಇವೆಯಾದರೂ ಅವುಗಳು ಗುಜರಾತಿಯಿಂದಲೇ ಮರಾಠಿಯೊಳಗ ಸೇರಿದವುಗಳಾಗಿದ್ದವು,

ಅಪಭ್ರಂಶ ವಿಭಾಗದಲ್ಲಿನ ಕೆಲವು ಆಖ್ಯಾತರೂಪಗಳು ಮತ್ತು ವಿಭಕ್ತಿರೂಪಗಳು ಪ್ರಾಚೀನ ಹಿಂದೀ ಕವಿತೆಗಳಲ್ಲಿ ಕಂಡುಬರುತ್ತವೆ. ಕೆಲವು ಕ್ರಿಯಾರೂಪಗಳು ಹೊಸ ಹಿಂದಿಯಲ್ಲಿಯೂ ಇವೆ:—ಉದಾ:–ಭೂತಃ = ಹುಅ = ಆದನು: ಆಯಿತು. ಮೃತಃ = ಮುಅ = ಸತ್ತನು; ಸತ್ತಿತು. ಎಂಬ ರೂಪಗಳು ಹೊಸ ಹಿಂದಿಯಲ್ಲಿ ಇವೆ. ವ್ರಜಭಾಷೆಯ ಕವಿತೆಗಳಲ್ಲಿ "ನಾನು" ಎನ್ನಲು "ಹಉಂ" ಎಂಬ ಸರ್ವನಾಮವಿದೆ: ಅಪಭ್ರಂಶ ವಿಭಾಗದಲ್ಲಿಯೂ ಅದೇ ರೂಪವಿದೆಯೇ ಹೊರತು ಮರಾಠಿಯಲ್ಲಿನ "ಮಿ" ಎಂಬುದಿಲ್ಲ. ಹಾಗೆಯೇ ಝಾಲಾ, ಮೇಲಾ ಎಂಬ ಕ್ರಿಯಾಪದಗಳೂ ಇಲ್ಲ, ಹಿಂದೀಭಾಷೆಯ ಎಲ್ಲ

ಪ್ರಾಚೀನ ಕವಿಗಳು ಅಪಭ್ರಂಶ = ವಿಭಾಗದಲ್ಲಿನ ರೂಪಗಳನ್ನು ತಮ್ಮ ಕಾವ್ಯಗಳಲ್ಲಿ ಬಳಸಿದ್ದಾರೆ. ಗೋಸ್ವಾಮೀತುಲಸಿದಾಸರು ತಮ್ಮ ''ರಾಮಚರಿತಮಾನಸ'' (= ರಾಮಾಯಣ) ದಲ್ಲಿ ಅಪಭ್ರಂಶ ಪ್ರಯೋಗಗಳನ್ನು ಬಹಳ ಪರಿಷ್ಕೃತರೀತಿಯಲ್ಲಿ ಬಳಸಿದ್ದಾರೆ. ಅಪಭ್ರಂಶ ವಿಭೇದದ ಮುಖ್ಯ ವಿಶೇಷತೆಯೆಂದರೆ–ಪುಲ್ಲಿಂಗ ನಪುಂಸಕಲಿಂಗವೆಂಬ ಭೇದವಿಲ್ಲದೇ ಎಲ್ಲ ಅಕಾರಾಂತ ನಾಮಪದಗಳು ಮತ್ತು ವಿಶೇಷಣಗಳು ಪ್ರಥಮಾವಿಭಕ್ತಿಯ ಏಕವಚನದಲ್ಲಿ ''ಉಕಾರಾಂತ''ವಾಗುವುದಾಗಿದೆ. ಅರ್ವಾಚೀನ ಕೊಂಕಣಿಯಲ್ಲಿ ಸಂಸ್ಕೃತದ ಅಕಾರಾಂತ ಪುಲ್ಲಿಂಗ ಶಬ್ದಗಳು ಮಾತ್ರ "ಉಕಾರಾಂತವಾಗುತ್ತವೆ. ಮತ್ತು ಆ "ಉಕಾರವು" ಪ್ರಾಚೀನ "ಓಕಾರದ" ಹ್ರಸ್ವರೂಪವೇ ಹೊರತು ಅಪಭ್ರಂಶದ ಪ್ರಭಾವದಿಂದ ಬಂದುದಲ್ಲ. ಹಿಂದೀ ಸಾಹಿತ್ಯ ಮತ್ತು ಭಾಷೆಯ ವಿಕಾಸದ ಇತಿಹಾಸ ಬರೆದ ವಿದ್ವಾಂಸರೆಲ್ಲರೂ ತಮ್ಮ ಗ್ರಂಥಗಳಲ್ಲಿ ಅಪಭ್ರಂಶ ವಿಭಾಗದಲ್ಲಿನ ಕವಿತೆಗಳನ್ನು ಉದಹರಿಸಿದ್ದಾರೆ. ಅವರು ಉದಹರಿಸಿದ ಕವಿತೆಗಳಲ್ಲಿ ಸಾಮಾನ್ಯವಾದುದು ಮುಂದಿನದಾಗಿದೆ:—

**ಭಲ್ಲಾ ಹುಆ ಜು ಮಾರಿಆ ಬಹಿಣಿ ಮಹಾರಾ ಕಂತು।**
**ಲಜ್ಜೇಜ್ಜಂತು ವಯಂಸಿಅಹು ಜಇ ಭಗ್ಗಾ ಘರು ಏಂತು**
**॥ ೮-೪-೩೫೧ ॥**

ಇದು ಆಚಾರ್ಯ ಹೇಮಚಂದ್ರನು ಅಪಭ್ರಂಶ ವಿಭಾಗದಲ್ಲಿ ನಿಯಮಗಳ ಉದಾಹರಣೆಗಾಗಿ ಕೊಟ್ಟ ಪದ್ಯವಾಗಿರುತ್ತದೆ. ಅದರ ಅರ್ಥವು–ಎಲೇ ಸೋದರಿಯೇ ನನ್ನ ಕಾಂತನು (ಯುದ್ಧರಂಗದಲ್ಲಿ) ಮಡಿದುದೇ (=ಕೊಲ್ಲಲ್ಪಟ್ಟುದು) ಒಳಿತಾಯಿತು. ಅವನು ಸೋತು ಮನೆಗೆ ಬಂದುದಾಗಿದ್ದರೆ ನನ್ನ ಸಖಿಯರಿಂದಾಗಿ ನಾಚಿಕೆಪಡಬೇಕಾಗಿತ್ತು.

ಹಿಂದಿನ ಪದ್ಯದಲ್ಲಿ ಹುಅ: ಮಾರಿಅ: ಭಗ್ಗಾ ಎಂಬ ಮೂರು ಭೂತಕಾಲಿಕ ಕ್ರಿಯೆಗಳು ಬಂದಿವೆ ಮತ್ತು ಅವುಗಳು ಅನುಕ್ರಮವಾಗಿ—ಭೂತಃ ಮಾರಿತಃ. ಭಗ್ನಃ ಎಂಬ ಸಂಸ್ಕೃತ ಕೃದಂತಗಳ ರೂಪಾಂತರಗಳಾಗಿವೆ. ಹಾಗೆಯೇ ನನ್ನ ಎಂಬ ಅರ್ಥದಲ್ಲಿ ''ಮಹಾರಾ'' ಎಂಬ ರೂಪ ಬಂದಿದೆ. ಅಂಥರೂಪಗಳು ಹಿಂದಿನ ಮರಾಠಿ ಕಾವ್ಯಗಳಲ್ಲಾಗಲೀ ಇಂದಿನ ಮರಾಠಿಯಲ್ಲಾಗಲೀ ಇಲ್ಲ. ಬದಲಿಗೆ–ಕೊಂಕಣಿಯಲ್ಲಿನ ಜಾಲೆಂ. ಮಾರಿಲೊ. ಭಂಗಲೊ ಮತ್ತು ಮಜ್ಜೊ ಎಂಬವುಗಳ ರೂಪಾಂತರಗಳಾದ–ಝಾಲೇಂ: ಮಾರಿಲಾ. ಭಂಗಲಾ ಮತ್ತು ಮಾಝಾ ಎಂಬ ರೂಪಗಳು ಇವೆ.

ಅಪಭ್ರಂಶ ವಿಭೇದವಲ್ಲಿ—ಅವನು = ಸೋ; ಇವನು = ಏಹೋ; ಅವಳು = ಸಾ; ಇವಳು = ಏಹ, ಎಂಬ ಸರ್ವನಾಮಗಳು ಇವೆ. ಇವುಗಳು ಕೂಡ ಮರಾಠಿಯಲ್ಲಿ ಇಲ್ಲ. ಅವುಗಳ ಬದಲಿಗೆ ಕೊಂಕಣಿಯಲ್ಲಿನ, ತೊ, ಹೊ, ತೀ, ಹೀ ಎಂಬ ರೂಪಗಳೇ ಬಳಸಲ್ಪಡುತ್ತವೆ. ಮತ್ತು ``ಹೊ'' ಎಂಬುದು ಮಾತ್ರ ``ಹಾ ಆಗಿದೆ.

ಅಪಭ್ರಂಶ ವಿಭೇದವಲ್ಲಿ ಪೂರ್ವಕಾಲಿಕ ಕೃದಂತಗಳು ಮುಂದಿನಂತಾಗುತ್ತವೆ:—ಮಾರಿ = ಹೊಡೆದು; ವಿಛೋಡವಿ = ಬಿಡಿಸಿ ಅಥವಾ ಬಿಚ್ಚಿ; ಜೇಪ್ಪಿ = ಗೆದ್ದು'' ಇತ್ಯಾದಿ ರೂಪಗಳು ಬರುತ್ತವೆ. ಇವುಗಳಂಥ ರೂಪಗಳು ಕೂಡ ಮರಾಠಿಯಲ್ಲಿ ಇಲ್ಲ. ಬದಲಿಗೆ ಅನುಕ್ರಮವಾಗಿ ಕೊಂಕಣಿಯಲ್ಲಿನ ``ಮಾರೂನ್, ಪಿಸಡೂನ್ ಇಲ್ಲವೇ ಸೋಡೂನ್ ಮತ್ತು ಜಿಂಕೂನ್ ಎಂಬ ರೂಪಗಳಿವೆ.

ಅಪಭ್ರಂಶ ವಿಭೇದವಲ್ಲಿ "ದೊಡ್ಡ'' ಅನ್ನಲು ಕೊಂಕಣಿಯಲ್ಲಿರುವ ``ವಡ್ಡ'' ಎಂಬ ಶಬ್ದವಿದೆ. ಮತ್ತು ನೋಡು ಎಂಬ ಅರ್ಥದಲ್ಲಿ ``ಜೋಇ'' ಎಂಬ ಕ್ರಿಯೆ ಇದೆ. ಅದು ಕೊಂಕಣಿಯಲ್ಲಿನ ``ಚೋಇ'' ಕ್ರಿಯೆಯ ರೂಪಾಂತರವಾಗಿರುತ್ತದೆ. ಕೊಂಕಣಿಯಲ್ಲಿನ ಚೋಇ = ಚೋಯ್ = ಚೋಹ್ = ಚಕ್ಷ ಎಂಬ ಸಂಸ್ಕೃತ ಕ್ರಿಯೆಯಿಂದ ಚಹ್ ಮತ್ತು ಚಖ್ ಎಂದು ಮಾರ್ಪಟ್ಟ ತರುವಾಯ ರೂಪಾಂತರವಾದುದಾಗಿದೆ. ಚೋಹ್ ಎಂಬುದರ ಹಿಂದೀರೂಪವು ``ಜೋಹ'' ಎಂದಿದೆ.

**ಜಇ ಪುಚ್ಛಹ ಘರಂವಡ್ಡಾಇಂ ತೋ ವಡ್ಡಾ ಘರಂಓಇ ।**
**ವಿಹಲಿಅ-ಜಣ-ಅಬ್ಭುದ್ಧರಣು ಕಂತು ಕುಡೀರಇ ಜೋಇ**
**॥ ೮-೪-೩೬೪ ॥**

ಅರ್ಥ—ದೊಡ್ಡ ಮನೆಗಳ ಕುರಿತು ಪ್ರಶ್ನಿಸುವಿರೆಂದಾದರೆ ದೊಡ್ಡ ಮನೆಗಳು ಅಲ್ಲಿವೆ. ಕಷ್ಟದಲ್ಲಿರುವವರನ್ನು ಉದ್ಧರಿಸುವ ನನ್ನ ಕಾಂತನಾದರೋ ಈ ಗುಡಿಸಲಿನಲ್ಲಿದ್ದಾನೆ—ನೋಡು.

ಹಿಂದಿನ ಪದ್ಯದಲ್ಲಿ ಮನೆಗಳು = ಘರಂ ಎಂಬ ರೂಪವು ದಕ್ಷಿಣ ಕನ್ನಡ ಜಿಲ್ಲೆಯ ಸಾರಸ್ವತ ಬ್ರಾಹ್ಮಣರು ನುಡಿಯುವ ರೀತಿಯಲ್ಲಿ ಬಂದಿದೆ. ವಡ್ಡಾಇಂ ಎಂಬುದರ ಬದಲಿಗೆ 'ವಡ್ಡಾಂ' ಎಂಬ ರೂಪವು ಕೊಂಕಣಿಯಲ್ಲಿ ಬಳಸಲ್ಪಡುತ್ತದೆ. ವಡ್ಡ ಶಬ್ದವಾಗಲೀ 'ಚೋಯ್' ಎಂಬ ಕ್ರಿಯೆಯಾಗಲೀ ಮರಾಠಿಯಲ್ಲಿ ಇಲ್ಲ. ಅಪಭ್ರಂಶ ವಿಭಾಗದಲ್ಲಿ ಬಂದಿರುವ ಅನೇಕ ಶಬ್ದಗಳಿಗೆ

ಸಂಸ್ಕೃತದಲ್ಲಿ ಮೂಲ ದೊರೆಯುವುದಿಲ್ಲ. ಅಂಥ ಶಬ್ದಗಳು ಮರಾಠಿಯಲ್ಲಿರ ಬಹುದಾದರೆ–ಆ ಕುರಿತು ಚರ್ಚಿಸಿ ಪ್ರಯೋಜನವಿಲ್ಲ. ಹಿಂದಿನ ವಿವರಣೆಯ ಮೇಲಿಂದ–ಅಪಭ್ರಂಶ ವಿಭೇದದಲ್ಲಿನ ಆಖ್ಯಾತರೂಪಗಳಾಗಲೀ, ವಿಭಕ್ತಿರೂಪ ಗಳಾಗಲೀ ಸರ್ವನಾಮಗಳಾಗಲೀ ಮರಾಠಿಯಲ್ಲಿ ಇಲ್ಲವೆಂದು ಸಿದ್ಧವಾಗುತ್ತದೆ. ಆದುದರಿಂದ–ಮರಾಠಿಯು ಅಪಭ್ರಂಶ ವಿಭೇದದಿಂದ ಹುಟ್ಟಿದುದೆಂಬ ವಾದ ದಲ್ಲಿ ಹುರುಳಿಲ್ಲವೆಂದು ಸ್ಪಷ್ಟವಾಗುತ್ತದೆ.

ಇನ್ನು ಕೊಂಕಣಿಯು ಶೌರಸೇನೀ ಮತ್ತು ಪ್ರಾಕೃತಗಳ ಮಿಶ್ರಣವಾಗಿರುವ ಆವಂತೀ ವಿಭೇದದಿಂದ ಹುಟ್ಟಿದಂತೆಯೇ ಮರಾಠಿಯು ಕೂಡ ಅದರಿಂದಲೇ ಸ್ವತಂತ್ರವಾಗಿ ಹುಟ್ಟಿರಬಾರದೇಕೆ? ಎಂಬ ಪ್ರಶ್ನೆಯು ಬರಬಹುದು. ಆ ಪ್ರಶ್ನೆಗೆ ನಮ್ಮ ಉತ್ತರವು ಮುಂದಿನಂತಿದೆ:—ಸಂಸ್ಕೃತದಲ್ಲಿನ ಭೂತಕಾಲಿಕ ಕೃದಂತದಲ್ಲಿನ ''ತ'' ಪ್ರತ್ಯಯವೇ ಶೌರಸೇನಿಯಲ್ಲಿ ''ದ'' ಆಗಿ ಮಾರ್ಪಡುತ್ತ ದೆಂದು ಹಿಂದೆ ವಿವರಿಸಿದೆ. ಅಂದರೆ ''ಗತಃ'' ಇದ್ದುದು ''ಗದೋ'' ಆಗುತ್ತ ದೆಂತಲೂ ''ಆಗತಃ ಇದ್ದುದು'' ಆಗದೋ ಆಗುತ್ತದೆಂತಲೂ ಹೇಳಿದೆ. ಮತ್ತು ತರುವಾಯ ಕೊನೆಯಲ್ಲಿನ ''ದೋ'' ಇದ್ದುದು ಕೊಂಕಣಿಯಲ್ಲಿ ''ಲೊ'' ಆಗುತ್ತದೆಂದೂ ವಿವರಿಸಿದೆ. ಅಷ್ಟು ಮಾತ್ರವಲ್ಲ ದೋಹದಃ ಇದ್ದುದು ದೋಹಲೋ; ಆರ್ದ್ರ ಇದ್ದುದು ಅಲ್ಲಂ, ಒಲ್ಲಂ ಆಗುತ್ತದೆಂದೂ ವಿವರಿಸಿದೆ. ಅಂದರೆ ಶಬ್ದಾಂತದಲ್ಲಿನ ''ದ'' ಕಾರವೇ ''ಲ'' ಕಾರವಾಗಿ ಮಾರ್ಪಡುತ್ತದೆಂದು ಸ್ಪಷ್ಟವಾಗಿ ಸಿದ್ಧವಾಗಿದೆ. ಅದನ್ನು ಮರಳಿ ಒಮ್ಮೆ ವಿವರಿಸಲಾಗುವುದು:—

| ಸಂಸ್ಕೃತ | ಶೌರಸೇನೀ |
|---|---|
| **ರಾಮ ಆಗತಃ** | **ರಾಮೋ ಆಗದೋ** |
| **ರಾಮೇಣ ಕೃತಮ್** | **ರಾಮೇಣ ಕಿದಂ** |
| **ಸ ಮೃತಃ** | **ಸೋ ಮಿದೋ** |

| ಕೊಂಕಣಿ | ಕನ್ನಡ |
|---|---|
| **ರಾಮು ಆಯಲೊ** | **ರಾಮನು ಬಂದನು** |
| **ರಾಮಾನ ಕೆಲೆಂ** | **ರಾಮನು ಮಾಡಿದನು** |
| **ತೊs ಮೆಲೊ** | **ಅವನು ಸತ್ತನು** |

ಈ ವಿವರಣೆಯಿಂದ ''ಲ'' ಕಾರದ ಮೂಲವು ''ದ'' ಅಲ್ಲದಿದ್ದರೆ ''ತ'' ಎಂದು ಸ್ಪಷ್ಟವಾಗುತ್ತದೆ. ಆದುದರಿಂದ ಕ್ರಿಯಾಪದದ ಕೊನೆಯಲ್ಲಿ ''ತ''

ಅಲ್ಲದಿದ್ದರೆ "ದ" ಇರುವ ಭಾಷೆಯೇ ಮೊದಲಿನದು ಮತ್ತು "ಕ್ರಿಯೆಯ ಕೊನೆಯಲ್ಲಿ "ಲಕಾರ"ವಿರುವ ಭಾಷೆಯು ದ ಇಲ್ಲವೇ ತ ಇದ್ದ ಭಾಷೆಯಿಂದ ಹುಟ್ಟಿದುದೆಂದು ಸಿದ್ಧವಾಗುತ್ತದೆ.

ಕೊಂಕಣಿಯಲ್ಲಿ ಸಾಮಾನ್ಯ ಭವಿಷ್ಯತ್ಕಾಲ ಮತ್ತು ಸಂಭಾವ್ಯ ಭವಿಷ್ಯತ್ಕಾಲ ವೆಂದು ಭವಿಷ್ಯದರ್ಥವನ್ನು ಸೂಚಿಸುವ ಎರಡು ಬಗೆಯ ಆಖ್ಯಾತರೂಪಗಳಿವೆ. ಸಾಮಾನ್ಯ ಭವಿಷ್ಯತ್ಕಾಲಿಕರೂಪವು ನಿಶ್ಚಯವನ್ನು ಸೂಚಿಸುತ್ತದೆ. ಮತ್ತು ಸಂಭಾವ್ಯರೂಪವು ಬರಿಯ ಸಂಭಾವನೆ ಇಲ್ಲವೇ ಅನುಮಾನವನ್ನು ವ್ಯಕ್ತಗೊಳಿಸುತ್ತದೆ. ಉದಾ:–ತುಂವ್ ಆತಽಂ ವಽಚ. ತೊಽ ಮಾಗಿರಿ ಎತಲೊ = ನೀನೀಗ ಹೋಗು ಅವನು ಮತ್ತೆ ಬರುವನು. ಇದು ಸಾಮಾನ್ಯ ಭವಿಷ್ಯವನ್ನು ಅಂದರೆ ನಿಶ್ಚಯವನ್ನು ಸೂಚಿಸುತ್ತದೆ. ಸಂಭಾವ್ಯ ಭವಿಷ್ಯತ್ತಿನ ಉದಾಹರಣೆಯು ಮುಂದಿನಂತಿದೆ:—ತೊಽ ಹೆಂ ಕಾಮ ಕರೀತ = ಅವನು ಈ ಕೆಲಸವನ್ನು ಮಾಡಿಯಾನು ಇಲ್ಲವೆ ಮಾಡಬಹುದು. ದಕ್ಷಿಣ ಕನ್ನಡ ಜಿಲ್ಲೆಯವರು–ತೊಽ ಕರೀತ = ಅವನು ಮಾಡಿಯಾನು: ತೆಽ ಕರತೀತ = ಅವರು ಮಾಡಿಯಾರು" ಎಂಬ ರೂಪಗಳನ್ನು ಬಳಸುತ್ತಾರಾದರೂ–ಕೊಚ್ಚಿಯವರು "ಕರೀದ" ಮತ್ತು "ಕರತೀದ" ಎಂಬ ರೂಪಗಳನ್ನು ಬಳಸುತ್ತಾರೆ.

ಮರಾಠಿಯಲ್ಲಿ ಎರಡು ಬಗೆಯ ಭವಿಷ್ಯದ್ರೂಪಗಳಿಲ್ಲ. ಆದುದರಿಂದ ಕೊಂಕಣಿಯಲ್ಲಿನ ಸಂಭಾವ್ಯರೂಪಗಳನ್ನು ಸಾಮಾನ್ಯ ಭವಿಷ್ಯತ್ಕಾಲದ ನಿಶ್ಚಯಾರ್ಥದಲ್ಲಿ ಬಳಸುತ್ತಾರೆ. ಆಗ ಮರಾಠಿಯಲ್ಲಿನ ರೂಪಗಳು—ತೋ ಕರೀಲ = ಅವನು ಮಾಡುವನು. ತೇ ಕರತೀಲ = ಅವರು ಮಾಡುವರು ಎಂದು ಮಾರ್ಪಡುತ್ತವೆ. ಅಂದರೆ ಕೊಂಕಣಿಯ ಕರೀತ ಮತ್ತು ಕರತೀತ ಎಂಬವುಗಳ ಕೊನೆಯಲ್ಲಿನ "ತ"ಕಾರವೇ "ಲ"ಕಾರವಾಗಿ ಮಾರ್ಪಟ್ಟು ಮರಾಠಿಯ ಕರೀಲ ಮತ್ತು ಕರತೀಲ ಎಂಬ ರೂಪಗಳು ಸಿದ್ಧಿಸಿವೆ ಎಂದು ಸ್ಪಷ್ಟವಾಗುತ್ತದೆ. ಕೊಂಕಣಿಯಲ್ಲಿರುವಂಥ ಸಂಭಾವ್ಯರೂಪಗಳು ಇತರ ಯಾವ ಭಾಷೆಯಲ್ಲಿಯೂ ಇಲ್ಲವಾದುದರಿಂದ ಮರಾಠಿಯು ಕೊಂಕಣಿಯಿಂದಲೇ ಹುಟ್ಟಿದುದೆಂದು ಯಾವ ಸಂದೇಹವೂ ಉಳಿಯದಂತೆ ಸಿದ್ಧವಾಗುತ್ತದೆ.

# ೪

ಪೋರ್ತುಗೀಸರು 1510ನೆಯ ಇಸವಿಯಲ್ಲಿ ಗೋವವನ್ನು ಹಿಡಿದಾಗ ಗೋವದ ಜನರು ನುಡಿಯುವ ಭಾಷೆಗೆ ಅಲ್ಲಿ ಯಾವುದೊಂದು ಸ್ಥಿರವಾದ ಹೆಸರಿರಲಿಲ್ಲವೆಂದು ತೋರುತ್ತದೆ. ಗೋವದ ಜನರಲ್ಲಿ ವ್ಯಾಪಾರಿಗಳಾಗಿದ್ದವರು ತಮ್ಮ ಲೆಕ್ಕ-ಪತ್ರಗಳನ್ನು ಬರೆಯಲಿಕ್ಕೆ ಕನ್ನಡದಂಥ ಲಿಪಿಯನ್ನು ಬಳಸುತ್ತಿದ್ದುದರಿಂದ ಪೋರ್ತುಗೀಸರು ಗೋವದ ಭಾಷೆಯು ಕನ್ನಡವಾಗಿರಬಹುದೆಂದೆಣಿಸಿ ಅದನ್ನು canari = ಕಾನಡಿ ಎಂದು ಕರೆದಿದ್ದರು. ತರುವಾಯ ಗೋವದ ಭಾಷೆಯು ಕನ್ನಡವಲ್ಲವೆಂದು ಅವರಿಗೆ ತಿಳಿದು ಬಂದುದಲ್ಲದೇ ಅದು ಮರಾಠಿಯಂತೆಯೇ ಇತ್ತಾದರೂ ಮರಾಠಿಯಿಂದ ಕೊಂಚ ಭಿನ್ನವಾಗಿದೆಯೆಂದು ತಿಳಿದುಕೊಂಡರು. ಹೀಗಾಗಿ ಅವರು ಅದನ್ನು ಬ್ರಾಹ್ಮಣೀ ಎಂದು ಕರೆದರು. ಏಕೆಂದರೆ ಬ್ರಾಹ್ಮಣರು ಮಾತ್ರ ಅದನ್ನು ಶುದ್ಧರೂಪದಲ್ಲಿ ಮಾತಾಡುತ್ತಿದ್ದರು. ಜನಸಾಮಾನ್ಯರ ಭಾಷೆಯು ಮರಾಠಿಗೆ ಅತ್ಯಂತ ನಿಕಟವಾಗಿದ್ದಿತು. ಗೋವದ ಹೊರಗಿನ ಜನರು ಮೊದಲಿನಿಂದಲೂ ಗೋವದ ಭಾಷೆಯನ್ನು ಕೊಂಕಣಿಯೆನ್ನುತ್ತಿದ್ದರು. ಹೀಗಾಗಿ ಪೋರ್ತುಗೀಸರು ಕೂಡ ಕೊನೆಗೆ ಅದನ್ನು ಕೊಂಕಣಿಯೆಂದೇ ಕರೆದರು.

ಹಿಂದೆ ಕನ್ನಡದಂಥ ಲಿಪಿಯೆನ್ನಲು ಕಾರಣವೇನೆಂದರೆ ಹದಿನೈದನೆಯ ಶತಮಾನದಲ್ಲಿ ಕರ್ನಾಟಕ ರಾಜ್ಯದೊಳಗೆ ಬಳಕೆಯಲ್ಲಿದ್ದ ಕನ್ನಡ ಲಿಪಿಯು ಗೋವದ ಲಿಪಿಯಿಂದ ತುಸು ಭಿನ್ನವಾಗಿತ್ತು. ಅಂದರೆ ಕನ್ನಡ ಲಿಪಿಯು ತೆಲುಗು ಲಿಪಿಯಾಗಿಯೇ ಇತ್ತು. ಗೋವದ ಲಿಪಿಯು ಈಗಿನ ಕನ್ನಡಲಿಪಿಯಂತಿತ್ತು. ಬಹಳ ಹಿಂದೆ ಅಂದರೆ ಸಾಧಾರಣ ಕ್ರಿಸ್ತನ ಎರಡನೆಯ ಶತಮಾನದ ತನಕ ಇಡೀ ಭಾರತವರ್ಷದಲ್ಲಿ ಒಂದೇ ಒಂದಾದ ಬ್ರಾಹ್ಮೀ ವರ್ಣಮಾಲೆಯು ಬಳಕೆಯಲ್ಲಿತ್ತು. ಬ್ರಾಹ್ಮೀವರ್ಣಮಾಲೆಯು ಪಾಶ್ಚಿಮಾತ್ಯ ವಿದ್ವಾಂಸರು ಹೇಳುವಂತೆ ಕ್ರಿಸ್ತಪೂರ್ವ ಆರನೆಯ ಶತಮಾನದಷ್ಟೇ ಪ್ರಾಚೀನವಾಗಿರದೇ ಕ್ರಿಸ್ತಪೂರ್ವ ೧೫೦೦ ವರ್ಷಗಳಷ್ಟಾದರೂ ಪ್ರಾಚೀನವಾಗಿರಬೇಕೆಂದು ಹೇಳಲು ಆಧಾರವಿದೆ. ಅಲ್ಲದೇ ಪಾಶ್ಚಿಮಾತ್ಯರು ಹೇಳುವಂತೆ ಬ್ರಾಹ್ಮೀವರ್ಣಮಾಲೆಯು ಸೆಮಿಟಿಕ್ ಮೂಲದಿಂದ ಹುಟ್ಟಿದುದೂ ಅಲ್ಲ. ವಾಸ್ತವವಾಗಿ ಹೇಳುವುದಾದರೆ ಗ್ರೀಕ್ ವರ್ಣಮಾಲೆಯು ಫಿನಿಶ್ ವರ್ಣಮಾಲೆಯಿಂದ ಹುಟ್ಟಿದುದಾಗಿರದೇ ಬ್ರಾಹ್ಮೀ ವರ್ಣಮಾಲೆಯಿಂದಲೇ ಹುಟ್ಟಿದುದಾಗಿದೆ. ಇದಕ್ಕೆ ಪ್ರಮಾಣವಾಗಿ ಗ್ರೀಕ್

ವರ್ಣಮಾಲೆಯಲ್ಲಿನ ಇಪ್ಪತ್ತನಾಲ್ಕು ವರ್ಣಗಳಲ್ಲಿ ಹದಿನೆಂಟು ವರ್ಣಗಳು ಇಂದಿಗೂ ಬ್ರಾಹ್ಮೀರೂಪದಲ್ಲಿಯೇ ಇವೆ. ಗ್ರೀಕರು ಬ್ರಾಹ್ಮೀ ವರ್ಣಗಳ ಚಿಹ್ನೆಗಳನ್ನು ಬುಡಮೇಲು ಮಾಡಿ ಬಳಸಿದ್ದಾರೆ ಅಷ್ಟೇ. ಆ ಗುಟ್ಟನ್ನು ತಿಳಿದ ಬ್ರಿಟಿಷ್ ವಿದ್ವಾಂಸರು—ಅದನ್ನು ಮರೆಮಾಜಿ ಬ್ರಾಹ್ಮೀವರ್ಣಮಾಲೆಯನ್ನೇ ಸೆಮಿಟಿಕ್ ಮೂಲದಿಂದ ಹುಟ್ಟಿದುದೆನ್ನತೊಡಗಿದ್ದರು. ಗ್ರೀಕ್ ಕವಿಗಳು ಕ್ರಿಸ್ತಪೂರ್ವ ಒಂಭತ್ತನೆಯ ಶತಮಾನದಲ್ಲಿಯೇ ತಮ್ಮ ಕವಿತೆಗಳನ್ನು ಬರೆಯಲು ಲಿಪಿಯನ್ನು ಉಪಯೋಗಿಸುತಿದ್ದಿರಬಹುದೆಂದೂ, ಕ್ರಿಸ್ತಪೂರ್ವ ಏಳನೆಯ ಶತಮಾನದ ಒಂದು ಹೂಜಿಯ ಮೇಲೆ ಗ್ರೀಕ್ ಬರವಣಿಗೆ ಇದೆಯೆಂದೂ ಬ್ರಿಟಿಷ್ ವಿದ್ವಾಂಸರು ಹೇಳುತ್ತಾರೆ.1

ಮಾಂಡೂಕ್ಯೋಪನಿಷತ್ತಿನಲ್ಲಿ ಓಂಕಾರವು ಬ್ರಹ್ಮದಿಂದ ಹುಟ್ಟಿತೆಂದೂ. ಬ್ರಹ್ಮವೇ ಅದರ ಆತ್ಮವೆಂದೂ. ಆತ್ಮಕ್ಕೆ ನಾಲ್ಕು ಕಾಲುಗಳೆಂದೂ, ಕಾಲುಗಳೇ ಮಾತ್ರೆಗಳೆಂದೂ, ಮಾತ್ರೆಗಳಿಂದಲೇ ಅ, ಉ, ಮ ಎಂಬ ವರ್ಣಗಳಾದವೆಂದೂ. ಆ ಮೂರುವರ್ಣಗಳ ಸಂಯೋಗವೇ ಓಮ್ ಎಂದೂ ಆಧ್ಯಾತ್ಮಿಕರೀತಿಯಿಂದ ವಿವರಿಸಿದೆ. ಆ ನಾಲ್ಕು ಕಾಲುಗಳುಳ್ಳ ಆತ್ಮವು (ಅಂದರೆ ಮೂಲವು) ಅಥವಾ ಬ್ರಹ್ಮವು ಬೇರೆ ಯಾವುದೂ ಆಗಿರದೇ ಹಿಂದಿನ ಜನರು ಯಜ್ಞದ ಬೆಂಕಿಯನ್ನು ಹುಟ್ಟಿಸಲು ಬಳಸುತಿದ್ದ ಅಗ್ನಿಮಂಥನಯಂತ್ರವಾಗಿತ್ತು ಅಥವಾ **+1** ಪ್ರಜಾಪತಿಯಾಗಿತ್ತು. ಓಮ್ ಎಂಬ ಅಕ್ಷರವು ಸಿದ್ಧವಾದ ತರುವಾಯ ಯಜ್ಞಚಿತಿಗಳ ಆಕೃತಿಗಳ ನೆರವಿನಿಂದ ವರ್ಣಮಾಲೆಯಲ್ಲಿನ ಇತರ ಅಕ್ಷರಗಳನ್ನು ನಿರ್ಮಿಸಿದರು. ಯಜ್ಞವು ಕೂಡ ಬ್ರಹ್ಮವಾಗಿರುವುದರಿಂದ–ಬ್ರಹ್ಮಮೂಲದಿಂದ ಹುಟ್ಟಿದ ಆ ವರ್ಣಮಾಲೆಯ ಹೆಸರು ಬ್ರಾಹ್ಮೀ ಎಂದಾಗಿದ್ದಿತೇ ಹೊರತು ಜೈನ ತೀರ್ಥಂಕರ ಋಷಭದೇವನ ಪುತ್ರಿ ಬ್ರಾಹ್ಮೀಯಿಂದಾಗಿ ಅಲ್ಲ. ಬ್ರಾಹ್ಮೀ ವರ್ಣಮಾಲೆಯಲ್ಲಿನ ಎಲ್ಲ ಮುಖ್ಯ ಆಕೃತಿಗಳು ಸಿಂಧೂಕಣಿವೆಯಲ್ಲಿ ದೊರಕಿದ ಮುದ್ರೆಗಳ ಮೇಲಿರುವುದರಿಂದ ಬ್ರಾಹ್ಮೀ ವರ್ಣಮಾಲೆಗೂ ಸಿಂಧೂ ಸಂಸ್ಕೃತಿಗೂ ನಿಕಟವಾದ ಸಂಬಂಧವಿದೆಯೆಂದು ಸಿದ್ಧವಾಗುತ್ತದೆ.

ಬ್ರಾಹ್ಮೀ ವರ್ಣಗಳಿಂದ ಸಂಯುಕ್ತಾಕ್ಷರಗಳನ್ನು ಬರೆಯುವುದಾಗಲೀ.

---

1. In Ionia, at all events, writing was introduced at an early period, and was perhaps used by poets of the ninth century. Perhaps the earliest example of a Greek writing we possess is on an Attic jar of the seventh century. A History of Greece page 78 J. B. Bury D. Litt.

ಬರೆಯುವನ್ನು ಓದುವುದಾಗಲೀ, ವ್ಯಂಜನಗಳಿಗೆ ಸ್ವರಗಳನ್ನು ಕೂಡಿಸುವುದಾಗಲೀ ತುಂಬಾ ತೊಡಕಿನ ಕೆಲಸವಾಗಿದ್ದುದರಿಂದ ಆ ವರ್ಣಮಾಲೆಯನ್ನು ಬಳಸುತ್ತಿದ್ದ ಬ್ರಾಹ್ಮಣರು ಆ ವರ್ಣಮಾಲೆಯಲ್ಲಿ ಸುಧಾರಣೆಯನ್ನು ಮಾಡುತ್ತಲೇ ಇದ್ದರು. ಚಕ್ರವರ್ತಿ ಅಶೋಕನ ಕಾಲದಲ್ಲಿಯೇ ದಕ್ಷಿಣಭಾರತದಲ್ಲಿ ಬಳಕೆಯಲ್ಲಿದ್ದ ಕೆಲವು ವರ್ಣಗಳು ಉತ್ತರ ಭಾರತದಲ್ಲಿನ ವರ್ಣಗಳಿಂದ ಭಿನ್ನರೂಪವನ್ನು ತಾಳಿದ್ದವು. ಅನ್ನುವಾಗ ಲಿಪಿ-ಸುಧಾರಣೆಯ ಕೆಲಸವು ಮೊತ್ತಮೊದಲು ದಕ್ಷಿಣ ಭಾರತದಲ್ಲಿಯೇ ಪ್ರಾರಂಭವಾಗಿತ್ತೆಂದು ಸಿದ್ಧವಾಗುತ್ತವೆ. ಬ್ರಾಹ್ಮೀ ವರ್ಣಮಾಲೆಯಲ್ಲಿ ಪ್ರಾಕೃತ ಭಾಷೆಗಳಿಗೆ ಅವಶ್ಯಕವಿರುವ "ಎ" ಮತ್ತು "ಒ" ಎಂಬ ಹ್ರಸ್ವ ಸ್ವರಗಳಿಲ್ಲದುದರಿಂದ ಆ ಎರಡು ಸ್ವರಗಳ ಚಿಹ್ನೆಗಳನ್ನು ಸೇರಿಸಿ ಒಂದು ಹೊಸ ವರ್ಣಮಾಲೆಯನ್ನು ನಿರ್ಮಿಸಿದ್ದರು. ಪ್ರಾಕೃತ ಭಾಷೆಗಳಲ್ಲಿ ಸಂಯುಕ್ತ ವ್ಯಂಜನಗಳ ಮೊದಲಿನ ದೀರ್ಘಸ್ವರದ ಉಚ್ಚಾರವು ಹ್ರಸ್ವವಾಗುತ್ತಿದ್ದುದರಿಂದ, ಹೊಸ ವರ್ಣಮಾಲೆಯು ನಿರ್ಮಿಸಲ್ಪಡುವ ಮೊದಲು ಕೋಷ್ಠ ಎಂಬ ಶಬ್ದದ ಪ್ರಾಕೃತರೂಪಾಂತರವನ್ನು "ಪೋಟ್ಟ" ಎಂದು ಬರೆದು "ಪೊಟ್ಟ" (= ಹೊಟ್ಟೆ) ಎಂದು ಓದಬೇಕಾಗುತ್ತಿತ್ತು. ಹೊಸ ವರ್ಣಮಾಲೆಯು ನಿರ್ಮಿಸಲ್ಪಟ್ಟ ತರುವಾಯ ಅಂಥ ತೊಂದರೆಗಳು ದೂರವಾದವು. ದಕ್ಷಿಣ ಭಾರತದಲ್ಲಿ ರೂಪುಗೊಂಡ ಆ ಹೊಸ ವರ್ಣಮಾಲೆಯು ಆಂಧ್ರ, ಕರ್ಣಾಟ ಮತ್ತು ಚೇರ ರಾಜ್ಯಗಳಲ್ಲಿ ಬಳಸಲ್ಪಡುತ್ತಿತ್ತು. ಇಂದು ದೊರೆಯುವ ಪ್ರಾಚೀನ ಶಾಸನಗಳಲ್ಲಿ ಆ ವರ್ಣಮಾಲೆಯು ರೂಪಾಂತರವಾಗುತ್ತ ಸಾಗಿದ ಎಲ್ಲ ಹಂತಗಳು ಕಾಣಸಿಗುತ್ತವೆ. ಆ ವರ್ಣಮಾಲೆಯ ಪೂರ್ಣ ವಿಕಸಿತವಾದ ರೂಪವೇ ಆಂಧ್ರವರ್ಣಮಾಲೆಯಾಗಿತ್ತು ಮತ್ತು ಅದು ಆರಂಭಕಾಲದಲ್ಲಿ ಪ್ರಾಕೃತ ಮತ್ತು ಸಂಸ್ಕೃತ ಭಾಷೆಗಳಿಗಾಗಿ ಮಾತ್ರ ಬಳಸಲ್ಪಡುತ್ತಿತ್ತು. ಅಂದರೆ ದಕ್ಷಿಣ ಭಾರತದಲ್ಲಿ ವಿಕಸಿತವಾದ ಆ ವರ್ಣಮಾಲೆಯು ಸಂಸ್ಕೃತ ಉಚ್ಚಾರಗಳಿಗನುಸಾರವಾಗಿಯೇ ನಿರ್ಮಿಸಲ್ಪಟ್ಟಿದ್ದುದರಿಂದ ಸಾಧಾರಣ ಕ್ರಿಸ್ತನ ಒಂಭತ್ತನೆಯ ಶತಮಾನದ ವರೆಗಿನ ಶಾಸನಗಳೆಲ್ಲವೂ ಪ್ರಾಕೃತ ಮತ್ತು ಸಂಸ್ಕೃತ ಭಾಷೆಗಳಲ್ಲಿ ಮಾತ್ರ ಇವೆ. ಆದುದರಿಂದ ಆ ಭಾಷೆಗಳ ಸಲುವಾಗಿಯೇ ಲಿಪಿ ಸುಧಾರಣೆಯ ಕೆಲಸವನ್ನು ಕೈಗೊಳ್ಳಲಾಗಿತ್ತೆನ್ನಬಹುದು. ಒಂಭತ್ತನೆಯ ಶತಮಾನದಿಂದ, ತೆಲುಗು ಮತ್ತು ಕನ್ನಡ ಭಾಷೆಯ ಶಾಸನಗಳೂ—ಆ ವರ್ಣಮಾಲೆಯಿಂದ ಬರೆಯಲಾದವು. ಆ ಕಾಲದಲ್ಲಿ ಆಂಧ್ರ ಮತ್ತು ಕರ್ಣಾಟ ರಾಜ್ಯಗಳಲ್ಲಿ ಬಳಕೆಯಲ್ಲಿದ್ದ ಸಕಲ ಭಾಷೆಗಳೂ ಆಂಧ್ರಲಿಪಿಯಿಂದಲೇ ಬರೆಯಲ್ಪಡುತ್ತಿದ್ದವು.

ತಮಿಳುನಾಡಿನಲ್ಲಿ ಬ್ರಾಹ್ಮೀ ವರ್ಣಮಾಲೆಯು ಎರಡು ಬಗೆಯಲ್ಲಿ ರೂಪು ಗೊಂಡಿತು. ಸಂಸ್ಕೃತ ಭಾಷೆಯನ್ನು ಬರೆಯಲು "ಗ್ರಂಥಲಿಪಿ" ಮತ್ತು ತಮಿಳನ್ನು ಬರೆಯಲು ತಮಿಳುವರ್ಣಮಾಲೆ. ಅಂದರೆ ಗ್ರಂಥಲಿಪಿಯಲ್ಲಿ ಸಂಸ್ಕೃತಭಾಷೆಗೆ ಆವಶ್ಯಕವಿರುವ ಎಲ್ಲ ವರ್ಣಗಳ ಚಿಹ್ನೆಗಳಿವೆ. ಆದರೆ ತಮಿಳು ಭಾಷೆಯಲ್ಲಿ ಸಂಸ್ಕೃತದಲ್ಲಿರುವಂತೆ ಮಹಾಪ್ರಾಣಾಕ್ಷರಗಳು ಇಲ್ಲದುದರಿಂದ– ಪ್ರತಿಯೊಂದು ವರ್ಗದಲ್ಲಿ ಮೊದಲಿನ ಒಂದು ವರ್ಣದ ಹಾಗೂ ಅನುನಾಸಿಕದ ಚಿಹ್ನೆಗಳು ಮಾತ್ರ ಇವೆ. ಹಾಗೂ—ೞ ಮತ್ತು ಱ ಎಂಬ ಚಿಹ್ನೆಗಳಿವೆ. ಹೀಗಾಗಿ ಆ ವರ್ಣಮಾಲೆಯಿಂದ "ಗುದ" "ಬುಡ" ಮೊದಲಾದ ಶಬ್ದಗಳನ್ನು ಕುತ, ಪುಟ ಎಂದು ಬರೆಯಬೇಕಾಗುತ್ತದೆ. ಬಾಲಗಂಗಾಧರ ಎಂಬ ಶಬ್ದವನ್ನು ಪಾಲಕಂಕಾತರ ಎಂದು ಬರೆಯಬೇಕಾಗುತ್ತದೆ. ಶ, ಷ, ಸ, ಹ. ಗಳೆಂಬ ವರ್ಣ ಗಳೇ ಇಲ್ಲ. ಶ, ಷ, ಸ ಗಳ ಬದಲಿಗೆ "ಚ" ಎಂಬ ಒಂದೇ ವ್ಯಂಜನವು ಬಳಸ ಲ್ಪಡುತ್ತದೆ.

ಬ್ರಾಹ್ಮೀ ವರ್ಣಮಾಲೆಯ ಆಂಧ್ರೀ ರೂಪಾಂತರವು ಕ್ರಿಸ್ತನ ನಾಲ್ಕನೆಯ ಶತಮಾನದ ಸುಮಾರಿಗೆ ಪ್ರಾರಂಭವಾಯಿತೆನ್ನಬಹುದು. ಏಕೆಂದರೆ ನಾಲ್ಕನೆಯ ಶತಮಾನದಲ್ಲಿ ಚೇರವಂಶದ ಅರಸರು ಬರೆಸಿದ ಬ್ರಾಹ್ಮೀಲಿಪಿಯ ಶಾಸನಗಳಲ್ಲಿ ಮೊತ್ತಮೊದಲು ಕ, ಗ, ತ, ದ, ನ ಎಂಬ ಹೊಸರೂಪಗಳು ಕಾಣಸಿಗುತ್ತವೆ. ಹೀಗೆ ನಾಲ್ಕನೆಯ ಶತಮಾನದಲ್ಲಿ ಆರಂಭವಾದ ಆ ರೂಪಾಂತರ ಕಾರ್ಯವು ಹದಿನೈದನೆಯ ಶತಮಾನದಲ್ಲಿ ಪೂರ್ಣ ವಿಕಸಿತವಾಗಿ ಕೊನೆಗಂಡಿತೆಂದು ಶಾಸನ ಗಳಲ್ಲಿನ ಬರವಣಿಗೆಗಳಿಂದ ತಿಳಿದುಬರುತ್ತದೆ. ಆಂಧ್ರೀ ಲಿಪಿಯ ಅಥವಾ ತೆಲುಗು ವರ್ಣಮಾಲೆಯ ಹೊಸ ರೂಪಾಂತರವೇ ಇಂದು ಕನ್ನಡದ್ದೆಂದು ತಿಳಿಯಲಾಗುವ ಮುದ್ದು-ಮುದ್ದಾದ ರೂಪವಾಗಿರುತ್ತದೆ. ಅಂದರೆ ಈ ವರ್ಣ ಮಾಲೆಯು ಒಮ್ಮೆಲೇ ಇಂದಿನ ರೂಪಕ್ಕೆ ಬಂದುದಲ್ಲವೆಂದೂ, ಹಲವು ಹಂತ ಗಳನ್ನು ದಾಟಿ ಇಂದಿನ ರೂಪಕ್ಕೆ ತಲಪಿದೆಯೆಂದೂ ತಿಳಿದುಬರುತ್ತದೆ.

ಹಿಂದೆ ಕರ್ಣಾಟರಾಜ್ಯವು ಬಹಳ ವಿಶಾಲವಾಗಿದ್ದಿತು. ಆಗ ಆ ರಾಜ್ಯ ದೊಳಗೆ ಆಂಧ್ರದ ಸ್ವಲ್ಪ ಅಂಶವೂ. ಮಹಾರಾಷ್ಟ್ರ ಮತ್ತು ಕೊಂಕಣಗಳೂ ಸೇರಿದ್ದವು. ಮತ್ತು ಆ ಪ್ರದೇಶಗಳಲ್ಲಿನ ಎಲ್ಲಾ ಜನರು ತಮ್ಮ ಭಾಷೆಗಳನ್ನು ಬರೆಯಲು—ಬ್ರಾಹ್ಮಿಯ ದಕ್ಷಿಣೀ ರೂಪಾಂತರವಾದ ಆಂಧ್ರೀ ಲಿಪಿಯನ್ನು ಬಳಸುತ್ತಿದ್ದರು. ಅಂದರೆ ಕರ್ಣಾಟದ ಪ್ರಜೆಗಳಾಗಿದ್ದ ಕನ್ನಡರು, ಮರಾಠಿಗರು. ಕೊಂಕಣಿಗರು, ತುಳುವರು ಮತ್ತು ತೆಲುಗರು ಬಹುಕಾಲದ ತನಕ ಒಂದೇ

ಲಿಪಿಯನ್ನು ಬಳಸುತ್ತಿದ್ದರು. ಕೊನೆಗೆ ಆಂಧ್ರೀ ವರ್ಣಮಾಲೆಯು ಇನ್ನಷ್ಟು ಸುಧಾರಿಸಿ ಇಂದಿನ ಮುದ್ದುಮುದ್ದಾದ ಕನ್ನಡಪ್ಪೆಂದು ತಿಳಿಯಲಾಗುವ ವರ್ಣಮಾಲೆಯು ಬಳಕೆಗೆ ಬಂತು. ಹಿಂದಿನ ವಿವರಣೆಯಿಂದ ಕೊಂಕಣಿಗೆ ಲಿಪಿ ಇಲ್ಲ ಅಥವಾ ಇರಲಿಲ್ಲವೆಂಬ ಮಾತಿನಲ್ಲಿ ಏನೂ ಹುರುಳಿಲ್ಲವೆಂತಲೂ ಕೊಂಕಣಿಯನ್ನು ಬರೆಯಲು ಯಾವ ಲಿಪಿಯನ್ನಾದರೂ ಬಳಸಬಹುದೆಂತಲೂ ಯಾವುದೊಂದು ಲಿಪಿಯು ಅದನ್ನು ಬಳಸುವವರ ಏಕಾಧಿಕಾರಕ್ಕೆ ಒಳಪಟ್ಟುದಲ್ಲವೆಂತಲೂ ಸ್ಪಷ್ಟವಾಗುತ್ತದೆ.

ಸಾಧಾರಣ ಹದಿನ್ಯೆದನೆಯ ಶತಮಾನದ ಕೊನೆಯ ತನಕವೂ ಮರಾಠಿಯು ಗೋವದಲ್ಲಿ ಬಳಕೆಯಲ್ಲಿದ್ದಂಥ ಹಾಗೂ ಈಗಿನ ಕನ್ನಡವನ್ನುವ ಲಿಪಿಗೆ ಸಮೀಪ ತರವಾದ ಲಿಪಿಯಿಂದಲೇ ಬರೆಯಲ್ಪಡುತ್ತಿತ್ತು. ಇದರ ಪ್ರಮಾಣವಾಗಿ ಗೋವದ ಲಿಪಿಯಿಂದ ಬರೆದ 'ಕಥಾಕಲ್ಪತರು' ಎಂಬ ಒಂದು ಹಳೆಯ ಮರಾಠಿಗ್ರಂಥವು ಮಂಗಳೂರಿನ ಕೆನರಾ ಹೈಸ್ಕೂಲಿನ ಪುಸ್ತಕಾಲಯದಲ್ಲಿದೆ. ಮರಾಠಿಗರು ನಾಗರೀ ಲಿಪಿಯನ್ನು ಎಂದಿನಿಂದ ಬಳಸತೊಡಗಿದರೆಂದು ನಿಖರವಾಗಿ ಹೇಳಲಾಗುವುದಿಲ್ಲ. 1675ನೆಯ ಇಸವಿಯಲ್ಲಿ ಕೊಚ್ಚಿಯಲ್ಲಿ ಪ್ರಸಿದ್ಧ ವೈದ್ಯರಾಗಿದ್ದ ಮೂವರು ಸಾರಸ್ವತ ಬ್ರಾಹ್ಮಣರು ಡಚ್ ನೌಕಾಧಿಪತಿಯೊಬ್ಬನಿಗೆ ತಾವು ಸಂಗ್ರಹಿಸಿಕೊಟ್ಟ ವನೌಷಧಿಗಳ ಪರಿಚಯವಿರುವ ಗ್ರಂಥಕ್ಕಾಗಿ ಬರೆದುಕೊಟ್ಟ ಪ್ರಮಾಣಪತ್ರದಲ್ಲಿ ಕೊಂಕಣಿಯನ್ನು ಬರೆಯಲು ನಾಗರೀ ಲಿಪಿಯು ಬಳಸಲ್ಪಟ್ಟಿದೆ.

ಕೊಂಕಣ ಮತ್ತು ಮಹಾರಾಷ್ಟ್ರ ಎಂಬ ಶಬ್ದಗಳು ಅಥವಾ ಹೆಸರುಗಳು ಎಂದಿನಿಂದ ಬಳಕೆಗೆ ಬಂದವೆಂದು ನಿಶ್ಚಿತವಾಗಿ ಹೇಳಲಾಗುವಂಥ ಪ್ರಮಾಣಗಳು ದೊರಕಿಲ್ಲವಾದರೂ ಕ್ರಿಸ್ತನ ನಾಲ್ಕನೆಯ ಶತಮಾನಕ್ಕಿಂತ ಮೊದಲೇ ಆ ಹೆಸರುಗಳು ಬಳಕೆಗೆ ಬಂದಿರಬಹುದೆಂದು ಅನುಮಾನಿಸಲು ಎಡೆ ಇದೆ. ಕ್ರಿಸ್ತನ ಐದನೆಯ ಶತಮಾನದ ಪ್ರಸಿದ್ಧ ಜ್ಯೋತಿಷ್ಯ ಆಚಾರ್ಯ ವರಾಹಮಿಹಿರನ ಬೃಹತ್ಸಂಹಿತೆಯಲ್ಲಿ "ಭಾಗ್ಯೇರಸವಿಕ್ರಯಿಣಃ ಪಣ್ಯಸ್ತ್ರೀ ಕನ್ಯಕಾಮಹಾರಾಷ್ಟ್ರಾಃ ॥ ೧೦-೮ ॥" ಎಂತಲೂ "ಕಂಕಟಟಂಕಣವನವಾಸಿ ಶಿವಿಕಫಣಿಕಾರಕೊಂಕಣಾಭೀರಾಃ ॥ ೧೪-೧೨ ॥" ಎಂತಲೂ ಮಹಾರಾಷ್ಟ್ರ ಮತ್ತು ಕೊಂಕಣಗಳ ಉಲ್ಲೇಖವಿರುವುದರಿಂದ ಆಚಾರ್ಯ ವರಾಹಮಿಹಿರನ ಕಾಲಕ್ಕಿಂತ ಮೊದಲೇ ಆ ಹೆಸರುಗಳು ಬಳಕೆಯಲ್ಲಿದ್ದುವೆಂದು ಸಿದ್ಧವಾಗುತ್ತದೆ.

ಆಚಾರ್ಯ ರಾಮಕೃಷ್ಣ ಗೋಪಾಳ ಭಾಂಡಾರ್ಕರ ಅವರು ತನ್ನ ದಕ್ಷಿಣದ ಪ್ರಾಚೀನ ಇತಿಹಾಸದಲ್ಲಿ ಭೋಜವಂಶದವರು ತಮ್ಮನ್ನು ಮಹಾ

ಭೋಜರೆಂದು ಕರೆದುಕೊಂಡಂತೆಯೇ, ರಾಷ್ಟ್ರೀಕರು, ರಠಿಗಳು ಅಥವಾ ರಟ್ಠರು ತಮ್ಮನ್ನು ಮಹಾರಠಿ ಇಲ್ಲವೇ ಮಹಾರಟ್ಠರೆಂದು ಕರೆದುಕೊಂಡುದರಿಂದಾಗಿ ಅವರು ನೆಲಸಿದ ಪ್ರದೇಶವು ಮಹಾರಾಷ್ಟ್ರವೆಂಬ ಹೆಸರನ್ನು ಪಡೆಯಿತೆಂತಲೂ. ಭಾಜಾ, ಬೇಡಸಾ ಮತ್ತು ಕಾರ್ಲಿಯಲ್ಲಿನ ಗುಹಾದೇವಾಲಯದ ಗೋಡೆಗಳಲ್ಲಿ-ಕೆತ್ತಿದ ಎರಡನೆಯ ಶತಮಾನದವುಗಳೆಂದು ತಿಳಿಯಲಾದ ಬರವಣಿಗೆಗಳಲ್ಲಿ ಬಂದಿರುವ ಗಂಡಸರ ಹೆಸರುಗಳು ಮಹಾರಠಿ ಮತ್ತು ಹೆಂಗಸರ ಹೆಸರುಗಳು ಮಹಾರಠಿನಿ ಎಂಬ ಶಬ್ದಗಳಿಂದ ಕೂಡಿವೆಯೆಂತಲೂ ಹೇಳಿದ್ದಾರೆ.[1] ಈ ವಿವರಣೆಯಿಂದ ಮಹಾರಾಷ್ಟ್ರ ಶಬ್ದದ ಮೂಲವು ದೊರೆಯುತ್ತದಾದರೂ ಕೊಂಕಣ ಎಂಬ ಹೆಸರು ಹೇಗೆ ಬಂದಿತೆಂಬ ಬಗ್ಗೆ ಸಮಾಧಾನಕಾರಕವಾದ ಉತ್ತರವು ಇಂದಿಗೂ ದೊರೆತಿಲ್ಲ.

ಕೊಂಕಣ ಶಬ್ದದ ಮೂಲವನ್ನು ಕಂಡುಹಿಡಿಯಲು ಸಾಧ್ಯವಿಲ್ಲವೆಂಬ ಕಾರಣದಿಂದ ಕೆಲವರು ಪರಶುರಾಮನ ತಾಯಿ ರೇಣುಕಾದೇವಿಯ ಹೆಸರು "ಕೊಂಕಣಾ" ಎಂದು ಕಲ್ಪಿಸಿ, ಅವಳ ಹೆಸರಿನಿಂದಾಗಿ ಪರಶುರಾಮನ ಸೃಷ್ಟಿಯೆಂದು ಕರೆಯಲಾಗುವ ಪಶ್ಚಿಮ ಕರಾವಳಿಗೆ ಕೊಂಕಣವೆಂಬ ಹೆಸರು ಬಂದಿತೆಂದು ಸಾಧಿಸಿದ್ದಾರೆ. ಆದರೆ ಅದು ಕಲ್ಪನೆಯೇ ಹೊರತು ವಾಸ್ತವವಲ್ಲ. ಬೇರೆ ಹಲವು ಕಲ್ಪನೆಗಳೂ ಇವೆ. ಕೆಲವರು ಬನವಾಸಿಯನ್ನು ಕೊಂಕಣವೆಂದುದೂ ಉಂಟು. ವಾಸ್ತವವಾಗಿ ಹೇಳುವುದಾದರೆ—ಕೊಂಕಣ ಎಂಬ ಶಬ್ದವು ಕ್ರಿಸ್ತನ ಮೊದಲನೆಯ ಶತಕಗಳಲ್ಲಿ ಕೊಂಗು ದೇಶವೆಂದು ಕರೆಯಲ್ಪಡುತ್ತಿದ್ದ ಹಾಗೂ ಈಗಿನ ಸೇಲಮ್ ಮತ್ತು ಕೊಯಮುತ್ತೂರು ಜಿಲ್ಲೆಗಳನ್ನು ಮತ್ತು ಅವುಗಳ ಸುತ್ತಮುತ್ತಲಿನ ಪ್ರದೇಶವನ್ನು ಆಳುತ್ತಿದ್ದ ಕೊಂಗು ರಾಜವಂಶದೊಂದಿಗೂ, ದಕ್ಷಿಣ ಮೈಸೂರಿನ ಗಂಗವಾಡಿಯಲ್ಲಿ ಆಳುತ್ತಿದ್ದ ಗಂಗವಂಶದೊಂದಿಗೂ ಸಂಬದ್ಧವಾಗಿದೆಯೆನ್ನಬೇಕು. ಸೇಲಂ ಜಿಲ್ಲೆಯಲ್ಲಿ ಕೊಂಕಣಪುರ ಅಥವಾ ಕೊಂಗಣಪುರ ಎಂಬ ಊರು ಇಂದಿಗೂ ಇದೆ. ಡಾಕ್ಟರ್ ಎ. ಸಿ. ಬರ್ನೆಲ್

---

1. Just as the Bhojas called themeselves Mahabhojas, the Rastrikas, Ṛathis or Ratthas called themselves Maharathis or Maharatthas, as will be seen below and thus the country in which they lived came to be called Maharattha the Sanskrit of which is Maharastra. In some of the inscriptions in the cave-temples at Bhaja, Bedsa and Karli, which are to be referred to the second century the male donors are called Maharatti and the females Maharathini. Early History of the Deccan.

ಅವರು ಪ್ರಕಟಿಸಿದ "Elements of South Indian Palaeography" ಎಂಬ ಪುಸ್ತಕದಲ್ಲಿ ಕೊಟ್ಟಿರುವ ಭೂಪಟದಲ್ಲಿ ಹಿಂದೆ ಹೇಳಿದ ಕೊಂಕಣಪುರ ಮಾತ್ರವಲ್ಲದೆ ಕೊಂಕಣಪಳ್ಳಿಯು ಕೂಡ ಇದೆ. ಚೀನೀ ಯಾತ್ರಿಕ ಯುಊವಾನ್ ಚಾಂಗ್ ಅಥವಾ ಹುಯೆನ್ ತ್ಸಾಂಗ್ ಅವನು ತನ್ನ ಯಾತ್ರಾಕಥನದಲ್ಲಿ Konkinpulo = ಕೊಂಕಣಪುರವನ್ನು ಉಲ್ಲೇಖಿಸಿದ್ದಾನೆ. ಆದರೆ ಅವನು ಕೊಟ್ಟ ವಿವರವು ಅತ್ಯಲ್ಪವಾಗಿರುವುದರಿಂದ ಅವನು ಕೊಂಗುನಾಡನ್ನು ಕುರಿತು "ಕೊಂಕಣಪುರ" ಎಂದಿದ್ದಾನೋ, ಅಥವಾ ಪಶ್ಚಿಮ ಕರಾವಳಿಯನ್ನು ಕುರಿತು ಹಾಗೆಂದಿದ್ದಾನೋ ಇಲ್ಲವೇ ಬನವಾಸಿಯು ಕುರಿತು ಹಾಗೆಂದಿದ್ದಾನೋ ಎಂದು ತಿಳಿಯಲಿಕ್ಕೆ ಸಾಧ್ಯವಿಲ್ಲ. ಕೊಂಕಣಪುರ (ರಾಜ್ಯ)ದ ವಿಸ್ತೀರ್ಣವು ೫೦೦೦ ಲ್ಯಾ ಇದೆ ಎಂದು ಹೇಳಿದ್ದಾನೆ. ಅದರ ತರುವಾಯ ಮಹಾರಾಷ್ಟ್ರದ ವರ್ಣನೆ ಮಾಡಿದ್ದಾನೆ. ಅವನು ಮಹಾರಾಷ್ಟ್ರದ ವಿಸ್ತೀರ್ಣವು ಕೂಡ ೫೦೦೦ ಲ್ಯಾ ಅಂದಿದ್ದಾನೆ. ಮತ್ತು ಮಹಾರಾಷ್ಟ್ರದ ಅರಸು "Pu-lo-ki-shi" ಅಂದರೆ ಪುಲಕೇಶಿ ಎಂದು ಹೇಳಿದ್ದಾನೆ. ಚಾಲುಕ್ಯ ಅರಸನಾದ ಪುಲಕೇಶಿಯು ಮಹಾರಾಷ್ಟ್ರವನ್ನು ಕ್ರಿ. ಶ. 615-20ರ ಮಧ್ಯಕಾಲದಲ್ಲಿ ವಶಪಡಿಸಿಕೊಂಡಿದ್ದನು.

ದಕ್ಷಿಣ ಭಾರತದ ಇತಿಹಾಸದಲ್ಲಿ ಗಂಗ ಮತ್ತು ಕೊಂಗ ಅಥವಾ ಕೊಂಗು ಎಂಬ ಹೆಸರಿನ ಎರಡು ರಾಜವಂಶಗಳ ಹೆಸರುಗಳು ಕಾಣಬರುತ್ತವೆ. ಗಂಗ ವಂಶದವರ ರಾಜ್ಯದ ಹೆಸರು ಗಂಗಪಾಡಿ ಅಥವಾ ಗಂಗವಾಡಿಯೆಂದಿತ್ತು ಮತ್ತು ಅದು ಮೈಸೂರಿನ ದಕ್ಷಿಣ ಪೂರ್ವದಲ್ಲಿತ್ತು. ಮೊದಲು ಅವರ ರಾಜಧಾನಿಯು ಕೋಲಾರದಲ್ಲಿತ್ತು. ತರುವಾಯ ಅದನ್ನು ತಲಕಾಡಿಗೆ ಸ್ಥಳಾಂತರಿಸಿದ್ದರು. ಗಂಗವಾಡಿಗೆ ಹತ್ತಿಕೊಂಡೇ ಕೊಂಗುನಾಡಿದ್ದಿತು. ಆದುದರಿಂದ ಗಂಗರನ್ನೇ ತಮಿಳಿನಲ್ಲಿ ಕೊಂಗರ್ ಅನ್ನುತ್ತಿದ್ದರೋ ಎಂಬ ಅನುಮಾನ ಬರುತ್ತದೆ. ಕೊಂಗುನಾಡಿನಲ್ಲಿ ಕೊಂಗಣಪುರವಿರುವುದು ಮತ್ತು ಈಗ ತಿಳಿದು ಬಂದುದರಲ್ಲಿ ಗಂಗವಂಶದ ಮೊದಲನೆಯ ಅರಸನ ಹೆಸರು ಕೊಂಗುಣಿವರ್ಮ ಎಂದಿರುವುದು ಎರಡು ರಾಜವಂಶಗಳು ಬೇರೆ ಬೇರೆಯಾಗಿರದೇ ಒಂದೇಯಾಗಿರಬೇಕೆಂಬ ಅನುಮಾನವನ್ನು ಬಲಗೊಳಿಸುತ್ತದೆ. ಅಲ್ಲದೇ ಕೊಂಗರು[1] ಪಶ್ಚಿಮ ಕರಾವಳಿಯು

---

1. Their home is said to have been in the Kongu country, roughly the modern districts of Salem and Coimbatore and they overrun the Tulu country on the West Coast in the early centuries of the Christian era. A History of South India page 85. by Sri K. A. Nilakanta Sastri M. A.

ತುಳುನಾಡನ್ನು ಆಕ್ರಮಿಸಿದ್ದರೆಂದು ತಿಳಿದುಬರುವುದರಿಂದ. ಅವರಿಂದಾಗಿಯೇ ಪಶ್ಚಿಮ ಕರಾವಳಿಗೆ ಕೊಂಕಣವೆಂಬ ಹೆಸರು ಬಂದಿತ್ತೆಂದು ಹೇಳಿದರೆ ತಪ್ಪಾಗದು.

1293ನೆಯ ಇಸವಿಯಲ್ಲಿ ಸಂತ ಜ್ಞಾನೇಶ್ವರ ಎಂಬ ಭಕ್ತಾಗ್ರಣಿ ರಚಿಸಿದ ಜ್ಞಾನೇಶ್ವರೀ ಎಂಬ ಹೆಸರಿನ ಭಗವದ್ಗೀತಾ ವ್ಯಾಖ್ಯಾನದ ಭಾಷೆಯು ಹದಿಮೂರನೆಯ ಶತಮಾನದಲ್ಲಿ ಬಳಕೆಯಲ್ಲಿದ್ದ ಕೊಂಕಣಿ ಭಾಷೆಯ ಪ್ರತಿನಿಧಿಯೆಂದು ಹೇಳಬಹುದಾಗಿತ್ತು. ಆದರೆ ಮುನ್ನೂರು ವರ್ಷಗಳ ತರುವಾಯ ಅಂದರೆ 1590ರಲ್ಲಿ ಸಂತ ಏಕನಾಥ ಎಂಬ ಮರಾಠಿ ಸಂತರು ಜ್ಞಾನೇಶ್ವರಿಯಲ್ಲಿನ ಪದ್ಯಗಳ ಅರ್ಥಮಾಡಲಾರದವರಾಗಿ ಅದರಲ್ಲಿ ಬೇರೆ ಜನರು ಪ್ರಕ್ಷೇಪಗಳನ್ನು ಮಾಡಿದ್ದಾರೆಂದು ಎಣಿಸಿದರು. ಮತ್ತು ಅವರಿಗೆ ಪ್ರಕ್ಷಿಪ್ತಗಳೆಂದು ತೋರಿದ ಓವಿಗಳನ್ನು ಮತ್ತು ಪುನರುಕ್ತಿಗಳನ್ನು ತೆಗೆದುಹಾಕಿ ಜ್ಞಾನೇಶ್ವರಿಯನ್ನು ಶುದ್ಧಗೊಳಿಸಿ ವ್ಯವಸ್ಥಿತವನ್ನಾಗಿ ಮಾಡಿದರು—ಎಂದು ಈಗ ದೊರೆಯುವ ಜ್ಞಾನೇಶ್ವರಿಯ ಪ್ರಸ್ತಾವನೆಯಲ್ಲಿದೆ. ಅಂದರೆ ಈಗ ನಮಗೆ ದೊರೆಯುವ ಜ್ಞಾನೇಶ್ವರಿಯು ತನ್ನ ಮೂಲರೂಪದಲ್ಲಾಗಲೀ, ಮೂಲಭಾಷೆಯಲ್ಲಾಗಲೀ ಇಲ್ಲವೆಂದು ಸಿದ್ಧವಾಗುತ್ತದೆ. ಅರ್ಥಾತ್ ಈಗಿನ ಜ್ಞಾನೇಶ್ವರಿಯು ಸಂತ ಜ್ಞಾನೇಶ್ವರರ ರಚನೆಯಾಗಿರದೇ ಅದು ಸಂತ ಏಕನಾಥರ ರಚನೆಯಾಗಿರುತ್ತದೆಂದು ಹೇಳುವುದೇ ಸರಿಯಾಗಿದೆ. ಇದೇ ಮಾತನ್ನು ಶ್ರೀ ಗಣೇಶಹರಿ ಕೇಳಕರ್ ಎಮ್. ಎ. ಎಂಬ ಮರಾಠಿ ವಿದ್ವಾಂಸರು ಬೇರೊಂದು ರೀತಿಯಲ್ಲಿ ಹೇಳಿದ್ದಾರೆ. ಅವರ ಮಾತುಗಳು ಮುಂದಿನಂತಿವೆ.

"ಆಪಲ್ಯಾ ಮರಾಠೀಚಾಚ್ ಪ್ರಕಾರ್ ಪಾಹಿಲಾ ತರ್ ಜ್ಞಾನೇಶ್ವರೀಚಿ ಭಾಷಾ ಆಜ್ ಆಪಲ್ಯಾಲಾ ದುರ್ಭೋಧ್ ವಾಟತೇ ಇತಕೇಂಚ್ ಕಾಯ್ ತರ್ ಸುಮಾರೇಂ ತೀನಶೇಂ ವರ್ಷಾಂ ಪೂರ್ವೀಂಚ್ಯಾ ಲೋಕಾಂನಾಹೀ ತೀ ದುರ್ಬೋಧ್ ವಾಟತ್ ಹೋತೀ. ವ ಮ್ಹಣೂನಚ್ ಏಕ್‌ನಾಥಾಂನೀ ಜ್ಞಾನೇಶ್ವರೀ ಶುದ್ಧ ಕೇಲೀ, ತ್ಯಾ ಕಾಳಚ್ಯಾ ಚಾಲೂ ಭಾಷೇಂತ್ ಲಿಹಿಲೀ। ಆಜ ಚಾಸರ್ ಸಾರಖ್ಯಾ ಕವೀಚೇ ಗ್ರಂಥ ದುರ್ಬೋಧ್ ವಾಟತಾತ್ ಮ್ಹಣೂನ್ ತ್ಯಾಚ್ಯಾ ಕಾವ್ಯಾಂಚೀಂ ಜಶೀಂ ಚಾಲೂ ಇಂಗ್ರಜೀಂತ್ ರೂಪಾಂತರೇಂ ಝಾಲೀಂ ಆಹೇತ್ ತಸಾಚ್ ಪ್ರಕಾರ್ ಏಕನಾಥಾಂನೀ ಜ್ಞಾನೇಶ್ವರೀಚ್ಯಾ ಸಂಬಂಧಾತ್ ಕೇಲಾ ಮ್ಹಟಲೇಂ ಪಾಹಿಜೇ।

ಅರ್ಥ—ನಮ್ಮ ಮರಾಠಿಯ ಬಗೆಯನ್ನೇ ನೋಡಿದೆವೆಂದಾದರೆ ಜ್ಞಾನೇಶ್ವರಿಯ ಭಾಷೆಯು ಇಂದು ನಮಗೆ ದುರ್ಬೋಧ ತೋರುತ್ತದೆ. ಅಷ್ಟೇ ಏಕೆ ಮುನ್ನೂರು ವರ್ಷಗಳ ಹಿಂದಿನ ಜನರಿಗೂ ಅದು ದುರ್ಬೋಧವಾಗಿ ತೋರುತಿತ್ತು. ಹಾಗೆಂದೇ ಏಕನಾಥರು ಜ್ಞಾನೇಶ್ವರಿಯನ್ನು ಶುದ್ಧ ಮಾಡಿದರು, ತಿಳಿಯಲು ಸುಲಭವನ್ನಾಗಿ ಮಾಡಿದರು. ಆ ಕಾಲದ ಬಳಕೆಯ ಭಾಷೆಯಲ್ಲಿ ಬರೆದರು. ಇಂದು ಚಾಸರನಂಥ ಕವಿಯ ಗ್ರಂಥಗಳು ದುರ್ಬೋಧವಾಗಿವೆಯೆಂದು ಆ ಕವಿಯ ಕಾವ್ಯಗಳನ್ನು ಬಳಕೆಯ ಇಂಗ್ಲೀಷಿನಲ್ಲಿ ರೂಪಾಂತರ ಮಾಡುವಂತೆಯೇ ಏಕನಾಥರು ಜ್ಞಾನೇಶ್ವರಿಯ ಸಂಬಂಧವಲ್ಲಿ ಮಾಡಿದರೆನ್ನಬೇಕು.

ಈ ಹೇಳಿಕೆಯು ಕೊಂಕಣಿಯನ್ನು ಮರಾಠಿಯ ಒಳಭೇದವೆನ್ನುವಂಥ ಮರಾಠೀ ಪಂಡಿತರದಾಗಿರುವುದರಿಂದ ಇದರ ಮೂಲ್ಯವು ಬಹಳ ಹೆಚ್ಚಿನದು. ಅಂದರೆ ಮರಾಠಿ ಪಂಡಿತರು ಈಗಿನ ಜ್ಞಾನೇಶ್ವರಿಯು ಸಂತ ಏಕನಾಥರು ತಿದ್ದಿ ಅರೆಮರಾಠಿಯನ್ನಾಗಿ ಮಾರ್ಪಡಿಸಿದ ಕೃತಿಯೆಂಬುದನ್ನು ಒಪ್ಪಿಕೊಳ್ಳುತ್ತಾರೆಂದು ಆ ಮಾತುಗಳಿಂದ ಸಿದ್ಧವಾಗುತ್ತದೆ.

ಜ್ಞಾನೇಶ್ವರಿಯು ಕೊಂಕಣಿ ಭಾಷೆಯಿಂದಲೇ ರಚಿಸಲ್ಪಟ್ಟಿತ್ತು. ಮತ್ತು ಅದರ ಪ್ರಮಾಣಗಳು ಜ್ಞಾನೇಶ್ವರಿಯಲ್ಲಿ ಇಂದಿಗೂ ಉಳಿದಿವೆ. ಸಂತ ಏಕನಾಥರಿಗೆ ಕೊಂಕಣಿಯ ಪರಿಚಯವಿಲ್ಲದುದರಿಂದ—ಜ್ಞಾನೇಶ್ವರಿಯಲ್ಲಿನ ಪದಗಳು ಅವರಿಗೆ ಅರ್ಥವಾಗುತ್ತಿರಲಿಲ್ಲ. ಅವರು ಆ ರೂಪಗಳನ್ನು ಅಶುದ್ಧವಾದವುಗಳೆಂದು ಎಣಿಸಿ ಅವುಗಳನ್ನು ತಿದ್ದಿ ಮರಾಠಿಯವುಗಳಂತೆ ಮಾಡಿದರು. ಅರ್ಥವಾಗಲು ತುಂಬಾ ತೊಡಕಾಗಿದ್ದ ಓವಿಗಳನ್ನು ತೆಗೆದೇ ಹಾಕಿದರು. ಮತ್ತು ಜ್ಞಾನೇಶ್ವರಿಯನ್ನು ಬಹುಮಟ್ಟಿಗೆ ಅವರ ಕಾಲದ ಭಾಷೆಗೆ ಸರಿಬರುವಂತೆ ಮಾಡಿದರು. ಮತ್ತು ಹಲವು ಹೊಸ ಓವಿಗಳನ್ನು ಸೇರಿಸಿದರು. ಹದಿನಾರನೆಯ ಶತಮಾನದಲ್ಲಿ ಹೊಸ ಓವಿಗಳನ್ನು ಜ್ಞಾನೇಶ್ವರಿಯಲ್ಲಿ ಸೇರಿಸಿದ್ದಾರೆಂಬುವಕ್ಕೆ ಅದರಲ್ಲಿ ಬಂದಿರುವ—ಒಂದು ಇಂಗ್ಲೀಷು ಶಬ್ದದ ರೂಪಾಂತರವೇ ಪ್ರಮಾಣವಾಗಿದೆ. ಉದಾ:—**“ಲೋಕಪಾಳ ರಾಂಗೇಚೇ ॥ ೯-೩೨೬ ॥”** ಇದರ ಅರ್ಥ—"ಮೊದಲ ಶ್ರೇಣಿಯ ಲೋಕಪಾಲರು" ಎಂದಾಗುತ್ತದೆ. ಮತ್ತು ಅದರಲ್ಲಿನ **“ರಾಂಗ”** ಎಂಬ ಶಬ್ದವು ಇಂಗ್ಲೀಷಿನ **“Rank”** ಶಬ್ದದ ರೂಪಾಂತರವಾಗಿರುತ್ತದೆ. ಹಾಗೂ ಅದರ ಕೊಂಕಣಿ ರೂಪವು **“ರೇಂಗ”** ಎಂದಿದೆ. ಪಾಶ್ಚಿಮಾತ್ಯರು ಭಾರತವರ್ಷಕ್ಕೆ ಬರುವ ಮೊದಲು ಅದರ ಭಾಷೆಯ

ಶಬ್ದಗಳು ಭಾರತೀಯ ಭಾಷೆಗಳಲ್ಲಿ ಸೇರಲು ಸಾಧ್ಯವಿಲ್ಲವೆಂಬುದನ್ನು ಬೇರೆ ಯಾಗಿ ಹೇಳಬೇಕಾಗಿಲ್ಲ.

ಕಾಲ ಮತ್ತು ದೇಶದ ಭಿನ್ನತೆಯಿಂದಾಗಿ ಜ್ಞಾನೇಶ್ವರಿಯ ಭಾಷೆಯು ಮರಾಠಿಗರಾದ ಏಕನಾಥರಿಗೆ ದುರ್ಬೋಧವಾಗಿದ್ದಿರಬಹುದಾದರೂ ಮರಾಠಿ ಮತ್ತು ಕೊಂಕಣಿಗಳ ವಾಕ್ಯರಚನೆಯಲ್ಲಿ ಭೇದವು ಅತ್ಯಲ್ಪವಾದುದರಿಂದ ಅವರಿಗೆ ತಿಳಿಯಲು ಸುಲಭವಾದ ಓವಿಗಳನ್ನವರು ಮರಾಠಿಯುವುಗಳನ್ನಾಗಿ ಮಾರ್ಪಡಿಸಿ ದರು. ಆದರೆ ಅವರು ಅದರಲ್ಲಿ ಬಳಸಿದ ಅನೇಕಾನೇಕ ಶಬ್ದಗಳು ಮರಾಠಿಯೂ ಅಲ್ಲ ಕೊಂಕಣಿಯೂ ಅಲ್ಲವಾದುದರಿಂದ—ಜ್ಞಾನೇಶ್ವರಿಯ ಭಾಷೆಯು ಮರಾಠಿ ಗರಿಗೂ, ಕೊಂಕಣರಿಗೂ ಕೂಡಿಯೇ ದುರ್ಬೋಧವಾಗಿಬಿಟ್ಟಿದೆ. ಅಂದರೆ ಈಗಿನ ಜ್ಞಾನೇಶ್ವರಿಯಲ್ಲಿನ ಭಾಷೆಯು ಹದಿಮೂರನೆಯ ಶತಮಾನದಲ್ಲಿ ಬಳಕೆ ಯಲ್ಲಿದ್ದ ಕೊಂಕಣಿಯಂತೂ ಅಲ್ಲವೇ ಅಲ್ಲ. ಹಾಗೆಯೇ ಹದಿನಾರನೆಯ ಶತಮಾನದಲ್ಲಿ ಬಳಕೆಯಲ್ಲಿದ್ದ ಮರಾಠಿಯೂ ಅಲ್ಲ. ಹೀಗಾಗಿ ಟೀಕಾ-ವ್ಯಾಖ್ಯಾನ ಗಳ ನೆರವಿಲ್ಲದೇ ಕೊಂಕಣಿಗನಾಗಲೀ ಮರಾಠಿಗನಾಗಲೀ ಜ್ಞಾನೇಶ್ವರಿಯಲ್ಲಿನ ಪದ್ಯಗಳ ಅರ್ಥವನ್ನು ತಿಳಿದುಕೊಳ್ಳಲಾರ.

ವಾಸ್ತವವಾಗಿ ಹೇಳುವುದಾದರೆ ಕೊಂಕಣಿಯನ್ನು ಮರಾಠಿಯನ್ನಾಗಿ ಮಾರ್ಪಡಿಸುವುದು ಅತ್ಯಂತ ಸುಲಭವಾಗಿತ್ತು ಮತ್ತು ಆಗಿದೆ. ಮತ್ತು ಏಕನಾಥರು ಕೊಂಕಣಿ ಪದ್ಯಗಳನ್ನೇ ಮರಾಠಿಯುವುಗಳನ್ನಾಗಿ ಮಾರ್ಪಡಿಸಿದ್ದರೆಂಬ ಪ್ರಮಾಣಗಳು ಜ್ಞಾನೇಶ್ವರಿಯಲ್ಲಿಯೇ ಇವೆ. ಸಂಸ್ಕೃತದಲ್ಲಿನ ಅಕಾರಾಂತನಾಮ ಪದಗಳು ಕೊಂಕಣಿಯಲ್ಲಿ ಓಕಾರಾಂತವಾಗಿ ಮಾರ್ಪಟ್ಟು ತರುವಾಯ ಅವುಗಳೇ ಮರಾಠಿಯಲ್ಲಿ ಆಕಾರಾಂತವಾಗಿ ಮಾರ್ಪಡುತ್ತವೆಂದು ಹಿಂದಿನ ಉದಾಹರಣೆ ಗಳಿಂದ ಸಿದ್ಧವಾಗಿದೆ. ಆದುದರಿಂದ ಮರಾಠಿಯಲ್ಲಿ ಪ್ರಥಮಾ ವಿಭಕ್ತಿಯ ಏಕ ವಚನದ ಪುಲ್ಲಿಂಗ ಶಬ್ದವು ಓಕಾರಾಂತವಾಗಿದ್ದರೆ ಅದು ಕೊಂಕಣಿ ರೂಪದಲ್ಲಿಯೇ ಉಳಿದಿದೆ ಎಂಬುದು ಸ್ಪಷ್ಟವಿದೆ. ಅಂಥ ಶಬ್ದಗಳು ಜ್ಞಾನೇಶ್ವರಿಯಲ್ಲಿ ಹೇರಳ ವಾಗಿ ದೊರೆಯುತ್ತವೆ. ಅದರ ಒಂದು ಉದಾಹರಣೆಯನ್ನು ಇಲ್ಲಿ ಕೊಡ ಬಹುದು. ಜ್ಞಾನೇಶ್ವರಿಯಲ್ಲಿ ಪ್ರಸ್ತಾವನಾರೂಪದಿಂದ ಬಂದ ಓವಿಗಳಲ್ಲಿ ಮೂವತ್ತಮೂರನೆಯ ಓವಿಯು ಮುಂದಿನಂತಿದೆ:—"**ಮ್ಹಣೌನಿ ಹಾ ಕಾವ್ಯಾಂ ರಾವೋ । ಗ್ರಂಥಗುರುವತೀಚಾ ಠಾವೋ । ಏಥೊನಿ ರಸಾಂ ರುಖಾಲಾ ಆವೋ । ರಸಾಳಪಣಾಚಾ ॥**" ಈ ಓವಿಯು ಮೂಲದಲ್ಲಿ ಕೊಂಕಣಿಯೇ ಆಗಿತ್ತು ಎಂಬುದಕ್ಕೆ ಅದರಲ್ಲಿ ಬಂದಿರುವ ಓಕಾರಾಂತ

ಪುಲ್ಲಿಂಗ ಶಬ್ದಗಳೇ ಪ್ರತ್ಯಕ್ಷ ಪ್ರಮಾಣಗಳಾಗಿರುತ್ತವೆ. ಅದನ್ನು ಮರಳಿ ಮೂಲ ಕೊಂಕಣಿಯನ್ನಾಗಿ ಮಾರ್ಪಡಿಸುವುದು ಕೂಡ ಬಹಳ ಸುಲಭವಾಗಿದೆ. ಉದಾ:- **"ಮ್ಹಣೌನಿ ಹೋ ಕಾವ್ಯಾಂ ರಾವೋ । ಗ್ರಂಥಗುರುವತೀಚೋ ಠಾವೋ । ಏಥೂನಿ ರಸಾಂ ಜಾಲೋ ಆವೋ । ರಸಾಳಪಣಾಚೋ "** ಇದರ ಮೇಲಿಂದ ಕೊಂಕಣಿಯಿದ್ದುದನ್ನು ಮರಾಠಿಯನ್ನಾಗಿಯೂ, ಮರಾಠಿಯಿದ್ದುದನ್ನು ಕೊಂಕಣಿಯನ್ನಾಗಿಯೂ ಮಾರ್ಪಡಿಸುವುದು ಎಷ್ಟು ಸುಲಭವಾಗಿರುತ್ತದೆಂದು ಸ್ಪಷ್ಟವಾಗುತ್ತದೆ. ಅಷ್ಟೇ ಅಲ್ಲ-ಕೆಲವು ವಾಕ್ಯರಚನೆಗಳು-ಎರಡು ಭಾಷೆಗಳಲ್ಲಿಯೂ ಒಂದೇಯಾಗಿರುತ್ತವೆ. ಅಂಥ ಸಂದರ್ಭಗಳಲ್ಲಿ ಆ ವಾಕ್ಯಗಳನ್ನು ನುಡಿಯುವ ಧಾಟಿಯ ಮೇಲಿಂದಲೇ ಭೇದವನ್ನು ತಿಳಿದುಕೊಳ್ಳಬೇಕಾಗುತ್ತದೆ. ಬರೆದ ವಾಕ್ಯದ ಮೇಲಿಂದ ಭೇದವನ್ನು ತಿಳಿಯಲು ಸಾಧ್ಯವಿಲ್ಲ. ಉದಾ:—**"ಮ್ಹಣೂನಚ್ ಏಕನಾಥಾಂನೀ ಜ್ಞಾನೇಶ್ವರೀ ಶುದ್ಧ ಕೇಲೀ "** ಇದು ಹಿಂದೆ ಉದಹರಿಸಿದ ಶ್ರೀ ಕೇಳಕರರ ಹೇಳಿಕೆಯಲ್ಲಿನ ಒಂದು ವಾಕ್ಯವಾಗಿರುತ್ತದೆ. ಅದು ಮರಾಠಿಯೂ ಹೌದು ಕೊಂಕಣಿಯೂ ಹೌದು.

ಹಿಂದೆ ಹೇಳಿದಂತೆ ಕೊಂಕಣಿಯಲ್ಲಿನ ಓಕಾರಾಂತ ನಾಮಪದಗಳು ಮತ್ತು ಕ್ರಿಯಾಪದಗಳು ಮಾತ್ರ ಆಕಾರಾಂತವಾಗಿ ಮಾರ್ಪಡುವುದಲ್ಲ. ವಿಶೇಷಣಗಳೂ ಹಾಗೆ ಮಾರ್ಪಡುತ್ತವೆ. ಅಷ್ಟೇ ಅಲ್ಲ ಕೊಂಕಣಿಯಲ್ಲಿ ಆಕಾರಾಂತವಾಗಿರುವ ಕ್ರಿಯಾಪದಗಳು ಮರಾಠಿಯಲ್ಲಿ ಓಕಾರಾಂತವಾಗಿ ಮಾರ್ಪಡುವುದು ಮಾತ್ರವಲ್ಲದೇ-ಲಿಂಗಕ್ಕೆ ಅನುಸಾರವಾಗಿ ರೂಪಾಂತರವಾಗುವುದೂ ಇದೆ. ಅಂದರೆ ಕೊಂಕಣಿಯಲ್ಲಿ ವರ್ತಮಾನಕಾಲಿಕ ಕ್ರಿಯಾರೂಪಗಳು ಕರ್ತೃವಿನ ಲಿಂಗವಚನಗಳಿಗನುಸಾರವಾಗಿ ರೂಪಾಂತರವಾಗುವುದಿಲ್ಲ. ಉದಾ:-ತೊ ಏತಾ = ಅವನು ಬರುತ್ತಾನೆ. ತೀ ಏತಾ = ಅವಳು ಬರುತ್ತಾಳೆ. ತೇಂ ಏತಾ = ಅದು ಬರುತ್ತದೆ. ಸಂಸ್ಕೃತದಲ್ಲಿಯೂ ಹೀಗೆಯೇ ಇರುತ್ತದೆ. ಆದರೆ ಮರಾಠಿಯಲ್ಲಿ ಹಿಂದೀಯಂತೆ ವರ್ತಮಾನಕಾಲಿಕ ಕ್ರಿಯಾಪದಗಳು ಲಿಂಗವಚನಗಳಿಗನುಸಾರವಾಗಿ ರೂಪಾಂತರ ಹೊಂದುತ್ತವೆ. ಉದಾ:—ತೋ ಯೇತೋ ತೀ ಯೇತೇ ಮತ್ತು ತೇಂ ಯೇತೇಂ. ಇದು-ಕೊಂಕಣಿಯ ಮೇಲಾದ ಹಿಂದಿಯ ಪ್ರಭಾವದಿಂದಾಗಿಯೇ ಮರಾಠಿಯು ಕೊಂಕಣಿಯಿಂದ ಕವಲೊಡೆದಿದ್ದಿತೆಂದು ಸಿದ್ಧಪಡಿಸುತ್ತದೆ. ಹಿಂದೀ ಭಾಷೆಯ ಪ್ರಭಾವವು ಕೊಂಕಣಿಯ ಮೇಲೂ ಆಗದೇ ಹೋಗಿಲ್ಲವೆಂದೂ ಅದು ಯಾವ ಬಗೆಯದೆಂದೂ ಮುಂದೆ ವಿವರಿಸಲಾಗುವುದು.

ಮರಾಠಿಯಲ್ಲಿನ ಬೇರೊಂದು ವಿಶೇಷತೆ ಯಾವುದೆಂದರೆ, ಮೂಲ ಕೊಂಕಣಿ ಶಬ್ದದಲ್ಲಿ "ಹ"ಕಾರ ಅಥವಾ ಮಹಾಪ್ರಾಣಾಕ್ಷರವಿಲ್ಲದಿದ್ದರೂ—ಅದು ಮರಾಠಿಯಾಗಿ ಮಾರ್ಪಡುವಾಗ ಆ ಶಬ್ದದಲ್ಲಿ "ಹ"ಕಾರ ಬಂದು ಸೇರುವುದಾಗಿರುತ್ತದೆ. ಇಲ್ಲವೇ ಅಲ್ಪಪ್ರಾಣವ್ಯಂಜನವೇ ಮಹಾಪ್ರಾಣವಾಗಿ ಮಾರ್ಪಡುವುದಾಗಿರುತ್ತದೆ. ಜ್ಞಾನೇಶ್ವರಿಯಲ್ಲಿ ಹಲವು ಸರ್ತಿ ಕೊಂಕಣಿಯಲ್ಲಿನ "ಜಾಲೇಂ" ಎಂಬ ಕ್ರಿಯಾಪದವು ಏನೊಂದು ರೂಪಾಂತರವಾಗದೇ ಮೂಲರೂಪದಲ್ಲಿಯೇ ಬಳಸಲ್ಪಟ್ಟಿದ್ದರೂ ಕೆಲವು ಸ್ಥಳಗಳಲ್ಲಿ ಅದನ್ನು "ಜಾಹಲೇಂ" ಎಂಬ ರೂಪದಲ್ಲಿಯೂ "ಝಾಲೇಂ" ಎಂಬ ರೂಪದಲ್ಲಿಯೂ ಬಳಸಲಾಗಿದೆ ಅಲ್ಲದೇ ಕೊಂಕಣಿಯು ಹಲವು ಹ್ರಸ್ವಸ್ವರದ ಕಡೆಗಿದ್ದರೆ ಮರಾಠಿಯು ಒಲವು ದೀರ್ಘ ಸ್ವರದ ಕಡೆಗಿರುತ್ತದೆ. ಉದಾ:—ಕೊಂಕಣಿ–ಗೆಲಿ = ಮರಾಠಿ–ಗೇಲೀ = ಹೋದಳು. ಅದರಂತೆಯೇ ಕೊಂಕಣಿಯು ಒಲವು ಶಬ್ದಾಂತ್ಯದಲ್ಲಿನ ವ್ಯಂಜನವನ್ನು ಸ್ವರಸಹಿತವಾಗಿ ಉಚ್ಚರಿಸುವ ಕಡೆಗಿದ್ದರೆ, ಮರಾಠಿಯು ಒಲವು ಸ್ವರಲೋಪಮಾಡಿ ಉಚ್ಚರಿಸುವುದರ ಕಡೆಗಿರುತ್ತದೆ. ಉದಾ:–ಕೊಂಕಣಿ–ವಾತಿ = ಮರಾಠಿ–ವಾತ್ = ಬತ್ತಿ ಕೊಂಕಣಿ–ಗಾಯಿ = ಮರಾಠಿ–ಗಾಯ್ ಇಲ್ಲವೇ ಗಾಯಿ = ದನ. ಕೊಂಕಣಿ–ತೋಚಿ = ಮರಾಠಿ–ತೋಚ್ = ಅವನೇ ಇತ್ಯಾದಿ. ನಾಮಪದಗಳ ಮತ್ತು ಕ್ರಿಯಾಪದಗಳ ರೂಪಾಂತರಗಳು ಮುಂದಿನಂತಾಗುತ್ತವೆ.

| ಕೊಂಕಣಿ | ಮರಾಠಿ | ಕನ್ನಡ |
| --- | --- | --- |
| **ಘೋಡೊ ಎತಾ** | **ಘೋಡಾ ಯೇತೋ** | **ಕುದುರೆಯು ಬರುತ್ತದೆ** |
| **ಘೋಡೊ ಆಯಲೊ** | **ಘೋಡಾ ಆಲಾ** | **ಕುದುರೆಯು ಬಂತು** |
| **ರಾಮು ಆಯಲೊ** | **ರಾಮಾ ಆಲಾ** | **ರಾಮನು ಬಂದನು** |
| **ಸ್ತ್ರಿಯೊ ಆಯಲ್ಯೊ** | **ಸ್ತ್ರಿಯಾ ಆಲ್ಯಾ** | **ಹೆಂಗಸರು ಬಂದರು** |

ಶೌರಸೇನೀ ಭಾಷೆಯಲ್ಲಿ ಕುದುರೆ ಬಂತು ಎನ್ನಲು **"ಘೋಡಓ ಆಅದೋ"** ಎಂಬ ರೂಪವೂ. ಮಹರಾಷ್ಟ್ರೀ ಪ್ರಾಕೃತವೆಂದು ಕರೆದ ಸೇತುಬಂಧ ಕಾವ್ಯದ ಭಾಷೆಯಲ್ಲಿ **"ಘೋಡಓ ಆಅಓ ( = ಆಯಓ)"** ಎಂಬ ರೂಪವೂ, ಅಪಭ್ರಂಶ ವಿಭಾಗದಲ್ಲಿ **"ಘೋಡಾ ಆಯಉ"** ಎಂಬ ರೂಪವೂ ಬರುತ್ತವೆ. ಅಂದರೆ ಮೊದಲನೆಯದರ ಕ್ರಿಯಾಪದದ ಕೊನೆಯಲ್ಲಿ "ದೋ" ಇದ್ದರೆ ಎರಡನೆಯದರಲ್ಲಿ "ಓ" ಇದೆ ಮತ್ತು ಮೂರನೆಯದರಲ್ಲಿ "ಉ" ಇದೆ. ಕೊಂಕಣಿಯಲ್ಲಿನ **"ಘೋಡೊ ಆಯಲೊ"** ಎಂಬುದು ಶೌರಸೇನಿಯಲ್ಲಿನ

**"ಘೋಡಚಿ ಆಅದೋ"** ಎಂಬುದರ ರೂಪಾಂತರವೆಂಬುವುದರಲ್ಲಿ ಸಂದೇಹ ವಿಲ್ಲ. ಮತ್ತು ಮರಾಠಿಯಲ್ಲಿನ **"ಘೋಡಾ ಆಲಾ"** ಎಂಬುದು ಕೊಂಕಣಿ ಯಿಂದಲೇ ರೂಪಾಂತರವಾದುದೆಂಬುದರಲ್ಲಿಯೂ ಸಂದೇಹವಿರಲಾರದು.

ಭಾರತವರ್ಷದಲ್ಲಿ ಬಳಕೆಯಲ್ಲಿರುವ ಭಾಷೆಗಳಲ್ಲಿ ಬಂಗಾಲಿಯಲ್ಲಿ ಹೊರತು ಬೇರೆ ಯಾವ ಭಾಷೆಯಲ್ಲಿಯೂ ಭೂತಕಾಲಿಕ ಕ್ರಿಯೆಯು "ಲ" ಪ್ರತ್ಯಯದಿಂದ ಕೊನೆಗೊಳ್ಳುವುದಿಲ್ಲ. ಉದಾ:—ಆಮಿ ಗೇಲಾಮ್ = ನಾನು ಹೋದೆನು ಅಥವಾ ಆಮಿ ಗಿಯಾಛಿಲಾಮ್. ಬಂಗಾಲಿಯಲ್ಲಿನ ಭೂತಕಾಲಿಕ ಕ್ರಿಯಾರೂಪ ಗಳು ಕೊಂಕಣಿಯ ಭೂತಕಾಲಿಕ ರೂಪಗಳಿಗೆ ಸಮೀಪವಾಗಿರುವಂತೆ ತೋರಿದರೂ ಅವುಗಳ ಪ್ರಯೋಗದಲ್ಲಿ ತುಂಬಾ ಭೇದವಿದೆ. ಬಂಗಾಲಿಯಲ್ಲಿನ "ಛಿಲಾಮ್" ಎಂಬುದು ಕೊಂಕಣಿಯಲ್ಲಿನ "ಆಸಿಲೊಂ" ಎಂಬುದಕ್ಕೆ ಸಮವಾಗಿದೆಯೆನ್ನ ಬಹುದು. ಆದರೆ ಶಬ್ದದ ಕೊನೆಯಲ್ಲಿನ ಅನುಸ್ವಾರದ ಬಂಗಾಲಿ ಉಚ್ಚಾರದಲ್ಲಿ ಮತ್ತು ಕೊಂಕಣಿ ಉಚ್ಚಾರದಲ್ಲಿ ತುಂಬಾ ಭೇದವಿದೆ. ಹಾಗೆಯೇ ಗುಜರಾತಿ ಯಲ್ಲಿ ಪೂರ್ಣ ಭೂತಕಾಲಿಕ ಅರ್ಥದಲ್ಲಿ ಕ್ರಿಯಾಪದವು "ಲ"ಕಾರದಿಂದ ಕೊನೆಗೊಳ್ಳುತ್ತದಾದರೂ ಸಾಮಾನ್ಯ ಭೂತಕಾಲದಲ್ಲಿ "ಲ"ಕಾರವಿರುವುದಿಲ್ಲ. ಉದಾ:—ಹುಂ ಆವ್ಯೋ = ನಾನು ಬಂದೆನು. ಪೂರ್ಣ ಭೂತಕಾಲಿಕರೂಪವು ಸಾಮಾನ್ಯವಾಗಿ ಕೃದಂತ ವಿಶೇಷಣದಂತೆ ಬಳಸಲ್ಪಡುತ್ತದೆ:—ರಾಂಧೇಲೋ ಚೋಖೋ = ಬೇಯಿಸಿದ ಅಕ್ಕಿ. ಆವೇಲೋ = ಬಂದಿದ್ದವ; ಆವೇಲೋ ಹತೋ ಬಂದಿದ್ದನು (= ಬಂದಿದ್ದವನಾಗಿದ್ದನು).

ಜ್ಞಾನೇಶ್ವರಿಯಲ್ಲಿ —ರಾವೊ = ಅರಸು; ಆವೋ = ಆಕಾರ; ಆಯು (= ರೂಪ) ಠಾವೋ = ನೆಲೆ; ವಿಸ್ಮೋ = ವಿಸ್ಮಯ; ಅಪಾವೋ = ಅಪಾಯ; ನಾಹೋ = ನಾಥ; ಸಂಜಯೋ ಮುಂತಾದ ಅನೇಕಾನೇಕ "ಓ"ಕಾರಾಂತ ಪುಲ್ಲಿಂಗ ಶಬ್ದಗಳಿವೆ. ಮತ್ತು ಅವುಗಳು ಮರಾಠಿಯ ಸರಣಿಗೆ ವಿರುದ್ಧವಾಗಿರುತ್ತವೆ. ಇಂದಿನ ಮರಾಠಿಯಲ್ಲಿಯೂ—ರಾಮಾ, ಗೋವಿಂದಾ ಮುಂತಾದ ಆಕಾರಾಂತ ಶಬ್ದಗಳಿರುವುದು ಅವುಗಳು ಮೊದಲು "ಓ"ಕಾರಾಂತವಾಗಿದ್ದುವೆಂಬುದರ ಪ್ರಮಾಣವಾಗಿರುತ್ತವೆ. ಹಾಗೆಯೇ ಇಂದಿನ ಮರಾಠಿಯಲ್ಲಿ 'ನಾನು' ಎನ್ನಲು "ಮೀ" ಎಂಬ ಸರ್ವನಾಮವಿರುತ್ತದಾದರೂ—ಜ್ಞಾನೇಶ್ವರಿಯಲ್ಲಿ ಎರಡು ಸರ್ತಿ "ಹಾಂಹೋ" ಎಂಬ ರೂಪವು ಬಂದಿದೆ:—**"ಮಗ ಪಾರ್ಥ ಕೃಷ್ಣಾತೇಂ ಮ್ಹಣೇ । ಹಾಂಹೋ ಹೇಂ ಕೈಸೇ ತುಮಚೇಂ ಬೋಲಣೇ । ಏಕ ಹೋಯ ತರಿ ಅಂತಃಕರಣೇ । ವಿಚಾರೂಯೋ ॥ ೫.೧ ॥"**

ಅರ್ಥ—ತರುವಾಯ ಪಾರ್ಥನು ಕೃಷ್ಣನಿಗೆ ಅನ್ನುತ್ತಾನೆ—ನಾನು ನಿಮ್ಮ ಈ ಮಾತನ್ನು ಒಂದನ್ನಾದರೂ ಹೇಗೆ ಮನಸ್ಸಿನಲ್ಲಿ ವಿಚಾರಮಾಡಲಿ? ಹಾಗೆಯೇ ಮುಂದೆ **"ಹಾಂಹೋ ನೇಣೋ ಕವಣಾಚೀ ಕಾಹಾಣೀ ॥೬-೧೪೨॥"** ಅರ್ಥ–ನಾನು ಯಾರೊಬ್ಬರ ಕಥೆಯನ್ನು ಅರಿಯೆನು. ಈ ಪದ್ಯದಲ್ಲಿ ನಾನು ಎಂಬ ಅರ್ಥದಲ್ಲಿ "ಹಾಂಹೋ" ಎಂಬ ಸರ್ವನಾಮವು ಮಾತ್ರವಲ್ಲ—ಮರಾಠಿ ಸಾಹಿತ್ಯದಲ್ಲಿಯೇ ಕಂಡುಬರದಿರುವ "ಕಹಾಣೀ" ಎಂಬ ಕೊಂಕಣಿ ಶಬ್ದವೂ ಬಂದಿದೆ. ಈ ಪದ್ಯಗಳು ತಮ್ಮ ಮೂಲರೂಪದಲ್ಲಿ ಇಲ್ಲವೆಂಬುವುದರಲ್ಲಿ ಸಂದೇಹವೇ ಇಲ್ಲ. ಅಂದರೆ ಮರಾಠಿಗರಾದ ಏಕನಾಥರು ಜ್ಞಾನೇಶ್ವರಿಯಲ್ಲಿ ಒಂದೇ ಒಂದು ಕೊಂಕಣಿ ಶಬ್ದವನ್ನಾದರೂ ಶುದ್ಧರೂಪದಲ್ಲಿ ಉಳಿಯಗೊಟ್ಟಿಲ್ಲ ವೆಂಬುದಕ್ಕೆ "ಹಾಂಹೋ" ಎಂಬ ರೂಪವೇ ಪ್ರಮಾಣವಾಗಿರುತ್ತದೆ. ಅರ್ಥಾತ್ ಅದು ಮೂಲದಲ್ಲಿ ಹಾಂವ ಇಲ್ಲವೇ ಹಾಂಉ ಎಂದು ಇದ್ದಿರಬಹುದು.

ಹೀಗಿದ್ದರೂ ಜ್ಞಾನೇಶ್ವರಿಯಲ್ಲಿ ಸರ್ವತ್ರ "ನಾನು" ಎನ್ನಲು "ಮಿ" ಎಂಬ ಸರ್ವನಾಮವು ಬಂದಿರಲಾಗಿ ಅದರಲ್ಲಿ ಕೊಂಕಣಿಯ "ಹಾಂವ" ಎಂಬುದರ ರೂಪಾಂತರ "ಹಾಂಹೊ" ಎಂಬ ರೂಪವು ಉಳಿದುಕೊಂಡಿರುವುದೂ ಮರಾಠಿ ಯಲ್ಲಿ ಎಂದೂ ಬಳಸಲ್ಪಟ್ಟಿಲ್ಲದ ಹಲವು ಕೊಂಕಣಿ ಶಬ್ದಗಳು ಅದರಲ್ಲಿ ಬಳಸಲ್ಪಟ್ಟಿರುವುದೂ, ಜ್ಞಾನೇಶ್ವರಿಯು ಕೊಂಕಣಿಯಲ್ಲಿಯೇ ರಚಿಸಲ್ಪಟ್ಟಿದ್ದಿತೆಂಬ ಅನುಮಾನವನ್ನು ಬಲಪಡಿಸುತ್ತದೆ. ಅಲ್ಲದೇ ಜ್ಞಾನೇಶ್ವರಿಯ ರಚನಾಕಾಲದಲ್ಲಿ ಕೊಂಕಣಿಯು ಸಾರ್ವತ್ರಿಕ ಬಳಕೆಯ ಭಾಷೆಯಾಗಿತ್ತೆಂದೂ—ಮರಾಠಿಯೆಂಬ ಕವಲು ಹುಟ್ಟಿರಲಿಲ್ಲವೆಂದೂ ಅನ್ನಬೇಕಾಗುತ್ತದೆ. ಈಗಿನ ಜ್ಞಾನೇಶ್ವರಿಯಲ್ಲಿನ ಭಾಷೆಯಲ್ಲಿ ಹಲವು ಹಳೆಯ ಶಬ್ದಗಳಿವೆಯೆಂಬುದರಲ್ಲಿ ಸಂದೇಹವಿಲ್ಲದಿದ್ದರೂ ಆ ಭಾಷೆಯನ್ನು ಹದಿನಾರನೆಯ ಶತಮಾನಕ್ಕಿಂತ ಪ್ರಾಚೀನವೆನ್ನಲಾಗುವುದಿಲ್ಲ. ಏಕೆಂದರೆ ಮಹಾನುಭಾವ ಪಂಥದ ಮುನಿಕೃಷ್ಣದಾಸರು 1564ನೆಯ ಇಸವಿಯಲ್ಲಿ ರಚಿಸಿದ ರುಕ್ಮಿಣೀ ಸ್ವಯಂವರ ಎಂಬ ಕಾವ್ಯದ ಭಾಷೆಯು ಜ್ಞಾನೇಶ್ವರಿಯ ಭಾಷೆಯಿಂದ ವಿಶೇಷ ಭಿನ್ನವಾಗಿಲ್ಲ.

ಜ್ಞಾನೇಶ್ವರಿಯ ಮಂಗಲಾಚರಣದಲ್ಲಿ ಬಂದಿರುವ **"ಅಭಿಲಾಷಿತ ಮನೋರುಚಿ ಪುರವಿತಾ ತೋ ॥೨೭॥"** ಅಂದರೆ "ಮನಸ್ಸಿನ ಕಾಮನೆ ಗಳನ್ನೆಲ್ಲ ಅವನು ಒದಗಿಸಿ ಕೊಡುತ್ತಾನೆ" ಎಂಬ ಅಂಶವು ಅಚ್ಚ ಕೊಂಕಣಿ ಯಾಗಿರುತ್ತದೆ. ಅದು ಮರಾಠಿಯದಾಗಬೇಕಾದರೆ **"ಪುರವಿತೋ ತೋ"** ಎಂದಿರಬೇಕು. ಈ ರೀತಿಯಲ್ಲಿ ಮರಾಠಿಯ "ತೋ"ದ ಬದಲಿಗೆ "ತಾ"

ಪ್ರತ್ಯಯದಿಂದ ಕೊನೆಗೊಳ್ಳುವ ಅನೇಕಾನೇಕ ಕ್ರಿಯಾಪದಗಳು ಜ್ಞಾನೇಶ್ವರಿಯಲ್ಲಿವೆ. ಅಂಥ ಪ್ರಯೋಗಗಳಲ್ಲಿ ಮತ್ತು ಹಲವು ಕೊಂಕಣಿ ಶಬ್ದಗಳು ಜ್ಞಾನೇಶ್ವರಿಯಲ್ಲಿರುವುದನ್ನು ಕಂಡ ಕೆಲವು ವಿದ್ವಾಂಸರು—ಅವುಗಳನ್ನು ಕೊಂಕಣಿಯವುಗಳೆಂದು ಒಪ್ಪಿಕೊಂಡರೆ ಕೊಂಕಣಿಯು ಮರಾಠಿಗಿಂತ ಪ್ರಾಚೀನವಾದುದೆಂದು ಅವರಾಗಿ ಸಿದ್ಧಪಡಿಸಿಕೊಟ್ಟಂತಾಗಂವುದೆಂದು ಭಾವಿಸಿ, ಅಂಥ ಪ್ರಯೋಗಗಳು ಮತ್ತು ಶಬ್ದಗಳು ತಮ್ಮ ಹಳೆಯ ಮರಾಠಿಯಲ್ಲಿ ಬಳಸಲ್ಪಡುತ್ತಿದ್ದವೆಂದು ಹೇಳತೊಡಗಿದ್ದರು. ಅವರು ಹಾಗೆ ಹೇಳತೊಡಗಿದುದು ಮಾತ್ರವಲ್ಲದೇ—"Memorandum on Konkani" ಎಂಬ ಒಂದು ಚಿಕ್ಕ ಪುಸ್ತಕವನ್ನು ಕೂಡ ಪ್ರಕಟಿಸಿದ್ದರು. ಮತ್ತು ಅವರು ಅದರಲ್ಲಿ ಕೊಂಕಣಿಯನ್ನು ಮರಾಠಿಯ ಒಳಭೇದವೆಂದು ಸಾಧಿಸಲು ಪ್ರಯತ್ನಿಸಿದ್ದರು. ಮತ್ತು ಕೊಂಕಣಿಗರು–ಜನಗಣನೆಯ ಕಾಲವಲ್ಲಿ ತಮ್ಮ ತಾಯಿ ನುಡಿಯು ಮರಾಠಿಯಿಂದ ಭಿನ್ನವಾದುದೆಂದು ನಮೂದಿಸದೇ "ಕೊಂಕಣಿ ಮರಾಠಿ" ಎಂದು ನಮೂದಿಸಬೇಕಾಗಿ ವಿನಂತಿಸಿಕೊಂಡಿದ್ದರು.

ಆದರೆ ಅವರು ಆ ಪುಸ್ತಕದಲ್ಲಿ ಆರಿಸಿಕೊಟ್ಟ, ಹಾಗೂ ಕೊಂಕಣಿಯಲ್ಲಿ ಮಾತ್ರ ಇರುವ, ಮತ್ತು ಹಳೆಯ ಮರಾಠಿ ಗ್ರಂಥಗಳಲ್ಲಿ ಬಳಸಲ್ಪಟ್ಟವುಗಳೆಂದು ತೋರಿಸಿದ ಶಬ್ದಗಳು ಈಗಿನ ಮರಾಠಿ ಸಾಹಿತ್ಯದಲ್ಲಾಗಲಿ, ನುಡಿಯುವ ಭಾಷೆಯಲ್ಲಾಗಲೀ ಇಲ್ಲವೆಂಬ ಸತ್ಯವನ್ನು ಆ ಪುಸ್ತಕದ ಮೂಲಕ ಒಪ್ಪಿಕೊಂಡಂತೆಯೂ, ಕೊಂಕಣಿಯು ಈಗಿನ ಮರಾಠಿಗಿಂತ ಪ್ರಾಚೀನವೆಂದು ಸಿದ್ಧಪಡಿಸಿದಂತೆಯೂ, ಆಗಿದೆಯೇ ಹೊರತು, ಕೊಂಕಣಿಯು ಮರಾಠಿಯ ಉಪಭೇದವೆಂದು ಸಿದ್ಧಪಡಿಸಿದಂತಾಗಿಲ್ಲ. ಅವರು ಆರಿಸಿಕೊಟ್ಟ ಶಬ್ದಗಳಲ್ಲಿನ ಕೆಲವು ಮುಖ್ಯ ಶಬ್ದಗಳು ಮುಂದಿನಂತಿವೆ.

| Old Marathi | Konkani | Modern Marathi | Kannada |
|---|---|---|---|
| ಆವೈ | ಆವಯ್ | ಆಈ | ತಾಯಿ |
| — | ಬಾಮ್ಹಣ್ | ಪತಿ | ಗಂಡ |
| ಬ್ರಾಹ್ಮಣೀ | — | ಪತ್ನಿ | ಹೆಂಡತಿ |
| ವಾದುಲಾ | ವಾದಲೊ | ಪುರುಷ್ | ಗಂಡಸು |
| ಬಾಇಲ | ಬಾಇಲ | ಸ್ತ್ರೀ | ಹೆಂಗಸು |
| ಪೂತ್ | ಪೂತ್ | ಮುಲಗಾ | ಮಗ |

| | | | |
|---|---|---|---|
| ಧೂವ | ಧೂವ | ಮುಲಗೀ | ಮಗಳು |
| ವರ್ೈತ್ | ವರ್ೈತ್ | ನವರಾ | ಮದುವಣಗ |
| ವೋಹರ | ವೋಹರ | ವಧೂವರ | ಮದುಮಕ್ಕಳು |
| ವರ್ಡ್ಡಿಕ | ಹೊರಡೀಕ (ತಪ್ಪು) | ಲಗ್ನ | ಮದುವೆ |
| ರಾತಿ | ರಾತಿ | ರಾತ್ರ | ಇರುಳು |
| ದೀಸ್ | ದೀಸ್ | ದಿವಸ | ಹಗಲು |
| ಸಾಂಜವೇಳ | ಸಾಂಜವೇಳ | ಸಾಯಂಕಾಲ | ಬೈಗಿನ ಹೊತ್ತು |
| ಪಾಹಾಲೇಂ | ಫಾಲೆಂ | ಪಹಾಂಟ | ಬೆಳಗು |
| ಕೈಂ | ಕೈಂ | ಕೆವ್ಹಾಂ | ಎಂದು? |
| ಭೀತರಿ | ಭೀತರಿ | ಆಂತ್ | ಒಳಗೆ |
| ಪಾಹೇ | ಫಾಇ | ಉದ್ಯಾಂ | ನಾಳೆ |
| ಆಂತ | ಆಂತ | ಆಂತಡೀ | ಕರುಳು |
| ಖಾಡ | ಖಾಡ | ದಾಢೀ | ಗಡ್ಡ |
| ಲೋಂವ | ಲೋಂವ | ಆಂಗಾಚೇಕೇಸ | ರೋಮ |
| ಪಾಲಖತಿ | ಪಾಲಖತಿ | ಆಸನಮಾಂಡೀ | ಪದ್ಮಾಸನ |
| ಆವಾಳೂ | ವಾಳೂ | ಓಷ್ಠಪ್ರಾಂತ | ದವಡೆ |
| ಪಾತೇಂ | ಫಾತೆಂ | ಪಾಪಣೀ | ರೆಪ್ಪೆ |
| ಖೋಂಪಾ | ಖೊಂಪೊ | ವೇಣೀ | ಜಡೆ |
| ಸುಣೇಂ | ಸುಣೆಂ | ಕುತ್ರಾ | ನಾಯಿ |
| ಕುಕಡೀ | ಕುಕಡಿ (ತಪ್ಪು) | ಕೋಂಬಡೀ | ಹೇಂಟೆ |
| ಸೀತ | ಸೀತ | ಭಾತ | ಅನ್ನ; ಕೂಳು |
| ಸಾಂಬಾರ | ಸಾಂಬಾರ | ಮಸಾಲಾ | ಮಸಾಲೆ |
| ವೋಖದ | ವೊಖದ | ಔಷಧ | ಮದ್ದು |
| ದೋಣಾ | ದೊಣೊ | ದ್ರೋಣ | ದೊನ್ನೆ |
| ತಳೀ | ತಳಿ | ತಾಟ | ತಟ್ಟೆ, ಹರಿವಾಣ |
| ಪಾಥರ್ | ಫಾತರ್ | ದಗಡ | ಕಲ್ಲು |
| ಇಂಗಲಾ | ಇಂಗಳೊ | ನಿಖಾರಾ | ಕೆಂಡ |
| ದೋಡಾ | ಧೊಡೊ | ಕಚ್ಚೇಂ ಫಳ | ಕಾಯಿ; ಹೀಚು |
| ರೂಖ | ರೂಖ | ವೃಕ್ಷ | ಮರ |

| | | | |
|---|---|---|---|
| ತಣ | ತಣ | ಗವತ | ಹುಲ್ಲು |
| ಓತಪಲೀ | ಓತ | ಊನ | ಬಿಸಿಲು |
| ಶೀಂ | ಶೀಂ (ಶೀಂಯು) | ಥಂಡೀ | ಚಳಿ |
| ಪೈರ್ಯಾ | ಪೈರ್ಯೊ | ಪಾಳೀಜಾತಾಪ | ದಿನ ಬಿಟ್ಟುಬರುವ ಜ್ವರ |
| ಪರಾಯು | ಪಿರಾಯು (ತಪ್ಪು). | ವಯು | ವಯುಸ್ಸು |
| ರೀಣ | ರೀಣ | ಕರ್ಜ; ಋಣ | ಸಾಲ |
| ಕಾಂಕಣ | ಕಾಂಕಣ | ಬಾಂಗಡೀ | ಬಳೆ |
| ಮುಂದೀ | ಮುದ್ದಿ | ಅಂಗಠೀ | ಉಂಗುರ |
| ಡೋಣೀ | ದೋಣಿ | ಹೋಡೀ | ಓಡ |
| ಬಾಳಾಣಾ | ಬಾಳಣೊ | ಖಿಡಕೀ | ಕಿಟಿಕಿ |
| ಸೋಪಾನ | ಸೋಪಣ | ಪಾಯುರೀ | ಮೆಟ್ಟಿಲು |
| ಭುಇ | ಭುಇಂ | ಜಮೀನ | ನೆಲ |
| ಖೋಂಪ | ಖೋಂಪ | ಝೋಂಪಡೀ | ಗುಡಿಸಲು |
| ಪೇಣೇಂ | ಪೇಣೇಂ | ಮುಕಾಮ್ | ಮುಜಲು |
| ಮೇರ | ಮೇರ | ಮರ್ಯಾದಾ | ಗಡಿ |
| ಗೋಮಟೇಂ | ಗೊಮಟೆಂ | ಬರೇಂ | ಚೆಲೋ |
| ನಿಬರ | ನಿಬರ | ಕಠಿನ | ಗಟ್ಟಿ |
| ನಿತಳ | ನಿತಳ | ಸ್ವಚ್ಛ | ತಿಳಿಯಾದ |
| ಆಫಾವಣೇ | ಆಫಯುಣೆಂ | ಬೋಲಾವಣೇಂ | ಕರೆಯುವಿಕೆ |
| ಪಾತ್ರೇಣೇಂ | ಪಾತ್ಯೆಣೆಂ | ವಿಶ್ವಾಸಠೇವಣೇಂ | ನಂಬುವಿಕೆ |
| ಅಂಗವಣೇಂ | ಅಂಗಯುಣೇಂ | ನವಸಕರಣೇಂ | ಹರಕೆ ಹೇಳುವಿಕೆ |
| ಪಾಲವಣೇಂ | ಪಾಲಯುಣೇ (ತಪ್ಪು) | ಮಾಲವಣೆ | ನೊಂದು |
| ಪಾಲವ | ಪಾಲವ | ಪದರ್ | ಸೆರಗು |
| ವೋಲಿ | ವೋಲಿ | ಅಂಗವಸ್ತ್ರ | ವಲ್ಲಿ |
| ಘೇತಾ | ಘೆತಾ | ಘೇತೋ | ತೆಗೆದುಕೊಳ್ಳುತ್ತಾನೆ |
| ಮಾರಿತಾ | ಮಾರಿತಾ | ಮಾರಿತೋ | ಹೊಡೆಯುತ್ತಾನೆ |
| ಘೇತಾಸಿ | ಘೆತ್ತಾಸಿ | ಘೇತೋಸ್ | ತೆಗೆದುಕೊಳ್ಳುತ್ತೀ |

| | | | |
|---|---|---|---|
| ಆಹಾತಿ | ಆಸಾತಿ | ಆಹೇತ್ | ಇದ್ದಾರೆ |
| ದೇಖಿಲಾಂ | ದೇಖಲಾಂ | ದೇಖಿಲೇಂ ಆಹೆ | ನೋಡಿದೆ |
| ಅಸಿಲಿ | ಆಸಿಲಿ | ಹೋತೀ | ಇದ್ದಳು |

ಈ ಪಟ್ಟಿಯು ಬಹಳ ಉದ್ದವಿತ್ತು. ಅವರಲ್ಲಿನ ಮುಖ್ಯ ಶಬ್ದಗಳನ್ನಷ್ಟೇ ಆರಿಸಿ ಅದನ್ನು ಕಿರಿದುಗೊಳಿಸಿದೆ. ಹಿಂದಿನ ಶಬ್ದಗಳ ಪರಿಶೀಲನೆಯಿಂದ ತಿಳಿದುಬರುವ ತಥ್ಯವೇನೆಂದರೆ ಮರಾಠಿಗರು ಯಾವ ಶಬ್ದಗಳನ್ನು ಹಳೆಯ ಮರಾಠಿಯವುಗಳೆನ್ನುವರೊ ಅವುಗಳು ಮತ್ತು ಕೊಂಕಣಿ ಶಬ್ದಗಳು ಒಂದೇ ಯಾಗಿರುತ್ತವೆಂತಲೂ, ಕೊಂಕಣಿಯಲ್ಲಿರುವ ಯಾವ ಪ್ರಾಕೃತ ಶಬ್ದಗಳ ಬದಲಿಗೆ ಹೊಸ ಮರಾಠಿಯಲ್ಲಿ ಶುದ್ಧ ಸಂಸ್ಕೃತ ಶಬ್ದಗಳನ್ನು ಬಳಸಲಾಗಿದೆಯೋ. ಅವುಗಳ ಸಮಾನಾರ್ಥಕ ಪ್ರಾಕೃತ ಶಬ್ದಗಳು ಮರಾಠಿಯಲ್ಲಿ ಇಲ್ಲವೆಂತಲೂ. ಆ ಕೊರತೆಯನ್ನು ನೀಗಿಸುವ ಸಲುವಾಗಿಯೇ ಮರಾಠಿ ಸಾಹಿತ್ಯಕಾರರು ಸಂಸ್ಕೃತ ಶಬ್ದಗಳನ್ನು ಮರಾಠಿಯಲ್ಲಿ ಇತ್ತೀಚೆಗೆ ಸೇರಿಸಿದ್ದರೆಂತಲೂ–ಆಗಿರುತ್ತದೆ. ಅಂಥ ಕೊರತೆಯ ಕಾರಣವು ಪ್ರಾಕೃತವು ತಾಯಿನುಡಿಯಾಗಿಲ್ಲದ ಜನರು ಕೊಂಕಣಿ ಯನ್ನು ಆಡತೊಡಗಿದುದೂ ಆಗಿರಬಹುದು. ಹಿಂದಿನ ಪಟ್ಟಿಯನ್ನು ಕೊಟ್ಟಿರುವ ಪಂಡಿತರು ಕೆಲವು ಕೊಂಕಣಿ ಶಬ್ದಗಳನ್ನು ತಪ್ಪುರೂಪದಲ್ಲಿ ಕೊಟ್ಟಿದ್ದಾರೆ. ಉದಾ:—ಹೊರಡೀಕ = ಮದುವೆ; ಕಾನಸೂಲ್ = ಕೆನ್ನೆ ಅಥವಾ ಕೆಪ್ಪೆ; ಸೇವಣೆಂ = ಹಕ್ಕಿ; ಯಳ = ಏಲಕ್ಕಿ; ಇವುಗಳು ತಪ್ಪುರೂಪಗಳಾಗಿವೆ. ಅವುಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅನುಕ್ರಮವಾಗಿ–ವ್ಹಾರಡೀಕ (=ವರಹಾಡೀಕ) ಕಾಣಸಳ್; ಸಲುಣೆಂ; ಏಳ್—ಎಂಬ ರೂಪದಲ್ಲಿ ಬಳಸಲ್ಪಡುತ್ತವೆ. ಜ್ವರ ಎಂಬ ಅರ್ಥದಲ್ಲಿ ಜೊರೊ ಮತ್ತು ತಾಪ್ ಎಂಬ ಎರಡು ಶಬ್ದಗಳು ಬಳಸಲ್ಪಡು ತ್ತವೆ. ಹಾಗೆಯೇ ಅವರು ಆಧುನಿಕ ಮರಾಠಿಯದೆಂದು ಕೊಟ್ಟಿರುವ "ಪಲಂಗ. ಹತೋಡೊ, ತಲವಾರ, ಲಾತ, ಮಾನ" ಮುಂತಾದ ಶಬ್ದಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೂ ಇವೆಯಾದುದರಿಂದ ಅವುಗಳು ಮೂಲದಲ್ಲಿ ಕೊಂಕಣಿಯವು ಗಳೇ ಎಂದು ಸಿದ್ಧವಾಗುತ್ತವೆ. ಅವರು ಕೊಟ್ಟಿರುವ "ಗುಡಿಸಲು" ಎಂಬರ್ಥದ ಝೋಂಪಡೀ ಎಂಬ ಶಬ್ದವು ಕೊಂಕಣಿಯಲ್ಲಿಯೂ ಇದೆ. ಆದರೆ ಅದು ಕೊಂಕಣಿಯಲ್ಲ, ಆದುದರಿಂದ ಮರಾಠಿಯದೂ ಅಲ್ಲ. ಅದು ಹಿಂದೀಯ ದಾಗಿದೆ.

ಆ ವಿದ್ವಾಂಸರು ಜ್ಞಾನೇಶ್ವರಿಯಲ್ಲಿನ ಶಬ್ದಗಳು ಶುದ್ಧವಾದವುಗಳೆಂಬಂತೆ ತೋರಿಸಿ, ಅದು ಹಳೆಯ ಮರಾಠಿಯೆಂತಲೂ, ಕೊಂಕಣಿಯು ಅದರಿಂದಲೇ

ಹುಟ್ಟಿದುದೆಂದೂ ಸಾಧಿಸಲು ಹೆಣಗಾಡಿದ್ದಾರೆ. ಆದರೆ ಅವರು ಹಳೆ ಮರಾಠಿಯಲ್ಲಿನ ಶಬ್ದಗಳು ಹೊಸ ಮರಾಠಿಯಲ್ಲಿರದೇ ಕೊಂಕಣಿಯಲ್ಲಿ ಮಾತ್ರ ಇರುವುದರ ಕಾರಣವೇನೆಂಬ ಮುಖ್ಯ ಪ್ರಶ್ನೆಯನ್ನು ಬಗೆಹರಿಸುವ ಪ್ರಯತ್ನವನ್ನು ಮಾಡಿಲ್ಲ. ಜ್ಞಾನೇಶ್ವರಿಯಲ್ಲಿನ ಶಬ್ದಗಳ ಶುದ್ಧತೆಯ ಕುರಿತು ಹೇಳುವುದಾದರೆ, ಅದರಲ್ಲಿ ಯಾವುದೊಂದು ನಾಮಪದವಾಗಲೀ, ಕ್ರಿಯಾಪದವಾಗಲೀ ಎಲ್ಲ ಸ್ಥಳಗಳಲ್ಲಿ ಒಂದೇ ರೂಪದಲ್ಲಿ ಬಳಸಲ್ಪಟ್ಟಿಲ್ಲವೆನ್ನಬೇಕಾಗಿದೆ. ಉದಾ:—ವರಾಡಿಕ = ವರ್‍ಹಾಡಿಕ; ಜಾಲೇಂ; ಜಾಹಲೇಂ; ಝಾಲೇಂ; ಜಾಲಿಯಾ ಇತ್ಯಾದಿ.

## ೬

ಕೊಂಕಣಿ ಅಥವಾ ಮೂಲ ಮಹಾರಾಷ್ಟ್ರಿಯು ಕನ್ನಡ ರಾಜ್ಯದಲ್ಲಿ, ಕನ್ನಡದ ನಿತ್ಯ ಸಹವಾಸ ಮತ್ತು ಸಂಪರ್ಕಗಳಲ್ಲಿಯೇ ಇದ್ದುದರಿಂದ ಕೊಂಕಣಿಯಲ್ಲಿ ಕನ್ನಡದ ಶಬ್ದಗಳೂ, ಕನ್ನಡದಲ್ಲಿ ಕೊಂಕಣಿಯ ಶಬ್ದಗಳೂ ಹಾಸುಹೊಕ್ಕಿನಂತೆ ಹೆಣೆದುಕೊಂಡಿವೆ. ಆದುದರಿಂದ ಆ ಎರಡು ಭಾಷೆಗಳಲ್ಲಿ ಬಳಕೆಯಲ್ಲಿರುವ ಕೆಲವು ಶಬ್ದಗಳು ಯಾವ ಭಾಷೆಯವುಗಳೆಂದು ನಿರ್ಧರಿಸುವುದು ಸುಲಭವಲ್ಲ. ಕೊಂಕಣಿ ಪ್ರಾಕೃತದ ಮತ್ತು ಶೌರಸೇನೀ ಪ್ರಾಕೃತದ ಹಲವು ಮೂಲರೂಪಗಳು ಕನ್ನಡದಲ್ಲಿ ಮಾತ್ರ ದೊರಕುವುದರಿಂದ — ಶೌರಸೇನೀ ಪ್ರಾಕೃತವು ಕೊಂಕಣಿಯಾಗಿ ಮಾರ್ಪಟ್ಟುದು ಕನ್ನಡನಾಡಿನಲ್ಲಿಯೇ ಅನ್ನಬಹುದು. ಉದಾಹರಣೆಗೆ—ಸಂಸ್ಕೃತದಲ್ಲಿನ "ಆರ್ದ್ರ" ಶಬ್ದದ ಶೌರಸೇನೀ ರೂಪಾಂತರ "ಒದ್ದಂ" ಎಂಬುದು ಕನ್ನಡದಲ್ಲಿ "ಒದ್ದೆ" ಎಂಬುದಾಗಿ ಮೂಲ ರೂಪದಲ್ಲಿಯೇ ಉಳಿದಿದೆ. ಆದರೆ ಅದು ಕೊಂಕಣಿಯಲ್ಲಿ "ಒಲ್ಲೆಂ" ಎಂದು ಮಾರ್ಪಟ್ಟಿದೆ. ಜ್ಞಾನೇಶ್ವರಿಯಲ್ಲಾದರೋ ಕನ್ನಡದ ಓಗರ, ಆರೋಗಿಸು, ಪವಡಿಸು, ಸಿಲುಕು (=ಶಿರಕ) ಮುಂತಾದವುಗಳ ರೂಪಾಂತರಗಳು ಕೂಡ ಇರುವುದರಿಂದ—ಜ್ಞಾನೇಶ್ವರಿಯ ರಚನೆಯು—ಕನ್ನಡ ಬಳಕೆಯಲ್ಲಿದ್ದ ಪ್ರದೇಶದಲ್ಲಿಯೇ ಆಗಿತ್ತೆಂಬುದರಲ್ಲಿ ಸಂದೇಹವುಳಿಯುವುದಿಲ್ಲ.

ಕೊಂಕಣಿಯಿಂದ ಕನ್ನಡದಲ್ಲಿ ಸೇರಿಕೊಂಡ ಹಲವು ಶಬ್ದಗಳಲ್ಲಿ ಪೊಡಗ ಮತ್ತು ಪೊಡಗಿ (=ಹುಡುಗ; ಹುಡುಗಿ) ಎಂಬ ಶಬ್ದಗಳು ಕೂಡ ಎರಡಾಗಿವೆ. ಕನ್ನಡದ ಕುರಿತು ಹಲವು ಸಂಶೋಧನಾತ್ಮಕ ಗ್ರಂಥಗಳನ್ನು ಬರೆದು ಪ್ರಕಟಿಸಿದ

ಶ್ರೀಮಾನ್ ಶಂ. ಬಾ. ಜೋಶಿಗಳೆಂಬ ವಿದ್ವಾಂಸರು ತನ್ನ "ಕನ್ನಡ ನುಡಿಯ ಹುಟ್ಟು" ಎಂಬ ಪುಸ್ತಕದಲ್ಲಿ "ಹುಡಗ" ಎಂಬ ಶಬ್ದವು ಹಳೆಗನ್ನಡದಲ್ಲಿ ಇಲ್ಲವೆಂದಿದ್ದಾರೆಯೇ ಹೊರತು, ಆ ಶಬ್ದವು ಹೊಸಗನ್ನಡದಲ್ಲಿ ಎಲ್ಲಿಂದ ಬಂದು ಸೇರಿತು ಎಂಬುದನ್ನು ವಿವರಿಸಲಿಲ್ಲ. ಬೇರೆ ಎಲ್ಲ ಶಬ್ದಗಳನ್ನು ಬಿಟ್ಟು ಹುಡಗ ಮತ್ತು ಹುಡಗಿ ಎಂಬ ಎರಡೇ ಶಬ್ದಗಳನ್ನು ಆರಿಸಿ ತೆಗೆದುದರ ಕಾರಣವೇನೆಂದರೆ– ಮರಾಠಿಯು ಕೊಂಕಣಿಯಿಂದಲೇ ಬಹಳ ಅರ್ವಾಚೀನ ಕಾಲದಲ್ಲಿ ಹುಟ್ಟಿದು ದೆಂದು ನಿರ್ಣಯಿಸುವಲ್ಲಿ ಆ ಎರಡು ಶಬ್ದಗಳು ಪ್ರಬಲ ಪ್ರಮಾಣಗಳಾ ಗಿರುತ್ತವೆ.

ಮಗ, ಮಗಳು, ಗಂಡು, ಹೆಣ್ಣು, ಗಂಡ, ಹೆಂಡತಿ, ಗಂಡಸು, ಹೆಂಗಸು ಮುಂತಾದ ಶಬ್ದಗಳಿಲ್ಲದೇ ಒಂದು ಸ್ವತಂತ್ರವಾದ ಭಾಷೆಯು ಹುಟ್ಟುವುದಿಲ್ಲ. ಅಂದರೆ ಆ ಶಬ್ದಗಳು ಭಾಷೆಯ ಜೀವಾಳವಾಗಿರುತ್ತವೆ. ಮತ್ತು ಭಾಷೆಯಲ್ಲಿ ಬಳಸಲಾಗುವ ಅಂಥ ಶಬ್ದಗಳ ರೂಪದ ಮೇಲಿಂದ ಭಾಷೆಯ ಮೂಲವನ್ನು ಮತ್ತು ಇತಿಹಾಸವನ್ನು ಕಂಡುಹಿಡಿಯಲಾಗುತ್ತದೆ. ಈಗಿನ ಮರಾಠಿಯ ಸಮಸ್ತ ಸಾಹಿತ್ಯವನ್ನು ಜಾಲಾಡಿದರೂ ಹಿಂದೆ ಹೇಳಿದ ಶಬ್ದಗಳಿಗೆ ಪ್ರತಿಯಾಗಿ ಮರಾಠಿಯ ಸ್ವಂತದೆನ್ನಬಹುದಾದ ಒಂದೇ ಒಂದು ಪ್ರಾಕೃತ ಶಬ್ದವಾದರೂ ದೊರಕುವುದಿಲ್ಲ.

ಮರಾಠಿಯಲ್ಲಿ ಮಗ, ಮಗಳು ಮತ್ತು ಮಗು ಎನ್ನಲು ಮುಲಗಾ, ಮುಲಗೀ ಮತ್ತು ಮೂಲ (ಮುಲಗೇಂ) ಎಂಬ ಶಬ್ದಗಳ ಹೊರತು ಅದೇ ಅರ್ಥದ ಬೇರೆ ಶಬ್ಧಗಳಿಲ್ಲ. ಅವುಗಳು ಪ್ರಾಕೃತ ಶಬ್ದಗಳೇ ಆಗಿದ್ದರೂ, ಅವುಗಳ ನೇರಾದ ಸಂಸ್ಕೃತ ಮೂಲವನ್ನು ಕಂಡುಹಿಡಿಯುವುದು ಸುಲಭವಲ್ಲ. ಅಂದರೆ ಆ ಶಬ್ದಗಳು ನೇರಾಗಿ ಸಂಸ್ಕೃತದಿಂದ ರೂಪಾಂತರವಾಗಿ ಮರಾಠಿಯೊಳಗೆ ಬಂದವುಗಳಲ್ಲ. ಅವುಗಳ ಮೂಲವು ಕೊಂಕಣಿಯಲ್ಲಿದೆ. ಅದೆಂದರೆ–ಬುರಗೊ, ಬುರಗಿ ಮತ್ತು ಬುರಗೆಂ ಎಂಬುದಾಗಿದೆ. ಅವುಗಳು ಕೊಂಕಣಿಯಲ್ಲಿ ಭುರಗೊ, ಭುರಗಿ, ಮತ್ತು ಭುರಗೆಂ ಎಂಬ ರೂಪದಲ್ಲಿಯೂ ಬಳಸಲ್ಪಡುತ್ತವೆ. ಆ ಶಬ್ದ ಗಳು–ಕೊಂಕಣಿಯಲ್ಲಿ ಸಂಸ್ಕೃತದಲ್ಲಿನ ಪುತ್ರಕ ಮತ್ತು ಅರ್ಭಕ ಎಂಬ ಎರಡು ಶಬ್ದಗಳಿಂದಲೂ ರೂಪಾಂತರವಾಗಿ ಬರಲು ಸಾಧ್ಯವಿದೆ. ಶೌರಸೇನಿಯಲ್ಲಿ ಸಂಸ್ಕೃತದ "ಪುತ್ರ" ಎಂಬ ಶಬ್ದವು ಪುತ್ತೋ ಮತ್ತು ಪುಡೋ ಎಂದು ಎರಡು ರೂಪಗಳನ್ನು ತಾಳುತ್ತದೆ. ಉದಾ:–ವ್ಯಾಪೃತೇಡಃ ॥ ೧೨-೪ ॥ ಪುತ್ರೇಽಪಿ ಕ್ವಚಿತ್ ॥ ೧೨-೫ ॥) ಪುಡೋಃ; ಪುತ್ತೋ ಎಂಬುದಾಗಿ ಪ್ರಾಕೃತ ಪ್ರಕಾಶವಲ್ಲಿ

ಹೇಳಿದೆ. ಆದುದರಿಂದ ಪುತ್ರಕಃ ಎಂಬ ಶಬ್ದವು "ಪುಡಗೊ" ಆಗಿ ಮಾರ್ಪಟ್ಟು ಕೊಂಕಣಿಯಲ್ಲಿ ಬಂದುದು ಹುಡಗ ಆಗಿ ಕನ್ನಡದಲ್ಲಿ ಸೇರಿತೆಂಬುದನ್ನು ಸಿದ್ಧ ಗೊಳಿಸಲು ಪ್ರಯಾಸಪಡಬೇಕಿಲ್ಲ. ಕಾಲಕ್ರಮೇಣ ಕೊಂಕಣಿಯಲ್ಲಿ "ಪುಡಗೊ" ಇದ್ದುದೇ ಬುರಗೊ ಎಂದಾಗಿರಬೇಕು. ಇಲ್ಲವೇ ಅರ್ಭಕ ಶಬ್ದವು ಭುರಗೊ ಆಗಿ ಬಂದಿರಬೇಕು. ಬ, ಭ ಇದ್ದುದು ಕೊಂಕಣಿಯಲ್ಲಿ "ಮ" ಆಗಿ ಮಾರ್ಪಟ್ಟ ಹಾಗೂ "ರ" ಇದ್ದುದು "ಲ" ಆದ ಉದಾಹರಣೆಗಳು ಪ್ರಾಕೃತದಲ್ಲಿ ಬೇಕಾದಷ್ಟು ಇವೆ. ಉದಾ:-ಭಣ = ಮ್ಹಣ = ಅನ್ನು. ಭಾಂಡಃ = ಮಾಂಡೊ = ಮಣ್ಣಿನ ಗುಡಾಣ. ಹರಿದ್ರಾ = ಹಲದ್ದಾ = ಅರಸಿನ. ಅಂಗಾರಃ = ಇಂಗಾಲೊ = ಕೆಂಡ ಇತ್ಯಾದಿ, ಆದುದರಿಂದ ಭುರಗೋ ಇದ್ದುದೇ ಭ ಕಾರಕ್ಕೆ, ಮ ಕಾರ ಮತ್ತು ರ ಕಾರಕ್ಕೆ ಲ ಕಾರವಾಗಿ ಮರಾಠಿಯ ಮುಲಗಾ ಎಂಬ ಶಬ್ದವು ಹುಟ್ಟಿದೆ ಎನ್ನುವುದರಲ್ಲಿ ಸಂದೇಹವಿಲ್ಲ.

ಮರಾಠೀ ಶಬ್ದರತ್ನಾಕರ ಎಂಬ ಕೋಶದ ಪರಿಶಿಷ್ಟದಲ್ಲಿ ಮುಲಗಾ ಶಬ್ದವು ಸಂಸ್ಕೃತದ "ಮೂಲಕ" ಶಬ್ದದಿಂದ ಹುಟ್ಟಿದುದೆಂದು ಸೂಚಿಸಿದೆ. ಆದರೆ "ಮೂಲಕ" ಶಬ್ದಕ್ಕೆ ಮಗ ಇಲ್ಲವೇ ಮಗು ಎಂಬ ಅರ್ಥವಿಲ್ಲವೆಂಬುದನ್ನೂ, ಸಂಸ್ಕೃತದಲ್ಲಿನ ಮೂಲ ಮತ್ತು ಮೂಲಕ ಎಂಬ ಶಬ್ದಗಳು ಮರಾಠಿಯಲ್ಲಿ ಮೂಳ ಮತ್ತು ಮೂಳೇಂ ಎಂಬ ರೂಪದಲ್ಲಿ ಬಳಸಲ್ಪಡುತ್ತವೆಂಬುದನ್ನೂ ಕೋಶಕಾರರು ಗಮನಿಸಿಲ್ಲ.

ಮರಾಠಿಯಲ್ಲಿ ಸಾಹಿತ್ಯವು ಬಹಳ ಬೆಳೆದಿದೆಯಾದರೂ, ದಿನನಿತ್ಯದ ಬಳಕೆಗೆ ಆವಶ್ಯಕವಿರುವ ಮತ್ತು ಮನೆವಾರ್ತೆಯ ಬಳಕೆಗೆ ಬೇಕಾಗುವ ಹಲವು ಶಬ್ದಗಳು ಅವರಲ್ಲಿ ಇಂದಿಗೂ ಇಲ್ಲ. ಅಂದರೆ ಮರಾಠಿಯಲ್ಲಿ ಸಂಸ್ಕೃತದ "ಪುತ್ರ" ಶಬ್ದದ ರೂಪಾಂತರ ಪೂತ್ ಶಬ್ದವಾಗಲೀ ದುಹಿತಾ ಶಬ್ದದ ರೂಪಾಂತರ ಧೂವ ಶಬ್ದವಾಗಲೀ ಇಲ್ಲವೇ ಇಲ್ಲ. ಅಲ್ಲದೇ ಮಕ್ಕಳು ಚಿಕ್ಕಂದಿನಿಂದಲೇ ಬಹಳ ಕುತೂಹಲದಿಂದ ಆಲಿಸುವ "ಕಹಣಿ = ಕಥೆ" ಎಂಬ ಶಬ್ದವೂ ಇಲ್ಲ. ಅದರ ಬದಲಿಗೆ ಸಂಸ್ಕೃತ "ಕಥಾ" ಶಬ್ದವಿದೆ. ಕಥಾ ಶಬ್ದವು ಕೊಂಕಣಿಯಲ್ಲಿಯೂ ಇದೆಯಾದರೂ "ಕಥ್ = ಹೇಳು: ಬಣ್ಣಿಸು" ಎಂಬ ಧಾತುವಿನಿಂದ ರೂಪಾಂತರ ವಾದ "ಕಹ್" ಧಾತುವಿಗೆ "ಅಣ" ಪ್ರತ್ಯಯವು ಕೂಡಿ ಹುಟ್ಟಿದ "ಕಹಣಿ" ಶಬ್ದವು ಕೂಡ ಇದೆ ಮತ್ತು ಅದು ಕಆಣಿ = ಕಾಣಿ ಎಂದು ಉಚ್ಚರಿಸಲ್ಪಡುತ್ತದೆ. ಕಹ್ ಧಾತುವಿನ ಭಾವನಾಮ "ಕಹಣೆ = ಹೇಳಿಕೆ ಎಂಬರ್ಥದ ಶಬ್ದವು ಕೊಂಕಣಿಯ ಕೆಲವು ಹಳೆಯ ಪದ್ಯಗಳಲ್ಲಿ ಕೇಳಬರುತ್ತದೆಯೇ ಹೊರತು ಈಗ

ಅದರ ಬಳಕೆ ಇಲ್ಲ. ಆದರೆ ಅದರ ಒಂದು ಹಳೆಯ ರೂಪವು ಕಹಾಂ = ಖಿಃಂ = ಅನ್ನುತ್ತಾರೆ ಅಂತೆ; ಎಂಬುದು ಉಳಿದಿದೆ.

ಹೀಗಾದುದರಿಂದ ಮರಾಠಿಯಲ್ಲಿ ಮಗ (=Son) ಮತ್ತು ಹುಡಗ (=Boy) ಎನ್ನಲು ಮುಲಗಾ ಎಂಬ ಒಂದೇ ಶಬ್ದವನ್ನೂ ಮಗಳು (= Daughter) ಮತ್ತು ಹುಡಗಿ (=Girl) ಎನ್ನಲು ಮುಲಗೀ ಎಂಬ ಒಂದೇ ಶಬ್ದವನ್ನೂ ಬಳಸಬೇಕಾಗಿದೆ.

ಚೇಡೊ ಎಂಬ ಶಬ್ದವು ಸಂಸ್ಕೃತದ "ಚೇಟಃ =ದಾಸ; ಸೇವಕ" ಎಂಬ ಶಬ್ದದ ರೂಪಾಂತರವಾಗಿರುತ್ತದೆ. ಸಾರಸ್ವತ ಬ್ರಾಹ್ಮಣರು ಚೇಡೊ ಎಂಬ ಶಬ್ದವನ್ನು ಮನೆಗೆಲಸಕ್ಕೆ ನೇಮಿಸಿದ ಕೆಳವರ್ಗದ ಆಳುಗಳಿಗಾಗಿ ಬಳಸುತ್ತಾರೆ. ಹಾಗೆಯೇ ಮನೆಯ ಹೊರಗಿನ ಕೆಲಸಕ್ಕೆ ನೇಮಿಸಿದ ಹೆಣ್ಣನ್ನು ಚೇಡೂಂ ಅನ್ನುತ್ತಾರೆ. ಚೇಡೀ ಎಂಬ ಶಬ್ದದ ಅರ್ಥವು "ಸೂಳೆ" ಎಂದಿರುತ್ತದೆ. ಕೊಚ್ಚಿಯಲ್ಲಿ ಇಂದಿಗೂ "ಚೇಟೋ" ಎಂಬ ಮೂಲರೂಪವೇ ಬಳಕೆಯಲ್ಲಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಕ್ರೈಸ್ತರು, ಮತ್ತು ಕೆಳವರ್ಗದ ಕೊಂಕಣಿ ಹಿಂದುಗಳು ಚೇಡೊ = ಹುಡಗ = Boy ಚೇಡೂಂ = ಹುಡಗಿ = Girl ಎಂಬ ಅರ್ಥದಲ್ಲಿ ಬಳಸುತ್ತಾರೆ. ಸಾರಸ್ವತ ಬ್ರಾಹ್ಮಣರು Boy = ಚರಕೋ; ಚೆಲೊ Girl = ಚೆಲೀ ಎಂಬ ಶಬ್ದಗಳನ್ನು ಮತ್ತು ಮಗು ಅನ್ನಲು "ಚೆಲಡುಂ" ಎಂಬ ಶಬ್ದವನ್ನು ಬಳಸುತ್ತಾರೆ. ಚೆಲೊ, ಮತ್ತು ಚೆಲೀ ಶಬ್ದಗಳ ಮೂಲವು ಯಾವುದೆಂದು ನಿಶ್ಚಿತವಾಗಿ ಹೇಳಲಾಗುವುದಿಲ್ಲವಾದರೂ-ಅವುಗಳ ಮೂಲವು-ಮುಂದೆ ಕೊಡ ಲಾಗುವ ಪ್ರಯೋಗಗಳೇ ಆಗಿರಬೇಕು. ಬ್ರಾಹ್ಮಣಚೇಲಃ[1] = ಬ್ರಾಹ್ಮಣ ರೂಪ ದವ; ಬ್ರಾಹ್ಮಣೀಚೇಲೀ = ಬ್ರಾಹ್ಮಣಿಯ ರೂಪದವಳು ಎಂಬ ಪ್ರಯೋಗಗಳು ಸಂಸ್ಕೃತ ಸಾಹಿತ್ಯದಲ್ಲಿ ದೊರೆಯುತ್ತವೆ. ಹಾಗೆಯೇ ಬೌದ್ಧ ಸಾಹಿತ್ಯದಲ್ಲಿ ಚೇಲುಕಃ = ನವಶಿಷ್ಯ ಎಂಬ ಅರ್ಥದ ಶಬ್ದವಿದೆ. ಹಿಂದಿಯಲ್ಲಿ "ಚೇಲಾ" ಅಂದರೆ "ಶಿಷ್ಯ" ಎಂಬ ಅರ್ಥವಿದೆ. "ಚೆಲೊ" ಶಬ್ದದ ಅಲ್ಪಾರ್ಥಕ ಶಬ್ದವು "ಚೆಲಡುಂ" ಎಂದಾಗಿದೆ. ಅಲ್ಲದೇ ಕೊಂಕಣಿಯಲ್ಲಿ ಹುಡುಗ ಎಂಬ ಅರ್ಥದ "ಚರಕೊ" ಎಂಬ ಶಬ್ದವಿದ್ದರೂ ಅದರ ಸ್ತ್ರೀ ಲಿಂಗರೂಪವಿಲ್ಲ. ಚರಕೊ ಶಬ್ದದ ಮೂಲವು "ಚರಕಃ = ತಿರುಗೂಳಿ ವಿದ್ಯಾರ್ಥಿ" ಎಂಬ ಶಬ್ದವಾಗಿರಬಹುದು. ಬಂಗಾಲಿಯಲ್ಲಿ ಹುಡಗ ಎಂಬ ಅರ್ಥದಲ್ಲಿ "ಛೇಲೇ" ಎಂಬ ಶಬ್ದವಿದ್ದರೂ

---

1. Sanskrit English Dictionary Sir Monier M. Williams M. A.

ಹುಡುಗಿ ಎಂಬ ಅರ್ಥದಲ್ಲಿ "ಛೇಲೀ" ಶಬ್ದವಿಲ್ಲ. ಬದಲಿಗೆ "ಮೋಯೋ = ಹುಡಗಿ" ಶಬ್ದವಿದೆ.

ಸಾರಸ್ವತ ಬ್ರಾಹ್ಮಣರಲ್ಲಿ "ಗಂಡ" ಎಂಬ ಅರ್ಥದಲ್ಲಿ "ಬಾಮ್ಹಣ್ ಎಂಬ ಶಬ್ದವನ್ನು ಬಳಸುತ್ತಾರಾದರೂ ಬ್ರಾಹ್ಮಣೇತರರು ಘೋವ್ ಇಲ್ಲವೇ ಘೋವೊ ಎಂಬ ಶಬ್ದವನ್ನು ಬಳಸುತ್ತಾರೆ. ಬೇರೆ ಕೆಲವರು ದಾದಲೊ ಎಂಬ ಶಬ್ದವನ್ನು ಬಳಸುತ್ತಾರೆ. ಹೆಂಡತಿ ಮತ್ತು ಹೆಂಗಸು ಎಂಬ ಎರಡು ಅರ್ಥಗಳಲ್ಲಿ "ಬಾಇಲ" ಎಂಬ ಶಬ್ದವು ಸಾರ್ವತ್ರಿಕವಾಗಿ ಬಳಸಲ್ಪಡುತ್ತದೆ. ಮರಾಠಿಯಲ್ಲಿ ಅದು ಬಾಯಕೋ (= ಬಾಇ + ಕೋ) ಎಂಬ ರೂಪದಲ್ಲಿ ಬಳಸಲ್ಪಡುತ್ತದೆ.

ಕೊಂಕಣಿಯಲ್ಲಿ "ಬಾಇಲ" ಎಂಬ ಶಬ್ದವು "ಹೆಂಡತಿ ಮತ್ತು "ಹೆಂಗಸು" ಎಂಬ ಎರಡು ಅರ್ಥಗಳಲ್ಲಿ ಬಳಸಲ್ಪಡುತ್ತಿದೆಯಾದುದರಿಂದ ಅದು ಎರಡು ಮೂಲಗಳಿಂದ ರೂಪಾಂತರವಾಗಿರಬೇಕು. ಸಂಸ್ಕೃತದ "ಭಾರ್ಯಾ" ಶಬ್ದವು ಪ್ರಾಕೃತದಲ್ಲಿ 'ಭಾರಿಯಾ' ಎಂದು ಮಾರ್ಪಡುತ್ತದೆ. ಅದು ತರುವಾಯ ನಡುವಿನ 'ರ' ಲೋಪವಾಗಿ ಮತ್ತು "ಯ"ಕಾರವು "ಲ"ಕಾರವಾಗಿ ಮಾರ್ಪಟ್ಟು "ಭಾಇಲಾ = ಹೆಂಡತಿ" ಎಂಬ ಅರ್ಥ ಕೊಡುವುದು. "ಯ"ಕಾರವು "ಲ"ಕಾರವಾದ ಉದಾಹರಣೆಗಳು ಮುಂದಿನಂತಿವೆ:—ಸಂಸ್ಕೃತ – ಯಷ್ಟಿ = ಪ್ರಾಕೃತ – ಲಟ್ಠೀ = ಕೊಂಕಣಿ–ಲಾಠೀ = ದೊಣ್ಣೆ. ಸಂಸ್ಕೃತ–ಯುಗ = ಪ್ರಾಕೃತ–ಲುಗ = ಕೊಂಕಣಿ–ನುಗ = ಕನ್ನಡ "ನೊಗ". ಕನ್ನಡದ ನೊಗವು ಕೊಂಕಣಿಯ ನುಗದ ರೂಪಾಂತರವೆಂದು ಬೇರೆ ಹೇಳಬೇಕಾಗಿಲ್ಲ. ಹಾಗೆಯೇ ಸಂಸ್ಕೃತದ "ಮಹಿಲಾ = ಹೆಂಗಸು" ಎಂಬ ಶಬ್ದದಲ್ಲಿನ "ಮ"ಕಾರವು "ಬ"ಕಾರವಾಗಿ ಮತ್ತು "ಹ" ಲೋಪವಾಗಿಯೂ "ಬಇಲಾ" ಎಂದಾಗಲು ಸಾಧ್ಯವಿದೆ. 'ಮ'ಕಾರವು 'ಬ' ಕಾರವಾದ ಉದಾಹರಣೆಗಳು ಮುಂದಿನಂತಿವೆ:—ಸಂಸ್ಕೃತ–ಮುಂಡ = ಕೊಂಕಣಿ –ಬೋಡ = ಮಂಡೆ (ಬೋಳು). ಮುಂಡಕಃ = ಬೊಡಕೊ = ಬೋಳು ತಲೆ ಅಥವಾ ಕಡಿದು ತೆಗೆದ ತಲೆ. ಮುಂಡಯ = ಬೋಡಾಯ್ = ಬೋಳಿಸು = ಕೇಸು.

ಕೊಂಕಣಿಯಲ್ಲಿ ತಾಯಿಯನ್ನು ಸಂಬೋಧಿಸಲು ಸಂಸ್ಕೃತದ "ಮಾತಾ" ಶಬ್ದದ ರೂಪಾಂತರ "ಮಾಯ್ = ತಾಯಿ" ಎಂಬ ಶಬ್ದವಿದೆ ಮತ್ತು ಅದು ತಾಯಿಗಾಗಿ ಮಾತ್ರ ಬಳಸಲ್ಪಡುತ್ತದೆ. ಆದುದರಿಂದ ಅದನ್ನು ಬೇರೆ ಸ್ತ್ರೀಯರಿಗಾಗಿ "ಅಮ್ಮ" ಎಂಬ ಅರ್ಥದಲ್ಲಿ "ಬಾಯ್" ಎಂದು ರೂಪಾಂತರಿಸಿ ಬಳಸುತ್ತಾರೆ ಮತ್ತು ಅದು ಸಂಬೋಧನೆಯಲ್ಲಿ "ಬಾಯೋ = ಅಮ್ಮಾ" ಎಂದಾಗುತ್ತದೆ.

ಆ "ಬಾಯ್" ಎಂಬ ಶಬ್ದವು ಸ್ತ್ರೀಯರ ಹೆಸರಿನೊಂದಿಗೆ ಕೂಡುವಾಗ "ಬಾಯಿ" ಎಂಬ ರೂಪವನ್ನು ತಾಳುತ್ತದೆ. ಉದಾ:—"ಕಮಲಾಬಾಯಿ = ಕಮಲಮ್ಮ", "ಸೀತಾಬಾಯಿ = ಸೀತಮ್ಮ" ಇತ್ಯಾದಿ. ಅಂದರೆ ಬಾಯ್ ಅಥವಾ ಬಾಯಿ ಎಂಬ ಶಬ್ದವು ಕನ್ನಡದಲ್ಲಿನ ಅಮ್ಮ ಇಲ್ಲವೇ ಅವ್ವ ಶಬ್ದಕ್ಕೆ ಸರಿಯಾಗಿರುತ್ತದೆ. ಕೊಂಕಣಿಯಲ್ಲಿನ ಆ "ಬಾಯಿ" ಶಬ್ದವು ಮರಾಠಿಯಲ್ಲಿ "ಬಾಈ" ಎಂದಾಗುತ್ತದೆ,

ಕೊಂಕಣಿಯಲ್ಲಿ "ತಂದೆ" ಎಂಬ ಅರ್ಥದಲ್ಲಿ ಸಂಸ್ಕೃತದ "ವಪ್ರಾ" ಶಬ್ದವು ಬಪ್ಪಾ ಆಗಿ ಈಗ "ಬಾಪ್ಪಾ" ಆಗಿ ಮಾರ್ಪಟ್ಟಿದೆ. ಆ ಬಾಪ್ಪಾ ಶಬ್ದದ ತರುವಾಯ ಸಮ್ಮಾನಸೂಚಕವಾಗಿ "ಊಯ್" 'ಊಜ್' ಇಲ್ಲವೇ "ಊಜೂ" ಎಂಬ ಪ್ರತ್ಯಯಗಳು ಕೂಡುತಿದ್ದವು. ಮತ್ತು ಅದರ ರೂಪಗಳು–ಬಾಪೂಯ್, ಬಾಪೂಜ್ ಮತ್ತು ಬಾಪೂಜೂ ಎಂದಾಗುತಿದ್ದವು. ತರುವಾಯ "ಜ"ಕಾರವು "ಸ"ಕಾರವಾಗಿ ಮಾರ್ಪಟ್ಟು ಈಗ "ಬಾಪುಸ್ ಮತ್ತು ಬಾಪುಸು" ಎಂಬ ರೂಪಗಳು ಬಳಸಲ್ಪಡುತ್ತವೆ. ಆ ಶಬ್ದಗಳ ವಿಭಕ್ತಿ ರೂಪಗಳು ಮುಂದಿನಂತಾಗುತ್ತವೆ. ಬಾಪ್ಪಾಕ = ಬಾಪುಯಾಕ = ಬಾಪುಸೂಕ = ತಂದೆಯನ್ನು ತಂದೆಗೆ. ಬಾಪ್ಪಾ ಎಂಬುದರ ಸಂಕ್ಷಿಪ್ತ ರೂಪವು 'ಬಾಪ್' ಎಂದಿರುತ್ತದೆ. ಅದು ಬಾಬ್ ಎಂದು ಮಾರ್ಪಟ್ಟು ಅನ್ಯ ಜನರ ಹೆಸರಿನೊಂದಿಗೆ ಕೂಡಿ ಕನ್ನಡದಲ್ಲಿನ ಅಯ್ಯ ಅಥವಾ ಅಪ್ಪ ಎಂಬಂತೆ ಅರ್ಥ ಕೊಡುತ್ತದೆ. ಕನ್ನಡದಲ್ಲಿ—ನಾರಣಪ್ಪ ಇಲ್ಲವೇ ನಾರಣಯ್ಯ—ಎಂಬುದು ಕೊಂಕಣಿಯಲ್ಲಿ ನಾರಾಯ್ಣಬಾಬ್ ಇಲ್ಲವೇ ನಾಣ್ಣಬಾಬ್ ಆಗುತ್ತದೆ.

ಹಾಗೆಯೇ ಗಂಡಸು ಮತ್ತು ಗಂಡಾಳು (ವೀರ) ಎಂಬರ್ಥದಲ್ಲಿ ದಾವಲೊ ಇಲ್ಲವೇ ದಾರಲೊ ಎಂಬ ಶಬ್ದವು ಕೊಂಕಣಿಯಲ್ಲಿ ಬಳಸಲ್ಪಡುತ್ತದೆ. ಮತ್ತು ಆ ಶಬ್ದವು ಜ್ಞಾನೇಶ್ವರಿಯಲ್ಲಿ "ದಾದುಲಾ" ಎಂಬ ರೂಪದಿಂದ ಕೊಂಕಣಿಯಲ್ಲಿನ ಅರ್ಥದಲ್ಲಿಯೇ ಹಲವು ಸರ್ತಿ ಬಳಸಲ್ಪಟ್ಟಿದೆ:—**"ಬಿರುದಾಚೆ ದಾದುಲೆ ಹಿಂವತಾತಿ"** = ಹೆಸರಾದ ವೀರರು( = ಗಂಡುಗಳು) ನಡುಗುತ್ತಾರೆ. ಮರಾಠಿ ಶಬ್ದಕೋಶಕಾರರು ದಾದುಲಾ ಮತ್ತು ದಾದಲಾ ಎಂಬ ಶಬ್ದಗಳನ್ನು ತಮ್ಮ ಕೋಶಗಳಲ್ಲಿ ಕೊಟ್ಟು ಅವುಗಳಿಗೆ "ಗಂಡ" ಎಂಬ ಅರ್ಥವನ್ನು ಕೊಟ್ಟಿದ್ದಾರೆ. ಅಂದರೆ ಆ ಕೋಶಕಾರರಿಗೆ "ದಾವಲಾ" ಶಬ್ದದ ಪರಿಚಯವಿಲ್ಲವೆಂದು ತೋರಿಸಿಕೊಟ್ಟಿದ್ದಾರೆ.1 ಹಾಗೆಯೇ ಕೊಂಕಣಿಯಲ್ಲಿ ಗಂಡು ಜಾತಿಯದು

1. ದಾದಲಾ–ಲ್ಯಾ = Husband: The Arya-Bhushan School-Dictionary ದಾವಲಾ; ದಾದುಲಾ = ನವರಾ; ಮರಾಠೀ ಶಬ್ದರತ್ನಾಕರ.

ಅನ್ನಲು "ದಾದಲೆಂ ಇಲ್ಲವೇ ದಾರಲೆಂ" ಎಂಬ ವಿಶೇಷಣವನ್ನೂ, ಹೆಣ್ಣು ಜಾತಿಯದು ಅನ್ನಲು "ಬಾಇಲೆಂ" ಎಂಬ ವಿಶೇಷಣವನ್ನೂ ಬಳಸುತ್ತಾರೆ. ಇವುಗಳಾಗಲೀ ಇವುಗಳ ಸಮಾನಾರ್ಥಕ ಬೇರೆ ಪ್ರಾಕೃತ ಶಬ್ದಗಳಾಗಲೀ ಮರಾಠಿಯಲ್ಲಿ ಇಲ್ಲ. ಅವುಗಳ ಬದಲಿಗೆ—ಆ ಅರ್ಥಗಳಲ್ಲಿ ಪಾರಸಿ ಭಾಷೆಯ "ನರ್ = ಗಂಡು" ಮತ್ತು "ಮಾದೀ = ಹೆಣ್ಣು" ಎಂಬ ಶಬ್ದಗಳಿವೆ. ನರ್ ಎಂಬ ಶಬ್ದವು ಮೂಲದಲ್ಲಿ ಸಂಸ್ಕೃತವೇ ಆಗಿದ್ದರೂ ಅದರ "ಗಂಡು ಜಾತಿಯದು" ಎಂಬ ಅರ್ಥವು ಪಾರಸಿಯ ಸ್ವಂತದ್ದಾಗಿರುತ್ತದೆ. ಪಾರಸೀ ಭಾಷೆಯ ಮೂಲವು ಕೂಡ ಸಂಸ್ಕೃತವೇ ಆಗಿರುತ್ತದೆ.

ಹುಟ್ಟು ಮತ್ತು ಆಗು ಎಂಬ ಅರ್ಥದಲ್ಲಿ ಸಂಸ್ಕೃತದ "ಜನ್" ಧಾತುವು ಕೊಂಕಣಿಯಲ್ಲಿ "ಜಾ" ಎಂಬ ರೂಪಾಂತರದಿಂದ ಎಲ್ಲ ಕಾಲಗಳ ಆಖ್ಯಾತ ಪ್ರತ್ಯಯುಗಳನ್ನೂ ಕೃತ್ ಪ್ರತ್ಯಯುಗಳನ್ನೂ ಧರಿಸುತ್ತದೆ. ಉದಾ:—ವರ್ತಮಾನಕಾಲ (ಪ್ರಾಚೀನ ರೂಪ)–ಜಾಇ; (ಈಗಿನ ರೂಪ) ಜಾತಾ = ಆಗುತ್ತದೆ: ಹುಟ್ಟುತ್ತದೆ. ಭೂತಕಾಲ–ಜಾಲೆಂ = ಹುಟ್ಟಿತು; ಆಯಿತು. ಪೂರ್ಣಭೂತ–ಜಾಲ್ಲೆಂ = ಹುಟ್ಟಿತ್ತು; ಆಗಿತ್ತು. ಪೂರ್ಣವರ್ತಮಾನ – ಜಾಲಾಂ = ಆಗಿದೆ; ಹುಟ್ಟಿದೆ. ಭೂತಕಾಲಿಕಕೃದಂತ–ಜಾಲೆಲೆಂ = ಹುಟ್ಟಿದ; ಆದ. ಅಭ್ಯಾಸಾರ್ಥಕ ಮತ್ತು ತಾತ್ಕಾಲಿಕಭೂತ–ಜಾತಾಲೆಂ = (೧) ಆಗುವುದಿತ್ತು; ಹುಟ್ಟುವುದಿತ್ತು. (೨) ಆಗುತ್ತಲಿತ್ತು; ಹುಟ್ಟುತ್ತಲಿತ್ತು. ಭವಿಷ್ಯತ್ಕಾಲ–ಜಾತಲೆಂ = ಹುಟ್ಟುವುದು; ಆಗುವುದು. ಸಂಭಾವ್ಯಭವಿಷ್ಯ–ಜಾಇತ = ಆದೀತು; ಆಗಬಹುದು; ಹುಟ್ಟೀತು; ಹುಟ್ಟಬಹುದು. ಸಂಭಾವ್ಯಕೃದಂತ – ಜಾವಚೆಂ = ಆಗಲಿರುವ; ಆಗಬಹುದಾದ; ಹುಟ್ಟಬಹುದಾದ. ಭವಿಷ್ಯತ್ಕಾಲಿಕಕೃದಂತ–ಜಾತಲೆಂ = ಆಗುವಂಥ: ಹುಟ್ಟುವಂಥ. ಕೃನ್ನಾಮ–ಜಾವಪ: ಜಾವಣೆಂ = ಆಗುವಿಕೆ; ಹುಟ್ಟುವಿಕೆ. ಕೃದಂತವಿಶೇಷಣ–ಜಾಇ ಇಲ್ಲವೇ ಜಾಯ್ = ಹುಟ್ಟು; ಹುಟ್ಟಿನ. ಉದಾ:— ಜಾಯ್ ಗೂಣು = ಹುಟ್ಟುಗುಣ. ಪೂರ್ವಕಾಲಿಕಕೃದಂತ–ಜಾಉನ; ಜಾಉನಿ; ಜಾಉನು = ಹುಟ್ಟಿ; ಆಗಿ. ಕ್ರಿಯಾವಿಶೇಷಣಗಳು – ಜಾಉಂ = ಹುಟ್ಟಲಿಕ್ಕೆ; ಆಗಲಿಕ್ಕೆ; ಆಗಲು. ಜಾತನಾ = ಆಗುವಾಗ; ಹುಟ್ಟುವಾಗ. ಜಾತಾಂ = ಆಗುತ್ತ; ಹುಟ್ಟುತ್ತ. ಜಾಈತ = ಆಗುತ್ತ; ಆಗುತ್ತಲೇ; ಹುಟ್ಟುತ್ತ; ಹುಟ್ಟುತ್ತಲೇ. ಉದಾ:—ಜಾಈತ ವಚ್ಚಾ = ಆಗುತ್ತ ಹೋಗುತ್ತದೆ; ಹುಟ್ಟುತ್ತಲೇ ಇರುತ್ತದೆ. ಜಾತಚಿ = ಆದ ತರುವಾಯ; ಹುಟ್ಟಿದ ಬಳಿಕ. ಜಾಲ್ಯಾರಿ = ಆದರೆ; ಹುಟ್ಟಿದರೆ. ಸಂಕೇತಾರ್ಥ – ಜಾತೆಂ = ಆಗಬಹುದಿತ್ತು; ಹುಟ್ಟಬಹು

ದಿತ್ತು. ಅಜ್ಞಾರ್ಥ–ಜಾಂ = ಆಗಲಿ; ಹುಟ್ಟಲಿ. ವಿಧ್ಯರ್ಥ–ಜಾಇಜೆ = ಆಗತಕ್ಕದ್ದು; ಆಗಬೇಕು; ಹುಟ್ಟಬೇಕು; ಬೇಕು. ಈಗಿನ ಕೊಂಕಣಿಯಲ್ಲಿ "ಬೇಕು" ಎಂಬರ್ಥದಲ್ಲಿ "ಜಾಇಜೆ"ಯೊಳಗಿನ "ಜೆ"ಯನ್ನು ಲೋಪ ಮಾಡಿ "ಜಾಇ" ಎಂಬ ರೂಪವನ್ನು ಬಳಸುತ್ತಾರೆ.

ಕೊಂಕಣಿಯಲ್ಲಿ "ಜಾ" ಕ್ರಿಯೆಯ ಇಷ್ಟೆಲ್ಲ ರೂಪಗಳು ಇರುತಿರಲಾಗಿ ಮರಾಠಿಯಲ್ಲಿ "ಜಾ" ಕ್ರಿಯೆಯ ಭೂತಕಾಲಿಕ "ಕೃದಂತ–ಝಾಲೇಲೆಂ" ಮತ್ತು ಸಾಮಾನ್ಯ ಭೂತಕಾಲಿಕ ರೂಪಗಳ ಹೊರತು ಬೇರೆ ಕಾಲದ ರೂಪಗಳಿಲ್ಲ. ಮಾತ್ರವಲ್ಲ ಮೂಲಧಾತುವೇ ಇಲ್ಲ. ಹೀಗಿರುವಾಗ ಮರಾಠಿಯಲ್ಲಿ ಝಾಲೇಲೆಂ ಮತ್ತು ಝಾಲೇಂ ಮೊದಲಾದ ರೂಪಗಳು ಎಲ್ಲಿಂದ ಮತ್ತು ಹೇಗೆ ಬಂದವು ಎಂಬುದನ್ನು ಕೊಂಕಣಿಯು ಮರಾಠಿಯು ಒಳಭೇದವೆನ್ನುವ ಮರಾಠಿ ಪಂಡಿತರು ಸಮರ್ಪಕವಾಗಿ ಉತ್ತರಿಸಲಾರರು. ಹಳೆಯ ಮರಾಠಿ ಸಾಹಿತ್ಯದಲ್ಲಿ—ಜಾಲೇಂ ಮತ್ತು ಜಾಲೇಲೆಂ ಎಂಬ ಶುದ್ಧ ಕೊಂಕಣಿ ರೂಪಗಳೇ ಕಂಡುಬರುತ್ತವೆ. ಅಲ್ಲದೇ ಅಂಥ ರೂಪಗಳು ಭಾರತವರ್ಷದಲ್ಲಿನ ಇತರ ಯಾವ ಪ್ರಾಕೃತ ವಿಭೇದವಲ್ಲಿಯೂ ಇಲ್ಲದಿರುವುದರಿಂದ — ಮರಾಠಿಯು ಕೊಂಕಣಿಯಿಂದಲೇ ಹುಟ್ಟಿದುದೆಂದು ಸಿದ್ಧಪಡಿಸಲು ಬೇರೆ ಪ್ರಮಾಣಗಳ ಆವಶ್ಯಕತೆ ಇಲ್ಲ. ಜ್ಞಾನೇಶ್ವರಿಯಲ್ಲಿ "ಜಾ" ಕ್ರಿಯೆಯ ಬೇರೊಂದು ಪ್ರಯೋಗವಿದೆ:— **"ಸುಖ ಜಾವೋಂ ಲಾಗಲೇಂ ಫಾವಾ ॥ ೭–೧೯೧ ॥** = ಸುಖವು ಪ್ರಾಪ್ತವಾಗಲುತೊಡಗಿತು ಅದರಲ್ಲಿನ "ಜಾವೋಂ" ಎಂಬ ರೂಪವು ಕೊಂಕಣಿಯಲ್ಲಿನ "ಜಾಉಂ = ಆಗಲು" ಎಂಬುದರ ರೂಪಾಂತರವಾಗಿರುತ್ತದೆ. ಜ್ಞಾನೇಶ್ವರಿಯಲ್ಲಿ ಸರ್ವತ್ರ ಕೊಂಕಣಿಯ "ಉಂ" ಪ್ರತ್ಯಯವನ್ನು "ಓಂ" ಎಂಬ ರೂಪದಲ್ಲಿ ಬಳಸಲಾಗಿದೆ. ಹಾಗೆಯೇ ಎಲ್ಲೆಲ್ಲಿಯೂ "ಓ" ಎಂಬ ಸ್ವರದ ಬದಲಿಗೆ "ವೋ" ಎಂಬ ವ್ಯಂಜನವನ್ನು ಬಳಸಲಾಗಿದೆ. ಉದಾ:—ಓಗರ = ವೋಗರ.

ಮರಾಠಿಯಲ್ಲಿ ಕೊಂಕಣಿಯಲ್ಲಿರುವಂತೆಯೇ "ಇರು" ಎಂಬರ್ಥದಲ್ಲಿ ಸಂಸ್ಕೃತದ "ಅಸ್" ಧಾತುವು ಬಳಸಲ್ಪಡುತ್ತದೆ. ಅದು ಕೊಂಕಣಿಯಲ್ಲಿ "ಆಸ" ಮತ್ತು "ಆಹ" ಎಂಬ ರೂಪದಿಂದ ಎಲ್ಲ ಕಾಲಾರ್ಥಗಳಲ್ಲಿಯೂ ಬಳಸಲ್ಪಡುತ್ತದೆ. "ಆಹ" ಎಂಬ ರೂಪವು ಗ್ರಾಮ್ಯವಾಗಿದೆ. ಆದರೆ ಮರಾಠಿಯಲ್ಲಿ ಅಸ್ ಕ್ರಿಯೆಯ ರೂಪಗಳು ಅನಿಯಮಿತವಾಗಿರುವುದು ಮಾತ್ರವಲ್ಲದೇ ಪೂರ್ಣ ಭೂತಕಾಲದ "ಇತ್ತು; ಇದ್ದನು" ಮುಂತಾದ ಅರ್ಥದ ರೂಪಗಳೇ ಇಲ್ಲ. ಆ ಅರ್ಥಗಳಲ್ಲಿ ಹಿಂದೀ ಭಾಷೆಯ "ಹೋ" = ಆಗು ಮತ್ತು ಇರು

ಎಂಬರ್ಥದ ಕ್ರಿಯೆಯ ಸಂಕೇತಾರ್ಥದ ರೂಪಗಳು ಭೂತಕಾಲಿಕ ಅರ್ಥದಲ್ಲಿ ಬಳಸಲ್ಪಡುತ್ತವೆ. ಉದಾ:—ಹೋತೇಂ = ಇತ್ತು; ಹೋತಾ = ಇದ್ದನು: ಹೋತೀ = ಇದ್ದಳು ಇತ್ಯಾದಿ. ಮರಾಠಿಯಲ್ಲಿ ಇಂಥ ಹಲವು ಅವ್ಯವಸ್ಥೆಗಳಿವೆ. ಕೊಂಕಣಿಯಲ್ಲಿನ "ಜಾ" = ಆಗು: ಹುಟ್ಟು" ಎಂಬ ಕ್ರಿಯೆಯ ಬದಲಿಗೆ ಮರಾಠಿಯಲ್ಲಿ ಹಿಂದೀ ಭಾಷೆಯ "ಹೋ" ಎಂಬ ಕ್ರಿಯೆಯು ಬಳಸಲ್ಪಡುತ್ತದೆ. ತಮಾಷೆಯೆಂದರೆ ಮರಾಠಿಯಲ್ಲಿ ಆ "ಹೋ" ಕ್ರಿಯೆಗೆ ಭೂತಕಾಲಿಕ ಆಖ್ಯಾತಗಳೇ ಇಲ್ಲ. ಆಯಿತು, ಆದನು, ಆದಳು ಎಂಬರ್ಥದಲ್ಲಿ – ಝಾಲೇಂ, ಝಾಲಾ, ಝಾಲೀ ಎಂಬ ರೂಪಗಳು ಬರುತ್ತವೆ,

ಸಂಸ್ಕೃತದಲ್ಲಿ ಭೂತಕಾಲಿಕ ಕೃದಂತವು ಸಂದರ್ಭಾನುಸಾರವಾಗಿ ಸಾಮಾನ್ಯ ಭೂತ: ಆಸನ್ನಭೂತ( = ಪೂರ್ಣವರ್ತಮಾನ) ಮತ್ತು ಪೂರ್ಣಭೂತ ಎಂಬ ಮೂರೂ ಕಾಲಾರ್ಥಗಳನ್ನು ಸೂಚಿಸುತ್ತದೆ. ಅದೇ ರೀತಿಯಲ್ಲಿ—ಸಂಸ್ಕೃತ ಕೃದಂತದಿಂದಲೇ ಮಾರ್ಪಾಟು ಹೊಂದಿದ ಕೊಂಕಣಿ ಭೂತಕಾಲಿಕ ಕ್ರಿಯೆಗಳು ಕೊನೆಯಲ್ಲಿನ ಸ್ವರವನ್ನು ಪರಿವರ್ತಿಸುವುದರಿಂದಲೇ ಹಿಂದೆ ಹೇಳಿದ ಮೂರೂ ಕಾಲಗಳ ಅರ್ಥಗಳನ್ನು ಕೊಡುತ್ತವೆ. ಆದರೆ ಮರಾಠಿಯಲ್ಲಿ ಸಹಾಯಕ ಕ್ರಿಯೆ ಇಲ್ಲದೇ ಆ ಅರ್ಥಗಳನ್ನು ಸೂಚಿಸಲಾಗುವುದಿಲ್ಲ. ಉದಾ:—ಕೊಂಕಣಿ–ರಾಮು ಆಯಲೊ = ಮರಾಠಿ–ರಾಮಾ ಆಲಾ = ರಾಮನು ಬಂದನು. ಕೊಂ. ರಾಮು ಆಯಲಾ = ಮ. ರಾಮಾ ಆಲಾ ಆಹೇ = ರಾಮನು ಬಂದಿದ್ದಾನೆ. ಕೊಂ. ರಾಮು ಆಇಲ್ಲೊ = ಮ. ರಾಮಾ ಆಲಾ ಹೋತಾ = ರಾಮನು ಬಂದಿದ್ದನು. ಕೊಂ. ರಾಮು ಕಾಲಿ ಕಹಿಂ ಆಸೀಲೊ? = ಮ. ರಾಮಾ ಕಾಲ್ ಕುಠಂ ಹೋತಾ? = ರಾಮನು ನಿನ್ನೆ ಎಲ್ಲಿದ್ದ?

ಸಂಸ್ಕೃತದಲ್ಲಿ ಕಾಲಸೂಚಕ ಕ್ರಿಯಾವಿಶೇಷಣಗಳಾಗಿರುವ ಇದಾನೀಂ = ಈಗ: ಇಷ್ಟು ಹೊತ್ತಿಗೆ; ತದಾನೀಂ = ಆಗ; ಅಷ್ಟು ಹೊತ್ತಿಗೆ; ಕದಾ = ಯಾವಾಗ; ಎಷ್ಟು ಹೊತ್ತಿಗೆ ಮುಂತಾದ ಶಬ್ದಗಳು ದಕ್ಷಿಣ ಕನ್ನಡ ಜಿಲ್ಲೆಯ ಸಾರಸ್ವತ ಬ್ರಾಹ್ಮಣರು ನುಡಿಯುವ ಕೊಂಕಣಿಯಲ್ಲಿ ಅನುಕ್ರಮವಾಗಿ— ಏವನಾ = ಏವ್ದನಾ: ತೆದನಾ = ತೆದ್ದನಾ; ಕೆದನಾ = ಕೆದ್ದನಾ ಎಂಬ ಎರಡೆರಡು ರೂಪಗಳಲ್ಲಿ ಬಳಸಲ್ಪಡುತ್ತವೆ. ನಮ್ಮ ಕ್ರೈಸ್ತ ಬಂಧುಗಳು ಅವುಗಳನ್ನು ಕ್ರಮವಾಗಿ— ಏದವಾಂ = ಏನ್ನಾ; ತೆದವಾಂ = ತೆನ್ನಾ; ಕೆದವಾಂ = ಕೆನ್ನಾ ಎಂಬ ಎರಡೆರಡು ರೂಪಗಳಲ್ಲಿ ಬಳಸುತ್ತಾರೆ. ಅವುಗಳೇ ಮರಾಠಿಯಲ್ಲಿ ಏಥವಾಂ =

ಎವ್ಹಾಂ; ತೇಧವಾ = ತೆವ್ಹಾಂ; ಕೇಧವಾಂ = ಕೆವ್ಹಾಂ ಎಂಬ ರೂಪಗಳಲ್ಲಿ ಬಳಸಲ್ಪಡುತ್ತವೆ.

ಸಂಸ್ಕೃತದಲ್ಲಿನ ಅತ್ರ; ತತ್ರ; ಕುತ್ರ; ಯತ್ರ ಎಂಬ ಸ್ಥಾನವಾಚಕ ಸಪ್ತಮ್ಯಂತ ಶಬ್ದಗಳು ಕೊಂಕಣಿಯಲ್ಲಿ ಮುಂದೆ ಕೊಟ್ಟಿರುವಂತೆ ಎರಡೆರಡು ರೂಪಗಳಲ್ಲಿ ಬಳಸಲ್ಪಡುತ್ತವೆ. ಅಹಿಂ (ಹಾಂ) = ಇಲ್ಲಿ. ತಹಿಂ (ಥಾಂ) = ಅಲ್ಲಿ. ಕಹಿಂ (ಖಾಂ) = ಎಲ್ಲಿ? ಜಹಿಂ = ಎಲ್ಲಿ (ಸಂಬಂಧಾರ್ಥಕ) ಮತ್ತು ಎಥಾಂ (ಹೆತಾಂ) = ಇತ್ತ; ಇಲ್ಲಿ. ತೆಥಾಂ = ಅತ್ತ; ಅಲ್ಲಿ. ಕೆಥಾಂ = ಎತ್ತ; ಎಲ್ಲಿ. ಜೆಥಾಂ = ಎತ್ತ; ಎಲ್ಲಿ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಚಲಿತವಿದ್ದ ಹಳೆಯ ಹಾಡುಗಳಲ್ಲಿ ಎಥೆಂ, ತೆಥೆಂ ಎಂಬ ರೂಪಗಳೂ ಬಳಕೆಯಲ್ಲಿದ್ದವು, ಉದಾ;—ಎಥೆಂ ಎಥೆಂ ಬೈಸ ರೇ ಮೋರಾ । ಮೋರ್ ಗೇಲೋ ಕುಂದಾಪೂರ್ ತೀರಾ ॥ ಈ ಬಗೆಯ ಪ್ರಯೋಗಗಳು, ಪೋರ್ತುಗೀಸರು ಗೋವವನ್ನು ಹಿಡಿದ ತರುವಾಯ ವಲಸೆ ಬಂದವರಿಂದ—ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಳಕೆಗೆ ಬಂದವುಗಳಾಗಿರಲೂ ಬಹುದು. ಮರಾಠಿಯಲ್ಲಿ ಅಹಿಂ, ತಹಿಂ ಎಂಬಂಥ ರೂಪಗಳಿಲ್ಲ; ಏಥಽಂ, ತೇಥಽಂ, ಕುಠಽಂ ಮುಂತಾದ ರೂಪಗಳಿವೆ. ಇಥಽಂ, ತಿಥಽಂ ಎಂಬ ರೂಪಗಳೂ ಇವೆ. ಕೊಂಕಣಿಯಲ್ಲಿನ ಅಹಿಂ, ತಹಿಂ ಎಂಬ ರೂಪಗಳು ಬುದ್ಧದೇವನ ಪ್ರವಚನಗಳ ಕಾಲದಿಂದ ಬಳಕೆಯಲ್ಲಿದ್ದವುಗಳಾಗಿದ್ದು ತರುವಾಯದ ಎಲ್ಲ ಪ್ರಾಕೃತ ಸಾಹಿತ್ಯದಲ್ಲಿ ಬಳಸಲ್ಪಟ್ಟಿವೆ. ಸೇತುಬಂಧ ಕಾವ್ಯದಲ್ಲಿಯೂ ಅವೇ ರೂಪಗಳಿವೆ (೭–೭೧). ಹಿಂದಿನ ಉದಾಹರಣೆಗಳಿಂದ ಕೊಂಕಣಿಯು ಮರಾಠಿಗಿಂತ ಪ್ರಾಚೀನವೆಂದು ಮಾತ್ರವಲ್ಲ ಪ್ರಾಕೃತ ಶಬ್ದಸಂಪತ್ತಿನಲ್ಲಿ ಕೂಡ ಮರಾಠಿಗಿಂತ ಹೆಚ್ಚು ಸಂಪನ್ನವಾಗಿದೆಯೆಂದು ಸಿದ್ಧವಾಗುತ್ತದೆ.

## ೭

ಕೊಂಕಣಿ ಮತ್ತು ಮರಾಠಿಗಳ ಉತ್ಪತ್ತಿ ಹಾಗೂ ರಚನೆಗಳ ಕುರಿತು ಪಲವು ಮಂದಿ ಪಾಶ್ಚಾತ್ಯ ವಿದ್ವಾಂಸರು ಮತ್ತು ಅವರನ್ನು ಅನುಸರಿಸಿ ಕೆಲವು ಭಾರತೀಯ ಹಾಗೂ ಮರಾಠೀ ವಿದ್ವಾಂಸರು — ಮಂದಿಗೊಂದು ಬಗೆಯ ಅಭಿಪ್ರಾಯವನ್ನು ಹೊರಗೆಡವಿದ್ದಾರೆ. ಇವರೆಲ್ಲರು ತಮ್ಮ ಅಭಿಪ್ರಾಯಗಳನ್ನು ರೂಪಿಸಲು ಪ್ರಮಾಣವನ್ನಾಗಿ ಪರಿಶೀಲಿಸಿದ ಕೊಂಕಣಿಯೆಂದರೆ ಪೋರ್ತುಗೀಸರ

ನಿರಂತರವಾದ ಭ್ರಷ್ಟಾಚಾರಗಳಿಂದ ಜರ್ಜರಿತವಾಗಿ ರೂಪುಗೆಟ್ಟ ಗೋವದ ಕೊಂಕಣಿಯಾಗಿತ್ತೆನ್ನಬಹುದು. ಮತ್ತು ಅವರು[1] ಪ್ರಮಾಣವನ್ನಾಗಿ ಸ್ವೀಕರಿಸಿದ ಗ್ರಂಥಗಳೆಂದರೆ ಕ್ರಿಸ್ತ ಮತದ ಪ್ರಚಾರಕ್ಕಾಗಿ ಆ ಭಾಷೆಯನ್ನು ಕಲಿಯಲು ಪೊರ್ತುಗೀಸ್ ಪಾದ್ರಿಗಳು — ಭಾಷೆಯ ಶುದ್ಧತೆಯ ಕಡೆಗೆ ಸ್ವಲ್ಪವಾದರೂ ಲಕ್ಷಕೊಡದೇ ಅವಸರ ಅವಸರವಾಗಿ ರೋಮನ್ ಲಿಪಿಯಲ್ಲಿ ಬರೆದುಹಾಕಿದ ಗ್ರಂಥಗಳೆನ್ನಬಹುದು. ಆದುದರಿಂದ ಆ ಪರದೇಶೀ ಪಾದ್ರಿಗಳು ರಚಿಸಿದ ಒಂದೆರಡು ಶಬ್ದಕೋಶಗಳನ್ನು ಮತ್ತು ವ್ಯಾಕರಣ ಗ್ರಂಥಗಳನ್ನು ಇದರಲ್ಲಿ ವಿಮರ್ಶಿಸಲಾಗುವುದು.

1598ನೆಯ ಇಸವಿಯಲ್ಲಿ ಬ್ರಿಟಿಷ್ ಪಾದ್ರಿ ಥಾಮಸ್ ಸ್ಟೀಫನ್ಸ್ ಎಂಬವರು ಪೊರ್ತುಗೀಸ್ ಭಾಷೆಯಲ್ಲಿ ಬರೆದ ಹಾಗೂ 1640ರಲ್ಲಿ ಬೇರೆ ಯವರು ತಿದ್ದಿ ಪ್ರಕಟಿಸಿದ "Arte da Lingua Canarim" ಅಂದರೆ ಕನ್ನಡ ಭಾಷೆಯ ವಿದ್ಯೆ, ಮತ್ತು ಮನ್ನಣೆ ಕೊಡುವ ಅಧಿಕಾರಿಗಳು "Arte de Grammatica da Lingua Bramana" ಅಂದರೆ ಬ್ರಾಹ್ಮಣರ ಭಾಷೆಯ ವ್ಯಾಕರಣದ ವಿದ್ಯೆ ಎಂದು ಕರೆದ ಪುಸ್ತಕದ 1857ನೆಯ ಇಸವಿಯಲ್ಲಿ ಎರಡನೆಯ ಸರ್ತಿ ಮುದ್ರಿಸಿದ ವ್ಯಾಕರಣದ ಒಂದು ಪ್ರತಿಯು ನನ್ನ ಬಳಿ ಯಲ್ಲಿದೆ. ಇದರಲ್ಲಿ ಶ್ರೀ ಕುಂಞಾರಿವಾರಾ ಎಂಬ ಪೊರ್ತುಗೀಸ ಅಧಿಕಾರಿ ಯೊಬ್ಬರು ತನ್ನ ಭಾಷೆಯಲ್ಲಿ ಬರೆದ ಕೊಂಕಣಿ ಭಾಷೆಯ ಐತಿಹಾಸಿಕ ಪ್ರಬಂಧ ಮಾತ್ರವಲ್ಲದೇ ಕ್ರಿಸ್ತ ಪುರಾಣದಲ್ಲಿನ ಕೆಲವು ಪದ್ಯಗಳೂ, ಬೇರೆ ಕೆಲವು ಕವಿತೆ ಗಳೂ, ಕೆಲವು ಗಾದೆಗಳೂ, ಕೊಂಕಣಿಯಲ್ಲಿ ಮಗ್ಗಿ ಕೋಷ್ಟಕವೂ ಇದೆ.

1883ನೆಯ ಇಸವಿಯಲ್ಲಿ ಜೆಜುಇಟ್ ಪಾದ್ರಿ Angelus Francis Xevier Maffei ಎಂಬವರಿಂದ ರಚಿಸಲ್ಪಟ್ಟು ಮಂಗಳೂರಿನ ಬಾಸೆಲ್ ಮಿಶನ್ ಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟ ಇಂಗ್ಲೀಷು – ಕೊಂಕಣಿ;

---

1. The missionaries of Goa and Mangalore, to whom we are largely indebted for our knowledge of Konkani, are of similar opinion, and contend that Konkani is not a dialect of Marathi. Their view is, however, based on too narrow a conception of deterioration of some other form of speech, and if such were the case Konkani would certainly be a separate language, as would almost every dialect of all over India. G. A. Grierson; Linguistic Survey of India, Vol. VII (1905) p. 164.

ಕೊಂಕಣಿ – ಇಂಗ್ಲೀಷು ಶಬ್ದಕೋಶದ ಒಂದು ಪ್ರತಿಯೂ, ಇಂಗ್ಲೀಷಿನಲ್ಲಿ ಬರೆದ ಕೊಂಕಣಿ ವ್ಯಾಕರಣದ ಪ್ರತಿಯೂ ನನ್ನ ಬಳಿಯಲ್ಲಿವೆ.

1893ನೆಯ ಇಸವಿಯಲ್ಲಿ Monsenhor Sebestian Rodolpho Dalgado ಎಂಬವರಿಂದ ರಚಿಸಲ್ಪಟ್ಟು ಮುಂಬಯಿಯ ಇಂದುಪ್ರಕಾಶ ಮುದ್ರಣಾಲಯದಲ್ಲಿ ಕೊಂಕಣಿ ಶಬ್ದಗಳನ್ನು ನಾಗರೀ ಅಕ್ಷರಗಳಿಂದ ಮುದ್ರಿಸಿದ ಕೊಂಕಣಿ ಪೊರ್ತುಗೀಸ್ ಶಬ್ದಕೋಶದ ಒಂದು ಪ್ರತಿಯೂ ನನ್ನ ಬಳಿಯಲ್ಲಿದೆ. ಇವುಗಳಲ್ಲದೇ ಭಾರತೀಯ ಕ್ರೈಸ್ತ ವಿದ್ವಾಂಸರು ಪ್ರಕಟಿಸಿದ ಬೇರೆ ಎರಡು ಕೊಂಕಣಿ ಇಂಗ್ಲೀಷು ಶಬ್ದಕೋಶಗಳೂ ಎರಡು ವ್ಯಾಕರಣ ಗ್ರಂಥಗಳೂ ಇವೆ. ಆದರೆ ಅವುಗಳ ವಿಮರ್ಶೆ ಆವಶ್ಯಕವಲ್ಲವೆಂದು ಅವುಗಳ ಹೆಸರುಗಳನ್ನು ಕೊಡುವುದಿಲ್ಲ.

ಇವುಗಳಲ್ಲದೇ ನಾನು ಸ್ವತಃ ಸಂಗ್ರಹಿಸಿದ ಸಾಧಾರಣ ಹದಿನೆರಡು ಸಾವಿರ ಕೊಂಕಣಿ ಶಬ್ದಗಳು ನನ್ನ ಬಳಿಯಲ್ಲಿವೆ. ಮಾಫೇಯಿಯವರ ಕೋಶದಲ್ಲಿ ಶಬ್ದ ಸಂಖ್ಯೆಯು ಐದು ಸಾವಿರಕ್ಕಿಂತ ಹೊರಗೆ ಹೋಗಿಲ್ಲ. ದಾಲ್ಗಾದೋರವರ ಕೋಶದಲ್ಲಿ ಸಾಧಾರಣ ಏಳು ಸಾವಿರ ಶಬ್ದಗಳಿವೆ. ಅದರಲ್ಲಿ ಪೊರ್ತುಗೀಸ್ ಶಬ್ದಗಳ ಸಂಖ್ಯೆಯು ಸಾಧಾರಣ ಎರಡುವರೆ ಸಾವಿರವಿದೆ.

ಪಾದ್ರಿ ಥಾಮಸ್ ಸ್ಟೀಫನ್ಸ್‌ರವರ ವ್ಯಾಕರಣದಲ್ಲಿ ಬಂದಿರುವ ವರ್ತಮಾನ ಕಾಲಿಕ ಕ್ರಿಯಾರೂಪಗಳು ಕೊಚ್ಚಿಯ ಸಾರಸ್ವತ ಬ್ರಾಹ್ಮಣರಲ್ಲಿ ಇಂದಿಗೂ ಬಳಕೆಯಲ್ಲಿವೆ. ಉದಾ:— ಹಾಂಉ ಕರಿತಾಂ = ನಾನು ಮಾಡುತ್ತೇನೆ. ತುಂವ್ ಕರಿತಾಸಿ = ನೀನು ಮಾಡುತ್ತಿ, ತೊ ಕರಿತಾ = ಅವನು ಮಾಡುತ್ತಾನೆ ಇತ್ಯಾದಿ. ಆ ವ್ಯಾಕರಣದಲ್ಲಿನ ವಿಭಕ್ತಿರೂಪಗಳಲ್ಲಿ ಎರಡು ಬಗೆಯ ಪ್ರಯೋಗ ಗಳು ದೊರೆಯುತ್ತವೆ. ಬಹುಶಃ ಎರಡನೆಯ ಆವೃತ್ತಿಯ ಮುದ್ರಣ ಕಾಲದಲ್ಲಿ ಈ ಎರಡು ಬಗೆಯ ಭೇದಗಳನ್ನು ಮಾಡಿರಬೇಕೆಂದು ತೋರುತ್ತದೆ. ಮೊದಲ ನೆಯ ಭೇದದಲ್ಲಿ "ಅಕಾರಾಂತ"ದಿಂದ "ಓಕಾರಾಂತ"ದ ವರೆಗಿನ ಎಲ್ಲ ನಾಮಪದಗಳ ವಿಭಕ್ತಿರೂಪಗಳು ಪ್ರಾಚೀನ ರೀತಿಯಲ್ಲಿಯೇ ಅಂದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಮತ್ತು ಕೊಚ್ಚಿ ಕಡೆಯಲ್ಲಿನ ಸಾರಸ್ವತ ಬ್ರಾಹ್ಮಣರು ನುಡಿಯುವಾಗ ಬಳಸುವ ರೀತಿಯಲ್ಲಿಯೇ ಇವೆ. ಎರಡನೆಯ ಭೇದವಲ್ಲಿನ ಎಲ್ಲ ವಿಭಕ್ತಿರೂಪಗಳು, ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಕ್ರೈಸ್ತರು, ಗೋವದ ಜನರು ಮತ್ತು ಮರಾಠಿಗರು ಬಳಸುವ ರೀತಿಯಲ್ಲಿವೆ. ಅಂದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಸಾರಸ್ವತರು ಸಂಸ್ಕೃತದಲ್ಲಿನ "ವರ್ತಿ = ದೀಪದ ಬತ್ತಿ" "ಭಿಂತಿ =

ಗೋಡೆ" ಎಂಬ ಶಬ್ದಗಳ ಪ್ರಥಮ ವಿಭಕ್ತಿಯ ಏಕವಚನವನ್ನು "ವಾತಿ=ಬತ್ತಿ" "ಭಿಂತಿ = ಗೋಡೆ" ಮತ್ತು ಬಹುವಚನವನ್ನು "ವಾತ್ಯೋ = ಬತ್ತಿಗಳು" "ಭಿಂತ್ಯೋ=ಗೋಡೆಗಳು" ಎಂಬ ರೂಪಗಳಲ್ಲಿ ಬಳಸುತ್ತಾರೆ. ಆದರೆ ಕ್ರೈಸ್ತರು, ಗೋವದ ಕೊಂಕಣಿಗರು ಮತ್ತು ಮರಾಠಿಗರು ಆ ಶಬ್ದಗಳನ್ನು ಏಕವಚನದಲ್ಲಿ "ವಾತ್" "ಭಿಂತ್" ಎಂಬ ರೂಪಗಳಲ್ಲಿಯೂ ಬಹುವಚನದಲ್ಲಿ "ವಾತೀ" "ಭಿಂತೀ" ಎಂಬ ರೂಪಗಳಲ್ಲಿಯೂ ಬಳಸುತ್ತಾರೆ. ಪಾದ್ರಿ ಮಾಫೆಯಿಯವರ ವ್ಯಾಕರಣ ಪುಸ್ತಕದಲ್ಲಿಯೂ ಇವೇ ರೂಪಗಳಿವೆ. ಪಾದ್ರಿ ಸ್ಟೀಫೆನ್ಸರ ವ್ಯಾಕರಣ ಪುಸ್ತಕದಲ್ಲಿನ ಸಂಭಾವ್ಯ ಭವಿಷ್ಯತ್ಕಾಲದ ತೃತೀಯ ಪುರುಷ ಬಹುವಚನದಲ್ಲಿ ಆಗಿರುವ ಒಂದು ತಪ್ಪು ಮೊದಲಿನಿಂದ ಕೊನೆಯ ತನಕ ಹಾಗೆಯೇ ಸಾಗಿದೆ ಅಂದರೆ "ಸೊದಿತೀತ=ಹುಡುಕಿಯಾರು" "ನಿದೆತೀತ=ಮಲಗಿಯಾರು" ಎಂಬ ರೂಪಗಳ ಬದಲಿಗೆ "ಸೊದಿತೀ" "ನಿದೆತೀ" ಎಂಬ ರೂಪಗಳು ಮುದ್ರಿಸಲ್ಪಟ್ಟಿವೆ. ಅಂದರೆ ಕ್ರಿಯಾಪದಗಳ ಕೊನೆಯಲ್ಲಿನ "ತಕಾರವು" ಲೋಪಹೊಂದಿದೆ. ಇತರ ಎಲ್ಲ ವಿಷಯಗಳಲ್ಲಿ ಪಾದ್ರಿ ಸ್ಟೀಫನ್ಸ್‌ರವರ ಕೃತಿಯು ಉತ್ತಮವಾಗಿದೆಯೆನ್ನ ಬಹುದು. ಈ ಪರದೇಶೀ ಪಾದ್ರಿಗಳು ಕೊಂಕಣಿ ಶಬ್ದಗಳನ್ನು ಬರೆಯಲು ರೋಮನ್ ಲಿಪಿಯನ್ನು ಬಳಸಿದುದರಿಂದಾಗಿ ಹಲವು ಶಬ್ದಗಳ ರೂಪಗಳು ಕೆಟ್ಟಿವೆ.

ಕನ್ನಡ ಭಾಷೆಯ ವಿದ್ಯೆ ಅಥವಾ ಬ್ರಾಹ್ಮಣರ ಭಾಷೆಯ ವ್ಯಾಕರಣ ವೆಂದರೆ ಕೊಂಕಣಿ ಭಾಷೆಯ ವ್ಯಾಕರಣವೆಂದು ಈಗಾಗಲೇ ಸ್ಪಷ್ಟವಾಗಿದ. ಈ ವ್ಯಾಕರಣವನ್ನು ರಚಿಸಿದ ಪಾದ್ರಿ ಥಾಮಸ್ ಸ್ಟೀಫನ್ಸ್‌ರಿಗೆ ಮರಾಠಿ ಭಾಷೆಯ ಸಾಮಾನ್ಯ ಜ್ಞಾನವೂ ಇದ್ದಿತೆಂದು ಅವರು ರಚಿಸಿದ ಕ್ರಿಸ್ತಪುರಾಣದ ಮೇಲಿಂದ ತಿಳಿದುಬರುತ್ತದೆ. ಅಲ್ಲದೇ ಮರಾಠಿಯು ಕೊಂಕಣಿಯಿಂದ ಭಿನ್ನವೆಂದು ಎಣಿಸ ಲಾಗುತ್ತಿದ್ದರೂ ಒಂದು ಭಾಷೆಯ ಶಬ್ದಗಳನ್ನು ಇನ್ನೊಂದು ಭಾಷೆಯಲ್ಲಿ ಬೆರಸಿದರೆ ಹೆಚ್ಚು ಜನರಿಗೆ ಅರ್ಥವಾಗುತ್ತದೆಂದು ಕೂಡ ಅವರು ಅರಿತು ಕೊಂಡಿದ್ದರೆಂದು ಅವರ ಕ್ರಿಸ್ತಪುರಾಣದ ಪ್ರಸ್ತಾವನೆಯಿಂದ ತಿಳಿದುಬರುತ್ತದೆ. ಅವರು ಆ ಪ್ರಸ್ತಾವನೆಯಲ್ಲಿ ಮುಂದಿನಂತೆ ಅಂದಿದ್ದಾರೆ:—

**"ಹೆಂ ಸರ್ವ ಮರಾಠಿಯೇ ಭಾಸೇನ ಲಿಹಿಲೇಂ ಆಹೇ, ಹ್ಯಾದೇಸಿಂಚ್ಯಾ ಭಾಸಾಂ ಭಿತುರ ಹೀ ಭಾಸ ಪರಮೇಸ್ವರಾಚ್ಯಾ ವಸ್ತು ನಿರೋಪುಂಸಿ ಯೋಗ್ಯ ಐಸೀ ದಿಸಲೀ ಮ್ಹಣೂನು. ಪಣ ಸುಧ ಮರಾಠಿ ಮಧಿಮಾ ಲೋಕಾಂಸಿ ನಕಳೇ ದೇಖುನು ಹ್ಯಾ**

**ಪುರಾಣಾಚಾ ಫಳು ಬಹುತ ಜನಾಂಸಿ ಸಫಳು ಹೋಉಂಸಿ ಕಾಯು ಕೇಲೇಂ, ಮಾಗಿಲ್ಯಾ ಕವೇಸ್ವರಾಂಚೀ ಬಹುತೇಕೇಂ ಅವಘುಡೇಂ ಉತರೇಂ ಸಾಂಡುನು ಸಾಂಪುಚೇಯಾಂ ಕವೇಸ್ವ ರಾಂಚಿಯೆ ರೀತು ಪ್ರಮಾಣೇ ಆಣಿಯೇಕೇಂ ಸೊಂಪೀಂ ಬ್ರಾಹ್ಮ ಣಾಂಚೇ ಭಾಷೇಚೀಂ ಉತರೇಂ ಠಾಯಿಂ ಠಾಯಿಂ ಮಿಸರಿತ ಕರುನು ಕವಿತ್ವ ಸೋಂಪೇಂ ಕೇಲೇಂ".**

ಅರ್ಥ— ಈ ದೇಶದ ಭಾಷೆಗಳಲ್ಲಿ ದೇವರ ಕಥೆಯನ್ನು ನಿರೂಪಿಸಲು ಮರಾಠಿ ಭಾಷೆಯು ಯೋಗ್ಯವೆಂದು ತೋರಿತು. ಆದುದರಿಂದ ಇದೆಲ್ಲವನ್ನು ಮರಾಠಿ ಭಾಷೆಯಿಂದ ಬರೆದಿದ್ದೇನೆ. ಆದರೆ ಶುದ್ಧ ಮರಾಠಿಯು ಮಧ್ಯಮ ವರ್ಗದ (ಗೋವದ) ಜನರಿಗೆ ತಿಳಿಯುವುದಿಲ್ಲವಾದುದರಿಂದ ಈ ಪುರಾಣದ ಫಲವು ಬಹುಜನರಿಗೆ ಫಲದಾಯಕವಾಗುವಂತೆ ಏನು ಮಾಡಿದೆನೆಂದರೆ ಹಿಂದಿನ ಕವೀಶ್ವರರ ಕಠಿಣ ಶಬ್ದಗಳನ್ನು ತೊರೆದು ಸಾಂಪ್ರತದ ಕವೀಶ್ವರರ ರೀತಿಯಂತೆ ಇನ್ನೂ ಸುಲಭವಾದ ಬ್ರಾಹ್ಮಣರ ಭಾಷೆಯ ಶಬ್ದಗಳನ್ನು ಅಲ್ಲಲ್ಲಿ ಬೆರಸಿ ಕವಿತ್ವವನ್ನು ಸುಲಭಗೊಳಿಸಿದೆನು.

ಹಿಂದಿನ ಇಡೀ ಅಂಶದಲ್ಲಿ ಮರಾಠಿಯದೇ ಅನ್ನಬಹುದಾದ ಶಬ್ದಗಳು:– **"ಅಹಿಲೇಂಆಹೇ" "ಐಸೀ"** ಮತ್ತು **"ಕಾಯ್"** ಎಂಬವುಗಳಾಗಿವೆ. **"ಹೋಉಂಸಿ"** ಎಂಬುದರಲ್ಲಿ **"ಹೋ"** ಕ್ರಿಯೆಯು ಮರಾಠಿಯಾಗಿದ್ದು **"ಉಂಸಿ"** ಎಂಬ ಪ್ರತ್ಯಯವು ಕೊಂಕಣಿಯಾಗಿರುತ್ತದೆ. **"ದೇಖುನು"** ಎಂಬ ರೂಪವು ಎರಡು ಭಾಷೆಗಳಲ್ಲಿಯೂ ಬರುತ್ತದಾದರೂ **"ಆದುದರಿಂದ"** ಎಂಬ ಅರ್ಥದಲ್ಲಿ ಅದರ ಪ್ರಯೋಗವು ಕೊಂಕಣಿಯಾಗಿರುತ್ತದೆ. **"ಶಬ್ದ ಗಳನ್ನು"** ಅಥವಾ **"ನುಡಿಗಳನ್ನು"** ಎಂಬ ಅರ್ಥದ **"ಉತರ"** ಶುದ್ಧ ಕೊಂಕಣಿಯಾಗಿರುತ್ತದೆ. ಆದರೆ **"ಉತರೇಂ"** ಎಂಬ ರೂಪವು ಮರಾಠಿ ಯಾಗಿರುತ್ತದೆ ಹಾಗೂ ಷಷ್ಠೀವಿಭಕ್ತಿಯಲ್ಲಿ **"ಚಾ"** ಪ್ರತ್ಯಯದ ರೂಪವು ಮರಾಠಿಯಾಗಿರುತ್ತದೆ. ಉಳಿದ ಅಂಶವು ಆ ಕಾಲದಲ್ಲಿ ಎರಡು ಭಾಷೆಗಳಿಗೂ ಸಮಾನವಾಗಿತ್ತೆನ್ನಬಹುದು. ಪರದೇಶಿಯೊಬ್ಬನು ನಮ್ಮ ಭಾಷೆಯಲ್ಲಿ ಗ್ರಂಥ ವನ್ನು ರಚಿಸಲು ಸಮರ್ಥನಾದನೆಂಬ ಬಗ್ಗೆ ಮಾತ್ರ ನಾವು ಪಾದ್ರಿ ಸ್ಟೀಫನ್ಸ್ ರನ್ನು ಹೊಗಳಬಹುದೇ ಹೊರತು ಭಾಷೆಯ ದೃಷ್ಟಿಯಿಂದಲ್ಲ. ಏಕೆಂದರೆ ಯಾವನೊಬ್ಬ ಪಾದ್ರಿಯೂ ಶಬ್ದದ ಶುದ್ಧರೂಪದ ಕುರಿತು ಎಚ್ಚರ ವಹಿಸಿಲ್ಲ.

ಪಾದ್ರಿ ಮಾಫೇಯಿಯವರು ರಚಿಸಿದ ಶಬ್ದಕೋಶ ಮತ್ತು ವ್ಯಾಕರಣ

ಗ್ರಂಥಗಳ ಕುರಿತು ಹೇಳುವುದಾದರೆ— ಅವರು ಭಾಷೆಯ ಶುದ್ಧತೆಯ ಕಡೆಗಾಗಲೀ, ಶಬ್ದಗಳ ಅರ್ಥದ ಮೂಲ್ಯದ ಕಡೆಗಾಗಲೀ ಆವಶ್ಯಕವಿದ್ದಷ್ಟು ಲಕ್ಷವನ್ನು ಪೂರೈಸಲಿಲ್ಲ. ಹಿಂದುಗಳ ದೇವರುಗಳ ಹೆಸರು ಬಂದಲ್ಲೆಲ್ಲ ಸುಳ್ಳು ದೇವರು ಎನ್ನಲು ಮಾತ್ರ ಮರೆಯಲಿಲ್ಲ. ಕೆಳವರ್ಗದ ಜನರನ್ನು ಮತಾಂತರಿಸುವುದರಲ್ಲಿ ತೊಡಗಿದ ಆ ಪಾದ್ರಿಗಳು ಆ ಜನರ ಭಾಷೆಯನ್ನು ಸಂಸ್ಕರಿಸುವುದರಲ್ಲಿ ಸ್ವಲ್ಪವಾದರೂ ಶ್ರಮಿಸಲಿಲ್ಲವೆನ್ನಬೇಕು. ಆ ಕೆಳವರ್ಗದ ಜನರಲ್ಲಿ ಮೊದಲೇ ಕೆಟ್ಟಿದ್ದ ಭಾಷೆಯನ್ನು ಆ ಪಾದ್ರಿಗಳು ಮತ್ತಷ್ಟು ಕೆಡಿಸಿದರೆನ್ನಬೇಕು. ಪಾದ್ರಿ ಮಾಫೇಯಿಯವರ ಪುಸ್ತಕಗಳು ಮಂಗಳೂರಲ್ಲಿಯೇ ಮುದ್ರಿಸಲ್ಪಟ್ಟಿದ್ದವು. ಮಂಗಳೂರಿನಲ್ಲಿ ಕೊಂಕಣಿಯಾಡುವ ಜನರಲ್ಲಿ ಹಿಂದುಗಳ ಸಂಖ್ಯೆಯು ಕೂಡ ಸಾಕಷ್ಟು ಇದೆ ಎಂಬುವನ್ನು, ಹಿಂದುಗಳನ್ನು ಕ್ರೈಸ್ತರನ್ನಾಗಿ ಮಾಡಿ ತಮ್ಮ ಶ್ರೇಷ್ಠತೆಯನ್ನು ಅವರ ಮೇಲೆ ಹೇರಲು ಬಂದಿದ್ದ ಆ ಪರದೇಶೀ ಪಾದ್ರಿಯು ಗಣಿಸಲೇ ಇಲ್ಲ. ಅವರು ಬಯಸಿದ್ದರೆ ಕೊಂಕಣಿ ಶಬ್ದಗಳ ಶುದ್ಧರೂಪಗಳನ್ನು ಮತ್ತು ಸರಿಯಾದ ಅರ್ಥಗಳನ್ನು ತಿಳಿದುಕೊಳ್ಳಲು ಸಾರಸ್ವತ ಬ್ರಾಹ್ಮಣರ ನೆರವನ್ನು ಪಡೆಯಬಹುದಾಗಿತ್ತು. ಅವರ ಕೋಶದಲ್ಲಿನ ಒಂದೆರಡು ತಪ್ಪು ರೂಪಗಳನ್ನು ಇಲ್ಲಿ ಕೊಡಲಾಗುವುದು:— ಇಡೊ, ಇಲ್ಲೆಂ, ಕಟ್ಟಿ. ಬೋಯಿಣ್, ಮೊಳಾಬ್. ಆ ಶಬ್ದಗಳು ಸಾರಸ್ವತ ಬ್ರಾಹ್ಮಣರಲ್ಲಿ ಮುಂದಿನಂತೆ ಬಳಕೆಯಲ್ಲಿವೆ:—ವೀಡೊ = ವೀಳ್ಯ; ಇತಲೆಂ ಅಥವಾ ಇತ್ತುಲೆಂ = ಇಷ್ಟು (ಸ್ವಲ್ಪ) ಕರಟಿ = ತೆಂಗಿನಚಿಪ್ಪು; ಭಇಣ = ಸೋದರಿ; ಮ್ಹಾಳುಪ್ ಇಲ್ಲವೇ ಮ್ಹಾಳೊಪ್ = ಬಾನು, ಆಕಾಶ.

ದಾಲ್ಗಾದೋರವರು ತನ್ನ ಶಬ್ದಕೋಶದಲ್ಲಿ ಸಾಧ್ಯವಿದ್ದಮಟ್ಟಿಗೆ ಕೊಂಕಣಿ ಶಬ್ದಗಳ ಶುದ್ಧರೂಪಗಳನ್ನೂ. ಅವುಗಳ ವ್ಯುತ್ಪತ್ತಿಯನ್ನೂ ಕೊಡಲು ಪ್ರಯತ್ನಿಸಿದ್ದಾರೆ. ಆದರೆ ಅವರಿಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಸಾರಸ್ವತ ಬ್ರಾಹ್ಮಣರು ನುಡಿಯುವ ಕೊಂಕಣಿಯ ಪರಿಚಯವಿಲ್ಲದುದರಿಂದ ಮತ್ತು ವ್ಯುತ್ಪತ್ತಿಯನ್ನು ಕಂಡುಹಿಡಿಯಲು ಸಾಧ್ಯವಾಗಿರದ ಸಂದರ್ಭಗಳಲ್ಲಿ ಅವರು ಕೊಂಕಣಿ ಶಬ್ದಗಳಿಗಿಂತ ಮರಾಠಿ ಶಬ್ದಗಳು ಶುದ್ಧವೆಂದೆಣಿಸಿದುದರಿಂದ, ಗೋವದ ಕೊಂಕಣಿಯಲ್ಲಿ ಬಳಕೆಯಲ್ಲಿರುವ ಭೈಣ್. ಮೊಳಾಬ್. ಶಿಗಮೊ ಎಂಬ ಶಬ್ದಗಳ ಬದಲಿಗೆ ಬಹೀಣ. ಮಳಭ. ಶಿಮಗೊ ಎಂಬ ಮರಾಠಿ ರೂಪಗಳನ್ನು ಕೊಟ್ಟಿದ್ದಾರೆ ಮತ್ತು ಖೆಲೆಂ ಎಂಬ ಕ್ರಿಯಾಪದದ ಬದಲಿಗೆ ಮರಾಠಿಯ ಖಾಲೇಂ ಎಂಬ ಕ್ರಿಯಾರೂಪವನ್ನು ಕೊಟ್ಟಿದ್ದಾರೆ.

ಅವರು ಕೊಟ್ಟ ಈ ನಾಲ್ಕು ರೂಪಗಳೂ ಸಂಪೂರ್ಣ ತಪ್ಪಾಗಿದ್ದು, ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಸಾರಸ್ವತ ಬ್ರಾಹ್ಮಣರು ಬಳಸುವ ಭಣಿ, ಮ್ಹಾಳುಪ್, ಶಿಗಮಾ (ಸ್ತ್ರೀಲಿಂಗ) ಮತ್ತು ಖೆಲೆಂ ಎಂಬ ರೂಪಗಳೇ ಶುದ್ಧ ವಾದವುಗಳೆಂದು ಮುಂದೆ ವಿವರಿಸಲಾಗುವುದು. ಭಣಿ ಎಂಬ ಶಬ್ದವು ಸಂಸ್ಕೃತದ "ಭಗಿನೀ" ಶಬ್ದದ ಪ್ರಾಕೃತ ರೂಪಾಂತರವಾಗಿರುತ್ತದೆ. ಸಂಸ್ಕೃತ ದಲ್ಲಿನ "ಮರುತ್ಪಥ" ಎಂಬ ಶಬ್ದವು ಪ್ರಾಕೃತದಲ್ಲಿ "ಮಲುಪ್ಪಹ" ಎಂದು ರೂಪಾಂತರವಾಗುತ್ತದೆ. ತರುವಾಯ ಅದು ಕೊಂಕಣಿಯಲ್ಲಿ "ಮಾಳುಪ್ಪಹ" ಆಗಿ ಕೊಂಕಣಿಯಲ್ಲಿನ ಉಚ್ಚಾರ ಕ್ರಮಕ್ಕನುಸಾರವಾಗಿ "ಮ್ಹಾಳುಪ್ಪ" ಎಂದಾಗು ತ್ತದೆ. ಪ್ರಾಕೃತ ಶಬ್ದಗಳಲ್ಲಿ ಮಹಾಪ್ರಾಣಾಕ್ಷರವು ಅಥವಾ "ಹ"ಕಾರವು ಶಬ್ದದ ಯಾವ ಸ್ಥಾನದಲ್ಲಿಯೇ ಇರಲಿ, ಕೊಂಕಣಿಯಲ್ಲಿ ಅದರ ಉಚ್ಚಾರವು ಮೊದಲನೆಯ ವರ್ಣದೊಂದಿಗೆ ಆಗುತ್ತದೆ. ಉದಾ:—

| | | | |
|---|---|---|---|
| ಸಂಸ್ಕೃತ | ಪ್ರಾಕೃತ | ಕೊಂಕಣಿ | ಕನ್ನಡ |
| ಮರುತ್ಪಥ | ಮಲುಪ್ಪಹ | ಮ್ಹಾಳುಪ | ಬಾನು |
| ಉಪಾನಹ್ | ಉಆಣಹ್ | ವ್ಹಾಣ | ಮೆಟ್ಟು |
| ಅತ್ರ | ಎತ್ಥಂ | ಏಥಾಂ = ಹೇತಾಂ | ಇತ್ತ |
| ,, | ಅಹಿಂ | ಹಂಇ | ಇಲ್ಲಿ |
| ತತ್ರ | ತಹಿಂ | ಥಂಇ | ಅಲ್ಲಿ |
| ,, | ತೇತ್ಥಂ | ತೇಥಾಂ | ಅತ್ತ |
| ಕ್ವ | ಕಹಿಂ | ಖಂಇ | ಎಲ್ಲಿ? |
| ಮಧು | ಮಹು | ಮ್ಹವು | ಜೇನು |
| ದಧಿನ್ | ದಹಿಂ | ಧಂಇ | ಮೊಸರು |
| ಪ್ರಭಾತಮ್ | ಪಹಾಲಂ | ಪಹಾಲೆಂ = ಫಾಲೆಂ | ಬೆಳಗು |
| ,, | | ಪಹಾಂತೆಂ = ಫಾಂತೆಂ | ಮುಂಜಾವು |
| ಉಷ್ಣ | ಉನ್ಹ | ಹುನ | ಬಿಸಿ |
| ಅಸ್ತಿ | ಅಸ್ಸಿ | ಅಹಿ = ಹಇ | ಅಹುದು |

ಹಿಂದಿನ ಉದಾಹರಣೆಗಳ ಮೇಲಿಂದ ಶುದ್ಧ ಪ್ರಾಕೃತ ಶಬ್ದಗಳೇ ಕೊಂಕಣಿ ಯಲ್ಲಿ ಅವುಗಳಲ್ಲಿನ ಮಹಾಪ್ರಾಣವು ಮೊದಲಿನ ವರ್ಣದೊಂದಿಗೆ ಉಚ್ಚರಿ ಸಲ್ಪಟ್ಟು ಬಳಕೆಯಲ್ಲಿವೆಯೆಂದು ಸಿದ್ಧವಾಗುತ್ತದೆ.

ಗೋವದ ಕೊಂಕಣಿಯಲ್ಲಿ "ಶಿಗಮೊ = ಹೋಳಿಹುಣ್ಣಿಮೆ" ಎಂಬ ಶಬ್ದವು ಪುಲ್ಲಿಂಗದಲ್ಲಿ ಬಳಸಲ್ಪಡುತ್ತದೆ. ಆದರೆ ಅದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ "ಶಿಗಮಾ" ಎಂಬುದಾಗಿ ಸ್ತ್ರೀಲಿಂಗ ವಿಶೇಷಣವಾಗಿರುತ್ತದೆ. ಅಂದರೆ ಅದು ಒಂಟಿಯಾಗಿ ಬಳಸಲ್ಪಡುವುದಿಲ್ಲ. ಅದರೊಂದಿಗೆ "ಪುನ್ನವ = ಹುಣ್ಣಿಮೆ" ಇಲ್ಲವೇ "ಹೋಳಿ" ಶಬ್ದವು ಇದ್ದೇ ಇರುತ್ತದೆ. ಉದಾ:—ಶಿಗಮೆಪುನ್ನವ; ಶಿಗಮೇಹೋಳಿ. ಮರಾಠಿಗರು ಅದನ್ನು "ಶಿಮಗಾ" ಎಂಬ ರೂಪದಲ್ಲಿ ಬಳಸುತ್ತಾರೆ. ಮತ್ತು ಅವರಿಗೆ ಅದರ ಮೂಲಾರ್ಥ ಕೂಡ ಗೊತ್ತಿಲ್ಲ. ಶಿಗಮಾ ಎಂಬ ಶಬ್ದವು ಸಂಸ್ಕೃತದ "ಶೀತಗಮನಾ = ಚಳಿಹೋಗುವಂಥ" ಎಂಬ ಶಬ್ದದ ಕೊಂಕಣಿ ರೂಪಾಂತರವಾಗಿದೆ. ಹಿಂದೀ ಕವಿತೆಗಳಲ್ಲಿ "ಶೀತಗಮನಾ ಪೂರ್ಣಿಮಾ" ಎಂದು ಫಾಲ್ಗುಣ ಮಾಸದ ಹುಣ್ಣಿಮೆಗಾಗಿ ಬಳಸಲ್ಪಡುತ್ತದೆ. ಅಂದರೆ ಹಿಂದೆ ಹೋಳೀ ಹುಣ್ಣಿಮೆಯನ್ನು "ಶೀತಗಮನಾ ಪೂರ್ಣಿಮಾ" ಎನ್ನುತಿದ್ದರೆಂದು ತಿಳಿದುಬರುತ್ತದೆ. ದಾಲ್ಗಾದೋರವರು ಹಲವು ಕೊಂಕಣಿ ಶಬ್ದಗಳಲ್ಲಿನ ವರ್ಣಗಳು ಮರಾಠಿಯಲ್ಲಿ ಸ್ಥಾನಾಂತರವಾಗಿರುವುದನ್ನು ಗಮನಿಸಿಲ್ಲ. ಉದಾ:— ಸಂಸ್ಕೃತ ಫಲಾಹಾರ: ಕೊಂಕಣಿ ಫಳಾರ: ಮರಾಠಿ ಫರಾಳ. ಸಂಸ್ಕೃತ–ವಿಷ್ಟಿಗೃಹ = ಕೊಂಕಣಿ – ಬಿಥಾರ = ಮರಾಠಿ – ಬಿರ್ಹಾಡ = ಬಾಡಿಗೆ ಮನೆ. ಆದುದರಿಂದ ಅವರು ಮರಾಠಿಯಲ್ಲಿನ 'ಶಿಮಗಾ' ಎಂಬ ಶಬ್ದವು ಶುದ್ಧವೆಂದು ತಿಳಿದು ತನ್ನ ಕೋಶದಲ್ಲಿ 'ಶಿಗಮಾ' ಶಬ್ದದ ಬದಲಿಗೆ "ಶಿಮಗೊ" ಎಂಬ ಶಬ್ದವನ್ನು ಕೊಟ್ಟಿದ್ದಾರೆ.

ಫಾಲ್ಗುಣ ಮಾಸದ ಹುಣ್ಣಿಮೆಗೆ ಚಳಿಗಾಲವು ಕೊನೆಗೊಳ್ಳುವುದರೊಂದಿಗೆ ವರ್ಷವೂ ಕೊನೆಗೊಂಡು, ಮರುದಿನದಿಂದ ಹೊಸ ವರ್ಷಾರಂಭವೂ ವಸಂತಾಗಮವೂ ಆಗುವುದರಿಂದ ಚಳಿಪ್ರದೇಶದ ಜನರು ಬಹಳ ಉತ್ಸಾಹ ಹಾಗೂ ಸಂಭ್ರಮಗಳಿಂದ ಹೋಳೀ ಹಬ್ಬವನ್ನು ಆಚರಿಸುತ್ತಾರೆ. ಚಳಿಯಿಂದ ಮೈಯ ಚರ್ಮದ ಪರೆಯಾಗಿ, ಕೈ ಕಾಲುಗಳ ತಳಗಳು ಒಡೆದು ನೋವನ್ನು ಅನುಭವಿಸುವ, ಹಾಗೂ ಚಳಿಯನ್ನು ತಾಳಿಕೊಳ್ಳಲಾರದೇ ಮೈಮುರಿದು ಅಗ್ಗಿಷ್ಟಿಕೆಯ ಬಳಿಯಲ್ಲಿಯೇ ಕುಳಿತುಕೊಳ್ಳುತ್ತಿರುವ ಜನರು ಚಳಿದಿನಗಳು ಕಳೆದುಹೋದ ಸಂತಸದಿಂದ ಕೊನೆಯ ಬೆಂಕಿಯನ್ನು ಹೊತ್ತಿಸುವ ದಿನವದು — "ಶೀತಗಮನಾ ಪೂರ್ಣಿಮಾ" ಅಥವಾ ಕೊಂಕಣಿಯಲ್ಲಿ "ಶಿಗಮೇಚಿ ಪುನ್ನವ = ಚಳಿಹೋಗುವ ಹುಣ್ಣಿಮೆ. ಆದುದರಿಂದಲೇ ಉತ್ತರ ಭಾರತದ ಜನರು ಚಳಿದಿನಗಳು ಕಳೆದು ಹೋಗಿ ವಸಂತಋತು ಆರಂಭವಾಗುತ್ತದೆಂಬ ಆನಂದದಿಂದ ಒಬ್ಬರಮೇಲೊ

ಬ್ಬರು ಅರುಣವರ್ಣದ ಹುಡಿಯನ್ನೂ, ನೀರನ್ನೂ ಎರಚಿ ಹೋಳಿ ಅಥವಾ ಓಕುಳಿಯಾಡುವುದಾಗಿರುತ್ತದೆ.

ಹಾಗೆಯೇ ದಾಲ್ಗಾದೋರವರು ಕೊಟ್ಟ ಮಳಭ ಶಬ್ದವಾಗಲೀ, ಮಾಫೇಃಇಯುವರು ಕೊಟ್ಟ ಮೊಳಾಬ್ ಶಬ್ದವಾಗಲಿ ಸರಿಯಾದುದಲ್ಲ. ಮ್ಹಾಳುಪ ಇಲ್ಲವೇ ಮಾಳುಭ ಎಂಬ ಶಬ್ದವು ಸರಿಯಾದುದಾಗಿದೆ. ಮ್ಹಾಳುಪ ಅಥವಾ ಮಾಳುಫ ಎಂಬ ಶಬ್ದವೇ ಮಾಳುಭ ಆಗಿ ಮೊಳಾಬ ಆಗಿದೆಯೆಂಬುದರಲ್ಲಿ ಸಂದೇಹವಿಲ್ಲ. ಮರಾಠಿಯಲ್ಲಿ "ಮಳಭ" ಶಬ್ದದ ಅರ್ಥವನ್ನು ಒಬ್ಬ ಶಬ್ದ ಕೋಶಕಾರರು "Cloudiness[1] = ಮೋಡವಾಗಿರುವಿಕೆ" ಎಂದು ಕೊಟ್ಟಿದ್ದರೆ. ಬೇರೊಬ್ಬರು—ಅಭ್ರ; ಢಗ[2] = ಮೋಡ ಎಂದು ಕೊಟ್ಟಿದ್ದಾರೆ. ಅಂದರೆ ಮರಾಠಿಗರಿಗೆ ಆ ಶಬ್ದದ ಅರ್ಥ ಗೊತ್ತಿಲ್ಲವೆಂಬುದಕ್ಕೆ ಬೇರೆ ಪ್ರಮಾಣ ಬೇಡ.

ದಾಲ್ಗಾದೋರವರು ಕೊಂಕಣಿಯಲ್ಲಿನ "ಕಹಣಿ" ಶಬ್ದದ ರೂಪವನ್ನು "ಕಹಾಣಿ" ಎಂದು ಕೊಟ್ಟಿದ್ದಾರಲ್ಲದೇ ಅದು ಹಿಂದೀ ಮೂಲದ್ದೆಂದು ಸೂಚಿಸಿದ್ದಾರೆ. ಆದರೆ ಕೊಂಕಣಿಯಲ್ಲಿ "ಕಹಾಣಿ" ಎಂಬ ರೂಪವು ಬಳಸಲ್ಪಡುವುದಿಲ್ಲವೆಂಬುದನ್ನು ಅವರು ಗಮನಿಸಿಲ್ಲ. ಕಹಣಿ ಎಂಬ ಶಬ್ದವು "ಕಅಣಿ"ಯಾಗಿ ಮಾರ್ಪಟ್ಟ ತರುವಾಯ ಅದು ಈಗ "ಕಾಣಿ"ಯಾಗಿದೆ. ಇದರ ವಿಮರ್ಶೆ ಹಿಂದೆ ಬಂದಿದೆ.

ದಾಲ್ಗಾದೋರವರು ತನ್ನ ಕೋಶದಲ್ಲಿ "ಖಾ = ತಿನ್ನು" ಎಂಬ ಕ್ರಿಯೆಯ ಭೂತಕಾಲಿಕ ರೂಪವನ್ನು ಖಾಲ್ಲೊ ಎಂದೂ, ಕೃದಂತ ವಿಶೇಷಣವನ್ನು ಖೆಲಲೊ ಎಂಬುದಾಗಿಯೂ ಕೊಟ್ಟಿದ್ದಾರೆ. ಖಾಲ್ಲೊ ಎಂಬ ರೂಪವು ಸರಿಯಲ್ಲ; ಅದು ಮರಾಠಿ ರೂಪವಾಗಿರುತ್ತದೆ. ಸಂಸ್ಕೃತದಲ್ಲಿನ ಖಾದಿತಃ ಎಂಬ ಭೂತಕೃದಂತವು ಶೌರಸೇನಿಯಲ್ಲಿ ಖಾಇದೋ ಆಗಿದ್ದುದು ಕೊಂಕಣಿಯಲ್ಲಿ ಖಾಇಲೊ ಆಗಿ ತರುವಾಯ "ಖಾ ಮತ್ತು ಇ" ಕೂಡಿ 'ಖೆ' ಆಗಿ 'ಖೆಲೊ' ಎಂಬ ರೂಪವಾಗಿದೆ. ಮತ್ತು ಅದೇ ರೂಪವು ಸರಿಯಾಗಿದೆ. ಅದರ ಪೂರ್ಣ ಕಾಲಿಕ ಕ್ರಿಯಾರೂಪವು ಖೆಲ್ಲೊ ಎಂತಲೂ ಕೃದಂತ ವಿಶೇಷಣವು ಖೆಲಲೊ ಎಂತಲೂ ಆಗುತ್ತವೆ. ವಿಚಿತ್ರವೆಂದರೆ ದಾಲ್ಗಾದೋರವರು ಭೂತಕಾಲಿಕ ಕ್ರಿಯೆಯನ್ನು ಖಾಲ್ಲೊ ಎಂದು ಕೊಟ್ಟು ಕೃದಂತವನ್ನು ಖೆಲಲೊ ಎಂಬುದಾಗಿ ಕೊಟ್ಟಿರುವುದಾಗಿದೆ.

---

1. The Arya-Bhushana School Dictionary.
2. ಮರಾಠೀ ಶಬ್ದರತ್ನಾಕರ.

ಹಿಂದಿನ ಉದಾಹರಣೆಗಳಿಂದ—ಪರದೇಶೀ ಪಾದ್ರಿಗಳು ತಮ್ಮ ಗ್ರಂಥ ರಚನಾಕಾಲದಲ್ಲಿ ಭಾಷೆಯ ಶುದ್ಧತೆಯ ಕಡೆಗೆ ಅವಶ್ಯಕವಿದ್ದಷ್ಟು ಲಕ್ಷವನ್ನು ಪೂರೈಸಲಿಲ್ಲವೆಂದು ಮಾತ್ರವಲ್ಲದೇ ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಮತ್ತು ಕೇರಳ ದಲ್ಲಿನ ಸಾರಸ್ವತ ಬ್ರಾಹ್ಮಣರು ಬಳಸುವ ಶಬ್ದಗಳು ಇತರ ಕಡೆಗಳಲ್ಲಿ ಬಳ ಸಲ್ಪಡುವ ಶಬ್ದಗಳಿಗಿಂತ ಶುದ್ಧರೂಪದಲ್ಲಿವೆಯೆಂಬುದು ಸಿದ್ಧವಾಗುತ್ತದೆ.

## ೮

ಕೊಂಕಣಿಯು ಮರಾಠಿಯ ತಾಯಿಯಾಗಿರುವುದು ಮಾತ್ರವಲ್ಲದೇ ಭಾರತ ವರ್ಷದಲ್ಲಿ ಬಳಕೆಯಲ್ಲಿರುವ ಬೇರೆಲ್ಲ ಪ್ರಾಕೃತ ವಿಭೇದಗಳ ಅಕ್ಕನಾಗಿಯೂ ಇರುತ್ತದೆಂದು ಕೊಂಕಣಿಯಲ್ಲಿ ಬಳಕೆಯಲ್ಲಿರುವ ಹಲವು ಪ್ರಾಚೀನ ಪ್ರಯೋಗ ಗಳ ಮೇಲಿಂದ ತಿಳಿದುಬರುತ್ತದೆ. ಸಂಸ್ಕೃತದಲ್ಲಿನ **"ಅಸ್ಮತ್"** ಮತ್ತು **"ಯುಷ್ಮತ್"** ಎಂಬ ಸರ್ವನಾಮಗಳ ಷಷ್ಟೀ ವಿಭಕ್ತಿಯ ಬಹುವಚನರೂಪ ಗಳಾಗಿರುವ **"ಅಸ್ಮಾಕಮ್"** ಮತ್ತು **"ಯುಷ್ಮಾಕಮ್"** ಎಂಬ ಶಬ್ದಗಳು ಬುದ್ಧದೇವನ ಪ್ರವಚನಗಳಲ್ಲಿ **"ಅಮ್ಹಾಕಂ"** ಮತ್ತು **"ತುಮ್ಹಾಕಂ"** ಎಂಬ ರೂಪಗಳಲ್ಲಿ. ಷಷ್ಟೀ ವಿಭಕ್ತಿಯಲ್ಲಿ ಮಾತ್ರವಲ್ಲದೇ ಚತುರ್ಥೀ ಮತ್ತು ದ್ವಿತೀಯಾ ವಿಭಕ್ತಿಗಳಲ್ಲಿಯೂ ಬಳಸಲ್ಪಡುತಿದ್ದವು ಮತ್ತು ಬಳಸಲ್ಪಟ್ಟಿವೆ. ಆ ರೂಪಗಳು ತರುವಾಯದ ಕೊಂಕಣಿಯಲ್ಲಿ **"ಆಮ್ಹಕಾಂ"** ಮತ್ತು **"ತುಮ್ಹಕಾಂ"** ಎಂಬುದಾಗಿ ರೂಪಾಂತರ ಹೊಂದಿ ದ್ವಿತೀಯಾ ಮತ್ತು ಚತುರ್ಥೀ ವಿಭಕ್ತಿಗಳಲ್ಲಿ ಮಾತ್ರ ಬಳಸಲ್ಪಡತೊಡಗಿದವು. ಅವೇ ರೂಪಗಳು ಇಂದಿಗೂ ಬಳಸಲ್ಪಡುತ್ತವೆ. ಆದರೆ ಅವುಗಳಲ್ಲಿನ "ಹ"ಕಾರವು ಉಚ್ಚರಿ ಸಲ್ಪಡುವುದಿಲ್ಲ. ಅವುಗಳ ಏಕವಚನರೂಪಗಳಾಗಿರುವ **"ಮಾಕಾ"** ಮತ್ತು **"ತುಕಾ"** ಎಂಬ ಶಬ್ದಗಳು ಸಂಸ್ಕೃತದಲ್ಲಿನ **"ಮಾಮಕ"** ಮತ್ತು **"ತಾವಕ"** ಎಂಬ ಶಬ್ದಗಳ ರೂಪಾಂತರಗಳಾಗಿರುತ್ತವೆ. ಕೊಂಕಣಿಯಲ್ಲಿರುವ "ಕಾ" ಪ್ರತ್ಯಯವು ಹಿಂದೀ ಭಾಷೆಯಲ್ಲಿ "ಕೋ" ಎಂಬ ರೂಪದಲ್ಲಿಯೂ ಬಂಗಾಲಿ ಯಲ್ಲಿ "ಕೇ" ಎಂಬ ರೂಪದಲ್ಲಿಯೂ ಬಳಸಲ್ಪಡುತ್ತದೆ. ಉದಾ:—ಹಿಂದೀ— **"ಹಮಕೊ"** = ನಮ್ಮನ್ನು ಮತ್ತು ನಮಗೆ; ಬಂಗಾಲಿ — **"ಆಮಾಕೆ"** = ನನ್ನನ್ನು ಮತ್ತು ನನಗೆ; **"ಆಮಾದಿಗಕೇ"** = ನಮ್ಮನ್ನು ಮತ್ತು ನಮಗೆ.

ಆಪರೆ ಕೊಂಕಣಿಯಲ್ಲಿರುವಂಥ ರೂಪಗಳು ಬೇರೆ ಯಾವ ಭಾಷೆಯಲ್ಲಿಯೂ ಇಲ್ಲ. ಹಾಗೆಯೇ ಋಗ್ವೇದದಲ್ಲಿ **"ಆ ಪ್ರಯಾತ ಮರುತೋ, ವಿಷ್ಣೋ, ಅಶ್ವಿನಾ, ಪೂಷನ್, ಮಾಕೀನಯಾ ಧಿಯಾ ॥ ೮–೨೭–೮ ॥"** = 'ಹೇ ಮರುತ್ತುಗಳೇ. ಹೇ ವಿಷ್ಣುವೇ. ಹೇ ಅಶ್ವಿನೀದೇವತೆಗಳೇ, ಹೇ ಪೂಷನೇ— ನನ್ನ ಅಂತಃಕರಣಪೂರ್ವಕವಾದ ಪ್ರಾರ್ಥನೆಯಿಂದ ದಯಾರ್ದ್ರರಾಗಿ ಬನ್ನಿರಿ'. ಈ ಮಂತ್ರದಲ್ಲಿ ಬಂದಿರುವ **"ಮಾಕೀನಃ"** ಎಂಬ ವಿಶೇಷಣರೂಪದ ಶಬ್ದವೇ ಕೊಂಕಣಿಯಲ್ಲಿ ಮೊತ್ತಮೊದಲು **"ಮಕೆಲೊ"** ಎಂದು ರೂಪಾಂತರವಾಗಿ ಈಗ **"ಮಗೆಲೊ"** ಎಂದಾಗಿದೆ, **"ಮಾಕೀನಃ** = ನನ್ನ" ಎಂಬ ಶಬ್ದದಿಂದ ಹುಟ್ಟಿದ ಇಂಥ ರೂಪವು ಬೇರೆ ಯಾವ ಭಾಷೆಯಲ್ಲಿಯೂ ಇಲ್ಲ.

ಅಗ್ನಿಹೋತ್ರ ಮತ್ತು ಯಜ್ಞಗಳ ಅಧಿದೇವನಾದ ಯಾವ ಅಗ್ನಿಯನ್ನು ಆಧರಿಸಿಕೊಂಡು ಸಕಲ ವೈದಿಕ ಸಾಹಿತ್ಯವು ಹುಟ್ಟಿ ಬೆಳೆಯಿತೋ ಮತ್ತು ಋಗ್ವೇದದ ಆರಂಭಿಕ ಶಬ್ದವೇ ಯಾವ ಅಗ್ನಿಯೋ ಅಂಥ ಯಜ್ಞದ ಅಧಿದೇವನಾದ ಅಗ್ನಿಯನ್ನು ಕೊಂಕಣಿಯಲ್ಲಿ **"ಉಜ್ಜೊ"** ಅನ್ನುತಿದ್ದರು. ಆ ಶಬ್ದವು ಈಗ ಸಾಮಾನ್ಯ ಬೆಂಕಿ ಅಥವಾ ಕಿಚ್ಚು ಎಂಬ ಅರ್ಥದಲ್ಲಿ ಸಾರ್ವತ್ರಿಕವಾಗಿ ಬಳಸಲ್ಪಡುತ್ತದೆ. ಈ ಉಜ್ಜೊ ಎಂಬ ಶಬ್ದವು ಸಂಸ್ಕೃತದ "ಉದ್ಧವ" ಎಂಬ ಶಬ್ದದ ರೂಪಾಂತರವಾಗಿರುತ್ತದೆ. ಶಬ್ದಸ್ತೋಮ ಮಹಾನಿಧಿ[1] ಎಂಬ ಸಂಸ್ಕೃತ ಶಬ್ದಕೋಶದಲ್ಲಿ ಈ ಶಬ್ದದ ವ್ಯುತ್ಪತ್ತಿಯನ್ನು ಮುಂದಿನಂತೆ ಕೊಟ್ಟಿದೆ:– "ಉದ್ + ಹು + ಅಪ್ = ಉದ್ಧವ" ಮತ್ತು ಅದರ ಅರ್ಥ–(೧) ಯಜ್ಞಾಗ್ನೌ; (೨) ಕೃಷ್ಣದಯಿತೇ ಯಾದವ ವಿಶೇಷೇ. ಅಂದರೆ—(೧) ಯಜ್ಞದ ಅಗ್ನಿ;[2] (೨) ಕೃಷ್ಣನ ಸಖನಾಗಿದ್ದ ಒಬ್ಬ ಯಾದವ. ಹಾಗೆಯೇ ಯಜ್ಞಕುಂಡ ಹಾಗೂ ಯಜ್ಞಕಾಲದಲ್ಲಿ ಈತರ ಆಕೃತಿಗಳನ್ನು ಎಳೆಯಲು ಬಳಸುತಿದ್ದ "ಶುಲ್ಬ = ಹುರಿಹಗ್ಗ" ಎಂಬ ಶಬ್ದವು ಕೊಂಕಣಿಯಲ್ಲಿ "ಸುಂಬ" ಆಗಿದೆ. ಮತ್ತು ಆಹುತಿಗಾಗಿ ಅನ್ನ ಬೇಯಿಸಲು ಬಳಸುವ ಪಾತ್ರೆಯ ಹೆಸರು "ಚರು" ಎಂದಿದ್ದುದು ಕೊಂಕಣಿಯಲ್ಲಿ "ಚರುಈ = ಚರವಿ" ಆಗಿದೆ. ಸಾರಸ್ವತ ಬ್ರಾಹ್ಮಣರ ಪೂರ್ವಜರು ಶ್ರೌತಯಜ್ಞಗಳನ್ನು ಜರಗಿಸುತಿದ್ದ ಕಾಲದಲ್ಲಿ ಬಳಕೆಗೆ ಬಂದ ಈ ಶಬ್ದಗಳು. ಕಾಲಕ್ರಮೇಣ ಸಾಮಾನ್ಯ ಬಳಕೆಯಲ್ಲಿಯೂ ಬರತೊಡಗಿದವು. "ಉದ್ಧವಃ"

---

1. ಪಂಡಿತ ತಾರಾನಾಥ ತರ್ಕವಾಚಸ್ಪತಿ.
2. Sacrificial Fire. Sir Monier Williams, M.A., A Sanskrit English Dictionary.

ಎಂಬ ಶಬ್ದವು ಮೊತ್ತಮೊದಲಿನ ಪ್ರಾಕೃತದಲ್ಲಿ "ಉಜ್ಝವೋ" ಆಗಿ ಮಾರ್ಪ ಟ್ಟುದು ಈಗ ಉಜ್ವೊ ಎಂಬುದಿಷ್ಟೇ ಉಳಿದುಕೊಂಡಿದೆ. ದ ಮತ್ತು ಧ ಗಳು "ಜ" ಆಗಿ ಮಾರ್ಪಟ್ಟ ಉದಾಹರಣೆಗಳು ಮುಂದೆ ಕೊಟ್ಟಿವೆ:—ಯುದ್ಧ = ಜುಝು: ಉದ್ಯೋತ, ಉಜಿಯಾಡ, ಉಜವಾಡ = ಬೆಳಕು: ವಿದ್ಯುತ್ = ವಿಜ್ಜು.

ಕೊಂಕಣಿಯು ಸಪ್ತಮಿ ವಿಭಕ್ತಿಯು ಬಹುವಚನದಲ್ಲಿ ಸಂಸ್ಕೃತದ "ಸು" ಪ್ರತ್ಯಯದ ರೂಪಾಂತರ "ತು" ಎಂಬ ಪ್ರತ್ಯಯ ಮಾತ್ರವಲ್ಲದೇ ನಪುಂಸಕ ಲಿಂಗದ ಶಬ್ದಗಳ ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳ ಬಹುವಚನ ಪ್ರತ್ಯಯವಾಗಿರುವ "ಆನಿ" ಎಂಬುದು ಕೂಡ ಬಳಸಲ್ಪಡುತ್ತದೆ. ಉದಾ:— **ಘರ** = ಮನೆ; **ಘರ್ಯಂ** = ಮನೆಗಳು; **ಘರಿಂ** = ಮನೆಯಲ್ಲಿ; **ಘರಾಂತು** = **ಘರಾನಿ** = ಮನೆಗಳಲ್ಲಿ. ಈ ಪ್ರಯೋಗವು ಬೇರೆ ಯಾವ ಭಾಷೆಗಳಲ್ಲಿಯೂ ಇಲ್ಲ. ವೇದಗಳಲ್ಲಿ[1] ಅಕಾರಾಂತ ನಪುಂಸಕಲಿಂಗನಾಮಗಳ ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳ ಬಹುವಚನರೂಪಗಳು ಅಂದರೆ **"ವನಾನಿ; ಗೃಹಾಣಿ"** ಮುಂತಾದವುಗಳು ಸಪ್ತಮಿ ವಿಭಕ್ತಿಯ ಬಹುವಚನದಲ್ಲಿಯೂ ಬಳಸಲ್ಪಡುತ್ತವೆ.

ಕ್ರಿಯಾಪದಗಳೊಂದಿಗೆ ಕೂಡಿ ಚತುರ್ಥೀವಿಭಕ್ತಿಯ ಅರ್ಥವನ್ನು ಕೊಡುವ ಸಂಸ್ಕೃತದಲ್ಲಿನ "ತುಮ್" ಎಂಬ ಪ್ರತ್ಯಯವು ಕೊಂಕಣಿಯಲ್ಲಿ "ಉಂ" ಇಲ್ಲವೇ "ಉಜ್" ಎಂಬಂತೆ ಬಳಸಲ್ಪಡುತ್ತದೆ. ಉದಾ:—ಸಂಸ್ಕೃತ—**ಕರ್ತುಮ್** = ಕೊಂಕಣಿ—**ಕರುಂ, ಕರುಜ್** = ಮಾಡಲಿಕ್ಕೆ. ಈ ರೂಪದೊಂದಿಗೆ ಕೆಲವರು "ಸ"ಕಾರವನ್ನೂ, ಕೆಲವರು "ಕ"ಕಾರವನ್ನೂ ಸೇರಿಸಿ ಉಚ್ಚರಿಸುತ್ತಾರೆ. ಉದಾ: ಕರುಂಕ = ಕರುಂಸ. ಇವರಲ್ಲಿನ "ಉಂಸ" ಎಂಬ ಅಂಶವನ್ನೇ ಪಾದ್ರಿ ಸ್ಟೀಫನ್ಸ್ ರವರು ತನ್ನ ಕ್ರಿಸ್ತಪುರಾಣದಲ್ಲಿ "ಉಂಸಿ" ಎಂಬ ರೂಪದಲ್ಲಿ ಬಳಸಿ **"ಹೋ-ಉಂಸಿ"** ಮುಂತಾದ ರೂಪಗಳನ್ನು ರಚಿಸಿದ್ದರು. ಕೊಂಕಣಿಯಲ್ಲಿನ ಈ "ಕರುಂಸ್" ಎಂಬ ರೂಪದ ಬದಲಿಗೆ ಮರಾಠಿಯಲ್ಲಿ "ಕರಾವಯಾಸ್" ಎಂಬುದು ಬರುತ್ತದೆ. ಸಂಯುಕ್ತ ಕ್ರಿಯೆಯಾಗಿ ಮರಾಠಿಯಲ್ಲಿ "ಕರುಂ" ಮುಂತಾದ ರೂಪಗಳು ಬರುತ್ತವಾದರೂ—ಅಂಥ ರೂಪಗಳಿಗೆ ಸ್ವತಂತ್ರವಾದ ಬಳಕೆಯಿಲ್ಲ. ಉದಾ:—ರಾಮಾ ಬೋಲೂಂ ಲಾಗಲಾ = ರಾಮನು ಮಾತಾಡ ತೊಡಗಿದನು. ಬೇರೆ ಭಾಷೆಗಳಲ್ಲಿ ಇಂಥ ಪ್ರಯೋಗಗಳಿಲ್ಲ.

ಸಂಸ್ಕೃತದಲ್ಲಿನ—ತವ್ಯ ಮತ್ತು ತ್ಯ ಪ್ರತ್ಯಯಗಳ ಬದಲಿಗೆ ಅದೇ ಅರ್ಥ ದಲ್ಲಿ ಕೊಂಕಣಿಯಲ್ಲಿ "ಜೆಂ" ಎಂಬ ಒಂದೇ ಪ್ರತ್ಯಯವು ಬರುತ್ತದೆ. ಮತ್ತು

---

1. ವೈದಿಕ ವ್ಯಾಕರಣ, ಪುಟ 17. ಶ್ರೀ ಉಮೇಶಚಂದ್ರಪಾಂಡೇಯ, ಎಂ.ಎ., ಬನಾರಸ.

ಈ "ಚೆಂ" ಪ್ರತ್ಯವು ಧಾತುಗಳೊಂದಿಗೆ ಕೂಡಿ ಭಾವವಾಚಕನಾಮದಂತೆಯೂ, ವಿಶೇಷಣದಂತೆಯೂ, ಪರೋಕ್ಷವಿಧಿಯಂತೆಯೂ ಬಳಸಲ್ಪಡುತ್ತದೆ. ಉದಾ:– ನಾಮಪದ – ಕರಚೆಂ = ಮಾಡುವುದು. ವಿಶೇಷಣ = ಮಾಡಬೇಕಾದ; ವಿಧಿ ರೂಪ – ಮಾಡತಕ್ಕದ್ದು, ಮಾಡುವುದು. ಇದರ ಕರ್ತೃವು ತೃತೀಯಾ ವಿಭಕ್ತಿ ಯಲ್ಲಿರುತ್ತದೆ:—(೧) ತುಜ್ಯಾನ ಹೆಂ ಕಾಮ ಕರಚ್ಯಾಕ ಜಾಣಾ = ನಿನ್ನಿಂದ ಈ ಕೆಲಸವನ್ನು ಮಾಡಲಿಕ್ಕೆ ಆಗುವುದಿಲ್ಲ. (೨) ತುಂವೆಂ ಕರಚೆಂ ಕಾಮ ದುಸರ್ಯಾಂಚೇರಿ ಸೊಡುಂ ನಕಾ = ನೀನು ಮಾಡಬೇಕಾದ ಕೆಲಸವನ್ನು ಬೇರೆ ಯವರ ಮೇಲೆ ಬಿಡಬೇಡ. (೩) ತುಂವೆಂ ಹೆಂ ಕಾಮ ಕರಚೆಂ = ನೀನು ಈ ಕೆಲಸವನ್ನು ಮಾಡುವುದು ಇಲ್ಲವೇ ಮಾಡತಕ್ಕದ್ದು,

ಸಂಸ್ಕೃತದಲ್ಲಿನ ಅದೇ ಅರ್ಥದ "ಈಯ" ಎಂಬ ಪ್ರತ್ಯಯವು ಕೊಂಕಣಿ ಯಲ್ಲಿ "ಇಜೇ" ಎಂದು ಮಾರ್ಪಟ್ಟು ನಾನಾ ಅರ್ಥಗಳಲ್ಲಿ ಬಳಸಲ್ಪಡುತ್ತದೆ. ಉದಾ:—ಕರಿಜೇ = (೧) ಮಾಡುವುದು; (೨) ಮಾಡತಕ್ಕದ್ದು. ಏಕದಾಂ ರಡಿಜೇ ಏಕದಾಂ ಹಾಸಿಜೇ ಹೇಂಚಿ ಸಂಸಾರಾಂತಲೆಂ ಭೋಗಣೆಂ ಮ್ಹಣೂನ ಗಣಿಜೇ = ಒಮ್ಮೆ ಅಳುವುದು ಒಮ್ಮೆ ನಗುವುದು ಇದುವೇ ಸಂಸಾರದಲ್ಲಿನ ಭೋಗವೆಂದು ಎಣಿಸುವುದು. ಕೊಂಕಣಿಯಲ್ಲಿನ "ಚೆಂ" ಪ್ರತ್ಯಯವು ಮರಾಠಿ ಯಲ್ಲಿ "ಯಚೇಂ" ಇಲ್ಲವೇ "ಯಾಚೇಂ" ಎಂದು ಮಾರ್ಪಟ್ಟು ಧಾತುಗಳೊಂದಿಗೆ ಕೂಡುತ್ತದೆ, ಉದಾ:—ಕರಾಯಚೇಂ = ಮಾಡುವುದು; ಜಾಯಚೇಂ ಇಲ್ಲವೇ ಜಾವಯಾಚೇಂ = ಹೋಗುವುದು. ಆದರೆ ಇಂಥ ಶಬ್ದಗಳು ಮರಾಠಿಯಲ್ಲಿ ಪ್ರಥಮಾವಿಭಕ್ತಿಯಲ್ಲಿ ಹೊರತು ಬೇರೆ ವಿಭಕ್ತಿಗಳಲ್ಲಿ ಪ್ರಯೋಗಿಸಲ್ಪಡುವುದಿಲ್ಲ.

ಸಂಸ್ಕೃತದಲ್ಲಿನ "ಕಾರ್ಯ" ಮಾಡತಕ್ಕದ್ದು ಎಂಬ ಶಬ್ದವು ಕೊಂಕಣಿಯಲ್ಲಿ "ಕಾಜ" ಎಂದು ಮಾರ್ಪಟ್ಟು "ಉಂ" ಪ್ರತ್ಯಯಾಂತ ಕ್ರಿಯಾವಿಶೇಷಣದೊಂದಿಗೆ ಕೂಡಿ "ತಕ್ಕದ್ದು" ಅಥವಾ "ಬೇಕು" ಎಂಬ ಅರ್ಥವನ್ನು ಸೂಚಿಸುತ್ತದೆ. ಉದಾ:—ಕರುಂಕಾಜ = ಮಾಡಬೇಕು ಅಥವಾ ಮಾಡತಕ್ಕದ್ದು. ವಚ್ಚುಂ-ಕಾಜ = ಹೋಗಬೇಕು. ಇತ್ಯಾದಿ. "ಕಾಜ" ಶಬ್ದದೊಳಗಿನ "ಜ" ಲೋಪವಾಗಿ ಉಳಿವ "ಕಾ" ಎಂಬ ಅಕ್ಷರವು ವಿಧ್ಯರ್ಥಕ ಪ್ರತ್ಯಯದಂತೆ ನಿಷೇಧಾರ್ಥವಲ್ಲಿ ಬಳಸಲ್ಪಡುತ್ತದೆ. ಆಗ ಅದರೊಂದಿಗೆ ಮಧ್ಯಮಪುರುಷ ಬಹುವಚನವಲ್ಲಿ "ಥ" ಕೂಡುತ್ತದೆ. ಉದಾ:—ತುಂವ್ ವಚ್ಚುಂ ನಕಾ = ನೀನು ಹೋಗಬೇಡ. ತುಮಿ ವಚ್ಚುಂನಕಾಥ = ನೀವು ಹೋಗಬೇಡಿರಿ. "ಕಾಜ" ಕೂಡಿದ ಕ್ರಿಯೆಗಳು ತೃತೀಯಾವಿಭಕ್ತಿಯ ಕರ್ತೃವಿನೊಂದಿಗೆ ಬರುತ್ತವೆ. ಉದಾ:—ತುಂವೆಂ ವಚ್ಚುಂ

ಕಾಜ = ನೀನು ಹೋಗಬೇಕು. ತುಮಿಂ ವಚ್ಚುಂ ಕಾಜ = ನೀವು ಹೋಗಬೇಕು. "ಕಾಜ" ಶಬ್ದದಿಂದ "ಜ" ಲೋಪಮಾಡಿಯೂ ಬಳಸುವುದಿದೆ. ಉದಾ:—ತುಂವೆಂ ವಚ್ಚುಂಕಾ = ನೀನು ಹೋಗಬೇಕು. ಇಂಥ ಪ್ರಯೋಗಗಳಲ್ಲಿ ಕ್ರಿಯಾಪದದ ನಡುವಿನ ಅನುಸ್ವಾರವು ಲೋಪವಾಗುವುದೂ ಇದೆ. ಉದಾ: – ವಚ್ಚುಕಾ, ಇತ್ಯಾದಿ. ಇಂಥ ಸಂದರ್ಭಗಳಲ್ಲಿ ಕರುಕಾ, ಧರುಕಾ, ವ್ಹಾಣುಕಾ ಮುಂತಾದವುಗಳು—ಕೋರ್ಕಾ, ಧೋರ್ಕಾ, ವ್ಹೋಣ್ಕಾ ಎಂಬಂತಾಗುತ್ತವೆ. ಹಾಗೆಯೇ ಕರುಂನಕಾ ಇದ್ದುದು "ಕೋರ್ನಕಾ" ಎಂದಾಗುತ್ತದೆ. ಕೊಂಕಣಿಯಲ್ಲಿ "ನಕಾ" ಇದ್ದುದು ಮರಾಠಿಯಲ್ಲಿ 'ನಕೋ' ಆಗುತ್ತದೆ.

ಜಾಇಜೆ ಮತ್ತು ಜಾಇತ ಎಂಬ ಕ್ರಿಯೆಗಳ ಒಂದೆರಡು ಪ್ರಯೋಗಗಳು ಹಿಂದೆ ವಿವರಿಸಲಾಗಿವೆಯಾದರೂ ಅವುಗಳ ಬೇರೆ ಪ್ರಯೋಗಗಳು ಇಲ್ಲಿ ವಿವರಿಸಲಾಗುವವು. "ಜಾಇಜೇ" ಎಂಬ "ಜಾ" ಕ್ರಿಯೆಯ ವಿಧ್ಯರ್ಥಕರೂಪವು— ಮೂಲದಲ್ಲಿ ಆಗಬೇಕು ಮತ್ತು ಹುಟ್ಟಬೇಕು ಎಂಬರ್ಥದ ಕ್ರಿಯೆಯಾಗಿದ್ದರೂ ಕೊಂಕಣಿಯಲ್ಲಿ ಅದು "ಬೇಕು" ಎಂಬ ಅರ್ಥದಲ್ಲಿ ಬಳಸಲ್ಪಡುತ್ತದೆ. ಅದರ ಕೊನೆಯಲ್ಲಿನ "ಜೇ" ಎಂಬುದನ್ನು ಲೋಪ ಮಾಡಿ ಉಳಿದ "ಜಾಇ" ಎಂಬ ಅಂಶವನ್ನು "ಉಂ" ಪ್ರತ್ಯಯಾಂತ ಕ್ರಿಯಾರೂಪದೊಂದಿಗೆ ಕೂಡಿಸಿ ವಿಧ್ಯರ್ಥಕ ರೂಪಗಳನ್ನು ಸಾಧಿಸುತ್ತಾರೆ. ಉದಾ:—ಕರುಂಜಾಇ = ಮಾಡಬೇಕು. ವಚ್ಚುಂ ಜಾಇ = ಹೋಗಬೇಕು. ಇದರ ನಿಷೇಧಾರ್ಥಕರೂಪಗಳು "ನ" ಕೂಡಿ ಸಿದ್ಧವಾಗುತ್ತವೆ. ಉದಾ:—ಕರುಂನಜಾಇ = ಮಾಡಕೂಡದು; ವಚ್ಚುಂನಜಾಇ = ಹೋಗಕೂಡದು ಇತ್ಯಾದಿ. ಈ ಕ್ರಿಯಾಪದಗಳ ಕರ್ತೃವು ತೃತೀಯಾವಿಭಕ್ತಿಯಲ್ಲಿರುತ್ತದೆ. ಉದಾ:—ತುಂವೆಂ ಹೆಂ ಕಾಮು ಕರುಂಜಾಇ = ನೀನು ಈ ಕೆಲಸವನ್ನು ಮಾಡಬೇಕು ಇತ್ಯಾದಿ. ಈಗಿನ ಕೊಂಕಣಿಯಲ್ಲಿ "ನಜಾಇ ಎಂಬುದರೊಳಗಿನ "ಇ" ಲೋಪವಾಗಿ "ನಜಾ" ಎಂದಿಷ್ಟೇ ಉಳಿದಿದ್ದು ಅದರ ಉಚ್ಚಾರವು "ನಜ" ಎಂದಾಗುತ್ತದೆ. ಅಷ್ಟೇ ಅಲ್ಲ ಆ "ನಜ" ಎಂಬ ಶಬ್ದಕ್ಕೆ "ಕೂಡದು" ಎಂಬ ಅರ್ಥವಿರುವಂತೆಯೇ ಕೊಡುವುದಿಲ್ಲ ಅಥವಾ ಸ್ವಸ್ಥವಿಲ್ಲವೆಂಬ ಹೊಸ ಅರ್ಥವೂ ಇದೆ. ಉದಾ:—"ತಾಚ್ಯಾನ ಕಾಇಂ ನಜ = ಅವನಿಂದ ಏನೂ ಕೊಡುವುದಿಲ್ಲ ಅಥವಾ ಅವನು ಸ್ವಸ್ಥನಿಲ್ಲ". ಕೊಂಕಣಿಯಲ್ಲಿ "ನಜ ಎಂಬುದರ ಬದಲಿಗೆ "ನಹಿಂ" ಎಂಬ ಶಬ್ದವೂ ಬರುತ್ತದೆ. ಉದಾ:—ಕರುಂನಹಿಂ = ಮಾಡಕೂಡದು. ಕೊಂಕಣಿಯಲ್ಲಿನ "ಕರುಂನಜ" ಎಂಬಂಥ ರೂಪಗಳು ಮರಾಠಿಯಲ್ಲಿ ಕರೂಂ ನಯೇ ಎಂದಾಗುತ್ತವೆ.

ಕೊಂಕಣಿಯಲ್ಲಿ ಕ್ರಿಯೆಗಳ ಪ್ರೇರಕಾರ್ಥಕರೂಪಗಳು ಸಂಸ್ಕೃತದ "ಅಯ್" ವಿಕರಣವನ್ನು ಕೂಡಿಕೊಂಡು ಸಿದ್ಧವಾಗುತ್ತವೆ ಮತ್ತು 'ಅಯ್' ವಿಕರಣದ ಉಚ್ಚಾರವು—"ಅಯಿ" ಎಂದಾಗುತ್ತದೆ. ಉದಾ:—ಕರ್ = ಮಾಡು; ಕರ್ + ಅಯ್ = ಕರಯ್ ಇಲ್ಲವೇ ಕರಯಿ = ಮಾಡಿಸು. ಕೊಂಕಣಿಯಲ್ಲಿ ಕರಯಿ ಇದ್ದುದು ಮರಾಠಿಯಲ್ಲಿ "ಕರವಿ" ಎಂದಾಗುತ್ತದೆ ಅಥವಾ ಮರಾಠಿಯಲ್ಲಿ ಅಯಿ ವಿಕರಣದ ಬದಲಿಗೆ "ಅವಿ" ವಿಕರಣ ಕೂಡುತ್ತದೆ.

ಕೊಂಕಣಿಯಲ್ಲಿ ಭಾವನಾಮಗಳನ್ನು ರಚಿಸಲು—ಣ, ಣಿ, ಣೆಂ ಮೊದಲಾದ ಹಲವು ಕೃತ್ ಪ್ರತ್ಯಯಗಳಿವೆ ಮತ್ತು ಅವುಗಳು ಮರಾಠಿಯಲ್ಲಿಯೂ ಇವೆ. ಆದರೆ ಮರಾಠಿಯಲ್ಲಿ ಇಲ್ಲದ "ಪ" ಪ್ರತ್ಯಯ ಒಂದು ಕೊಂಕಣಿಯಲ್ಲಿ ಹೆಚ್ಚಿಗೆ ಇದೆ. ಪರಂತು ಆ "ಪ" ಪ್ರತ್ಯಯವು ಮೂಲದಲ್ಲಿ ಕೊಂಕಣಿಯದಲ್ಲ. ಅದು ಉತ್ತರ ಭಾರತದಿಂದ ಬಂದು ಗೋವದಲ್ಲಿ ನೆಲಸಿದ ಕನೋಜ ಬ್ರಾಹ್ಮಣ ರಾಡುತಿದ್ದ ಪ್ರಾಚೀನ ಹಿಂದೀ ಭಾಷೆಯ ಪ್ರತ್ಯಯವಾಗಿರುತ್ತದೆಂದು ತೋರುತ್ತದೆ. ಅಂದರೆ ಹೊಸ ಹಿಂದಿಯಲ್ಲಿ ಭಾವನಾಮಗಳು "ಕರನಾ", "ಧರನಾ" ಎಂಬುದಾಗಿ "ನಾ" ಪ್ರತ್ಯಯದಿಂದ ಕೊನೆಗೊಳ್ಳುವಂತೆಯೇ, ಅವಧೀ ಭಾಷೆಯ ಭಾವನಾಮಗಳು ಕರಬ, ಧರಬ ಎಂದು "ಬ" ಪ್ರತ್ಯಯದಿಂದ ಕೊನೆಗೊಳ್ಳುತ್ತವೆ. ಗೋಸ್ವಾಮಿ ತುಲಸೀದಾಸರು ರಾಮಚರಿತಮಾನಸದಲ್ಲಿ ಬಕಾರಾಂತ ಕ್ರಿಯಾ ಭಾವನಾಮಗಳನ್ನು ವಿಪುಲವಾಗಿ ಬಳಸಿದ್ದಾರೆ. ಅವಧಿಯಲ್ಲಿನ ಬ ಕಾರವು ಕನೋಜಿಯಲ್ಲಿ ಪ ಕಾರವಾಗಿ ಮಾರ್ಪಟ್ಟಿತೋ, ಇಲ್ಲವೇ ಕನೋಜಿಯಲ್ಲಿನ ಪ ಕಾರವು ಅವಧಿಯಲ್ಲಿ ಬ ಕಾರವಾಗಿ ಮಾರ್ಪಟ್ಟಿತೋ ಎಂಬುದನ್ನು ಹೇಳಲು ಸಾಧ್ಯವಿಲ್ಲ. ಹೇಗಿದ್ದರೂ ಕೊಂಕಣಿಯಲ್ಲಿ ಪ ಕಾರಾಂತ ಕ್ರಿಯಾಭಾವನಾಮಗಳು ಬಳಕೆಗೆ ಬರಲು ಗೋವದಲ್ಲಿ ನೆಲಸಿದ್ದ ಕನೋಜದ ಬ್ರಾಹ್ಮಣರೇ ಕಾರಣರೆಂಬುದರಲ್ಲಿ ಸಂದೇಹವಿಲ್ಲ. ಆ ಪ ಕಾರಾಂತ ಭಾವನಾಮಗಳು, "ಣೆಂ" ಪ್ರತ್ಯಯಾಂತ ಶಬ್ದಗಳು ಸೂಚಿಸುವ ಅರ್ಥದಿಂದ ತುಸು ಭಿನ್ನವಾದ ಅರ್ಥವನ್ನು ಸೂಚಿಸುತ್ತವೆ. ಅಂದರೆ ರಾಂಧಪ ಎಂಬ ಶಬ್ದವು ಅಡಿಗೆ ಅಥವಾ ಪಾಕ ಎಂಬರ್ಥವನ್ನು ಸೂಚಿಸುತ್ತದಾದರೆ ರಾಂಧಣೆಂ ಎಂಬ ಶಬ್ದವು ಅಡಿಗೆ ಮಾಡುವಿಕೆ ಎಂಬರ್ಥವನ್ನು ಸೂಚಿಸುತ್ತದೆ. ತಾತ್ಪರ್ಯವೇನೆಂದರೆ "ಪ ಕಾರಾಂತ ಭಾವನಾಮಗಳು" ಕೊಂಕಣಿಯ ವಿಶೇಷತೆಗಳಾಗಿವೆ. ಅವುಗಳು ಮರಾಠಿಯ ಪ್ರಕೃತಿಗೆ ವಿರುದ್ಧವಾಗಿವೆ, ಹಾಗಿದ್ದರೂ ಮರಾಠಿಯಲ್ಲಿ ರಾಂಧಪ = ಅಡಿಗೆ (ಈಗ ಅದರ ಬದಲಿಗೆ ಸ್ವೈಂಪಾಕ ಎಂಬ ಶಬ್ದವನ್ನು ಬಳಸುತ್ತಾರೆ); ತಳಪ = ಕರಿಯುವಿಕೆ; ವಾಜಪ =

ಪಾಲಗ; ದಳಪ = ಧಾನ್ಯ ಬೀಸುವಿಕೆ—ಮೊದಲಾದ ಕೆಲವು ಪಕಾರಾಂತ ಶಬ್ದ ಗಳು ಅಚ್ಚುಕಟ್ಟಾಗಿ ಸೇರಿಕೊಂಡಿವೆ. ಅಂದರೆ ಅವುಗಳನ್ನು ಮರಾಠಿಯಿಂದ ಹೊರದಬ್ಬಲು ಸಾಧ್ಯವಿಲ್ಲ. ಏಕೆಂದರೆ ಅವುಗಳ ಬದಲಿಗೆ ಬಳಸಬಹುದಾದ ಹಾಗೂ ಅದೇ ಅರ್ಥವನ್ನು ಕೊಡುವ ಬೇರೆ ಯೋಗ್ಯ ಶಬ್ದಗಳು ಮರಾಠಿ ಯಲ್ಲಿಯೂ ಇಲ್ಲ, ಕೊಂಕಣಿಯಲ್ಲಿಯೂ ಇಲ್ಲ.

ಕೊಂಕಣಿಯಲ್ಲಿ ಒಂದು ಸ್ವತಂತ್ರವಾದ ಅಪೂರ್ಣ ಭೂತಕಾಲಿಕ ಪ್ರಯೋಗ ಇದೆ. ಅದು ರೂಢಿಯನ್ನು ಮತ್ತು ಎರಡು ಕ್ರಿಯೆಗಳ ಸಮಾನಕಾಲಿಕ ಸಂಬಂಧವನ್ನು ಸೂಚಿಸುತ್ತದೆ. ಉದಾ:— ರೂಢಿ— ಹಾಂವ ರಾಮಾತಹಿಂ ಸದಾಂಇ ವಚ್ಚಾಲೊಂ ಆನಿ ಘಂಟ್ಯಾನಿ ಬೈಸತಾಲೊಂ = ನಾನು ರಾಮನಲ್ಲಿಗೆ ದಿನಾಲೂ ಹೋಗುವುದಿತ್ತು ಮತ್ತು ಗಂಟೆಗಟ್ಟಲೆ ಕೂತುಕೊಳ್ಳುವುದಿತ್ತು. ಸಮಾನಕಾಲಿಕತೆ:— ಹಾಂವ ರಾಮಾತಹಿಂ ವಚತನಾಂ ಗೋಪಾಳು ರಾಮಾತ ಹಿಂಸೂನು ಎತಾಲೊ = ನಾನು ರಾಮನಲ್ಲಿಗೆ ಹೋಗುತ್ತಿದ್ದಾಗ ಗೋಪಾಳನು ರಾಮನಲ್ಲಿಂದ ಬರುತ್ತಿದ್ದನು. ಇಂಥ ಪ್ರಯೋಗವು ಮರಾಠಿಯಲ್ಲಿ ಬೇರೆ ರೀತಿಯಲ್ಲಾಗುತ್ತದೆ.

ಮರಾಠಿಯಲ್ಲಿ ಹಿಂದೀಭಾಷೆಯ ಅನುಕರಣದಿಂದ ಒಂದು ಬಗೆಯ ಕರ್ಮಣಿ ಪ್ರಯೋಗವು ಬಳಕೆಗೆ ಬಂದಿದೆ. ಉದಾ:— ಶಿಪಾಯಾ ಕಡೂನ್ ಚೋರ್ ಧರಿಲಾಗೇಲಾ = ಶಿಪಾಯಿಯ ಮೂಲಕ ಕಳ್ಳನು ಹಿಡಿಯಲ್ಪಟ್ಟನು. ಕೊಂಕಣಿಯಲ್ಲಿ ಕರ್ಮಣಿ ಪ್ರಯೋಗವು ಬಳಕೆಯಲ್ಲಿಲ್ಲದಿದ್ದರೂ ಅದರಂಥ ಬೇರೊಂದು ಪ್ರಯೋಗವು ಬಳಕೆಯಲ್ಲಿದೆ. ಉದಾ:— ಶಿಪಾಯಾ ಕರೂನ ಚೋರು ಧರಚ್ಯಾಂ ಆಯಲೊ = ಶಿಪಾಯಿಯ ಕೈಯಿಂದ ಕಳ್ಳನು ಹಿಡಿಯು ವುದರಲ್ಲಿ ಬಂದನು. ಈ ವಾಕ್ಯದಲ್ಲಿನ "ಕರೂನ್" ಎಂಬುದು ಕರ = ಕೈ ಎಂಬ ನಾಮಪದದ ಪಂಚಮೀ ವಿಭಕ್ತಿಯ ಏಕವಚನ ರೂಪವಾಗಿರುತ್ತದೆ. "ಊನ" ಎಂಬುದು ಪಂಚಮೀ ವಿಭಕ್ತಿಯ ಪ್ರತ್ಯಯವಾಗಿರುತ್ತದೆ. ಇದರ ಬದಲಿಗೆ "ಹಸ್ತೂನ" ಎಂಬ ಶಬ್ದ ಕೂಡ ಬಳಸಲ್ಪಡುತ್ತದೆ. ಕರೂನ ಮತ್ತು ಹಸ್ತೂನ ಎಂಬ ಶಬ್ದಗಳು ಪ್ರಾಚೀನ ಕಾಲದಿಂದಲೇ ಸಾಗಿಬಂದವುಗಳಾಗಿರುತ್ತವೆ. ಸಂಸ್ಕೃತ ದಲ್ಲಿನ ಸಕರ್ಮಕ ಕ್ರಿಯೆಯ ಭೂತಕಾಲಿಕ ಕೃದಂತವು ಮೂಲದಲ್ಲಿಯೇ ಕರ್ಮಾರ್ಥಕವಾಗಿರುವುದರಿಂದ. ಸಂಸ್ಕೃತದಿಂದಲೇ ರೂಪಾಂತರಹೊಂದಿದ ಕೊಂಕಣಿಯಲ್ಲಿ ಕೂಡ ಸಕರ್ಮಕ ಕ್ರಿಯಾಪದಗಳ ಭೂತಕಾಲಿಕ ಪ್ರಯೋಗವು ಕರ್ಮಾರ್ಥಕವಾಗಿಯೇ ಇರುತ್ತದೆ. ಅಂದರೆ ಕೊಂಕಣಿಯಲ್ಲಿನ ಸಕರ್ಮಕ

ಕ್ರಿಯೆಗಳ ಭೂತಕಾಲಿಕ ಪ್ರಯೋಗವು ಮೂಲದಲ್ಲಿಯೇ ಕರ್ಮಣಿ ಪ್ರಯೋಗವಾಗಿರುವುದರಿಂದ ಅದರಲ್ಲಿ ತೃತೀಯಾ ವಿಭಕ್ತಿಯು ಕರ್ತೃವಿನೊಂದಿಗೆ ಹೊಂದಿಯಲ್ಲಿರುವಂಥ ಕರ್ಮಣಿ ಪ್ರಯೋಗವನ್ನು ಮಾಡಲಾಗುವುದಿಲ್ಲ. ಪ್ರೇರಣಾರ್ಥಕ ಕ್ರಿಯೆಗಳ ಪ್ರಯೋಗಗಳಲ್ಲಿ ಕರಣಾರ್ಥಕ ಕರ್ತೃವಿನೊಂದಿಗೆ "ಕರ=ಕೈ" ಶಬ್ದದ ತೃತೀಯಾ ವಿಭಕ್ತಿಯ ಏಕವಚನ "ಕರಾನ" ಎಂಬ ರೂಪವು ಬರುತ್ತದೆ. ಉದಾ:— ರಾಮು ಗೋಪಾಳಾ ಕರಾನ ಕಾಮು ಕರಯಿತಾ = ರಾಮನು ಗೋಪಾಳನಿಂದ ಕೆಲಸ ಮಾಡಿಸುತ್ತಾನೆ.

ಹಿಂದಿನ ಪರಿಚ್ಛೇದಗಳಲ್ಲಿ ವಿವರಿಸಿದಂತೆ ಕೊಂಕಣಿ ಶಬ್ದಗಳ ಕೊನೆಯಲ್ಲಿನ ಓಕಾರವು ಮರಾಠಿಯಲ್ಲಿ ಆಕಾರವಾಗಿಯೂ, ಆಕಾರವು ಓಕಾರವಾಗಿಯೂ ಮಾರ್ಪಡುವುದರ ಹೊರತಾಗಿ ವ್ಯಾಕರಣರೀತ್ಯಾ ಮುಖ್ಯವೆನ್ನಬಹುದಾದ ಬೇರೆ ಯಾವ ಭೇದವೂ ಈ ಎರಡು ಭಾಷೆಗಳ ನಡುವೆ ಇರುವುದಿಲ್ಲ. ಹೀಗಿದ್ದರೂ ಕೊಂಕಣಿಗರಿಗೆ ಮರಾಠಿಯೂ, ಮರಾಠಿಗರಿಗೆ ಕೊಂಕಣಿಯೂ ತಿಳಿಯದಿರುವ ಮುಖ್ಯ ಕಾರಣವೆಂದರೆ— ಕೊಂಕಣಿಯಲ್ಲಿ ಬಳಸಲ್ಪಡುತ್ತಿರುವ ಪ್ರಾಕೃತ ಶಬ್ದಗಳ ಬದಲಿಗೆ, ಮರಾಠಿಯಲ್ಲಿ ದೇಶೀ ಶಬ್ದಗಳೂ, ಫಾರಸೀ, ಅರಬೀ, ಗುಜರಾತೀ ಮುಂತಾದ ಅನ್ಯಭಾಷೆಗಳ ಶಬ್ದಗಳೂ ವಿಂತಿಮೀರಿ ಬಳಸಲಾಗುತ್ತಿರುವುದೇ ಆಗಿರುತ್ತದೆ. ಕೊಂಕಣಿಯಲ್ಲಿನ ಮತ್ತು ಮರಾಠಿ ಭಾಷೆಯಲ್ಲಿನ ಕೆಲವು ವಿಶಿಷ್ಟ ಪ್ರಾಕೃತ ಶಬ್ದಗಳನ್ನು ಬಿಟ್ಟರೆ ಉಳಿದ ಸಂಪೂರ್ಣ ಪ್ರಾಕೃತ ಶಬ್ದಭಾಂಡಾರವು ಎರಡು ಭಾಷೆಗಳಿಗೂ ಸಾಮಾನ್ಯವಾಗಿರುತ್ತದೆ. ಅಲ್ಲದೇ ಮರಾಠಿಯಲ್ಲಿ ನುಡಿವ ಹಾಗೂ ಗದ್ಯಸಾಹಿತ್ಯದಲ್ಲಿ ಬಳಸುವ ಪ್ರಾಕೃತ ಶಬ್ದಗಳಿಗಿಂತ ಹೆಚ್ಚು ಪ್ರಾಕೃತ ಶಬ್ದಗಳು ಬರೇ ಮಾತಾಡುವ ಕೊಂಕಣಿಯಲ್ಲಿ ಬಳಸಲ್ಪಡುತ್ತವೆ. ಅರ್ಥಾತ್ ಕೊಂಕಣಿಯಲ್ಲಿ ಬಳಸಲ್ಪಡುವ ಹಲವು ಪ್ರಾಕೃತ ಶಬ್ದಗಳು ಮರಾಠಿಯಲ್ಲಿ ಇಲ್ಲವೇ ಇಲ್ಲ. ಹೀಗಿದ್ದರೂ ತಮ್ಮಲ್ಲಿ ಎಲ್ಲ ಶಬ್ದಗಳಿವೆಯೆಂದು ತೋರಿಸಲು ಗೋವ ಮತ್ತು ಕಾರವಾರ ಕಡೆಯಲ್ಲಿನ ಕೊಂಕಣಿ ಶಬ್ದಗಳನ್ನು ಮರಾಠಿ ಕೋಶಕಾರರು ತಮ್ಮ ಕೋಶಗಳಲ್ಲಿ ತುರುಕಿ ತಪ್ಪುತಪ್ಪಾದ ಅರ್ಥಗಳನ್ನು ಬರೆದಿದ್ದಾರೆ. ಮರಾಠಿಯಲ್ಲಿ ದೇಶೀ ಶಬ್ದಗಳ ಸಂಖ್ಯೆಯು ಪ್ರಾಕೃತ ಶಬ್ದಗಳಿಗಿಂತ ಹೆಚ್ಚಿಗಿದೆ. ಮರಾಠೀ ಶಬ್ದರತ್ನಾಕರವಲ್ಲಿ ಆ ದೇಶೀ ಶಬ್ದಗಳು ಯಾವ ಮೂಲದವುಗಳೆಂದು ಗೊತ್ತುಹಚ್ಚಲಾಗದುದರಿಂದ ಪ್ರಾಕೃತ ಗ್ರಂಥದೊಳಗಿನವುಗಳೆಂದು ಸೂಚಿಸಲಾಗಿದೆ.

ಹಿಂದೆ ಮರಾಠಿಗರು ಪಾದ್ರಿ ಥಾಮಸ್[1] ಸ್ಟೀಫನ್ಸ್‌ರವರು ರಚಿಸಿದ ಕೊಂಕಣಿ ವ್ಯಾಕರಣವನ್ನು ಮರಾಠಿಯ ವ್ಯಾಕರಣವೆಂದು ವಾದಹೂಡಿದ್ದರು. ಕಡೆಗೆ ಅವರು ಅದು ಗೋವದ ಮರಾಠಿಯ ವ್ಯಾಕರಣವೆಂದರು. ಅವರು ಅದನ್ನು ಮೂಲಮಹಾರಾಷ್ಟ್ರಿಯದೆಂದು ಅಂದುದಾದರೆ ಅದನ್ನು ಒಪ್ಪಬಹುದಾಗಿತ್ತು. ಆದರೆ ಅವರು ಹಾಗೆ ಹೇಳದೇ ಅದನ್ನು ಗೋವದ ಮರಾಠಿಯದನ್ನುವುದನ್ನು ಮಾತ್ರ ಒಪ್ಪಲಾಗುವುದಿಲ್ಲ. ಹಾಗೆಯೇ ಕೊಚ್ಚಿಯ ಪ್ರಖ್ಯಾತ ವೈದ್ಯರಾಗಿದ್ದ ಮೂವರು ಸಾರಸ್ವತ ಬ್ರಾಹ್ಮಣರು 1675ನೆಯ ಇಸವಿಯಲ್ಲಿ ಡಚ್ ನೌಕಾಧಿಕಾರಿ ಹೆಂಡ್ರಿಕಸ್[2] ವಾನ್‌ರ್ಹೀಡ್ ಎಂಬವರಿಗೆ ಮಲಬಾರ ಕಡೆಯಲ್ಲಿನ ಸಕಲ ವನೌಷಧಿಗಳ ಗುಣ. ಚಿತ್ರ. ಉಪಯೋಗ ಮುಂತಾದವುಗಳ ಸಂಪೂರ್ಣ ವಿವರಗಳನ್ನೊಳಗೊಂಡ ಒಂದು ಗ್ರಂಥವನ್ನು ಸಿದ್ಧಪಡಿಸಿಕೊಟ್ಟಿದ್ದರು. ಮತ್ತು ಆ ಗ್ರಂಥದೊಳಗಿನ ವಿಷಯಗಳು ಯಥಾರ್ಥವಾದವುಗಳೆಂದು ಪ್ರಮಾಣ ಪತ್ರವನ್ನು ಬರೆದುಕೊಟ್ಟಿದ್ದರು. ಇದನ್ನು ತಿಳಿದುಕೊಂಡ ಮರಾಠಿ ಪಂಡಿತರು ಆ ಪ್ರಮಾಣಪತ್ರವನ್ನು "ಮೊತ್ತಮೊದಲು ಮುದ್ರಿಸಲ್ಪಟ್ಟ ಮರಾಠಿ ಲೇಖನ" ಎಂಬುದಾಗಿ ಸಮಾಚಾರ ಪತ್ರಿಕೆಗಳಲ್ಲಿ ಪ್ರಚಾರ ಮಾಡಿದ್ದರು. ಆದರೆ ಆ ಪತ್ರವು ಮರಾಠಿಯದಾಗಿರದೇ ಅಚ್ಚಕೊಂಕಣಿಯಲ್ಲಿ ನಾಗರಿಲಿಪಿಯಲ್ಲಿ ಬರೆಯಲಾಗಿತ್ತು. ಆ ಪತ್ರದ ಪ್ರತಿಯು ಮುಂದಿನಂತಿದೆ:—

**"ಸ್ವಸ್ತಿ ಶ್ರೀ ಶಾಲಿವಾಹನಶಕ ೧೫೯೭ ರಾಕ್ಷಸ ಸಂವತ್ಸರ ಚೈತ್ರ ಬಹುಳ ೧೦ ಕೊಚೀ ರಾಜಪಾಟಣೀಂ ಬೈಸಿಕೆರಂಗಭಟ್ಟ ತಥಾ ವಿನಾಯಕ ಪಂಡಿತ ಆಪೂಭಟ್ಟ ತೇಗ ವೈದ್ಯ ತಾನೀಂ ಕೊಚಿಚ್ಯಾ ಕುಮದೋರ್ ಆಂಡ್ರಿಕೀ ಫಾಂಡ್ರೇ ತ್ಯಾಚ್ಯಾ ನಿರೋಪಾನ ಹ್ಯಾ ಮಲಬಾರ ದೇಶಾತು ಆಶಿಲೆ ಓಷಧ ಮಾತ್ರ ವೃಕ್ಷ, ವಾಲಿ, ಝಾಡಖಂಡ, ಒಳಖತೇಲ್ಯಾ ಮನುಷ್ಯಾಂಕ ಮುಸಾರೊ ದೇವುನು ತೇ ತೇ ಗಾಂವಾಂತು ಪೆಟ್ಟವೂನು ತಿಂ ತಿಂ ವೊಖದಂ ಆಣವೂನು ತ್ಯಾ ತ್ಯಾ ಝಾಡಾಚೆಂ ಫಲಂ, ಫೂಲ, ಪಾನ, ವೀಜ ಸಮಸ್ತ ತ್ಯಾ ತ್ಯಾ ರುತು ಕಾಳಾವರಿ ಸಂಪಾದೂನು ತಿಂ ತಿಂ**

1. ಮತ್ತು 2. ಕೊಂಕಣಿಭಾಷೇಚೆಂ ಜೈತ. Horticus Indicus Malabaricus adornatus per Henricum van Rhede van Araakenostein.

**ಚಿತಾರಿಲಿಂ ತ್ಯಾ ಉಪರಾಂತ ಆವಿ ಆಮುಗೆಲ್ಯಾ ವೈದ್ಯಗ್ರಂಥಾಚ್ಯಾ ನಿಘಂಟಾ ಪ್ರಮಾಣೆ ತ್ಯಾ ತ್ಯಾ ಓಷಧಾಚೆ ಗುಣ ವಾ ಅನುಭವಾನ ಜೋ ಜೋ ಗುಣ ಆಮುಕಾ ಕಳೆಲೊ ತೊ, ವಾ ತ್ಯಾ ತ್ಯಾ ಒಖದಾಂಚಿಂ ನಾವಂ ಪಳೆಉನು ಆಜಿ ದೋನಿ ವರ್ಷಂ ಸಕಾಳಿ, ಸಾಂಜೆ ಆಮಿಂ ಲಾಗಿ ರಾವೂನು ಹೋ ಲೀವ್ರು ಸಂಪಾದೂನು ದಿಲಾ. ತೆಂ ಲಟಿಕ ಅಶಿ ಮ್ಹಣುಂಚಾಕ ನಜ ಮ್ಹಣು ಆಮಿಂ ಆಮುಚಿ ನಿಸಾಣಿ ಕರ್ಣುನ ದಿಲೀ. ತೆಂ ಸತ್ಯ ಮ್ಹಣು ಮಾನುಚೆಂ ಜಾಇದ ಮ್ಹಣು ನಾಗರ ಬರಪಾನ ಹೆಂ ಬರವೂನು ದಿಲಾಂ ಶ್ರೀ"**

**ರಂಗ ಭಟು ವಿನಾಯಕ ಪಂಡಿತ ಆಪೂಚೆಂ ಓಪ**

ಅರ್ಥ:—ಸ್ವಸ್ತಿ ಶ್ರೀ ಶಾಲಿವಾಹನ ಶಕ ೧೫೯೭ನೆಯ ರಾಕ್ಷಸ ಸಂವತ್ಸರದ ಚೈತ್ರ ಬಹುಳ ದಶಮಿಯಂದು ಕೊಚ್ಚಿ ರಾಜಧಾನಿಯಲ್ಲಿನ ಬೈಸಿಕೆ ರಂಗ ಭಟ್ಟ, ವಿನಾಯಕ ಪಂಡಿತ ಮತ್ತು ಆಪ್ಪುಭಟ್ಟರೆಂಬ ಮೂವರು ವೈದ್ಯರು ಅವರು ಕೊಚ್ಚಿಯ ಕುಮದೋರ್ ಅಂದ್ರಿಕೀ ಫಾಂಡ್ರೇ ಅವನ ನಿರೋಪದಿಂದ ಈ ಮಲಬಾರು ದೇಶದಲ್ಲಿ ಇದ್ದ ಓಷಧಿ ಮಾತ್ರಗಳನ್ನು ಅಂದರೆ, ಮರ. ಬಳ್ಳಿ, ಗಿಡ-ಕಂಟಿಗಳನ್ನು ಗುರುತಿಸಬಲ್ಲ ಜನರಿಗೆ ವೇತನ ಕೊಟ್ಟು ಆಯಾ ಊರುಗಳಿಗೆ ಕಳುಹಿಸಿ ಆಯಾ ಗಿಡಮೂಲಿಕೆಗಳನ್ನು ತರಿಸಿ ಆಯಾ ಗಿಡದ ಕಾಯಿ, ಹೂ, ಎಲೆ, ಬೀಜ ಸಮಸ್ತವನ್ನು ಆಯಾ ಋತುಕಾಲದಲ್ಲಿ ಸಂಪಾದಿಸಿ ಅವುಗಳನ್ನು ಚಿತ್ರಿಸಿದೆವು. ಆ ತರುವಾಯ ನಾವು ನಮ್ಮ ವೈದ್ಯಗ್ರಂಥದ ನಿರ್ಣಯದಂತೆ ಆಯಾ ಓಷಧಿಯ ಗುಣಗಳನ್ನೂ, ಅನುಭವದಿಂದ ನಮಗೆ ತಿಳಿದು ಬಂದ ಯಾವ ಗುಣವಿದೆಯೋ ಅದನ್ನೂ ಆಯಾ ಮದ್ದಿನ ಹೆಸರುಗಳನ್ನೂ ನೋಡಿ ಇಂದಿಗೆ ಎರಡು ವರ್ಷ ಬೆಳಗು ಬೈಗು ನಾವು ಹತ್ತಿರವಿದ್ದು ಈ ಗ್ರಂಥವನ್ನು ಸಂಪಾದಿಸಿಕೊಟ್ಟಿದ್ದೇವೆ. ಅದನ್ನು ಸುಳ್ಳೆನ್ನಬಾರದೆಂದು ನಮ್ಮ ಹಸ್ತಾಕ್ಷರ ಮಾಡಿಕೊಟ್ಟೆವು. ಅದನ್ನು ಸತ್ಯವೆಂದು ನಂಬತಕ್ಕದ್ದೆಂದು ನಾಗರೀ ಬರಹದಿಂದ ಇವನ್ನು ಬರೆದುಕೊಟ್ಟಿದ್ದೇವೆ. ಓಪ ಅಂದರೆ ಒಪ್ಪ = ರುಜು.

ಈ ಪತ್ರದ ಮೇಲಿಂದ ಕೊಚ್ಚಿಯಲ್ಲಿ "ದೀ = ಕೊಡು" ಕ್ರಿಯೆಯು "ದೇ" ಎಂಬ ರೂಪದಲ್ಲಿ ಮತ್ತು ದಕ್ಷಿಣ ಕನ್ನಡದ ಸಾರಸ್ವತರು ತಪ್ಪುರೂಪದಲ್ಲಿ ಬಳಸುವ "ರಾಬ್" = ಇರು, ನಿಲ್ಲು ಎಂಬುದು "ರಾವ್" ರೂಪದಲ್ಲಿ

ಬಳಸಲ್ಪಡುತ್ತಿದ್ದಿತೆಂದು ತಿಳಿದುಬರುತ್ತದಲ್ಲದೇ ತಾ ಅಥವಾ ತರು ಎಂಬ ಅರ್ಥದಲ್ಲಿ "ಅಸ್" ಕ್ರಿಯೆಯು ಬಳಕೆಯಲ್ಲಿತ್ತೆಂದು ತಿಳಿದುಬರುತ್ತದೆ.

ಇನ್ನು ಜ್ಞಾನೇಶ್ವರಿಯಲ್ಲಿ ಇರುವ ಮತ್ತು ಮರಾಠಿಯಲ್ಲಿ ಇಲ್ಲದ ಹಾಗೂ ಪ್ರಸುದಿನ ವ್ಯವಹಾರಕ್ಕೆ ಆವಶ್ಯಕವಾಗಿರುವ ಕೆಲವು ಶಬ್ದಗಳನ್ನು ಕೊಟ್ಟು ಅವುಗಳು ಕೊಂಕಣಿ ಮೂಲದವುಗಳೆಂದು ಸಿದ್ಧಪಡಿಸಲಾಗುವುದು.

**೧. ಸಾಂಪಡ = ಸಿಲುಕಿಬೀಳು; ೧.೨೦೧॥ ೨. ಆಡಳ = ಎಡವು; ಎಡತಾಕು ೧.೨೪೭॥ ೩. ವಚಿಜೆ = ಹೋಗುವುದು ೧.೨೪೦॥ ೪. ಪಿಸೇಂ = ಹುಚ್ಚು ೨.೯೩॥ ೫. ಗೋಮಟೇಂ = ಚೆಲೋ, ಚಂದದ ೨.೨೯೯॥ ೬. ಪಾಹಲೇಂ = ಬೆಳಗು ೨.೩೫೫॥ ೭. ಶುದ್ಧಿ = ಸುದ್ದಿ ೫.೭೯॥ ೮. ಕಾಹಾಣಿ = ಕಥೆ ೬.೧೪೨॥ ೯. ವೋತಪಲೀ = ಬಿಸಿಲು ೭.೧೩೧॥ ೧೦. ವರಾಡಿಕ ೭.೧೬೬ ವರ್ಹಾಡಿಕ - ಮದುವೆ ೯.೨೩೮॥ ೧೧. ಸಾಂಜ ವೇಳ = ಬೈಗು, ಸಂಜೆ ೯.೭೨॥ ೧೨. ಜಾ = ಆಗು ೮.೧೨೦ ೧೩. ಸಾನ = ಚಿಕ್ಕ ೯.೨೫೧॥ ೧೪. ಘಾಲ = ಹಾಕು ೧.೨೫೮॥ ೧೫. ಯೇಣೇಂ = ಈ ಕಡೆಯಿಂದ ೬.೧೫೫.**

೧. ಸಾಂಪಡ = ಸಿಲುಕಿಬೀಳು, ಬಂಧನಕ್ಕೊಳಗಾಗು ಎಂಬರ್ಥದ ಕ್ರಿಯೆಯು ಸಂಸ್ಕೃತದ "ಸಂಬಂಧ್" ಎಂಬ ಕ್ರಿಯೆಯ ಕೊಂಕಣಿ ರೂಪಾಂತರವಾಗಿರುತ್ತದೆ. ಮತ್ತು ಅದು ಅದೇ ಅರ್ಥದಲ್ಲಿ ಜ್ಞಾನೇಶ್ವರಿಯಲ್ಲಿ ಬಳಸಲ್ಪಟ್ಟಿದೆ. "ಕಳಿಕೇ ಮಾಜ ಸಾಂಪಡೇ = ಮೊಗ್ಗಿನೊಳಗೆ ಬಂಧಿಸಲ್ಪಡುತ್ತದೆ" ಮರಾಠಿಯಲ್ಲಿ "ಸಾಂಪಡಣೇ" ಕ್ರಿಯಾಪದವಿದೆಯಾದರೂ ಅದರ ಅರ್ಥವು "ದೊರಕು; ಹಾದಿಯಲ್ಲಿ ಎದುರಾಗು" ಎಂದಿರುತ್ತದೆ.

೨. ಆಡಳ = ಎಡವು. ಎಡತಾಕು, ತಾಗು ಎಂಬರ್ಥದ ಕ್ರಿಯೆಯು ಸಂಸ್ಕೃತದ ಆ+ದಲ್ ಎಂಬುದರ ರೂಪಾಂತರವಾಗಿರುತ್ತದೆ. ಮತ್ತು ಅದು ಜ್ಞಾನೇಶ್ವರಿಯಲ್ಲಿ ಅದೇ ಅರ್ಥದಲ್ಲಿ ಬಳಸಲ್ಪಟ್ಟಿದೆ. ಅಸತಾ ದೀಪ ದವಡಿಜೇ । ಮಗ ಅಂಧಕಾರಿಂ ರಾಹಾಟಿಜೇ । ತರಿ ಉಜೂಟಿ ಕಾಂ ಆಡಳಿಜೇ । ಜಯಾ ಪರೀ ॥ ೧-೨೪೭ ॥ ಇದ್ದ ದೀಪವನ್ನು ನೊಂದಿಸಿ । ಕತ್ತಲೆಯಲ್ಲಿ ತಿರುಗಾಡಿ । ಸರಳವಾದ ಸ್ಥಳದಲ್ಲಿ ಕೂಡ ಎಡವುವಂತೆ । ಈ ಕ್ರಿಯಾಪದವು ಕೂಡ ಮರಾಠಿಯಲ್ಲಿ ಇಲ್ಲ. ಇದರ ಬದಲಿಗೆ ಅಡಖಳ ಕ್ರಿಯೆಯು ಬಳಸಲ್ಪಡುತ್ತದೆ.

೩. ವಚ = ಹೋಗು. ವಚಿಜೆ = ಹೋಗುವುದು. ಹೋಗತಕ್ಕದ್ದು. "ಕಾಂ ಸಮೋರ ಅಗ್ನಿ ದೇಖೌನೀ । ಜರೀ ನ ವಚಿಜೇ ವೋಸಂಡೌನೀ । ತರೀ ಕ್ಷಣಾ ಏಕಾ ಕವಳುನೀ । ಜಾಳೂಂ ಸಕೇ ॥ ೧-೨೪೦ ॥ ಎದುರಿಗೆ ಬೆಂಕಿಯನ್ನು ಕಂಡು ಅದನ್ನು ತೊರೆದು ಹೋಗದಿದ್ದರೆ ಒಂದು ಕ್ಷಣದೊಳಗೆ ಅದು ಆವರಿಸಿ ಸುಟ್ಟುಹಾಕುವುದು, ಈ ಕ್ರಿಯೆ ಮರಾಠಿಯಲ್ಲಿ ಇಲ್ಲ.

೪. ಪಿಸೇಂ = ಹುಚ್ಚು. "ಜಾತ್ಯಂಧಾ ಲಾಗೇ ಪಿಸೇ । ಮಗತೇಂ ಸೈರಾ ಧಾಂವಜೈಸೇ" ॥ ೨-೯೩ ॥ "ಹುಟ್ಟುಕುರುಡನಿಗೆ ಹುಚ್ಚು ಹಿಡಿದರೆ ಕಂಡಾಬಟ್ಟೆ ಓಡುವಂತೆ" ಈ ಶಬ್ದವು ಮರಾಠಿಯಲ್ಲಿ ಸಾರ್ವತ್ರಿಕವಾದುದಲ್ಲ, ಇದರ ಬದಲಿಗೆ "ವೇಡ್" ಎಂಬ ಶಬ್ದ ಬಳಸಲ್ಪಡುತ್ತದೆ.

೫. ಗೋಮಟೇಂ = ಸುಂದರ. ಈ ಶಬ್ದದ ಮೂಲ ಯಾವುದೆಂದು ತಿಳಿದುಬಂದಿಲ್ಲ. ಇದು ಸ್ತ್ರೀಲಿಂಗದಲ್ಲಿ ಗೋಮಟಿ ಮತ್ತು ಪುಲ್ಲಿಂಗದಲ್ಲಿ ಗೋಮಟೊ ಎಂಬುದಾಗಿ ಮತ್ತು ನಾಮಪದ ರೂಪದಲ್ಲಿ "ಕೊರಳು ಅಥವಾ ಕುತ್ತಿಗೆ" ಎಂಬ ಅರ್ಥದಲ್ಲಿ ಬಳಸಲ್ಪಡುತ್ತದೆ. ಮತ್ತು ಹೆಚ್ಚಿಸ ಮಟ್ಟಿಗೆ ಮೊಳೆಯಂತೆ ಉದ್ದವಾದ ಚಿಗುರುಗಳಿಗಾಗಿ ಅಥವಾ ಮೊಳಕೆಗಳಿಗಾಗಿ ಬಳಸಲ್ಪಡುತ್ತದೆ. ಕಣಲೆಯ ಮೊಳಕೆ=ಕಿರಲಾಗೊಮಟಿ ಅಥವಾ ಕಿರಲಾಕೊಮಟಿ: ಚಿಗುರು ಅಥವಾ ಅಂಕುರ ಎಂಬ ಅರ್ಥದ "ಕೋಮ್ ಅಥವಾ ಕೋಂಬ್" ಎಂಬ ಶಬ್ದವು ಕೊಂಕಣಿಯಲ್ಲಿದೆ. ಅದರ ರೂಪಾಂತರವೇ ಈ ಕೋಮಟಿ: ಗೋಮಟಿ ಆಗಿರಬಹುದೆಂದು ತೋರುತ್ತದೆ. "ಕೋಮಲ" ಎಂಬ ಶಬ್ದವು ಇದರ ಮೂಲವಾಗಿರಬಹುದೇನೋ ಎಂಬ ಅನುಮಾನವಿದೆ. ಇದು ಜ್ಞಾನೇಶ್ವರಿಯಲ್ಲಿ "ಗೋಮಟೇಂ ಕಾಹೀಂ ಪಾವೆ । ತರೀ ಸಂತೋಷೇಂ ತೇಣೇಂ ನಾಭಿಭವೇ ॥ ೨-೨೯ ॥ ಚೆಲೋದಾದುದು ದೊರಕಿತೆನ್ನಲು ಸಂತೋಷವಾಗದು ॥ ಎಂಬ ಆರ್ಥದಲ್ಲಿ ಬಂದಿದೆ. ಇದು ಮರಾಠಿಯಲ್ಲಿ ಇಲ್ಲ.

೬. ಪಾಹಲೇಂ = ಬೆಳಗು, ಪ್ರಾತಃಕಾಲ. ಈ ಶಬ್ದವು ಮರಾಠಿಯಲ್ಲಿ ಇಲ್ಲ. ಇದು ಸಂಸ್ಕೃತದ "ಪ್ರಭಾತಮ್" ಎಂಬ ಶಬ್ದದ — ಕೊಂಕಣಿಯಲ್ಲಿನ ಎರಡು ರೂಪಾಂತರಗಳಲ್ಲಿ ಒಂದಾಗಿರುತ್ತದೆ. ಅಂದರೆ ಪ್ರಭಾತಮ್ ಎಂಬ ಶಬ್ದವು ಕೊಂಕಣಿಯಲ್ಲಿ ಪಹಾಲೆಂ=ಬೆಳಗು; ಪಹಾಂತೆಂ=ಮುಂಜಾವು ಎಂದು ಎರಡು ಅರ್ಥಗಳಲ್ಲಿ ಎರಡು ರೂಪಗಳನ್ನು ತಾಳುತ್ತದೆ ಮತ್ತು ಫಾಲೆಂ ಹಾಗೂ ಫಾಂತೆಂ ಎಂಬುದಾಗಿ ಉಚ್ಚರಿಸಲ್ಪಡುತ್ತದೆ. ಪಹಾಂತೆಂ ಶಬ್ದವು ಮರಾಠಿಯಲ್ಲಿ "ಪಹಾಂಟ" ಎಂಬುದಾಗಿ ಸ್ತ್ರೀಲಿಂಗ ರೂಪದಲ್ಲಿ ಬಳಸಲ್ಪಡುತ್ತದೆ.

ಕೊಂಕಣಿಯಲ್ಲಿನ ಪಹಾಲೆಂ ಶಬ್ದವನ್ನೇ ಏಕನಾಥರು ಜ್ಞಾನೇಶ್ವರಿಯಲ್ಲಿ "ಪಾವಲೇಂ" ಮಾಡಿದ್ದಾರೆ. "ಮರಾಠೀಶಬ್ದರತ್ನಾಕರ"ವೆಂಬ ಶಬ್ದಕೋಶದಲ್ಲಿ ಕೋಶಕಾರರು ಹಲವು ಕೊಂಕಣಿ ಶಬ್ದಗಳನ್ನು ಸೇರಿಸಿ ತಪ್ಪುತಪ್ಪಾದ ಅರ್ಥಗಳನ್ನು ಕೊಟ್ಟಿದ್ದಾರೆ. ಮತ್ತು ಆ ಶಬ್ದಗಳು ಕಾರವಾರ ಕಡೆಯಲ್ಲಿನ ಮರಾಠಿ ರೂಪಗಳೆಂದು ಸೂಚಿಸಿದ್ದಾರೆ. ಉದಾ:— **“ಫಾಲೇಂ [ಅ] ಕಾರವಾರ ಕಡೇ ಉದ್ಯಾಂ”** ಅಂದರೆ ಫಾಲೇಂ ಶಬ್ದವು ಅವ್ಯಯವಾಗಿದ್ದು ಕಾರವಾರ ಕಡೆಯಲ್ಲಿ ಅದರ ಅರ್ಥವು "ನಾಳೆ" ಎಂದಿರುತ್ತದೆ ಎಂಬುದಾಗಿ ಹೇಳಿದ್ದಾರೆ. ಈ ಕೋಶಕಾರರಿಗೆ ಕೊಂಕಣಿಯ ಪ್ರಾಥಮಿಕ ಜ್ಞಾನ ಕೂಡ ಇಲ್ಲವೆಂದು ಅವರ ವಿವರಣೆಯಿಂದ ತಿಳಿದುಬರುತ್ತದೆ. ಹೇಗೆಂದರೆ "ಫಾಲೆಂ" ಎಂಬ ಶಬ್ದವು ನಪುಂಸಕಲಿಂಗ ನಾಮಪದದ ಪ್ರಥಮಾವಿಭಕ್ತಿ ಏಕವಚನವಾಗಿದ್ದು ಅದರ ಅರ್ಥವು ಬೆಳಗು ಅಥವಾ ಪ್ರಾತಃಕಾಲ" ಎಂದಿಷ್ಟೇ ಇರುತ್ತದೆ. ಅದರ ಅರ್ಥವು ನಾಳೆ ಎಂದಾಗಬೇಕಾದರೆ ಅದನ್ನು "ಫಾಲ್ಯಾಕ" ಎಂದು ರೂಪಾಂತರಿಸಬೇಕು. ಹಾಗೆಯೇ ನಾಳೆ ಎಂಬ ಅರ್ಥದಲ್ಲಿ "ಪ್ರಭಾತೇ" ಎಂಬ ಸಂಸ್ಕೃತ ಶಬ್ದದ ರೂಪಾಂತರ ಪಹಾಯೇ ಎಂಬ ರೂಪವು ಫಾಯೇ ಇಲ್ಲವೇ ಫಾಯಿ ಎಂಬುದಾಗಿ ಬಳಸಲ್ಪಡುತ್ತದೆ. ಅಲ್ಲದೇ ಬೆಳಗು ಎಂಬ ಅರ್ಥದಲ್ಲಿ "ಸಕಾಳ್" ಎಂಬ ಶಬ್ದವು ಕೂಡ ಕೊಂಕಣಿಯಲ್ಲಿ ಬಳಸಲ್ಪಡುತ್ತಿದ್ದು "ಬೆಳಗಾತ" ಎನ್ನಲು "ಸಕಾಳಿಂ" ಎಂಬ ಸಪ್ತಮೀ ವಿಭಕ್ತಿಯ ಏಕವಚನವನ್ನು ಹಾಗೂ "ಮುಂಜಾನೆ" ಎನ್ನಲು "ಫಾಂತೆಂ" ಶಬ್ದದ ಸಪ್ತಮೀ ವಿಭಕ್ತಿಯ ಏಕವಚನ "ಫಾಂತ್ಯಾರಿ ಎಂಬ ಶಬ್ದವನ್ನು ಬಳಸಲಾಗುತ್ತದೆ. ಹಿಂದೆ ಹೇಳಿದ ಕೋಶದಲ್ಲಿ "ಪಹಾಂಟ" ಶಬ್ದದ ಮೂಲವು "ಪ್ರಾತಃ + ತಟ" ಎಂದು ಸೂಚಿಸಿ "ಪ್ರಭಾತ" ಎಂದು ಅರ್ಥಕೊಟ್ಟಿದ್ದಾರೆ. ಅಷ್ಟೇ ಅಲ್ಲ "ಪಹಾಂಟ" ಎಂಬ ಶಬ್ದದ ಬದಲಿಗೆ "ಪಹಾಟ" ಎಂಬ ಶಬ್ದವನ್ನು ಕೊಟ್ಟಿದ್ದಾರೆ. ಹೀಗಿದ್ದರೂ "ಪಹಾಟ" ಶಬ್ದವು "ಪ್ರಭಾತ" ಶಬ್ದದ ರೂಪಾಂತರವೆಂದು ಅವರು ತಿಳಿದಿಲ್ಲ. ಹಾಗೆಯೇ ಆರ್ಯಭೂಷಣ ಮರಾಠಿ ಕೋಶದಲ್ಲಿಯೂ "ಪಹಾಟ" ಎಂಬ ರೂಪವೇ ಇದೆ. ತವರೆ ಅದರ ಕೆಳಗಡೆ "ಪಹಾಂಟಪಟೇಂ" = At early morn; at break of day ಎಂದು ಅರ್ಥಕೊಟ್ಟಿದ್ದಾರೆ. ಅಂದರೆ ಮರಾಠಿ ವಿದ್ವಾಂಸರು ಶಬ್ದಗಳ ಮೂಲವನ್ನು ಮತ್ತು ಅರ್ಥಗಳನ್ನು ನಿರ್ಧರಿಸುತ್ತಿರುವಾಗ ಮರಾಠಿಗೆ ಅತ್ಯಂತ ಸಮೀಪವಾದ ಬೇರೊಂದು ಭಾಷೆ ಇದೆ ಎಂಬುದನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲವೆಂದು ಇದರಿಂದ ಸಿದ್ಧವಾಗುತ್ತದೆ.

೭. ಶುದ್ಧಿ = ಸುದ್ದಿ. ಸಮಾಚಾರ. "ಜಗಾಚಾ ಜೇಮೀಂ ಆಹೇ । ಪರೀ ಕವಣಾಚಾ ಕಾಹೀಂನೋಹೇ । ಜಗಚಿ ಹೇಂ ಹೋಯೇಂ ಜಾಯೇ । ತೋ ಶುದ್ಧಿಹೀ ನೇಣೇ ॥ ೫-೭೯ ॥ ಜಗತ್ತಿನಲ್ಲಿನ ಪ್ರತಿಯೊಂದು ಪ್ರಾಣಿಯೊಳಗೂ ಇದ್ದಾನೆ. ಆದರೆ ಯಾರೊಬ್ಬನವನು ಎಷ್ಟುಮಾತ್ರಕ್ಕೂ ಅಲ್ಲ । ಈ ಜಗತ್ತು ಆಗಲಿ, ಹೋಗಲಿ । ಅವನು (ಅದರ) ಸುದ್ದಿಯನ್ನು ಅರಿಯನು ಅಂದರೆ ಅವನು ನಿರ್ಲಿಪ್ತನು. "ಸುದ್ದಿ" ಎಂಬ ಶಬ್ದವು ಸಂಸ್ಕೃತದ "ಶ್ರುತಿ" ಎಂಬ ಶಬ್ದದ ಕೊಂಕಣಿ ರೂಪಾಂತರವಾಗಿದ್ದು ಪ್ರಥಮಾ ವಿಭಕ್ತಿಯ ಹಾಗೂ ದ್ವಿತೀಯಾ ವಿಭಕ್ತಿಯ ಏಕವಚನದಲ್ಲಿ ಮಾತ್ರ "ಸುದ್ದಿ" ಎಂಬ ರೂಪದಲ್ಲಿ ಬಳಸಲ್ಪಡುತ್ತದೆ. ಉಳಿದ ಕಡೆಗಳಲ್ಲಿ ಅದರ ರೂಪವು "ಸುದಿ" ಎಂದೇ ಇರುತ್ತದೆ. ಉದಾ:—ಸುದಿಯೊ=ಸುದ್ದಿಗಳು, ಸುದಿಯೇಕ=ಸುದ್ದಿಗೆ ಇತ್ಯಾದಿ. ಏಕನಾಥರಿಗೆ ಕೊಂಕಣಿ ಜ್ಞಾನೇಶ್ವರಿಯಲ್ಲಿದ್ದ "ಸುದ್ದಿ" ಎಂಬ ಶಬ್ದದ ಮೂಲವಾವುದೆಂದು ತಿಳಿಯದೇ ಹೋದುದರಿಂದ ಅವರು ಸುದ್ದಿಯನ್ನು ಶುದ್ಧಿಮಾಡಿದರೆನ್ನಬಹುದು. ಮತ್ತು ಆ ಮೂಲಕ ಇಡೀ ಜ್ಞಾನೇಶ್ವರಿಯನ್ನೇ ಶುದ್ಧೀಕರಿಸಿದರು.

೮. ಕಾಹಾಣೀ = ಕಥೆ. ಇದರ ವಿವರವು ಹಿಂದೆ ಬಂದಿದೆ. ಮರಾಠಿಯಲ್ಲಿ ನೂರಾರು ಹಿಂದೀ ಶಬ್ದಗಳು ಉಳಿದುಕೊಂಡಿದ್ದರೂ ಹಿಂದಿಯಲ್ಲಿನ "ಕಹಾಣಿ" ಎಂಬ ಶಬ್ದವು ಅದರಲ್ಲಿ ಇಲ್ಲದಿರುವುದು ಆಶ್ಚರ್ಯಕರವಾಗಿದೆ. ಆದುದರಿಂದ ಜ್ಞಾನೇಶ್ವರಿಯಲ್ಲಿನ ಕಾಹಾಣೀ ಶಬ್ದವು ಕೊಂಕಣಿಯಲ್ಲಿನ "ಕಹಣಿ" ಶಬ್ದದ ರೂಪಾಂತರವೆಂದು ಹೇಳಿದರೆ ತಪ್ಪಾಗದು.

೯. ವೋತಪಲೀ = ಬಿಸಿಲು, ಸೌಮ್ಯವಾದ ಬಿಸಿಲು. ಈ ಶಬ್ದವು ಸಂಸ್ಕೃತದಲ್ಲಿನ "ಆತಪ" ಎಂಬುದರ ಕೊಂಕಣಿ ರೂಪಾಂತರಗಳಾದ ಓತಪ ಮತ್ತು ಓಲಅ ಅಥವಾ ತರುವಾಯ ಓಳವ್ ಎಂಬ ಶಬ್ದಗಳಲ್ಲಿನ "ಓತಪ" ಶಬ್ದದೊಂದಿಗೆ ಅಲ್ಪಾರ್ಥಕ "ಲೀ" ಪ್ರತ್ಯಯ ಕೂಡಿ ಹುಟ್ಟಿದ ಶಬ್ದವಾಗಿರುತ್ತದೆ. ಜ್ಞಾನೇಶ್ವರಿಯಲ್ಲಿ ಎಲ್ಲೆಲ್ಲಿಯೂ "ಓ" ಎಂಬ ಸ್ವರದ ಸ್ಥಾನದಲ್ಲಿ "ವೋ" ಬಂದಿರುತ್ತದೆ. ವೋತಪಲೀ ಶಬ್ದವು ಮುಂದಿನ ಪದ್ಯದಲ್ಲಿದೆ:— "ತೈಸೀಜ ಗುರುಕೃಪಾ ಉಖಾ ಉಜಳಲೀ । ಜ್ಞಾನಾಚೀ ವೋತಪಲೀ ಪಡಲೀ ॥ ೭-೧೩೧ ॥ ಅರ್ಥ:— "ಹಾಗೆಯೇ ಗುರುಕೃಪಾ ರೂಪದ ಉಷೆಯು ಬೆಳಗಿತು ಮತ್ತು ಜ್ಞಾನರೂಪದ ಕೋಮಲ ಬಿಸಿಲು ಬಿದ್ದಿತು". ಕೊಂಕಣಿಯಲ್ಲಿ ಓತಪ ಇದ್ದುದು ಓತಅ ಆಗಿ ಈಗ ಬರೇ "ಓತs" = ಬಿಸಿಲು ಎಂಬ ರೂಪ ಬಳಸಲ್ಪಡುತ್ತದೆ.

ಒಳವ್ ಅಥವಾ ಒಳವು ಎಂಬುದರ ಅರ್ಥವು ಮಳೆಗಾಲದಲ್ಲಿ ಮಳೆ ಇಲ್ಲದೇ ಬೆಳಕಾಗಿರುವಿಕೆ. ಇಲ್ಲದೇ ಮಳೆ ಬಂದು ಬಿಟ್ಟ ತರುವಾಯ ಮೋಡಗಳೆಲ್ಲ ಚದರಿ ಬೆಳಕಾಗುವಿಕೆ ಎಂದಿರುತ್ತದೆ. ಅಂದರೆ ಸೂರ್ಯನ ಬೆಳಕೇ ಹೊರತು ತೀವ್ರವಾದ ಬಿಸಿಲಲ್ಲ. ಮರಾಠಿಯಲ್ಲಿ ಒಂದೆ ಹೇಳಿದ ಯಾವ ಶಬ್ದಗಳೂ ಇಲ್ಲ ಅಷ್ಟೇ ಅಲ್ಲ. "ಬಿಸಿಲು" ಎನ್ನಲು ಯೋಗ್ಯವಾದ ಶಬ್ದವೇ ಇಲ್ಲ. ಆದುದರಿಂದ ಕೊಂಕಣಿಯಲ್ಲಿನ "ಉನ್ಹ = ಬಿಸಿ" ಎಂಬ ವಿಶೇಷಣವನ್ನು "ಊನ" ಎಂದು ಮಾರ್ಪಡಿಸಿ ಬಿಸಿಲು ಎಂಬ ಅರ್ಥದಲ್ಲಿ ನಾಮಪದವನ್ನಾಗಿ ಬಳಸುತ್ತಾರೆ. ಮತ್ತು ಬೇಸಿಗೆಕಾಲ ಎನ್ನಲು "ಉನ್ಹಾಳಾ" ಎಂಬ ಶಬ್ದವನ್ನು ಬಳಸುತ್ತಾರೆ. "ಊನ" ಶಬ್ದವನ್ನು ಬಿಸಿಲು ಎಂಬ ಅರ್ಥದಲ್ಲಿ ಬಳಸಿದುದರಿಂದ ಈಗ ಬಿಸಿ ಅನ್ನಲು ಫಾರಸಿ ಭಾಷೆಯ ಗರಮ್ ಎಂಬ ಶಬ್ದವನ್ನು ಬಳಸಬೇಕಾಗಿದೆ. ಪದ್ಯಗಳಲ್ಲಿ ಬಿಸಿ ಎಂಬ ಅರ್ಥದಲ್ಲಿ ಊನ್ ಶಬ್ದವೂ ಬಳಸಲ್ಪಡುತ್ತದೆ.

೧೦. ವರಾಡಿಕ ಅಥವಾ ವರ್ಹಾಡಿಕ=ಮದುವೆ. ತೇಥ ಇಚ್ಛಾ ದೇ ಕುಮಾರೀ ಜಾಲೀ । ಮಗ ತೇ ಕಾಮಾಚಿಯಾ ತಾರುಣ್ಯಾ ಆಲೀ । ತೇಥ ದ್ವೇಷೇಂಸಿ ಮಾಂಡಿಲೀ । ವರಾಡಿಕ ॥ ೭-೧೬೬ ॥ "ಆಗ ಇಚ್ಛೆ ಎಂಬ ಕನ್ಯೆ ಹುಟ್ಟಿದಳು. ತರುವಾಯ ಅವಳು ಕಾಮದ ಯೌವನಕ್ಕೆ ಬಂದಳು; ಆಗ ವೈರಿಗಳೊಂದಿಗೆ ಮದುವೆ ಮಾಡಲಾದಳು." ಕೊಂಕಣಿಯಲ್ಲಿ ಸಂಸ್ಕೃತದ ಆಹರ್=ತಾ. ತರು ಎಂಬುದರ ರೂಪಾಂತರ ಹಾಡ್ ಮತ್ತು ಆನೀ=ತರು. ತಾ. ಎಂಬುದರ ರೂಪಾಂತರ ಆಣ್ ಎಂಬ ಎರಡು ಕ್ರಿಯೆಗಳಿವೆ. ಆಣ್ ಎಂಬುದು ಮರಾಠಿಯಲ್ಲಿ "ಆಣ್" ಎಂಬ ರೂಪದಲ್ಲಿ ಬಳಸಲ್ಪಡುತ್ತದೆ. ಆದರೆ ಮರಾಠಿಯಲ್ಲಿ "ಹಾಡ್" ಎಂಬ ಕ್ರಿಯಾಪದವಿಲ್ಲ. "ವರ್ಹಾಡಿಕ" ಎಂಬ ಶಬ್ದವು ವರ=ಗಂಡು (=ಮದುಮಗ) ಹಾಡಿಕ=ತರುವಿಕೆ ಎಂಬ ಎರಡು ಶಬ್ದಗಳ ಕೂಡಿಕೆಯಿಂದ ಹುಟ್ಟಿದ ಶಬ್ದವಾಗಿರುತ್ತದೆ. ಆದುದರಿಂದ ಗಂಡು ತರುವಿಕೆ ಎಂಬುದರ ಅರ್ಥವು ಮದುವೆಮಾಡುವಿಕೆ ಎಂಬರ್ಥದಲ್ಲಿ ಬಳಕೆಗೆ ಬಂದು ಈಗ "ಮದುವೆ" ಎಂಬರ್ಥದಲ್ಲಿ ಕೊಂಕಣಿಯಲ್ಲಿ ಬಳಕೆಯಲ್ಲಿದೆ. ಆಶ್ಚರ್ಯದ ವಿಷಯವೆಂದರೆ ಜ್ಞಾನೇಶ್ವರಿಯಲ್ಲಿ ಮದುವೆ ಎಂಬ ಅರ್ಥದಲ್ಲಿ ಬಳಸಲ್ಪಟ್ಟ ವರ್ಹಾಡಿಕ ಎಂಬ ಶಬ್ದವು, ಈಗಿನ ಮರಾಠಿಯಲ್ಲಿ ಇಲ್ಲದಿದ್ದರೂ "ವರ್ಹಾಡ" ಎಂಬ ಶಬ್ದವು[1]

---

1. ಲಗ್ನಕಾರ್ಯಾಸಾಠೀಂ ಜಮಲೇಲೀ ಮಂಡಳೀ—ಮರಾಠೀ ಶಬ್ದರತ್ನಾಕರ.

ಮದುವೆಗೆ ಕೂಡಿದ ಜನರ ಸಮುದಾಯವೆಂಬ ಮತ್ತು ಮದುವೆಯ ಮೆರವಣಿಗೆ[1] ಎಂಬ ಅರ್ಥದಲ್ಲಿ ಮರಾಠಿಯ ಶಬ್ದಕೋಶಗಳಲ್ಲಿ ಇರುವುದಾಗಿದೆ. "ವರ್ಹಾಡಿಕ" ಎಂಬ ಶಬ್ದವು ಕೊಂಕಣಿಯಲ್ಲಿ "ವ್ಹಾಡೀಕ" ಎಂಬ ರೂಪದಲ್ಲಿ ಬಳಸಲ್ಪಡುತ್ತದೆ. ಮತ್ತು ಗಂಡಿನ ಕಡೆಯ ದಿಬ್ಬಣವು "ವರಾಣ" ಎನಿಸಿಕೊಳ್ಳುತ್ತದೆ. ಅದು "ವರ+ಯಾನ" ಗಂಡಿನ ಪಯಣ ಎಂಬ ಶಬ್ದದ ರೂಪಾಂತರವಾಗಿರುತ್ತದೆ. ದಿಬ್ಬಣಿಗನನ್ನು "ವರಾಣಕಾರ್" ಎನ್ನುತ್ತಾರೆ. "ವರ್ಹಾಡ" ಎಂಬ ಶಬ್ದದ ಅರ್ಥವನ್ನೇ ಮದುವೆಗೆ ನೆರೆದ ಜನರ ಸಮುದಾಯ" ಎಂಬುದಾಗಿ ಮರಾಠಿ ಕೋಶಕಾರರು ಕೊಟ್ಟಿದ್ದರೂ ಅದರ ಅರ್ಥವು ದಿಬ್ಬಣವೆಂದೇ ಇದೆ. ಮರಾಠಿಯಲ್ಲಿ ಹಾಡ್ ಎಂಬ ಕ್ರಿಯಾಪದವಿಲ್ಲದುದರಿಂದ "ವರ್ಹಾಡಿಕ" ಎಂಬ ಶಬ್ದವು ಕೊಂಕಣಿಯದೇ ಎಂದು ಸಿದ್ಧವಾಗುತ್ತದೆ. ಶಬ್ದೌಘ ಕಲ್ಪದ್ರುಮವೆಂಬ ಸಂಸ್ಕೃತ ಶಬ್ದಕೋಶದಲ್ಲಿ "ವಾರ್ಧುಕ್ಯಮ್ ವಿವಾಹೇ ಸ್ಯಾತ್" ಅಂದರೆ "ವಾರ್ಧುಕ್ಯಮ್" ಶಬ್ದದ ಅರ್ಥವು ಮದುವೆ ಎಂದು ಹೇಳಿದೆ. ಅದು ಯಾವ ಮೂಲದಿಂದ ಹುಟ್ಟಿದುದೆಂದು ತಿಳಿದುಕೊಳ್ಳಲಾಗಲಿಲ್ಲ. ಅದೊಂದು ತದ್ಧಿತ ಶಬ್ದವಾಗಿರಬಹುದು. ಮೊದಲನೆಯ ಶಬ್ದ "ವರ" ಎಂದು ಎಣಿಸಿದರೆ ಎರಡನೆಯ "ಧುಕ ಎಂಬ ಶಬ್ದವು ಯಾವ ಅರ್ಥದ್ದೆಂದು ಹೇಳಲು ಅಥವಾ ಊಹಿಸಲು ಎಡೆಯಿಲ್ಲ. ಅಲ್ಲದೇ ಆ ವಾರ್ಧುಕ್ಯಮ್ ಶಬ್ದವು ಬೇರೆ ಕೋಶಗಳಲ್ಲಿ ಈ ತನಕ ದೊರಕಿಲ್ಲ.

೧೧. ಸಾಂಜವೇಳ=ಬೈಗಿನ ಹೊತ್ತು. ಇದು ಸಂಧ್ಯಾವೇಲಾ ಎಂಬ ಸಂಸ್ಕೃತ ಶಬ್ದದ ಕೊಂಕಣಿ ರೂಪಾಂತರವಾಗಿರುತ್ತದೆ. ಇದು ಜ್ಞಾನೇಶ್ವರಿಯಲ್ಲಿ ಮುಂದಿನಂತೆ ಬಂದಿದೆ "ಯ್ಹೆರವೀ ಸಂಕಲ್ಪಾಚಿಯೆ ಸಾಂಜವೇಳೇ । ನಾಪೇಕ ತಿಮಿರ್ರೈಜತಿ ಬುದ್ಧೀಚೇ ಡೋಳೆ ॥ ೯-೭೭ ॥ ಅರ್ಥ ಅಥವಾ ಸಂಕಲ್ಪರೂಪದ ಬೈಗಿನ ಹೊತ್ತಿನಲ್ಲಿ ಬುದ್ಧಿಯ ಕಣ್ಣುಗಳು ಕ್ಷಣಹೊತ್ತು ಕತ್ತಲುಗೂಡುತ್ತವೆ. ಸಾಂಜವೇಳೇ=ಬೈಗಿನ ಹೊತ್ತಿನಲ್ಲಿ ಎಂಬ ಪ್ರಯೋಗವು ಅಚ್ಚ ಕೊಂಕಣಿಯಾಗಿರುತ್ತದೆ. ಈ ಪ್ರಯೋಗವು ಮರಾಠಿಯಲ್ಲಿ ಇಲ್ಲ.

೧೨. ಜಾ=ಆಗು. ಇದು ಸಂಸ್ಕೃತದ ಜನ್ ಧಾತುವಿನ ಕೊಂಕಣಿ ರೂಪಾಂತರವಾಗಿರುತ್ತದೆ. ಇದು ಕೊಂಕಣಿಯಲ್ಲಿ ಸಂಸ್ಕೃತದಂತೆಯೇ ಹುಟ್ಟು ಮತ್ತು ಆಗು ಎಂಬ ಅರ್ಥಗಳಲ್ಲಿ ಬಳಸಲ್ಪಡುತ್ತದೆ. ಮರಾಠಿಯಲ್ಲಿ "ಜಾ ಕ್ರಿಯೆಯ ಸಾಮಾನ್ಯ ಭೂತಕಾಲದ ಪದಗಳ ಹೊರತು ಬೇರೆ ರೂಪಗಳಿಲ್ಲ.

---

1. A marriage procession, the whole assemblage at a wedding, Arya Bhushan School Dictionary.

ಆದರೆ ಜ್ಞಾನೇಶ್ವರಿಯಲ್ಲಿ ಇದರ ಬೇರೆ ಪ್ರಯೋಗಗಳಿವೆ. ಉದಾ:—ಸುಖ ಜಾವ್ರೋಂ ಲಾಗಲೇಂ ಫಾವಾ ॥ ೭-೧೯೧ ॥ ಅರ್ಥ:—ಸುಖವು ಪ್ರಾಪ್ತವಾಗಲಿಕ್ಕೆ ತೊಡಗಿತು.

೧೩. ಸಾನ=ಚಿಕ್ಕ, ಕಿರಿದು. ಇದು ಸಂಸ್ಕೃತದ ಶ್ಲಕ್ಷ್ಣ ಎಂಬ ಶಬ್ದದಿಂದ ಕೊಂಕಣಿಯಲ್ಲಿ ರೂಪಾಂತರವಾದ ಮೂರು ಶಬ್ದಗಳಲ್ಲಿ ಒಂದಾಗಿರುತ್ತದೆ. ೧. ಸಾನ=ಚಿಕ್ಕ, ಕಿರಿದು. ೨. ಲ್ಹಾನ=ನುಣ್ಣನ, ಚೋಳು. ೩. ಸಣ್ಣ=ಸೂಕ್ಷ್ಮವಾದ. ತೆಳ್ಳನ (ಬಟ್ಟೆ) ಇವುಗಳಲ್ಲಿ ಲ್ಹಾನ ಎಂಬ ಶಬ್ದವು ಮಾತ್ರ ಮರಾಠಿಯಲ್ಲಿ ಲಹಾನ ಆಗಿ ಮಾರ್ಪಟ್ಟು ಚಿಕ್ಕ ಎಂಬ ಅರ್ಥದಲ್ಲಿ ಬಳಸಲ್ಪಡುತ್ತದೆ. ಜ್ಞಾನೇಶ್ವರಿಯಲ್ಲಿ ಅದರ ಪ್ರಯೋಗವು ಮುಂದಿನಂತಿದೆ. ಕಾಂ ಶಾಖಾ ಸಾನಿ ಯಾ ಥೋರಾ ॥ ೯-೨೫೧ ॥ "ಕೊಂಬೆಯು ಚಿಕ್ಕದಿರಲಿ ದೊಡ್ಡದಿರಲಿ" ಇದರಲ್ಲಿ ಸಾನಿಶಾಖಾ=ಚಿಕ್ಕಗೆಲ್ಲು ಎಂಬ ಪ್ರಯೋಗವು ಕೊಂಕಣಿಯಾಗಿರುತ್ತದೆ. ಮರಾಠಿಯಲ್ಲಿ ಅಕಾರಾಂತ ವಿಶೇಷಣಗಳು ವಿಶೇಷ್ಯದ ಲಿಂಗಕ್ಕನುಸಾರವಾಗಿ ಬದಲಾಗುವುದಿಲ್ಲ. ಅಂದರೆ ಮರಾಠಿಯಲ್ಲಿ ಕೊಂಕಣಿಯಂತೆ "ಲಹಾನಿ ಶಾಖಾ" ಎಂಬಂಥ ಪ್ರಯೋಗವಿಲ್ಲ. ಅದು "ಲಹಾನ ಶಾಖಾ" ಎಂದಾಗುತ್ತದೆ. ಮರಾಠಿಯಲ್ಲಿ "ಸಾನ" ಎಂಬ ಶಬ್ದದ ಸ್ವತಂತ್ರವಾದ ಪ್ರಯೋಗವಿಲ್ಲದಿದ್ದರೂ "ಚಿಕ್ಕ ಪುಟ್ಟ" ಎಂಬ ಅರ್ಥದಲ್ಲಿ "ಲಹಾನ-ಸಹಾನ" ಎಂಬ ಜೊತೆ ಬರುತ್ತದೆ. ಕೊಂಕಣಿಯಲ್ಲಿನ ಸಾನ್ಹ. ಲ್ಹಾನ, ಮತ್ತು ಸಣ್ಣ ಶಬ್ದಗಳಲ್ಲಿ ಮೊದಲಿನೆರಡು ಶಬ್ದಗಳಲ್ಲಿನ "ಹ"ಕಾರವು ಲೋಪವಾಗಿ ಸಾನ ಮತ್ತು ಲಾನ ಎಂಬ ರೂಪಗಳು ಉಳಿದಿವೆ. ದಕ್ಷಿಣ ಕನ್ನಡದ ಕ್ರೈಸ್ತರು "ಲ್ಹಾನ" ಎಂಬ ರೂಪವನ್ನೇ ಬಳಸುತ್ತಾರೆ. ಮತ್ತು ಅವರಲ್ಲಿ ಅದಕ್ಕೆ ನುಣ್ಣನ ಎಂಬ ಅರ್ಥವಲ್ಲದೇ ಚಿಕ್ಕ ಎಂಬ ಅರ್ಥ ಕೂಡ ಇದೆ.

೧೪. ಘಾಲಿ = ಹಾಕು, ಸುರಿಯು, ಹೊಡೆಯು; ಮರಾಠಿಯಲ್ಲಿ "ಘಾಲ" ಕ್ರಿಯೆಗೆ ಹಾಕು ಎಂಬ ಅರ್ಥವಿಲ್ಲ. ಹಾಕು ಎಂಬ ಅರ್ಥದಲ್ಲಿ "ಟಾಕ" ಕ್ರಿಯೆ ಬರುತ್ತದೆ. ಜ್ಞಾನೇಶ್ವರಿಯಲ್ಲಿ ಘಾಲ ಕ್ರಿಯೆಯು ಹಾಕು ಎಂಬ ಅರ್ಥದಲ್ಲಿಯೇ ಬಳಸಲ್ಪಟ್ಟಿದೆ. "ಜೈಸಾ ಘರೀಂ ಆಪುಲಾ । ವಾನಿವಸೇಂ ಅಗ್ನಿ ಲಾಗಲಾ । ತೋ ಆಣಿಕಾಂಹೀಂ ಪ್ರಜ್ವಳಿಲಾ । ಜಾಳೂನಿಘಾಲೀ ॥ ೧-೨೫೮ ॥ ಯಾವುದೊಂದು ಮನೆಗೆ ಆಕಸ್ಮಿಕವಾಗಿ ಬೆಂಕಿ ತಗಲಿದಾಗ, ಅದು ಪ್ರಜ್ವಲಿತವಾಯಿತೆಂದರೆ ಬೇರೆ ಮನೆಗಳನ್ನೂ ಸುಟ್ಟು ಹಾಕುತ್ತದೆಯೋ ಹಾಗೆ. ಜಾಳೂನಿ ಘಾಲೀ=ಜಾಳೂನಿ ಟಾಕತೋ=ಸುಟ್ಟು ಹಾಕುತ್ತದೆ.

ಯೇಣೇಂ=ಏಣೆ=ಈ ಕಡೆ, ಈ ಕಡೆಗೆ, ಈ ಕಡೆಯಿಂದ, ಈ ಹಾದಿಯಿಂದ ಈ ಏಣೆ ಎಂಬ ಶಬ್ದವನ್ನು ಕೊಂಕಣಿಯಲ್ಲಿ ಹಿಂದೆ ಕೊಟ್ಟ ನಾಲ್ಕು ಅರ್ಥಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಕ್ರೈಸ್ತರು ಬಳಸುತ್ತಾರೆ. ಮತ್ತು ಜ್ಞಾನೇಶ್ವರಿಯಲ್ಲಿ ಕೂಡ ಕೊನೆಯ ಅರ್ಥದಲ್ಲಿಯೇ ಬಳಸಲ್ಪಟ್ಟಿದೆ. "ಪಾಠೀಂ ಮಹರ್ಷಿ ಯೇಣೇಂ ಆಲೇ । ಸಾಧಕಾಂಚೇ ಸಿದ್ಧ ಜಾಲೇ । ಆತ್ಮವಿದ ಥೋರಾವಲೇ । ಯೇಣೇಂಚಿ ಪಂಥೇಂ ॥ ೬-೧೫೬ ॥ ಅರ್ಥ:—ಋಷಿಗಳು ಈ ಹಾದಿಯಿಂದ ಬಂದರು; ಸಾಧಕರಿದ್ದವರು ಸಿದ್ಧರಾದರು ಮತ್ತು ಈ ಹಾದಿಯಲ್ಲಿಯೇ ಆತ್ಮವೇತ್ತರಾಗಿ ಬೆಳೆದು ದೊಡ್ಡವರಾದರು.

ಇನ್ನೂ ಉದಾಹರಣೆಗಳನ್ನು ಕೊಡುವುದಾದರೆ ಜ್ಞಾನೇಶ್ವರಿಯಲ್ಲಿ ನೂರಾರು ಕೊಂಕಣಿಯ ಶಬ್ದಗಳೂ, ಪ್ರಯೋಗಗಳೂ ದೊರಕುತ್ತವೆ. ಹಿಂದೆ ಕೊಟ್ಟ ಉದಾಹರಣೆಗಳಿಂದ ಕೊಂಕಣಿ ಭಾಷೆಯು ಜ್ಞಾನೇಶ್ವರಿಯ ರಚನಾ ಕಾಲಕ್ಕಿಂತ ಪ್ರಾಚೀನವಾದುದೆಂತಲೂ, ಅದರಲ್ಲಿನ ಪ್ರಯೋಗಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇಂದಿಗೂ ಬಳಕೆಯಲ್ಲಿವೆಯಾದುದರಿಂದ ಮತ್ತು ಮರಾಠಿಯಲ್ಲಿ ಅವುಗಳು ಇಲ್ಲದಿರುವುದರಿಂದ, ಜ್ಞಾನೇಶ್ವರಿಯ ಭಾಷೆಯು ಕೊಂಕಣಿಯೇ ಆಗಿದ್ದಿತೆಂತಲೂ, ಸಂತ ಏಕನಾಥರು ಅದನ್ನು ಅರೆಮರಾಠಿಯನ್ನಾಗಿ ಪರಿವರ್ತಿಸಿದ್ದರೆಂತಲೂ ಸಿದ್ಧವಾಗುತ್ತದೆ.

ಮರಾಠಿಯಲ್ಲಿನ ಕೆಲವು ಪ್ರಾಚೀನ ಶಬ್ದಗಳು ಕೊಂಕಣಿಯಲ್ಲಿ ಇಲ್ಲವಲ್ಲಾ ಎಂಬುದಾಗಿ ಯಾರಾದರೂ ಆಕ್ಷೇಪವೆತ್ತಬಹುದು. ಆದರೆ ಅಂಥ ಶಬ್ದಗಳಿಲ್ಲದುದರಿಂದಾಗಿ ಕೊಂಕಣಿಯ ಪ್ರಾಚೀನತೆಗೆ ಯಾವ ಬಗೆಯ ಕುಂದೂ ಬರಲಾರದು. ಮರಾಠಿಯಲ್ಲಿ ಪ್ರಾಚೀನವೆಂದು ತೋರಿಸಬಹುದಾದ ಶಬ್ದಗಳು ಸಂಸ್ಕೃತ ಮೂಲದ ಪ್ರಾಕೃತ ಶಬ್ದಗಳಾಗಿರದೇ ಮೂಲ ಕಂಡುಹಿಡಿಯಲಾಗದಂಥ ದೇಶೀ ಶಬ್ದಗಳಾಗಿರುತ್ತವೆ. ಎರಡನೆಯದಾಗಿ ಮರಾಠಿಯಲ್ಲಿರುವ ಹಿಂದೀ, ಗುಜರಾತೀ, ಫಾರಸೀ, ಅರಬೀ, ಮತ್ತು ದೇಶೀ ಶಬ್ದಗಳನ್ನು ಬೇರ್ಪಡಿಸಿದರೆ ಉಳಿಯುವ ಎಲ್ಲ ಶಬ್ದಗಳು ಕೊಂಕಣಿ ಮೂಲದವುಗಳೆಂದೂ, ಅವುಗಳ ಸಂಖ್ಯೆಯು ಕೊಂಕಣಿಯ ಸಂಖ್ಯೆಯ ತುಲನೆಯಲ್ಲಿ ಬಹಳ ಕಡಿಮೆಯೆಂದೂ ಕಂಡುಬರದಿರಲಾರದು. ಮೂರನೆಯದಾಗಿ ಕೊಂಕಣಿಯ ಮೇಲೆ ಯಾವೆಲ್ಲ ಕುತ್ತಗಳು ಬಂದುವೋ ಆ ಕುತ್ತಗಳಿಂದ ಪಾರಾಗಿ ಕೊಂಕಣಿಯಲ್ಲಿ ಈಗ ಉಳಿದುಕೊಂಡಿರುವಷ್ಟು ಶಬ್ದಗಳಾದರೂ ಉಳಿದುಕೊಂಡುದೆಂದರೆ ಅದೊಂದು ಪವಾಡವೆನ್ನಬೇಕು. ದೇಶ ಬಿಟ್ಟು ಓಡಿ, ನಾನಾ ದಿಕ್ಕುಗಳಿಗೆ ಚದರಿ, ಪ್ರಾಚೀನ ಸಾಹಿತ್ಯವನ್ನೆಲ್ಲ ಕಳೆದು

ಕೊಂಡು, ಅಪರಿಚಿತ ವಾತಾವರಣದಲ್ಲಿ ಹೊಸ ಸಾಹಿತ್ಯ ನಿರ್ಮಾಣವು ಸಾಧ್ಯವಿಲ್ಲದೇ ಬರಿಯ ಬಾಯಿಮಾತಿನಲ್ಲಿ ಉಳಿದುಕೊಂಡಿರುವ ಈ ಭಾಷೆಯ ಶಬ್ದ ಸಂಪತ್ತು ಮರಾಠಿಗಿಂತ ಹೆಚ್ಚಾಗಿದ್ದು ಅದರ ಪ್ರಾಚೀನತೆಯನ್ನು ಪ್ರಸ್ಥಾಪಿಸಲು ಯಥೇಷ್ಟವಾಗಿರುತ್ತದೆ. ಆದರೆ ಮರಾಠಿಯ ಮೇಲೆ ಯಾವ ಆಪತ್ತುಗಳು ಬಂದುದರಿಂದಾಗಿ ಹಿಂದೆ ಕೊಟ್ಟ ಪಟ್ಟಿಯಲ್ಲಿನ ಹಾಗೂ ಪ್ರಾಚೀನ ಸಾಹಿತ್ಯದಲ್ಲಿ ಬಳಸಲ್ಪಟ್ಟ ನೂರಾರು ಶಬ್ದಗಳು ಮರಾಠಿಯಲ್ಲಿ ಇಲ್ಲವಾದುವೆಂದು ಮರಾಠಿ ಪಂಡಿತರು ಸಮರ್ಪಕವಾದ ರೀತಿಯಲ್ಲಿ ವಿವರಿಸಲಾರರು. ಆ ಪ್ರಾಚೀನ ಶಬ್ದಗಳು ಮರಾಠಿಯಲ್ಲಿ ಇಲ್ಲದಿರುವುದೇ ಮರಾಠಿಯು ಅರ್ವಾಚೀನವಾದುದೆಂದು ಸಾರುವ ದೃಢವಾದ ಪ್ರಮಾಣವಾಗಿರುತ್ತದೆ.

## ೯

ಇಲ್ಲಿ ಮುಂದೆ ವಿಭಕ್ತಿರೂಪಗಳ ಬಗೆಗೆ ಪ್ರಾಕೃತ ವ್ಯಾಕರಣಗ್ರಂಥಗಳಲ್ಲಿ ಬಂದಿರುವ ಒಂದೆರಡು ನಿಯಮಗಳು ಮತ್ತು ಕೊಂಕಣಿಯಲ್ಲಿ ನಿತ್ಯದ ಬಳಕೆಯಲ್ಲಿರುವ ಮತ್ತು ಮರಾಠಿಯಲ್ಲಿ ಇಲ್ಲದಿರುವ ಕೆಲವು ಶಬ್ದಗಳು ಹಾಗೂ ಕ್ರಿಯಾಪದಗಳು ಕೊಡಲಾಗುವವು.

ಕಾತ್ಯಾಯನ—"ಸೂ. ॥ ೨–೧–೫೩ ॥ ತಸ್ಮಾ ಅಕಾರತೋ ಸಿ ವಚನಸ್ಸ ಓಕಾರಾದೇಸೋ ಹೋತಿ. ಅಂದರೆ ಅಕಾರಾರಾಂತ ನಾಮಪದಗಳ ತರುವಾಯ ಪ್ರಥಮಾವಿಭಕ್ತಿಯ ಏಕವಚನದ "ಸ್" ಪ್ರತ್ಯಯವು ಓಕಾರವಾಗುತ್ತದೆ. ಉದಾ: — ಸರ್ವ + ಸ್ = ಸರ್ವಃ = ಸವ್ವೋ = ಎಲ್ಲ. ಕ + ಸ್ = ಕಃ = ಕೋ = ಯಾರು? ಸಃ = ಸೋ = ಅವನು. ವೃಷಭಃ = ವಸಭೋ = ಬಸವ. ಪುರುಷಃ = ಪುರಿಸೋ = ಗಂಡಸು. ಪುತ್ರಃ = ಪುತ್ತೋ = ಮಗು. ಘೋಟಕಃ = ಘೋಟಕೋ = ಕುದುರೆ.

ವರರುಚಿ — ಅತ ಓತ್ ಸೋಃ ॥ ೫–೧ ॥ ಅಕಾರಾಂತಾಚ್ಛಬ್ದಾತ್ಪರಸ್ಯ ಸೋಃ ಸ್ಥಾನೇ ಓತ್ವಂ ಭವತಿ. ಅಂದರೆ ಪ್ರಥಮಾವಿಭಕ್ತಿಯ ಏಕವಚನ ಪ್ರತ್ಯಯವಾಗಿರುವ "ಸ್" ಎಂಬುದರ ಸ್ಥಾನದಲ್ಲಿ ಓ ಆಗುತ್ತದೆ. ಘೋಟಕಃ = ಘೋಡಓ ಇತ್ಯಾದಿ.

ಕಾತ್ಯಾಯನ—"ಸ್ಮಿಂಸ್ಸೋ ನಿನಂ ಅ. ಏ ॥ ೨–೧೫೩ ॥ ತಸ್ಮಾ ಅಕಾರತೋ ಸ್ಮಿಂಸ್ಸಾಂ ಅ. ಏ. ಆದೇಸಾ ಹೋಂತಿ ವಾ ಯಥಾಸಂಖ್ಯಂ. ಎಲ್ಲಿ

ಪುಲ್ಲಿಂಗ ಅಕಾರಾಂತ ನಾಮಪದಗಳು ಪ್ರಥಮಾ ಮತ್ತು ದ್ವಿತೀಯಾವಿಭಕ್ತಿಗಳ ಬಹುವಚನದಲ್ಲಿ ಆಕಾರಾಂತವಾಗಲೀ, ಏಕಾರಾಂತವಾಗಲೀ ಆಗುತ್ತವೆ. ಉದಾ; ಪುರಿಸಾ ಇಲ್ಲವೇ ಪುರಿಸೇ=ಗಂಡಸರು ಘೋಟಕಾ ಇಲ್ಲವೇ ಘೋಟಕೇ= ಕುದುರೆಗಳು; ಕುದುರೆಗಳನ್ನು.

ಪ್ರಥಮಾವಿಭಕ್ತಿಯು ಏಕವಚನದಲ್ಲಿ ಓಕಾರಾಂತವಾಗಿರುವ ಪುಲ್ಲಿಂಗ ನಾಮ ಪದವು ಬಹುವಚನದಲ್ಲಿ ಏಕಾರಾಂತವಾಗುವ ಕ್ರಮವು ಕೊಂಕಣಿಯಲ್ಲಿ ಮತ್ತು ಹಳೆಯ ಹಿಂದಿಯಲ್ಲಿ ಮಾತ್ರ ಇದೆ. ಮಾತ್ರವಲ್ಲದೆ ಮನುಷ್ಯರ ಹೆಸರುಗಳನ್ನು ಬಿಟ್ಟು ಉಳಿದ ಹೆಸರುಗಳ—ಪ್ರಥಮಾ ಹಾಗೂ ದ್ವಿತೀಯಾವಿಭಕ್ತಿಯ ರೂಪ ಗಳು ಒಂದೇ ಆಗಿರುತ್ತವೆ. ಉದಾ:—ಘೋಡೋ=ಕುದುರೆ; ಕುದುರೆಯನ್ನು. ಘೋಡೇ=ಕುದುರೆಗಳು; ಕುದುರೆಗಳನ್ನು. ಪ್ರಥಮಾ ಏಕವಚನದಲ್ಲಿ ಓಕಾ ರಾಂತವಾಗಿದ್ದು ಬಹುವಚನದಲ್ಲಿ ಆಕಾರಾಂತವಾಗುವ ಕ್ರಮವು ಗುಜರಾತಿ ಯಲ್ಲಿದೆ. ಉದಾ:—ಘೋಡೋ=ಕುದುರೆ; ಕುದುರೆಯನ್ನು. ಘೋಡಾ= ಕುದುರೆಗಳು; ಕುದುರೆಗಳನ್ನು.

ಕಾತ್ಯಾಯನನ ವ್ಯಾಕರಣದಲ್ಲಿ ವಿಭಕ್ತಿ ಪ್ರತ್ಯಯಗಳು ಮುಂದಿನಂತಿವೆ;— ಪ್ರಥಮಾ– ಸಿ ಮತ್ತು ಯೋ; ದ್ವಿತೀಯಾ– ಅಂ ಮತ್ತು ಯೋ; ತೃತೀಯಾ– ನಾ ಮತ್ತು ಹಿ; ಚತುರ್ಥೀ– ಸ ಮತ್ತು ನಂ; ಪಂಚಮೀ– ಸ್ಮಾ ಮತ್ತು ಹಿ; ಷಷ್ಠೀ– ಸ ಮತ್ತು ನಂ; ಸಪ್ತಮೀ– ಸ್ಮಿ ಮತ್ತು ಸು. ಇವುಗಳಲ್ಲಿ ಚತುರ್ಥೀ ಮತ್ತು ಷಷ್ಠೀವಿಭಕ್ತಿಗಳ ಪ್ರತ್ಯಯಗಳು ಒಂದೇ ಆಗಿರುತ್ತವೆ. ಇವುಗಳಲ್ಲಿ ಮೊದಲನೆಯದು ಏಕವಚನ; ಎರಡನೆಯದು ಬಹುವಚನವಾಗಿರುತ್ತದೆ,

"ಯೋ" ಪ್ರತ್ಯಯವು ಆಕಾರಾಂತ ಸ್ತ್ರೀಲಿಂಗನಾಮಪದಗಳ ತರುವಾಯ "ಓ" ಆಗುತ್ತದೆ.

ವರರುಚಿ—ಸ್ತ್ರಿಯಾಂ ಶಸ ಉದೋತೌ ॥ ೫-೧೯ ॥ ಸ್ತ್ರಿಯಾಂ ವರ್ತ ಮಾನಸ್ಯ ಶಸ. ಜಸ. ಉತ್, ಓತ್ ಇತ್ಯೇತಾವಾದೇಶೌ ಭವತಃ ॥ ಅಂದರೆ ಸ್ತ್ರೀಲಿಂಗನಾಮಪದಗಳ ತರುವಾಯ ಪ್ರಥಮಾ– ಹಾಗೂ ದ್ವಿತೀಯಾ– ಬಹು ವಚನ ಪ್ರತ್ಯಯಗಳಾಗಿರುವ ಜಸ್ ಮತ್ತು ಶಸ್ ಎಂಬವುಗಳಿಗೆ ಉ ಇಲ್ಲವೇ ಓ ಆದೇಶಗಳಾಗುತ್ತವೆ. ಉದಾ:— ಮಾಲಾಉ ಇಲ್ಲವೇ ಮಾಲಾಓ=ಮಾಲೆ ಗಳು; ಮಾಲೆಗಳನ್ನು. ಣಈಉ ಇಲ್ಲವೇ ಣಈಓ=ಹೊಳೆಗಳು; ಹೊಳೆಗಳನ್ನು. ಕೊಂಕಣಿ– ಮಾಳೊ; ನಿಇಯೊ. ಈ ನಿಯಮಗಳು ಮರಾಠಿಗೆ ಅನ್ವಯಿಸು ವುದಿಲ್ಲ. ಈಗಿನ ಗೋವದ ಕೊಂಕಣಿಗೂ ಅನ್ವಯಿಸುವುದಿಲ್ಲ.

ವರರುಚಿ—ಇದೀಷತ್ – ಪಕ್ವ.........ಅಂಗಾರೇಷು ‖ ೧-೩ ‖

ಹೇಮಚಂದ್ರ—ಪಕ್ವಾಂಗಾರ ಲಲಾಟೇಷು ‖ ೮-೧-೪೭ ‖

ಈ ಸೂತ್ರಗಳಿಗೆ ಅನುಸಾರವಾಗಿ—ಪಕ್ವ, ಅಂಗಾರ ಮತ್ತು ಲಲಾಟ ಎಂಬ ಶಬ್ದಗಳು ಪಿಕ್ಕಂ; ಇಂಗಾಲೋ ಮತ್ತು ಣಿಡಾಲಂ ಎಂದು ಮಾರ್ಪಡುತ್ತವೆ. ಇವುಗಳು ಕೊಂಕಣಿಯಲ್ಲಿ ಪಿಕೆಂ, ಇಂಗಾಳೊ ಮತ್ತು ನಿಡಲ ಇಲ್ಲವೇ ನಿಡಳ ಎಂಬ ರೂಪಗಳಲ್ಲಿ ಬಳಸಲ್ಪಡುತ್ತವೆ. ಪಿಕೆಂ = ಮಾಗಿದ; ಇಂಗಾಳೊ = ಕೆಂಡ; ನಿಡಲ = ಹಣೆ. ಮರಾಠಿಯಲ್ಲಿ "ಪಿಕೆಂ" ಎಂಬ ಶಬ್ದವಿಲ್ಲ, ಆದರ ಬದಲಿಗೆ "ಪಿಕಲೇಲೆಂ" ಎಂಬ ಭೂತಕಾಲಿಕ ಕೃದಂತವಿಶೇಷಣವಿದೆ. ಇಂಗಳಾ ಎಂಬ ಶಬ್ದದ ಬದಲಿಗೆ ನಿಖಾರಾ ಎಂಬ ಶಬ್ದವು ಬಳಕೆಯಲ್ಲಿದೆ. ನಿಡಲ ಶಬ್ದವು ನಿಢಳ ಆಗಿದೆ.

ವರರುಚಿ—ಇದೃಷ್ಯಾದಿಷು ‖ ೧-೨೮ ‖ ಈ ಸೂತ್ರದಂತೆ ಕೆಲವು ಶಬ್ದಗಳಲ್ಲಿನ "ಋ" ಸ್ವರವು "ಇ" ಆಗುತ್ತದೆ. ಉದಾ:– ಶೃಂಗಾರಃ = ಸಿಂಗಾರೋ.

ಹೇಮಚಂದ್ರ—ಇತ್ ಕೃಪಾದೌ ‖ ೮-೧-೧೨೮ ‖ ಸಿಂಗಾರೋ.

ವರರುಚಿ—ಉದೃತ್ವಾದಿಷು ‖ ೧-೨೯ ‖ ಈ ಸೂತ್ರದಂತೆ "ಋತು" ಶಬ್ದವು "ರುತು" ಎಂದಾಗುತ್ತದೆ. ಪ್ರವೃತ್ತಿ ಶಬ್ದವು ಪಉತ್ತಿ ಆಗುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ "ರುತು" ಎಂಬ ಶಬ್ದವಿದೆಯೇ ಹೊರತು ಪಾದ್ರಿ ಥಾಮಸ್ ಸ್ಟೀಫನ್ಸರ ವ್ಯಾಕರಣದಲ್ಲಿ ಕೊಟ್ಟಿರುವ "ರಿತು" ಶಬ್ದವಿಲ್ಲ. ಪಉತ್ತಿ ಶಬ್ದವು ಕೊಂಕಣಿಯಲ್ಲಿ "ಪಾಉಟ" ಎಂದು ಮಾರ್ಪಟ್ಟು (೧) ಸರ್ತಿ ಅಥವಾ ಆವೃತ್ತಿ; (೨) ಬರಹೋಗುವ ಸರದಿ. ಬರುವಿಕೆ. ಹೋಗುವಿಕೆ; (೩) ಸಾಗಾಟ; (೪) ಅವಕಾಶ. ಬಿಡುವು ಎಂಬ ಅರ್ಥಗಳಲ್ಲಿ ಬಳಸಲ್ಪಡುತ್ತದೆ. ಇವುಗಳಲ್ಲಿ ಬರಹೋಗುವ ಸರದಿ ಎಂಬ ಅರ್ಥದಲ್ಲಿ ಅದು "ಪದ್ಧತಿ" ಶಬ್ದದ ರೂಪಾಂತರ "ಪಾವಟಿ" ಆಗಿರಲೂ ಬಹುದು. ಮರಾಠಿಯಲ್ಲಿ ಅಂದರೆ ಹಳೆಯ ಸಾಹಿತ್ಯದಲ್ಲಿ "ಪಾಉಟಿ" ಎಂಬ ಶಬ್ದ ದೊರಕುತ್ತದೆ. ಆದರೆ ಅದರ ಅರ್ಥ ನಿಶ್ಚಯವಿಲ್ಲ. ಕೋಶಕಾರರು – ಮೆಟ್ಟಿಲು ಎಂಬ ಅರ್ಥವನ್ನು ಕೊಟ್ಟಿದ್ದಾರೆ.

ವರರುಚಿ – ಪೋವಃ ‖ ೨-೧೫ ‖ ಹೇಮಚಂದ್ರ – ಪೋವಃ ‖ ೮-೧-೨೩೧ ‖ ಈ ಸೂತ್ರದಂತೆ ಕೆಲವು ಶಬ್ದಗಳಲ್ಲಿನ "ಪ" ಕಾರವು "ವ" ಆಗುತ್ತದೆ. ಶಾಪಃ = ಸಾವೋ. ಕೊಂಕಣಿ ಸೊವ್ವೊ = ಬೈಗಳು. ಶಪ್ = ಕೊಂಕಣಿ ಸವ್ ಇಲ್ಲವೇ ಸೊವ್ = ಬೈಯು. ಕಶ್ಯಪಃ = ಕಾಸವೋ = ಆಮೆ; ಕೊಂಕಣಿ ಕಾಸವ್. ಮರಾಠಿಯಲ್ಲಿ ಸೊವ್ವೊ ಆಗಲೀ ಸೊವ್ ಕ್ರಿಯಾಪದವಾಗಲೀ ಇಲ್ಲ. ಶಿವೀ = ಬೈಗಳು ಇವೆ.

ವರರುಚಿ—ಆಪೀಡೇ ಮಃ ॥ ೨-೧೬ ॥ ಆಪೀಡಃ ಎಂಬ ಶಬ್ದವು ಪ್ರಾಕೃತದಲ್ಲಿ ಆಮೇಲೋ ಎಂದು ಮಾರ್ಪಡುತ್ತದೆ. ಅದು ಕೊಂಕಣಿಯಲ್ಲಿ "ಆಮಲೊ" ಎಂಬ ರೂಪದಲ್ಲಿ ಬಳಸಲ್ಪಡುತ್ತದೆ. ಇದು ಲೋಲಕದಂಥ ಆಭರಣವಾಗಿದ್ದು, ಗಂಡಸರು ಕಿವಿಯ ಮೇಲಂಚಿನಲ್ಲಿಯೂ, ಹೆಂಗಸರು ಹಣೆಯಲ್ಲಿ ಬೈತಲೆಯ ಹತ್ತಿರವೂ ತೂಗುತಿದ್ದರು. ಈಗ ಈ ಆಭರಣವು ಬಳಕೆಯಲ್ಲಿಲ್ಲ. ಮರಾಠಿಯಲ್ಲಿ ಈ ಶಬ್ದವಿಲ್ಲ.

ವರರುಚಿ—ಷ್ಕ, ಸ್ಕ, ಕ್ಷಾಂ ಖಃ ॥ ೩-೨೯ ॥ ಹೇಮ—ಶುಷ್ಕಸ್ಕಂಧೇವಾ ॥ ೮-೨-೫ ॥ ಈ ಸೂತ್ರಗಳಿಗನುಸಾರವಾಗಿ, ಶುಷ್ಕ = ಸುಕ್ಖ; ಸ್ಕಂಧಃ = ಖಾಂಧೊ; ಕ್ಷಿಪ್ = ಖೇಪ್ ಮುಂತಾದ ರೂಪಾಂತರಗಳಾಗುತ್ತವೆ. ಕೊಂಕಣಿಯಲ್ಲಿ ಸುಕ್ಕೆಂ = ಒಣಗಲು ಮತ್ತು ಸಾರಹೀನ ಎಂಬ ಅರ್ಥದಲ್ಲಿ – ಖಾಂದೊ = (೧) ಹೆಗಲು, (೨) ಮರದ ಗೆಲ್ಲು ಎಂಬ ಅರ್ಥದಲ್ಲಿ – ಖೇಪ್ = (೧) ಚೆಲ್ಲಿ ಕೊಡು, ಎಸೆದುಬಿಡು; (೨) ಅಪ್ಪಳಿಸು ಎಂಬ ಅರ್ಥದಲ್ಲಿ ಬಳಸಲ್ಪಡುತ್ತದೆ. ಮರಾಠಿಯಲ್ಲಿ ಖಾಂದಾ ಮಾತ್ರ ಇದೆ. ಖೇಪ್ ಇದ್ದರೂ, ಅರ್ಥ ತಪ್ಪಾಗಿರುತ್ತದೆ. ಸುಕ್ಕೆಂ ಎಂಬುದರ ಬದಲಿಗೆ ಕೋರಡೇಂ ಇದೆ.

ವರರುಚಿ—ಷ್ಣ, ಸ್ನ, ಕ್ಷ್ಣ, ಶ್ನಾಂ, ಣಃ ॥ ಹೇಮ— ॥ ೮-೨-೭೫ ॥ ಈ ಸೂತ್ರಗಳಂತೆ ಸ್ನಾ = ಣ್ಹಾ = ಮಿಂಯು, ಸ್ನಾನ = ಣ್ಹಾಣ = ಜಳಕ, ಶ್ಲಕ್ಷ್ಣ = ಸಣ್ಹ ಎಂದು ಮಾರ್ಪಡುತ್ತವೆ. ಕೊಂಕಣಿಯಲ್ಲಿ ನ್ಹಾ = ಮಿಂಯು; ನ್ಹಾಣ = ಜಳಕ ಎಂಬ ರೂಪಗಳಲ್ಲಿ ಶ್ಲಕ್ಷ್ಣ ಶಬ್ದವು ಮೂರು ಅರ್ಥಗಳಲ್ಲಿ ಮುಂದೆ ಕೊಟ್ಟಿರುವಂತೆ ಮೂರು ರೂಪಗಳಾಗಿಯೂ ಮಾರ್ಪಟ್ಟಿದೆ. (೧) ಸ್ಹಾನ = ಚಿಕ್ಕ, ಕಿರಿಯ; (೨) ಲ್ಹಾನ = ಸುಣ್ಣನ. ಬೋಳು; (೩) ಸಣ್ಹ = ಸೂಕ್ಷ್ಮರಂಧ್ರಗಳುಳ್ಳ ಬಹಳ ತೆಳ್ಳಗಿನ (ಬಟ್ಟೆ). ಮರಾಠಿಯಲ್ಲಿ ಕೊಂಕಣಿಯಲ್ಲಿನ ನ್ಹಾಣ ಶಬ್ದವು "ನಹಾಣ" ಆಗಿ ಮಾರ್ಪಟ್ಟಿದ್ದರೂ, ಅದು ಋತುಸ್ನಾನಕ್ಕೆ ಮಾತ್ರ ಬಳಸಲ್ಪಡುತ್ತದೆ. ಜಳಕಕ್ಕೆ ಅಂಘೋಳ ಶಬ್ದವು ಬಳಸಲ್ಪಡುತ್ತದೆ. "ಮಿಂಯು" ಅನ್ನಲು ಅಂಘೋಳ್ ಕರ್ ಎನ್ನಲಾಗುತ್ತದೆ.

ವರರುಚಿ—ಷ್ಪ, ಸ್ಫ್ರ, ಫಃ ॥ ೩-೩೫ ॥ ಹೇಮ—ಷ್ಪ, ಸ್ಪಯೋಃ, ಫಃ ॥ ೮-೨-೫೩ ॥ ಈ ಸೂತ್ರಗಳಂತೆ "ಪುಷ್ಪ = ಪುಪ್ಫ" ಕನ್ನಡದಲ್ಲಿ ಹುವ್ವು. "ಶಷ್ಪ ಇದ್ದುದು ಶಪ್ಫ" ಎಳೆಹುಲ್ಲು ಆಗುತ್ತದೆ. "ಪುಪ್ಫ" ಶಬ್ದವು ಕೊಂಕಣಿಯಲ್ಲಿದೆ. ಮರಾಠಿಯಲ್ಲಿಲ್ಲ.

ವರರುಚಿ—ವಿಹ್ವಲೇ ಭ ಹೌ ವಾ ॥ ೩-೪೭ ॥ ಹೇಮ—ವಾ ವಿಹ್ವಲೇ

ವೌ ವಸ್ತ್ರ ॥ ೮-೨-೫೮ ॥ ಈ ಸೂತ್ರಗಳಂತೆ ವಿಹ್ವಲ ಶಬ್ದವು ಬೆಬ್ಭಲ ಮತ್ತು ಬಿಬ್ಭಲ ವಾಗುತ್ತವೆ. ಅದು ಕೊಂಕಣಿಯಲ್ಲಿ ಬೆಂಬಳ ಆಗುತ್ತದೆ. ಭಯಾನ ಬೆಂಬಳ = ಹೆದರಿ ತಬ್ಬಿಬ್ಬಾದ. ಸೇತುಬಂಧ ಕಾವ್ಯದಲ್ಲಿ ಈ ಶಬ್ದವು ಭೇಮ್ಭಲಾ ॥ ೬-೩೭ ॥ ಎಂಬ ರೂಪದಲ್ಲಿ ಬಂದಿದೆ.

ವರರುಚಿ—ಭಾಜನೇ ಜಸ್ಯ ॥ ೪-೪ ॥ ಈ ಸೂತ್ರದಂತೆ "ಭಾಜನ" ಶಬ್ದ ದಲ್ಲಿನ "ಜ" ಲೋಪವಾಗಿ ಭಾಣ ಎಂದಾಗುತ್ತದೆ. ಇದು ಕೊಂಕಣಿಯಲ್ಲಿ ಸಾಮಾನ್ಯವಾಗಿ ತಾಮ್ರದ ಗುಂಭಾಣ ಹಾಗೂ ದೊಡ್ಡ ಪಾತ್ರೆಗಾಗಿ ಬಳಸಲ್ಪಡು ತ್ತದೆ. ಅಲ್ಲದೇ ಅದು ಬೇರೆ ಶಬ್ದಗಳೊಂದಿಗೆ ಕೂಡಿ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ:— ಸಂ. ಪಿಷ್ಟಭಾಜನ = ಪಿಟ್ಟಭಾಣ = ಪೆಡಹಾಣ = ಪೆಡಾವಣ = ಪಿಟ್ಟು ಬೇಯಿಸುವ ಪಾತ್ರೆ. ಈ ಶಬ್ದಗಳು ಮರಾಠಿಯಲ್ಲಿ ಇಲ್ಲ.

ವರರುಚಿ—ಛದೇರ್ಥಕ್ಕ ॥ ೪-೨೧ ॥ ಛದ್ = ಮುಚ್ಚು ಎಂಬ ಅರ್ಥದಲ್ಲಿ ಥಕ್ಕ ಕ್ರಿಯೆಯು ಬರುತ್ತದೆ. ಅದು ಕೊಂಕಣಿಯಲ್ಲಿ "ಧಾಂಕ್" ಆಗುತ್ತದೆ ಮತ್ತು ಅದು ಮರಾಠಿಯಾಗಿ ಮಾರ್ಪಡುವಾಗ "ಝಾಂಕ್" ಆಗುತ್ತದೆ. ಅಂದರೆ ಕೊಂಕಣಿಯಲ್ಲಿನ "ಧ" ಕಾರವೇ ಮರಾಠಿಯಲ್ಲಿ "ಝಾ" ಕಾರವಾಗಿ ಮಾರ್ಪಟ್ಟಿದೆ. ಇದರಿಂದ ಹುಟ್ಟಿದ ಧಾಂಕಣ = ಮುಚ್ಚಿರುವಿಕೆ, ಮುಚ್ಚು, ಮುಚ್ಚಿಗೆ ಎಂಬುದು ಮತ್ತು ಧಾಂಕಣಂ = ಮುಚ್ಚಳ ಎಂಬ ಶಬ್ದಗಳು ಕೊಂಕಣಿ ಯಲ್ಲಿವೆ. ಕೊಂಕಣಿಯ ಧಾಂಕ್ ಕ್ರಿಯೆಯ ಮೂಲವು ಸಂಸ್ಕೃತದ "ಸ್ಥಗ್" ಎಂಬ ಕ್ರಿಯೆಯಾಗಿರುತ್ತದೆ. ಅದುವೇ ಥಗ್ ಆಗಿ ತರುವಾಯ ಧಾಂಕ್ ಆಗಿತ್ತೆನ್ನಬಹುದು. ಸರ್. ಮೋನಿಯರ್ ವಿಲಿಯಮ್ಸ್‌ರವರ ಕೋಶದಲ್ಲಿ "ಥಕ್ಕನ" ಎಂಬ ಶಬ್ದ ಬಂದಿದೆ ಆದರೆ ಅವರು ಅದರ ವ್ಯುತ್ಪತ್ತಿಯನ್ನು ಹೇಳಿಲ್ಲ.

ಹೇಮಚಂದ್ರ—ವ್ಯಾಪ್ರೇರ್ವಾವರ ॥ ೮-೪-೮೧ ॥ ವ್ಯಾಪೃ ಕ್ರಿಯೆಯು "ವಾವರ" ಆಗುತ್ತದೆ. ಆದರೆ ಕೊಂಕಣಿಯಲ್ಲಿ ವಾವರ್ ಅಥವಾ ವಾವುರ್ ಎಂಬ ಅಕರ್ಮಕ ಕ್ರಿಯೆಯೂ ವಾಪರ್ ಎಂಬ ಸಕರ್ಮಕ ಕ್ರಿಯೆಯೂ ಇದೆ. ವಾವರ್ ಎಂಬುವದರ ಅರ್ಥ:—(೧) ಬಳಕೆಯಲ್ಲಿರು, ಬಳಸಲ್ಪಡು: (೨) ವರ್ತಿಸು, ವ್ಯವಹರಿಸು; (೩) ಗೇಯು, ದುಡಿ ಎಂದಿರುತ್ತದೆ. ಅದು ನಾಮಪದ ವಾವರ (೧) ಉದ್ಯೋಗ, ಕೆಲಸ: (೨) ವ್ಯವಹಾರ ಎಂಬ ಅರ್ಥಗಳನ್ನು ಕೊಡುತ್ತದೆ. ವಾಪರ್ ಕ್ರಿಯೆಯ ಅರ್ಥವು ಬಳಸು ಅಥವಾ ಉಪಯೋಗಿಸು ಎಂದಿರುತ್ತದೆ. ಮರಾಠಿಯಲ್ಲಿಯೂ ಈ ಕ್ರಿಯೆಗಳಿವೆ. ಆದರೆ ಅವುಗಳ ಅರ್ಥದಲ್ಲಿ ಭೇದವಿದೆ.

ಹೇಮಚಂದ್ರ—ಶ್ರಮೇರ್ವಾವಂಫ । ೮-೪-೬೫ ॥ ಶ್ರಮಿಸು ಎಂಬ ಅರ್ಥ ದಲ್ಲಿ ವಾವಂಫ ಎಂಬ ಕ್ರಿಯೆ ಬರುತ್ತದೆ. ಆದರೆ ಕೊಂಕಣಿಯಲ್ಲಿ ಸಂಸ್ಕೃತದ ವ್ಯಾಯತ್ ಎಂಬ ಕ್ರಿಯೆಯು ವಾಂಟ ಇಲ್ಲದೆ ವಾವಂಟ್ ಎಂಬ ರೂಪಾಂತರವಿದೆ ಮತ್ತು ವಾಂಟ ಇಲ್ಲವೆ ವಾವಂಟ ಎಂಬ ನಾಮಪದವು ಬಹುವಚನದಲ್ಲಿ ದಣಿವು, ಕಾಯಕಷ್ಟ ಮೊದಲಾದ ಅರ್ಥಗಳಲ್ಲಿ ಬಳಸಲ್ಪಡುತ್ತದೆ. ತಮಾಶೆಯೆಂದರೆ ಮರಾಠಿಯಲ್ಲಿ ವಾವಟ್ ಕ್ರಿಯೆಯ ಅರ್ಥವು 'ವಿಶ್ರಮಿಸು' ಎಂದಿರುವುದಾಗಿದೆ. ವಾವಂಟ + ಎ = ವಾವಂಟೆ = ದಣಿಯು; ವಾವಂಟಕಾಡ್ = ದುಡಿ, ಕಾಯಕಷ್ಟ ಮಾಡು ಎಂಬ ಪ್ರಯೋಗಗಳೂ ಕೊಂಕಣಿಯಲ್ಲಿವೆ.

ಹೇಮಚಂದ್ರ—ಘೂರ್ಣೇರ್ ಘುಲ್ಲ, ಘುಮ್ಮ, ಪಹಲ್ಲಾ ॥ ೮-೪-೧೧೪ ॥ ಈ ಸೂತ್ರದಂತೆ ಸಂಸ್ಕೃತದ ಘೂರ್ಣ್ = ತಿರುಗು, ಸುತ್ತುಬರು ಎಂಬ ಅರ್ಥ ದಲ್ಲಿ ಘುಲ್ಲ, ಘುಮ್ಮ, ಪಹಲ್ಲ ಎಂಬ ಕ್ರಿಯೆಗಳು ಬರುತ್ತವೆ. ಘುಲ್ಲ ಎಂಬುದು ಕೊಂಕಣಿಯಲ್ಲಿ ಘುಳ = (೧) ನೀರು ಇತ್ಯಾದಿಗಳಲ್ಲಿ ತಿರುಗುತ್ತ ಕರಗು; (೨) ಉರುಳು, ಉರುಳಿಹೋಗು ಎಂಬ ಅರ್ಥದಲ್ಲಿಯೂ; ಘೋಳ = (೧) ಅತ್ತ ಇತ್ತ ಆಡು, ಚಲಿಸು, ಕದಡಿದಂತಾಗು, ಅಲುಗಾಡು; (೨) ಸುತ್ತುಬರು. ತಿರುಗು; (೩) ಕೂಲಿಗಾಗಿ ದುಡಿ. ಗೇಯು, ಗೇಣಿಗೆ ಗೇಯು ಎಂಬರ್ಥ ದಲ್ಲಿಯೂ; ಘುಂವ = ತಿರುಗು, ಸುತ್ತು, ಬವಳಿಬರು ಎಂಬರ್ಥವಲ್ಲಿಯೂ ಬಳಸಲ್ಪಡುತ್ತವೆ, ಘುಂವ ಎಂಬುದು ಘುಮ್ಮದ ರೂಪಾಂತರವಾಗಿರುತ್ತದೆ. ಘುಳ ಮತ್ತು ಘೋಳ ಕ್ರಿಯೆಗಳು ಮರಾಠಿಯಲ್ಲಿವೆ. ಆದರೆ ಘುಂವ ಕ್ರಿಯೆ ಇಲ್ಲ. ಕೊಂಕಣಿಯಲ್ಲಿ ಘೋಳ ಕ್ರಿಯೆಯು ಎರಡು ಸಕರ್ಮಕರೂಪಗಳಿವೆ. ೧. ಘೋಳಯಿ = ಕೂಲಿಗೆ ದುಡಿಸು. ೨. ಘೋಳಾಯಿ = (೧) ಕದಡು, ಅತ್ತ ಇತ್ತ ಆಡಿಸು ಅಥವಾ ತಿರುಗಿಸು: (೨) ಬಾಯಲ್ಲಿ ಹಾಕಿ ಆಡಿಸು.

ಹೇಮಚಂದ್ರ—ಮೃದೋ, ಮಲ, ಮಢ, ಮಡ್ಡ ॥ ೮-೪-೧೨೬ ॥ ಮೃದ್ ಎಂಬ ಸಂಸ್ಕೃತ ಕ್ರಿಯೆಯು ಪ್ರಾಕೃತದಲ್ಲಿ ಮಲ, ಮಢ ಮತ್ತು ಮಡ್ಡ ಎಂದು ಮಾರ್ಪಡುತ್ತದೆ. ಆದರೆ ಮೃದ್ ಕ್ರಿಯೆಯು ಕೊಂಕಣಿಯಲ್ಲಿ ಮೋಳ್ = ೧ ತೆನೆ ಬಡಿ, ೨ (ಹಿಟ್ಟನ್ನು) ಹಿಸುಕು ಅಥವಾ ನಾದು ಎಂಬರ್ಥ ದಲ್ಲಿಯೂ; ಮರ್ದಯ ಎಂಬ ಕ್ರಿಯಾರೂಪವು ಕೊಂಕಣಿಯಲ್ಲಿ ಮಾಂಡಯ್ = ಹಿಟ್ಟನ್ನು ಕಲಸಿ ಹದಮಾಡು ಎಂಬರ್ಥದಲ್ಲಿಯೂ; ಮಾಡ್ಡಯ್ ಎಂಬ ರೂಪ ದಿಂದ ತುಳಿ ಮತ್ತು ತುಳಿದಿಡು ಎಂಬರ್ಥದಲ್ಲಿಯೂ; ಮರ್ದಿ ಎಂಬ ರೂಪ ದಿಂದ ಮರ್ದಿಸು, ತಲೆ ಎತ್ತದಂತೆ ತುಳಿದಿಡು ಎಂಬರ್ಥದಲ್ಲಿಯೂ ಬಳಸಲ್ಪಡು

ತ್ತದೆ. ಇವುಗಳಲ್ಲಿ "ಮಳ್ ಎಂಬ ಒಂದು ರೂಪ ಮಾತ್ರ ಮರಾಠಿಯಲ್ಲಿದೆ. ಮಾಷ್ಟಯ ಎಂಬುದರ ಬದಲಿಗೆ ತುಡವೀ = ತುಳಿಯು ಇದೆ.

ವರರುಚಿ— ದೃಶೇಃ ಪುಲಅ ॥ ೮-೬೯ ॥ ಹೇಮಚಂದ್ರ— ಪುಲೋಏ. ಪುಲಅ ॥ ೮-೪-೧೮೧ ॥ ಪುಲೋಏ ಅಥವಾ ಪುಲಅ ಎಂಬುದು ದೃಶ್ ಕ್ರಿಯೆಯ ರೂಪಾಂತರವಲ್ಲ.. ಅದು "ಪ್ರಲೋಕಯ" ಕ್ರಿಯೆಯ ರೂಪಾಂತರವಾಗಿರುತ್ತದೆ ಮತ್ತು ಸೇತುಬಂಧ ಕಾವ್ಯದಲ್ಲಿ ಅದು ಪ್ರಲೋಕಯ ಕ್ರಿಯೆಯ ಬದಲಿಗೇನೇ ಬಂದಿದೆ ಮತ್ತು ಅದು ಕೊಂಕಣಿಯಲ್ಲಿ ಪೊಳೋಯ್ ಇಲ್ಲವೇ ಪಳೋಯ್ = ನೋಡು ಎಂಬರ್ಥದಲ್ಲಿ ಬಳಸಲ್ಪಡುತ್ತದೆ. ಈ ಕ್ರಿಯೆಯು ಮರಾಠಿಯಲ್ಲಿ ಇಲ್ಲ.

ವರರುಚಿ—ಮ್ಲೈ. ವಾ. ವಾಅ ॥ ೮-೨೧ ॥ ಮ್ಲೈ = ಮ್ಲಾಯ್ = ಬಾಡು. ಕಳೆಗುಂದು ಎಂಬ ಸಂಸ್ಕೃತ ಕ್ರಿಯೆಯು ಪ್ರಾಕೃತದಲ್ಲಿ "ವಾ" ಇಲ್ಲವೇ "ವಾಅ" ಎಂದು ರೂಪಾಂತರವಾಗುತ್ತದೆ. ಅದು ಕೊಂಕಣಿಯಲ್ಲಿ ವಾವ ಇಲ್ಲವೇ ಬಾವ ಎಂಬ ರೂಪದಲ್ಲಿ ಬಳಸಲ್ಪಡುತ್ತದೆ. ಈ ಕ್ರಿಯಾಪದವು ಮರಾಠಿಯಲ್ಲಿಲ್ಲ. ಬದಲಿಗೆ ಕೋಮೇಜ್ = ಬಾಡು ಎಂಬ ಕ್ರಿಯೆ ಇದೆ.

ಸಂಸ್ಕೃತದಲ್ಲಿ "ರಮ್" ಕ್ರಿಯೆಯು (೧) ನಿಲ್ಲು, ವಿರಮಿಸು, ತಡೆಯಾಗು; (೨) ಇರು ಎಂಬ ಅರ್ಥದಲ್ಲಿದೆ. ಅದು ಕೊಂಕಣಿಯಲ್ಲಿ "ರಾವ್" ಆಗುತ್ತದೆ. ಕೆಲವರು ಅದನ್ನು ರಾಬ್ ಎಂಬ ರೂಪದಲ್ಲಿಯೂ ಬಳಸುತ್ತಾರೆ. ಇದು ಮರಾಠಿಯಲ್ಲಿ ಇಲ್ಲ.

ಸಂ. ಪ್ರಭವ್ = ಶಕ್ತನಾಗು. ಸಾಮರ್ಥ್ಯವಿರು ಎಂಬ ಕ್ರಿಯೆಯು ಕೊಂಕಣಿಯಲ್ಲಿ ಪಹವ್ ಆಗಿ ಫಾವ್ ಎಂದು ಉಚ್ಚರಿಸಲ್ಪಡುತ್ತದೆ. ಸಂಸ್ಕೃತ – ಕರ್ತುಂ ಪ್ರಭವತಿ = ಹಳೆ ಕೊಂಕಣಿ ಕರುಂ ಫಾವಇ. ಈಗಿನ ಕೊಂಕಣಿ – ಕರುಂ ಫಾವತಾ = ಮಾಡಬಲ್ಲನು.

ಸಂಸ್ಕೃತದಲ್ಲಿನ ಇತ್ಥಮ್ = ಹೀಗೆ. ಕಥಮ್ = ಹೇಗೆ, ತಥಾ = ಹಾಗೆ. ಯಥಾ = ಹೇಗೆ ಎಂಬ ಶಬ್ದಗಳು ಅನುಕ್ರಮವಾಗಿ "ಅಹೆಂ = ಅಸೆಂ". "ಕಹೆಂ = ಕಸೆಂ", "ತಹೆಂ = ತಸೆಂ", "ಜಹೆಂ = ಜಸೆಂ" ಎಂಬುದಾಗಿ ಕೊಂಕಣಿಯಲ್ಲಿ ಎರಡೆರಡು ರೂಪಗಳನ್ನು ಧರಿಸುತ್ತವೆ. ಇವುಗಳ ಮೂಲವು ಕಾತ್ಯಾಯನನ ವ್ಯಾಕರಣದಲ್ಲಿದೆ.

ತ್ರಥ ಸತ್ತಮಿಯಾ ಸಬ್ಬನಾಮೇಃ ಹಿ ॥ ೨-೫-೩ ॥ ಸಪ್ತಮೀ ವಿಭಕ್ತಿಯ ಅರ್ಥದಲ್ಲಿ ಸರ್ವನಾಮಗಳ ತರುವಾಯ "ತ್ರ"ದ ಬದಲಿಗೆ ಥ ಮತ್ತು ಹಿ ಗಳು

ಬರುತ್ತವೆ. ಉದಾ:—ಸರ್ವತ್ರ=(೧) ಸಬ್ಬತ್ಥ, (೨) ಸಬ್ಬಹಿ. ತತ್ರ=(೧) ತತ್ಥ, (೨) ತಹಿ. ಯತ್ರ=(೧) ಯತ್ಥ. (೨) ಯಹಿ.

ಹಿಂ, ಹಂ, ಹಿಂಜನ ॥ ೩-೫-೬ ॥ ಕುಹಿಂ. ಕುಹಿಂಜನ. ಅಹಿಂ. ತಹಿಂ. ಕಹಿಂ, ಯುಹಿಂ, ಕಹಂ=ಹೇಗೆ, ತಹಂ=ಹಾಗೆ ಇತ್ಯಾದಿ.

ತಮ್ಹಾಚ ॥ ೨-೫-೭ ॥ ತಹಿಂ=ಅಲ್ಲಿ, ತಹಂ=ಹಾಗೆ.

ಯತೋ ಹಿಂ ॥ ೨-೫-೮ ॥ ಯಹಿಂ=ಎಲ್ಲಿ. ಕೊಂಕಣಿ ಜಹಿಂ.

ಸಬ್ಬಸ್ಸ ತಸ್ಸಕಾರೋ ವಾ ॥ ೨-೪-೨೧ ॥ ಅತೋ=ಅತ್ತ, ಏತ್ತೋ=ಏತ್ಥ (ಇವುಗಳ ಉಚ್ಚಾರವು ಏತ್ಥೋ ಮತ್ತು ಎತ್ಥ ಎಂದಿದೆ).

ಏತೋ ಥೇಸು ವಾ ॥ ೨-೪-೨೩ ॥ ಅತೊ=ಏತ್ಥೊ, ಅತ್ಥ=ಏತ್ಥ.

ಕೆಲವರು ಕೊಂಕಣಿಯಲ್ಲಿನ ಬಾಇಂ, ಭಾಂಗರ, ಮಾಡ, ಮೆರವಣಿಕಾ. ಮ್ಹೋಡ ಮುಂತಾದ ಶಬ್ದಗಳನ್ನು ಕನ್ನಡವವುಗಳೆಂದು ಎಣಿಸಿದ್ದಾರೆ. ಆದರೆ ಅವುಗಳು ಸಂಸ್ಕೃತ ಶಬ್ದಗಳ ಕೊಂಕಣಿ ರೂಪಾಂತರಗಳಾಗಿರುತ್ತವೆ ಮತ್ತು ಕೊಂಕಣಿಯಿಂದಲೇ ಕನ್ನಡದಲ್ಲಿ ಸೇರಿದವುಗಳಾಗಿರುತ್ತವೆ. ಉದಾ:—ಸಂಸ್ಕೃತ–ವಾಪೀ=ಕೊಂಕಣಿ–ಬಾಇಂ; ಸಂ. ಭೃಂಗಾರ=ಕೊಂ. ಭಾಂಗರ; ಸಂ. ವಾಡ=ಕೊಂ. ಮಾಡ; ಸಂ. ಅಂಭೋದ=ಕೊಂ. ಅಮ್ಹೋಡ=ಮ್ಹೋಡ=ಕನ್ನಡ ಮುಗಿಲು. ಸಂ, ವಿರಾಜ್=ಕೊಂ. ಮಿರವ್=ಕನ್ನಡ ಮೆರೆಯು. ತರುವಾಯ "ಅಣ" ಪ್ರತ್ಯಯ ಕೂಡಿ "ಮೆರವಣ" ಎಂದಾಗುತ್ತದೆ. ಆ ಮೇಲೆ "ಇಕಾ" ಎಂಬ ತದ್ಧಿತ ಪ್ರತ್ಯಯ ಕೂಡಿ "ಮೆರವಣಿಕಾ" ಎಂದಾಗುತ್ತದೆ. "ಅಣ. ಅಣೆ, ಇಕಾ" ಎಂಬವುಗಳು ಕೊಂಕಣಿ ಪ್ರತ್ಯಯುಗಳಾಗಿರುತ್ತವೆ.

ಸಂಸ್ಕೃತದಲ್ಲಿ ಸಮಾನ ಅರ್ಥದ ವಟ್ ಮತ್ತು ವಡ್ ಎಂಬ ಎರಡು ಧಾತುಗಳಿವೆ. ಆ ಧಾತುಗಳಿಗೆ ಬಹಳ ಅರ್ಥಗಳಿವೆ. ಆ ಧಾತುಗಳ ಭಾವ ನಾಮಗಳು ವಾಟ ಮತ್ತು ವಾಡ ಎಂದಾಗುತ್ತವೆ ಮತ್ತು ಅವುಗಳ ಸ್ತ್ರೀಲಿಂಗ ರೂಪಗಳು – ವಾಟಿಕಾ, ವಾಟೀ, ವಾಡೀ ಎಂದಾಗುತ್ತವೆ. ಅವುಗಳ ಮುಖ್ಯ ಅರ್ಥಗಳು (೧) ವೇಷ್ಟನೇ = ಸುತ್ತುವಿಕೆ. (೨) ಆರೋಹಣ = ಏರುವಿಕೆ, (೩) ಕಥನ=ಹೇಳುವಿಕೆ, (೪) ವಿಭಜನ=ಹಂಚುವಿಕೆ, ಪಾಲುಮಾಡುವಿಕೆ ಮುಂತಾಗಿ ಇವೆ. ಇವುಗಳ "ವೇಷ್ಟನ" ಎಂಬುದರ ಅರ್ಥವು ಬಹಳ ವ್ಯಾಪಕ ವಾಗಿದ್ದು-—ಅದರ ಅರ್ಥವು ಬರೇ ಸುತ್ತುವಿಕೆ ಎಂದು ಮಾತ್ರವಿರದೇ—ಮುಚ್ಚಿಗೆ ಮಾಡುವಿಕೆ, ಹೊದಿಸುವಿಕೆ, ಹೊಚ್ಚುವಿಕೆ, ಬೇಲಿ ಹಾಕುವಿಕೆ, ಪಾಗಾರ ಕಟ್ಟುವಿಕೆ ಮುಂತಾದ ಅರ್ಥಗಳೂ ಇವೆ. ಹೀಗಾಗಿ ಕೊಂಕಣಿಯಲ್ಲಿ ಆ ಅರ್ಥ

ಗಳಿಗೆ ಅನುಸಾರವಾಗಿ ಆ ಶಬ್ದಗಳಲ್ಲಿನ "ವ"ಕಾರವು "ಬ" ಮತ್ತು "ಮ" ಆಗಿ ಮಾರ್ಪಟ್ಟು ಒಂದು ಅರ್ಥಕ್ಕೆ ಒಂದು ರೂಪದಂತೆ ಹಲವು ಅರ್ಥಗಳಿಗೆ ಹಲವು ರೂಪಗಳಾಗುತ್ತವೆ.

ಹಿಂದೆ ಹೇಳಿದ ಶಬ್ದೌಘ ಕಲ್ಪದ್ರುಮವೆಂಬ ಸಂಸ್ಕೃತ ಕನ್ನಡ ಶಬ್ದಕೋಶದಲ್ಲಿ "ವಾಟ" ಶಬ್ದದ ಅರ್ಥಗಳು ಮುಂದಿನಂತಿವೆ:—(೧) ದಾರಿ. (೨) ಮನೇ ಮೇಲಣ ಮುಚ್ಚಳ. (೩) ವಾಸ್ತು ಅಂದರೆ ಮನೇ ಕಟ್ಟಲಿಕ್ಕೆ ಯೋಗ್ಯವಾದ ಸ್ಥಳ, (೪) ಪಾಗಾರ.

The Standard Sanskrit English Dictionary ಅದರಲ್ಲಿ ವಾಟ ಶಬ್ದದ ಅರ್ಥಗಳು ಮುಂದಿನಂತಿವೆ. (೧) An enclosure; a piece cf enclosed ground. ಪಾಗಾರ ಹಾಕಿ ಸುತ್ತುಬಳಸಿದ ಜಾಗ = ವಾಡ, ವಠಾರ, (೨) a garden = ತೋಟ, a park = ಉದ್ಯಾನ. (೩) a road = ದಾರಿ. (೪) the groin = ಛಾವಣಿಯ ಕಮಾನುಗಳ ಕೂಡಂಚು. ಕೊಬಳು. (೫) a sort of grain = ಒಂದು ಬಗೆಯ ಧಾನ್ಯ.

ಆ ಶಬ್ದಗಳು ಕೊಂಕಣಿಯಲ್ಲಿ ಮುಂದೆ ಕೊಟ್ಟಿರುವಂತೆ ರೂಪಾಂತರವಾಗಿ ಬೇರೆ ಬೇರೆ ಅರ್ಥಗಳಲ್ಲಿ ಬಳಸಲ್ಪಡುತ್ತವೆ. (೧) ವಾಟ (ಸ್ತ್ರೀ) ದಾರಿ. (೨) ಬಾಟ (ನ) ತೋಟ. ಇದನ್ನು ಭಾಟ ಎಂತಲೂ ನುಡಿಯುತ್ತಾರೆ. (೪) ಮಾಡ – ಮನೆಯ ಮೇಲಿನ ಛಾವಣಿ. (೫) ಮಾಳೊ = ಗೋಡೆಗಳ ಮೇಲಿನ ಅಡ್ಡಜಂತೆಗಳ ಮೇಲೆ ಹಲಗೆಯ ಮುಚ್ಚಿಗೆ. ಅಟ್ಟ. (೬) ವಾಡೊ = ಪಾಗಾರದ ಒಳಗೆ. ಹಲವು ಮನೆಗಳಿರುವ ವಠಾರ. ಈ ಅರ್ಥದಲ್ಲಿ – ವಾಟ + ಘರ = ವಾತರ ಎಂಬ ಶಬ್ದವು ಕೊಂಕಣಿಯಲ್ಲಿ ಬಳಕೆಯಲ್ಲಿದೆ. ಸರೆಕರ(ಯ ಮನೆಗಳು).

ಸ್ತ್ರೀಲಿಂಗ ಶಬ್ದಗಳಾದ – ವಾಟೀ ಮತ್ತು ವಾಡೀ ಶಬ್ದಗಳು ಮುಂದಿನಂತೆ ಬಳಸಲ್ಪಟ್ಟಿವೆ. ಅಂಬ್ಯಾಪಾಡೀ = ಮಾವಿನ ತೋಪು. ಫುಲ್ಲಾವಾಡೀ = ಹೂದೋಟ. ವಾಟಿಕಾ = ವಾಡಿಕಾ = ನಡೆದುಬಂದ ದಾರಿ. ಕ್ರಮ. ರೂಢಿ. ವಾಡೀ = ಮೂಡೀ = ಮಾಳೀ = ಮಾಳಿಗೆ. ಮಹಡಿ.

ಹಂಚು. ಪಾಲುಮಾಡು ಎಂಬ ಅರ್ಥದಲ್ಲಿ ವಟ್ ಧಾತುವಿನ ನಡುವೆ ಅನುನಾಸಿಕ ಕೂಡುತ್ತದೆ = ವಂಟ. ಇದು ಕೊಂಕಣಿಯಲ್ಲಿ ವಾಂಟ್ = ಹಂಚು. ಹಂಚಿಕೊಡು ಮುಂತಾದ ಅರ್ಥಗಳಲ್ಲಿ ಬಳಸಲ್ಪಡುತ್ತದೆ. ಅದರ ಸಂಸ್ಕೃತ ನಾಮರೂಪ — "ವಂಟಕಃ ಎಂಬುದು ವಾಂಟೊ = ಪಾಲು" ಎಂಬುದಾಗಿ

ಕೊಂಕಣಿಯಲ್ಲಿದೆ. ವಡ್ ಧಾತುವು ಕೊಂಕಣಿಯಲ್ಲಿ ಮಡ್ = ಹೊಚ್ಚಲ್ಪಡು. ಹೊದಿಕೆಯಿರು, ಮುಚ್ಚಿಗೆ ಇರು ಎಂಬ ಅರ್ಥಗಳಲ್ಲಿಯೂ – ಮಡಯಿ = ಮುಚ್ಚಿಗೆಮಾಡು, ಹೊದಿಕೆಹಾಕು ಮುಂತಾದ ಅರ್ಥಗಳಲ್ಲಿಯೂ ಬಳಸಲ್ಪಡುತ್ತದೆ.

ಕೊಂಕಣಿಯಲ್ಲಿ "ಮಾಡ" ಶಬ್ದವು ಮೊದಲು ಮುಚ್ಚಿಗೆ ಅಥವಾ ಮನೆಯ ಮೇಲ್ಭಾಗದ ತಳ ಎಂದಿಷ್ಟೇ ಅರ್ಥದಲ್ಲಿ ಬಳಸಲ್ಪಡುತಿತ್ತೆಂದು ತಿಳಿದುಬರುತ್ತದೆ. ಹೇಗೆಂದರೆ ಮನೆಯ ಮೇಲಿನ ಛಾವಣಿಯ ಅಥವಾ ಹೊಚ್ಚಿಕೆಯ ಹೆಸರು "ಪಾಖೆಂ = ಸಂಸ್ಕೃತ – ಪಕ್ಷಮ್ ಎಂಬುದಾಗಿ ಈಗಲೂ ಕೆಲವು ಕಡೆಗಳಲ್ಲಿ ಬಳಕೆಯಲ್ಲಿಧೆ ಮತ್ತು "ಮಾಡ" ಎಂಬ ಶಬ್ದವನ್ನು ಬಳಸುವವರು ಕೂಡ— ಛಾವಣಿಗಾಗಿ ಕೊಬಳಿನಿಂದ ಸೂರಿನ ಕಡೆಗೆ ಬರುವ ಮರದ ಜಂತೆಗಾಗಿ "ಪಾಕ್ವಾಸೊ" ಎಂಬ ಶಬ್ದವನ್ನೇ ಬಳಸುತ್ತಾರೆ. ಪಾಕ್ವಾಸೊ ಎಂಬ ಶಬ್ದವು ಸಂಸ್ಕೃತದ "ಪಕ್ಷ + ವಂಶಃ" ಅಂದರೆ ಪಾಖ್ಯಾಚೊ ವಾಸೊ = ಪಕ್ಕದ ಬಿದಿರು ಎಂಬುದರ ರೂಪಾಂತರವಾಗಿರುತ್ತದೆ. ಛಾವಣಿಯ ಒಂದು ಪಕ್ಕವು ಸಂಸ್ಕೃತದಲ್ಲಿ ಪಕ್ಷವೆಂದು ಕರೆಯಲ್ಪಡುತ್ತದೆ. ಕೊಂಕಣಿಯ ಪಾಕ್ವಾಸೊ ಕನ್ನಡವಲ್ಲಿ ಪಕ್ಕಾಸು ಆಗಿದೆ. ಹಾಗೆಯೇ ಛಾವಣಿಯ ಕೊಬಳಿನ ಜಂತೆಯನ್ನು ಕೊಂಕಣಿಯಲ್ಲಿ ಪಾಠೋಸೊ = ಬೆನ್ನಿನ ಬಿದಿರು ಅನ್ನುತ್ತಾರೆ. ಕೊಬಳಿಗೂ ಅದೇ ಶಬ್ದ ಬರುತ್ತದೆ. ಛಾವಣಿಯ ಒಂದು ಪಾರ್ಶ್ವಕ್ಕೆ "ಪಕ್ಷ" ಎಂಬ ಶಬ್ದವು ವೇದಕಾಲದಿಂದಲೇ ಸಾಗಿಬಂದಿದೆ. ಹಾಗೂ ಛಾವಣಿಗೆ ಬಿದಿರನ್ನು ಉಪಯೋಗಿಸುವುದು ಪ್ರಾಚೀನಕಾಲದಿಂದಲೇ ನಡೆದುಬಂದುದಾಗಿದೆ. ಯಜ್ಞಶಾಲೆಯ ಪೂರ್ವಪಕ್ಷದ ಬಿದಿರು "ಪ್ರಾಚೀನವಂಶಃ" ಎನಿಸಿಕೊಳ್ಳುತಿತ್ತು.

ವಕಾರವು ಮಕಾರವಾಗಿ ಮಾರ್ಪಟ್ಟ ಬೇರೆ ಕೆಲವು ಉದಾಹರಣೆಗಳು ಮುಂದಿನಂತಿವೆ:—ವಿಟ್ = ಮಿಟ್ = ಉಪ್ಪು. ವಟರ = ಮಡಲ = ತೆಂಗಿನ ಸೋಗೆಯಿಂದ ಹೆಣೆದ ಚಾಪೆ. ವಿದ್ಯುತ್ = ವಿಜ್ಜು = (೧) ಸಿಡಿಲು, ವಿದ್ಯುಚ್ಛಕ್ತಿ. (೨) ಮಿಂಚು = ಸಿಡಿಲಿನ ಬೆಳಕು. ವಿಷ = (೧) ವಿಸ. ಮೀಖ = ನಂಜು. (೨) ಮೋಖೆಂ = ವಿಷಜಂತುಗಳು ಸತ್ತು ಕೊಳೆತ ಜಾಗದಲ್ಲಿ ಬೆಳೆದ ನಂಜಿನ ಹುಲ್ಲು,

# ೧೦

ಇಲ್ಲಿ ಮುಂದೆ ಕೊಂಕಣಿಯಲ್ಲಿ ಮಾತ್ರ ಬಳಕೆಯಲ್ಲಿರುವ ಕೆಲವು ಪ್ರಾಕೃತ ಶಬ್ದಗಳು ಕೊಡಲಾಗುವುವು.

| ಸಂಸ್ಕೃತ | ಕೊಂಕಣಿ | ಕನ್ನಡ | ಮರಾಠಿ |
|---|---|---|---|
| ೧. ಅಂಗೀಕೃ (ಅಂಗೀಕರಣ) | ಆಂಗಯ್ ಆಂಗವಣ (ಸ್ತ್ರೀ) | ಹರಕೆ ಹೇಳು- ಮಾಡು ಹರಕೆ ಹೇಳುವಿಕೆ | ನವಸ |
| ೨. ಅಂಬಾ (ಕೊಚ್ಚಿ) | ಅಮ್ಮಾ | ತಾಯಿ | ಆಈ |
| ೩. ಅಕ್ಷ, ಅಕ್ಷಿ | ಅಚ್ಚು, ಅಚ್ಚಿ (ತೂತು) | ಅಚ್ಚು, ಪಡಿಯಚ್ಚು | ಸಾಂಚಾ |
| ೪. ಅಂಗಾರ | ಇಂಗಾಳೊ | ಕೆಂಡ | ನಿಖಾರಾ |
| ೫. ಅಂಭೋದ | ಮ್ಹೋಡ- ಮೋಢ | ಮುಗಿಲು | ಢಗ |
| ೬. ಅಗ್ನಿವ್ರಣ | ಆಗರುಂವ- ರೂಂ | ಬಾಯಿಹುಣ್ಣು | |
| ೭. ಅಣಕ (ವಿ) | ಅಣವೊ | ಕೀಳು | ಹಲಕಟ |
| ೮. ಅಪರೇದ್ಯುಸ್ ಕ್ರಿ. ವಿ. | ಎರಮುಸ್ | ಮರುದಿನ | |
| ೯. ಆಗ್ರಹಃ | ಆಗಿರೊ | ಪ್ರೀತಿಯ ಒತ್ತಾಯ | ಗಳ್ |
| ೧೦. ಆಯತನ (ಕೊಚ್ಚಿ) | ಆಯಿದನ | ಪಾತ್ರೆ | ಭಾಂಡೇಂ |
| ೧೧. ಆರ್ಯಾ | ಅಯ್ಯಾ (ಕೊಚ್ಚಿ) | ೧. ಅಜ್ಜಿ ೨. ಮುತ್ತೈದೆ | |
| ೧೨. ಆರ್ಯಾತ್ವ | ಅಯ್ಯಾಪಣ | ಮುತ್ತೈದೆತನ | |
| ೧೩. ಆಲಾನಃ | ಆಲಾದು | ಆನೆ ಕಟ್ಟುವ ಹಗ್ಗ | |
| ೧೪. ಆವೀಜನ | ಆಇಣೊ | ಬೀಸಣಿಕೆ | ಆಳಣಾ |

| | | | | |
|---|---|---|---|---|
| ೧೫. | ಆಸ್ಪೃಶ್ | ಆಪ್ಪಡ್.<br>ಆಫಡ್ | ಮುಟ್ಟು | ಶಿವ್ |
| ೧೬. | ಆಹರ್ | ಹಾಡ್ | ತರು, ತಾ | ಆಣ್ |
| ೧೭. | ಆಹ್ವಯ್ | ಆಪ್ವಯ್ | ಕರೆ | ಬೋಲವ್ |
| ೧೮. | ಇತ್ಯರ್ಥವಮ್ | ಇತ್ಯರ್ಥ | ವಿಚಾರಣೆ ಮತ್ತು<br>ತೀರ್ಮಾನ | |
| ೧೯. | ಈಕ್ಷ್ | ಎಕ್ಷಿ | ಎಣಿಸು, ಯೋಚಿಸು | |
| ೨೦. | ಉತ್ತಪ್ | ಉಲಪ್<br>(ಹುಲಪ್)<br>ಒಳಪ | ಕಮರು | ಹುರಪಳ |
| ೨೧. | ಉತ್ಕರ್ | ಉಕ್ಕಳ್,<br>ಉಕಲ್ | ಮೇಲೆತ್ತು | ಉಚಳ್ |
| ೨೨. | ಉತ್ಪಟ್ | ಉಪಟ್, ಉಪ್ | ಕಿತ್ತುಕೊಳ್ಳು | ಓಸಕೂನ್ ಘೇ |
| ೨೩. | ಉತ್ಪತ್ | ಉಬ್ | ಹಾರಾಡು | ಉಡ್ |
| ೨೪. | ಉತ್ಪಾಟಯ | ಉಪಾಟಿ | ಕೀಳು, ಹೊರತೆಗೆ | |
| ೨೫. | ಉತ್ಸಂಗಃ | ಉಸಂಗೊ,<br>ಉಸಕೊ | ತೊಡೆ, ಉಡಿ | ಮಾಂಡೀ |
| ೨೬. | ಉತ್ಸ್ಪರ್ಧ್ | ಹುರಡ್ | ಮೇಲಾಡು | |
| ೨೭. | ಉತ್ಸರ್ಜ್ | ಉಡ್ಡಯ್ | ಬಿಸಾಡು, ಎಸೆಯು | ಫೇಂಕ್ |
| ೨೮. | ಉದ್ಗಾರಃ | ಉವ್ವಾರ್ (ರು) | ನೆರೆ | ಪೂರ್ |
| ೨೯. | ಉದ್ಭವ | ಉಜ್ಜೊ | ಬೆಂಕಿ, ಕಿಚ್ಚು | ವಿಸ್ತಾವ |
| ೩೦. | ಉದ್ವೇಗಃ | ಉತ್ವೇಗು | ೧. ತವಕ<br>೨. ಕಳವಳ | |
| ೩೧. | ಉಪರಿ | ಓಯುರಿ | ಮೇಲೆ | ವರ್ |
| ೩೨. | ಉಪಸ್ಕರೀ | ಉಪಕರಿ | ಒಗ್ಗರಣೆ ಪಲ್ಯ | |
| ೩೩. | ಉಲ್ಲಪ್ | ಉಲ್ಲಯ್ | ನುಡಿ. ಮಾತಾಡು | ಬೋಲ್ |
| ೩೪. | ಉಷ್ಣ | ಉನ್ಹ. ಹುನ | ಬಿಸಿ, ಬೆಚ್ಚನ | ಗರಮ್ |
| ೩೫. | ಊಷ್ಮ | ಊಹ್ಮ.<br>ಹೂಮು | ಬೆವರು | ಘೂಮು |

| | | | |
|---|---|---|---|
| ೩೬. ಕರಕಃ | ಕರೊ | ಆಲಿಗಲ್ಲು | ಗಾರ |
| ೩೭. ಕರೋಟಿಃ | ಕರಟೊ | ತಲೆಚಿಪ್ಪು | ಕವಟೀ |
| ೩೮. ಕರ್ಣಪಾಲಿ | ಕಾನುಲೊ | ಕಿವಿಗುಗ್ಗ | |
| ೩೯. ಕೀರಃ | ಕೀರು | ಗಿಳಿ | ಪೋಪಟ |
| ೪೦. ಕುಕ್ಕುಟ | ಕುಂಕಡ | ಕೋಳಿ | ಕೋಂಬಡಾ |
| ೪೧. ಕುಟಃ | ಗುಡ್ಡೊ | ಬೆಟ್ಟ, ಗುಡ್ಡ | ಡೋಂಗರ್ |
| ೪೨. ಕುಟಜಂಪಕ | ಕುಡಚಾಂಪೆಂ | ಕಾಡುಸಂಪಿಗೆ | |
| ೪೩. ಕುಡ್ಯಕೋಷ್ಠ | ಕುಡಕುಟ | ಮಾಡ | ಕೋನಾಡಾ |
| ೪೪. ಕುರಚಿಲ್ಲಃ | ಕುರಲೊ | ಏಡಿ | ಖೇಕಡಾ |
| ೪೫. ಕುಲಗೃಹ | ಕುಳ್ಗಾರ | ತವರುಮನೆ | ಮಾಹೇರ |
| ೪೬. ಕೂಪಕಃ | ಕೂಂಪೊ. ಕೂವೊ | ಹಾಯಿಮರ | ಡೋಲಕಾಠೀ |
| ೪೭. ಕೋಲ | ಕೋಳ | ಕಾಡು ಹಂದಿ | |
| ೪೮. ಕೋಲ-ಉಂದುರ | ಕೋಳ-ಉಂದುರು | ಹೆಗ್ಗಣ | ಘೂಂಸ |
| ೪೯. ಕೋಷ್ಠಃ | ಕೊಟ್ಟೊ (ಬೊಟ್ಟೊ) | ೧. ಎಲೆಯ ಪಾತ್ರೆ ಅಥವಾ ಗೂಡು ತೊಟ್ಟೆ ೨. ಬಳ್ಳಿಯಿಂದ ಹೆಣೆದ ಪಾತ್ರೆ ಚಿಕ್ಕಬುಟ್ಟಿ | |
| ೫೦. ಕೋಷ್ಠ | ಕೋಡೊ | ಕಣಜ | |
| ೫೧. ಕೋಷ್ಠವರ್ | ಕೂಡ | ಕೋಣೆ | ಖೋಲೀ |
| ೫೨. ಕೋಷ್ಠಕವರ್ | ಕೂಡಕೆಂ = Shed | ಕೊಟ್ಟಿಗೆ | |
| ೫೩. ಖಲ್ವಾಟ | ಖಳಡು-ಡೊ | ತರಟು (ತಲೆ) | ಟಕಲ್ಯಾ |
| ೫೪. ಖಾತ | ಖಾಲ | ತಗ್ಗು (ಜಾಗ) | |
| ೫೫. ಗುತ್ | ಗುತಳ್ | ಸುರುಳು | |
| ೫೬. ಗುರ್ವಿಣೀ | ಗುರ್ಬಿಣಿ | ಬಸುರಿ | ಗರೋದರ್ |

| | | | |
|---|---|---|---|
| ೫೭. ಗೋಲಕ | ಗೋಂಗು | ಗುಡ್ಡು (ಕಣ್ಣಿನ) | ಬುಬುಳ್ |
| ೫೮. ಚುಂಬಾ | ಉವ್ಮಾ (Kiss) | ಮುತ್ತು–ದ್ದು | ಮುಕಾ |
| ೫೯. ಚಕ್ಷ್ | ಚೋಹ್–ಯ್ | ನೋಡು | |
| ೬೦. ಚರು | ಚರುವಿ | ಅನ್ನಬೇಯಿಸುವ ಪಾತ್ರೆ | |
| ೬೧. ಚೇಟ | ಚೇಡೊ | ಆಳು, ಸೇವಕ | ಗಡೀ |
| ೬೨. ಜಗತಿ | ಜಗಲಿ | ಕಟ್ಟೆ | ಓಟಾ |
| ೬೩. ಜನ್ | ಜಾ | ಆಗು, ಹುಟ್ಟು | |
| ೬೪. ಜನ್ಮದಿವಸ | ಜಾಯ್‌ದಿವಸು | ಹುಟ್ಟುದಿನ | ವಾಢದಿವಸ |
| ೬೫. ತೃಣ | ತ್ರಣ | ಹುಲ್ಲು | ಗವತ |
| ೬೬. ತೇಮು | ತೇಂವು | ಪಶೆ | ಓಲಾವಾ |
| ೬೭. ದೀರ್ಘ | ದೀಘು | ಉದ್ದ | ಲಾಂಬ |
| ೬೮. ದ್ವೀಪ–ಪೀ | ಜುವೆಂ, ದೀವಿ | ಕುದ್ರು | ಬೇಟ |
| ೬೯. ದ್ವಾರಬಂಧ | ದಾರವಂದು | ಬಾಗಿಲಚೌಕಟ್ಟು | ಚೌಕಟೀ |
| ೭೦. ಪಟ್ಟ | ಪಾಟ್ಟೊ | ಪಟ್ಟೆ, ರೇಶ್ಮೆ | ರೇಶೀಮ್ |
| ೭೧. ಪಟ್ಟ | ಪಾಟ್ಟೊ | ೧. ಅಧಿಕಾರಪತ್ರ, ೨. ತಗಡು, ೩. ಪಟ್ಟಿ | |
| ೭೨. ಪಟ್ಟ | ಪಾಟು | ಅಧಿಕಾರ, ಪಟ್ಟ | ಪಾಟ್ |
| ೭೩. ಪಟ | ಪಾಟು | ತೆರೆ, ಬಟ್ಟೆಹಾಸು | ಪಡದಾ |
| ೭೪. ಪರ | ಪೆಲ-ಪೆಲೊ | ಆಚೆಯ, ಹೆರವ | |
| ೭೫. ಪರತಟೀ | ಪೆಲತಡಿ | ಆಚೆದಡ | ಪಲೀಕಡೇ |
| ೭೬. ಪರ್ವನ್ | ಪರಬ | ಹಬ್ಬ | ಸಣ್ |
| ೭೭. ಪಿಂಡಯು | ಪೆಂಡೆ | ಮುದ್ದೆಗಟ್ಟು | ಗೋಲ್ |
| ೭೮. ಪಿಶಾಚ | ಪಿಸೊ | ಹುಚ್ಚ | ವೇಡಾ |
| ೭೯. ಪುಟ್ | ಪುಟಳ್ | ಅಪ್ಪಿಕೊಳ್ಳು, ತೆಕ್ಕೆಬೀಳು | ಮಿಠೀಮಾರ್ |
| ೮೦. ಪುರಾಣ | ಪೊರನೆಂ | ಹಳತು | ಜುನೇಂ |
| ೮೧. ಪ್ರಕೋಷ್ಠ | ಪೌಲ್ (ಗೋವ) | ಮುಂಗೈ | |

| | | | |
|---|---|---|---|
| ೮೨. ಪ್ರಕೋಷ್ಠಿಕಾ | ಪೊವರಿ | ಮುಂಗೈ | |
| ೮೩. ಪ್ರತ್ಯಾಯ್ | ಪಾತಯೇ | ನಂಬು | |
| ೮೪. ಪ್ರಲೋಕಯ | ಪಳೋಯ್,<br>ಪಳೆಯ್ | ನೋಡು | ಪಾಹ, ಪಹಾ |
| ೮೫. ಪ್ರಾಕಾರ | ಪಾಗಾರು | ಸುತ್ತುಗೋಡೆ | |
| ೮೬. ಮರುತ್ಪಥ | ವ್ಹೊಳುಪು | ಬಾನು | ಆಭಾಳ್ |
| ೮೭. ಮಲ್ಲಕಮ್ | ಮಾಲ್ಲೆಂ | ಆಧಾರಪಾತ್ರ | ಘಮೇಲೇಂ |
| ೮೮. ಮಶಕ, | ಮುಸಕ | ಸೊಳ್ಳೆ | ಚಿಲಟ |
| ೮೯. ಮಾತಾ | ಮಾಯ್ | ತಾಯಿ | ಆಈ |
| ೯೦. ಯುಗ | ಲುಗ, ನುಗ | ನೊಗ | ಜೋಕಡ್ |
| ೯೧. ರಿಕ್ತಮ್ | ರಿತ್ತೆಂ | ಬರಿದು | ರಿಕಾಮಾ |
| ೯೨. ಲಿಹ್ | ಲೇಂವ | ನೆಕ್ಕು | ಚಾಟ್ |
| ೯೩. ವಡ್ರ | ವಡಳೆಂ, ವಡ | ದೊಡ್ಡ | ಮೋಠೇಂ. |
| ೯೪. ವಧೂಕುಲ | ವ್ಹೊಕುಲ | ಮದುಮಗಳು | ನವರೀ |
| ೯೫. ವರಯಿತೃ | ವರೈತು | ಮದುಮಗ | ನವರಾ |
| ೯೬. ವಲಯ | ೧. ಬಳೆಂ.<br>೨. ವಳೆಂ,<br>೩. ವಾಳೊ | ಬಳೆ | ಕಡೇಂ. |
| ೯೭. ವಲಯಕಾರ | ವಳಾರು | ಬಳೆಗಾರ | |
| ೯೮. ವಸ್ತಿ | ೧. ವೊಟ್ಟಿ<br>ಬಾದ್ದಿ<br>೨. ವ್ಹಂಟಿ | ೧. ದಸಿ, ಅರು<br>೨. ಉಡಿ, ಮಡಿಲು | |
| ೯೯. ವಾತಾಯನ | ವಾಳಣೊ,<br>ಬಾಳಣೊ | ಕಿಟಿಕಿ | ಖಿಡಕೀ |
| ೧೦೦. ವಾಪೀ | ಬಾಞಂ | ಬಾವಿ | ವಿಹೀರ್ |
| ೧೦೧. ವಿವರ | ವೇರೊ | ಬಿರುಕು, ಒಡಕು | |
| ೧೦೨. ವ್ರಣ | ರುಂವ | ಹುಣ್ಣು | |
| ೧೦೩. ವೃತಿ | ವೇಲಿ, ಬೇಲಿ,<br>ವಞ | ಬೇಲಿ | ಕುಂಪಣ. |

| | | | |
|---|---|---|---|
| ೧೦೪. ವೃಹತ್ | ವ್ಹಡ, ಹೋಡ | ದೊಡ್ಡ, ಶ್ರೇಷ್ಠ | ಥೋರ್ |
| ೧೦೫. ವೇಗೇನ | ವೇಗಾನ, ವೇಗೀಂ, ಬೇಗೀಂ | ಬೇಗನೇ | ಲವಕರ್ |
| ೧೦೬. ವೇದಿಕಾ | ಪೇಡಿ | ಕಟ್ಟೆ | ಓಟಾ |
| ೧೦೭. ವ್ಯಂಗ | ವೇಂಗ. (ವಿ) | ಹೆಳವ | |
| ೧೦೮. ವ್ಯಂಗ್ಯವ್ | ಬೆಂಗೆಂ | ವಿನೋದೋಕ್ತಿ | |
| ೧೦೯. ಶಕುನ | ಸಉಣೆಂ, ಸುಕಣೆಂ | ಹಕ್ಕಿ | ಪಾಂಖರೂಂ |
| ೧೧೦. ಶರ್ಕರ | ಶಂಕರೊ | ಹರಳುಕಲ್ಲು | |
| ೧೧೧. ಶಾದ | ಖಾತ (ಖಾತ್ತಡಿ) | ರಾಡಿ, ಕೆಸರು | |
| ೧೧೨. ಶೀತಲ | ಶೇಳ | ತಣ್ಣನ | ಥಂಡ್ |
| ೧೧೩. ಶುಲ್ಕ | ಸುಂಕ | ಸುಂಕ | ಜಕಾತ್ |
| ೧೧೪. ಶ್ರದ್ಧಾ | ಸಡ್ಡಾ | ಸಡ್ಡೆ | |
| ೧೧೫. ಸಂಕ್ರಮ | ಸಾಂಕವು | ಸಂಕ | ಪೂಲ್ |
| ೧೧೬. ಸಂಗತ್ಯಾವ್ | ಸಾಂಗಾತಿಂ | ಜೊತೆಗೆ-ಜೊತೆಯಲ್ಲಿ | ಬರೋಬರ್ |
| ೧೧೭. ಸಂಧಿ | (ಖಾಂಜಿ,) ಖಾಂಚಿ | ಎಡೆ | |
| ೧೧೮. ಸತ್ಯಂಕಾರ | ಸಂಚಿಕಾರು | ಮುಂಗಡ ಹಣ | ವಿಸಾರಾ |
| ೧೧೯. ಸರೀಸೃಪ | ಹಾರುಂವಂ | ಹರಿದಾಡುವ ಜಂತು | ಸಾಪ |
| ೧೨೦. ಸರ್ಷಪ | ಸಾಸಂವ-ವು | ಸಾಸಿವೆ | ಮೊಹೋರೀ |
| ೧೨೧. ಸಿಕ್ಥ | ಶಿತ, ಶಿತ | ಅನ್ನ, ಕೂಳು | ಭಾತ್ |
| ೧೨೨. ಸೃಪ | ಸಾಪ | ಉಡ | ಘೋರ್ಪಡ್ |
| ೧೨೩. ಸ್ವಂಗ | ವೇಂಗ (ಸ್ತ್ರೀ) | ಅಪ್ಪುಗೆ | ಮಿಠೀ |
| ೧೨೪. ಹರ | ವ್ಹರ | ಒಯ್ಯು | ವೇ |

ಇನ್ನು ಎರಡೂ ಭಾಷೆಗಳ ಶುದ್ಧತೆಯನ್ನು ಪರೀಕ್ಷಿಸಲು ಕೆಲವು ಶಬ್ದಗಳು ಕೊಡಲಾಗುವವು. ಇವುಗಳು ದಿನನಿತ್ಯದ ಬಳಕೆಯವುಗಳಾಗಿರುತ್ತವೆಯೇ ಹೊರತು ಸಾಹಿತ್ಯರಚನೆಗಾಗಿ ನಿರ್ಮಿಸಿದವುಗಳಲ್ಲ. ಸಾಹಿತ್ಯದಲ್ಲಿ ಶುದ್ಧ ಸಂಸ್ಕೃತ ಶಬ್ದಗಳನ್ನು ಮರಾಠಿಗರಂತೆಯೇ ಕೊಂಕಣಿಗರೂ ಬಳಸಬಹುದು.

| ಸಂಸ್ಕೃತ | ಕೊಂಕಣಿ | ಮರಾಠಿ | ಕನ್ನಡ |
|---|---|---|---|
| ೧. ಅಂತ್ರ | ಆಂತ | ಆಂತಡೇಂ-ಡೀ | ಕರುಳು |
| ೨. ಅಧುನಾ, ಇದಾನೀಂ | ಏಧನಾ | ಏವ್ಹಾಂ | ಈಗ |
| ೩. ಉತ್ಕ್ವಥ್ | ಉಕಡ್ | ಉಕಳ್ | ಬೇಯು, ಕುದಿ |
| ೪. ಉದ್ಯೋತ | ಉಜವಾಡು | ಉಜೇಡ್ | ಬೆಳಕು |
| ೫. ಅನುಪಹತವಸ್ | ಅನವ್ಹಾಳೆಂ | ಓಂವಳೇಂ | ಮಡಿ |
| ೬. ಉಪಾನಹ್ | ಪಾಣಹ್ = ವ್ಹಾಣ | ವಾಹಾಣ | ಮೆಟ್ಟು, ಕೆರ |
| ೭. ಖದ್ಯೋತ | ಕಾಜೊಳೊ, ಕಾಜುಳೊ | ಕಾಜವಾ | ಮಿಣುಕುಹುಳ |
| ೮. ಖರ್ಜೂ | ಖರಜು | ಖಾಜ | ಕಜ್ಜಿ, ತುರಿ |
| ೯. ಗೋಧೂಮಃ | (ಗೋದೂಂವ) ಗೋಂವ್ರು | ಗಹೂಂ | ಗೋದಿ |
| ೧೦. ಗೋಪಾಲಃ | ಗೋವಾಳೊ | ಗವಳೀ | ಕವಾಡಿಗ |
| ೧೧. ಜನ್ಮವಾಲಃ | ಜಾಂಯಪ್ರೋಳು | ಜಾವಳ್ | ಹುಟ್ಟುಗೂದಲು |
| ೧೨. ತುಷಃ | ತುಸು | ತೂಸ್ | ಹೊಟ್ಟು |
| ೧೩. ದರ್ವೀ | ದಾಯು | ಡಾವ್ (ಸುಟ್ಟುಗ) | ಸಟ್ಟುಗ, ಹಾವಿನ ಹೆಡೆ |
| ೧೪. ದೇವೃ | ದೇರು | ದೀರ್ | ಗಂಡನ ತಮ್ಮ |
| ೧೫. ಪೃಥುಕ | (ಪ್ರೋಹುವ) ಫೋವು | ಪೋಹಾ | ಅವಲಕ್ಕಿ |
| ೧೬. ಪ್ಲವ | ಪೋಂವ | ಪೋಹ | ತೇಲು, ಈಜು |
| ೧೭. ಪ್ರವಹ | ಪೋಂಹ.-ವ | ಗಳ್ | ಸೋರು |
| ೧೮. ಫೇನಃ | ಫೇಣ | ಫೇಂಸ್ | ನೊರೆ |
| ೧೯. [illegible] | [illegible] | [illegible] | ಸೋದರಿ |
| ೨೦. ಭಾರೇ | ಭಾರಿ | ಫಾರ್ | ಅತ್ಯಂತ, ಮಿತಿ ಮೀರಿ |
| ೨೧. ಭ್ರೂ | ಭೊಂವಿ | ಭಿಂವಈ | ಹುಬ್ಬು |

| | | | | |
|---|---|---|---|---|
| ೨೨. | ಮಹಾರ್ಘ | ಮ್ಹಾರಗ | ಮಹಾಗ | ಪ್ರಿಯ |
| ೨೩. | ಮಹಿಲಾ | ಬಾಇಲ-ಲಾ | ಬಾಯಕೊ | ಹೆಂಗಸು |
| ೨೪. | ಮಾತುಲಿಂಗ | ಮಾಉಳಿಂಗ | ಮಹಾಳುಂಗ | ಮಾದಳ |
| ೨೫. | ಯುಜ್ | ಜುಡ್ | ಜುಳ್ | ಕೂಡು |
| ೨೬. | ಲಾಜಾ | ಲ್ಹಾಯ್ | ಲಾಹೀ | ಹೊದ್ದಲು |
| ೨೭. | ವಲೀ | ಮಿರಿ | ನಿರೀ | ನೆರಿಗೆ |
| ೨೮. | ವಲ್ಮ ಪುತ್ರಿಕಾ | ವಾಳುತಿ | ವಾಳವಿ | ಗೆದ್ದಲು |
| ೨೯. | ಸ್ವರ್ಘ | ಸವ್ರಘ | ಸ್ವಸ್ತ | ಅಗ್ಗ |
| ೩೦. | ಹನು | ಹಣವಿ | ಹನುವಟೀ | ಗದ್ದ |
| ೩೧. | ವಾತಿಂಗ-ಣ | ವಾಇಂಗೆಂ, ವಾಇಂಗಣ | ವಾಂಗೇಂ | ಬದನೆ |

ಮೊದಲಿದ್ದ ಡ ಕಾರವೇ ತರುವಾಯ ಳ ಕಾರವಾಗುತ್ತದೆಂತಲೂ ಮೂಲ ರೂಪದಿಂದ ಅಕ್ಷರ ಲೋಪವಾಗುವುದು ಇಲ್ಲವೇ ಇರಬೇಕಾದುದಕ್ಕಿಂತ ಹೆಚ್ಚಿನ ಅಕ್ಷರಗಳು ಬಂದು ಕೂಡುವುದು ತರುವಾಯದ ಮಾರ್ಪಾಟೆಂತಲೂ ಹಿಂದಿನ ಶಬ್ದಗಳಿಂದ ತಿಳಿದುಬರುತ್ತದೆ.

## ೧೧

ಮುಂದೆ ಸಂಸ್ಕೃತ, ಪ್ರಾಕೃತ, ಕೊಂಕಣಿ ಮತ್ತು ಮರಾಠಿಗಳಲ್ಲಿ ಬರುವ ಸರ್ವನಾಮಗಳು ಕೊಡಲಾಗುವವು:—

| ಸಂಸ್ಕೃತ | ಪ್ರಾಕೃತ | ಕೊಂಕಣಿ | ಮರಾಠಿ | ಕನ್ನಡ |
|---|---|---|---|---|
| ಅಹಮ್ | ಅಹಂ, ಹಉಂ | ಹಾಂಉ, ಹಾಂವ | ಮಿ | ನಾನು |
| ವಯಮ್ | ಅಮ್ಹೇ | ಆಮ್ಮಿ | ಆಮ್ಹಿ | ನಾವು |
| ತ್ವಮ್ | ತುಂ, ತುಮಮ್ | ತುಂ, ತುಂವ್ | ತೂಂ | ನೀನು |
| ಯೂಯಮ್ | ತುಮ್ಹೇ | ತುಮ್ಮಿ | ತುಮ್ಹಿ | ನೀವು |
| ಸಃ | ಸೋ | ತೊs | ತೋ | ಅವರು |
| ತೇ | ತೇ | ತೆs | ತೇ | ಅವರು |
| ಏಷಃ | ಏಸೋ, ಏಹೋ | ಹೊs | ಹಾ | ಇವನು |
| ಏತೇ | ಏತೇ | ಹೆs | ಹೇ | ಇವರು |

ನಾನು ಎಂಬ ಅರ್ಥದಲ್ಲಿ "ಮೀ" ಎಂಬ ಸರ್ವನಾಮವು ಪ್ರಾಚೀನ ಪ್ರಾಕೃತ ಗ್ರಂಥಗಳಲ್ಲಿ ಇಲ್ಲ. ಅದು ಹೇಮಚಂದ್ರನ ವ್ಯಾಕರಣದಲ್ಲಿ "ಮ್ಮಿ" ಎಂಬ ರೂಪದಲ್ಲಿ ಕಂಡುಬರುತ್ತದೆ. ಹಾಗೂ ಹಿಂದಿಯ ಕೆಲವು ಪ್ರಾದೇಶಿಕ ವಿಭೇದಗಳಲ್ಲಿ ಬಳಸಲ್ಪಡುತ್ತದೆ. ಆದುದರಿಂದ "ಮೀ" ಎಂಬ ರೂಪವು ಹಿಂದಿಯಿಂದಲೇ ಮರಾಠಿಯಲ್ಲಿ ಸೇರಿದುದೆಂದು ಹೇಳಬಹುದು. ಮರಾಠಿಯಲ್ಲಿ ಅವನು ಎನ್ನಲು "ತೊ" ಎಂಬ ರೂಪವಿದ್ದರೂ—ಇವನು ಎನ್ನಲು "ಹಾ" ಎಂಬ ರೂಪ ಬರುತ್ತದೆ. ತೋ ಎಂಬ ರೂಪವು "ತಾ" ಆಗಿ ಮಾರ್ಪಡದೇ ಮೂಲರೂಪದಲ್ಲಿಯೇ ಇರುವುದು ಮತ್ತು ಅವಳು ಎನ್ನಲು ತೀ; ಇವಳು ಎನ್ನಲು ಹೀ; ಅದು ಎನ್ನಲು ತೇಂ ಮತ್ತು ಇದು ಎನ್ನಲು ಹೇಂ ಎಂಬ ಕೊಂಕಣಿ ರೂಪಗಳೇ ಇರುವುದು ಹಾಗೂ ಅಂಥ ರೂಪಗಳು ಬೇರೆ ಯಾವ ಭಾಷೆಯಲ್ಲಿಯೂ ಇಲ್ಲದಿರುವುದು ಮರಾಠಿಯು ಕೊಂಕಣಿಯಿಂದಲೇ ಹುಟ್ಟಿದು ದೆಂಬುದರ ಪ್ರಮಾಣವಾಗಿರುತ್ತದೆ.

## ವಿಭಕ್ತಿಗಳ ಮುಖ್ಯ ಪ್ರತ್ಯಯಗಳು

| ಕೊಂಕಣಿ | | ಮರಾಠಿ | |
|---|---|---|---|
| ಏಕ. | ಬಹು. | ಏಕ. | ಬಹು. |
| 1. ಪ್ರ. ಉ | ಆ. ಆಽ. ಅಂ. ಇಂ | — | ಏಂ. ಇಂ |
| 2. ದಿ. ಕ, ಸ | | ಸ, ಲಾ | ಸ, ಲಾ, ನಾ |
| 3. ತೃ. ನ. ನೇಂ. ಶಿಂ, ಚ್ಯಾನ | ಶಿಂ. ಹಿಂ, ಚ್ಯಾನ | ಏ. ನೇಂ. ಚ್ಯಾನೇಂ | ಈಂ, ನೀಂ. ಹೀಂ |
| 4. ಚ. ಕ, ಸ | | ಸ, ಲಾ, | ಸ, ಲಾ, ನಾ |
| 5. ಪಂ. ಸೂನ್. ಹೂನ್. ಊನ್ | | ಹೂನ್ | |
| 6. ಷ. ಚೊ, ಲೊ, ಗೆಲೊ | | ಚಾ | |
| 7. ಸ. ಆಂ. ಇಂ, ಇ, ಎ. ಐಂ | ತಂ. ಆನಿ | ಈಂ, ಅಂತ್, ಆಂ | |

ದಕ್ಷಿಣ ಕನ್ನಡ ಜಿಲ್ಲೆಯ ಹಳ್ಳಿಗಳಲ್ಲಿ ನೆಲಸಿರುವ ರಾಜಾಪ್ಪುರೀ, ಕುಡಾಲ್ ದೇಶಕಾರ್ ಮೊದಲಾದ ಸಾರಸ್ವತ ವರ್ಗದ ಬ್ರಾಹ್ಮಣರು. ಈಗಲೂ ದ್ವಿತೀಯಾ ಮತ್ತು ಚತುರ್ಥೀ ವಿಭಕ್ತಿಗಳಲ್ಲಿ "ಸ" ಪ್ರತ್ಯಯವನ್ನು ಬಳಸುತ್ತಾರೆ. ಉದಾ:- ರಾಮಾಸ = ರಾಮನನ್ನು. ರಾಮನಿಗೆ. ಇದರ ಮೇಲಿಂದ, ಮೊದಲು "ಸ" ಪ್ರತ್ಯಯವು ಗೋವದಲ್ಲಿಯೂ ಬಳಸಲ್ಪಡುತಿತ್ತೆಂದು ತಿಳಿಯಬೇಕಾಗುತ್ತದೆ. ತರುವಾಯ ಮಾಕಾ. ಆಮಕಾಂ, ತುಕಾ. ತುಮಕಾಂ ಮುಂತಾದ ಸರ್ವನಾಮ

ಗಳಲ್ಲಿನ "ಕಾ" ಪ್ರತ್ಯಯದ ಪ್ರಭಾವದಿಂದ ಮೊದಲಿನ "ಸ"ಕಾರವು ಕೂಡ "ಕ" ಆಗಿ ಮಾರ್ಪಟ್ಟಿತೆನ್ನಬೇಕು. ಕೆಲವರು ಕೊಂಕಣಿಯು ತೃತೀಯಾ ವಿಭಕ್ತಿಯಲ್ಲಿ "ನ" ಪ್ರತ್ಯಯದ ಬದಲಿಗೆ "ನೆ" ಪ್ರತ್ಯಯವನ್ನು ಬಳಸುತ್ತಾರೆ. ಅದು ಕೂಡ ಸರ್ವನಾಮಗಳಲ್ಲಿನ "ಣೆ" ಪ್ರತ್ಯಯದ ಪ್ರಭಾವವೆನ್ನಬೇಕು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಮತ್ತು ಕೇರಳದಲ್ಲಿನ ಸಾರಸ್ವತ ಬ್ರಾಹ್ಮಣರು—ದೇವರ ಮತ್ತು ಮನುಷ್ಯರ ಹೆಸರುಗಳೊಂದಿಗೆ ಷಷ್ಟೀ ವಿಭಕ್ತಿಯಲ್ಲಿ "ಚೊ" ಪ್ರತ್ಯಯವನ್ನು ಬಳಸುವುದಿಲ್ಲ. ಎಲ್ಲ ಪ್ರಾಕೃತ ವಿಭೇದಗಳಲ್ಲಿ ದ್ವಿತೀಯಾ ಮತ್ತು ಚತುರ್ಥೀ ವಿಭಕ್ತಿಗಳ ರೂಪಗಳು ಒಂದೇಯಾಗಿರುತ್ತವೆ.

## ಸರ್ವನಾಮಗಳ ವಿಭಕ್ತಿಗಳ ರೂಪಗಳು

### ಅಹಮ್ = ನಾನು

### ಪ್ರಾಚೀನ ಪ್ರಾಕೃತ ಅಥವಾ ಪ್ರವಚನಗಳ ಭಾಷೆ

| ಏಕವಚನ | ಬಹುವಚನ |
|---|---|
| 1. ಪ್ರಥಮಾ—ಅಹಂ | ಮಯಂ, ಅಮ್ಹೇ |
| 2. ದ್ವಿತೀಯಾ—ಮಂ, ಮಮಂ | ಅಮ್ಹ, ಅಮ್ಹಾನಂ, ಅಮ್ಹೇ, ಅಮ್ಹಾಕಂ |
| 3. ತೃತೀಯಾ—ಮಯಾ, ಮೇ | ಅಮ್ಹೇಹಿ |
| 4. ಚತುರ್ಥೀ—ಮಮಂ, ಮಯ್ಹಂ | ಅಮ್ಹೇ, ಅಮ್ಹಾಕಂ |
| 5. ಪಂಚಮೀ—ಮಾ, ಮೇ | ಅಮ್ಹೇಹಿ |
| 6. ಷಷ್ಟೀ—ಮಮಂ, ಮಯ್ಹಂ | ಅಮ್ಹಾಕಂ |
| 7. ಸಪ್ತಮೀ—ಮಯಿ | ಅಮ್ಹೇಸು |

ಹಿಂದೆ ಕೊಟ್ಟಿರುವ ರೂಪಗಳಲ್ಲಿ "ಅಮ್ಹಾಕಂ" ಎಂಬುದು ದ್ವಿತೀಯಾ, ಚತುರ್ಥೀ ಮತ್ತು ಷಷ್ಟೀ ವಿಭಕ್ತಿಯ ಬಹುವಚನಗಳಲ್ಲಿ ಬಂದಿದೆಯೆಂಬುದೇ ಅವುಗಳಲ್ಲಿ ಲಕ್ಷಿಸಬೇಕಾದ ಮುಖ್ಯ ವಿಷಯವಾಗಿರುತ್ತದೆ. ಆ "ಅಮ್ಹಾಕಂ" ಎಂಬ ರೂಪವೇ ಕೊಂಕಣಿಯಲ್ಲಿ ಬರುವ "ಆಮ್ಕಾಂ" ಎಂಬುದರ ಮೂಲವಾಗಿರುತ್ತದೆ.

### ತ್ವಮ್ = ನೀನು

| | |
|---|---|
| 1. ತ್ವಂ | ತುಮ್ಹೇ |
| 2. ತವಂ, ತುವಂ | ತುಮ್ಹಾನಂ, ತುಮ್ಹೇ, ತುಮ್ಹಾಕಂ |
| 3. ತಯಾ, ತೇ | ತುಮ್ಹೇಹಿ |

| | | |
|---|---|---|
| 4. | ತವ, ತುಮ್ಹಂ, ತುಯ್ಹಂ | ತುಮ್ಹೇ, ತುಮ್ಹಾಕಂ |
| 5. | ತಾ, ತೇ | ತುಮ್ಹೇಹಿ |
| 6. | ತವ. ತುಮ್ಹಂ. ತುಯ್ಹಂ | ತುಮ್ಹಾಕಂ |
| 7. | ತಯಿ | ತುಮ್ಹೇಸು |

## ಶೌರಸೇನೀ ಮತ್ತು ಪ್ರಾಕೃತ

ಇವುಗಳಲ್ಲಿ ಚತುರ್ಥೀ ವಿಭಕ್ತಿಯ ಅರ್ಥದಲ್ಲಿ ಷಷ್ಠೀ ವಿಭಕ್ತಿಯೇ ಬಳಸಲ್ಪಡುತ್ತದೆ

| | | |
|---|---|---|
| 1. | ಹಂ, ಅಹಂ, ಅಹಅಂ, ಹಉಂ. ಮ್ಮಿ | ಅಮ್ಹೇ |
| 2. | ಮಂ, ಮಮಂ, ಅಹಮ್ಮಿ | ಅಮ್ಹೇ. ಣೋ |
| 3. | ಮಇ. ಮಏ, ಮಮಾದು. ಮೇ | ಅಮ್ಹೇಹಿ |
| 5. | ಮಇತ್ತೋ, ಮಮಾದು. ಮಮಾದೋ | ಅಮ್ಹಾಹಿಂತೋ, ಅಮ್ಹಾಸುಂತೋ |
| 6. | ಮಜ್ಝ. ಮಮ. ಮಹ. ಮೇ | ಮಜ್ಝಣೋ, ಅಮ್ಹಂ, ಅಮ್ಹಾಣಂ |
| 7. | ಮಇ, ಮಏ, ಮಮಾಇ. ಮಮಮ್ಮಿ | ಅಮ್ಹಾಸು, ಅಮ್ಹೇಸು |

ಮ್ಮಿ ಮತ್ತು ಅಹಮ್ಮಿ ಎಂಬ ರೂಪಗಳು ಇತರ ರೂಪಗಳಷ್ಟು ಪ್ರಾಚೀನವಲ್ಲ

| | | |
|---|---|---|
| 1. | ತುಂ, ತಂ | ತುಜ್ಝೇ, ತುಮ್ಹೇ |
| 2. | ತುಮಂ | ತುಜ್ಝೇ, ತುಮ್ಹೇ, ವೋ |
| 2. | ತಇ, ತಏ. ತುಮಏ. ತುಮಾಇ. ತುಮೇ | ತುಜ್ಝೇಹಿ. ತುಮ್ಹೇಹಿ |
| 5. | ತಇತ್ತೋ. ತತ್ತೋ, ತುಮಾದು. ತುಮಾಹಿ | ತುಮ್ಹಹಿಂತೋ. ತುಮ್ಹಾಸುಂತೋ |
| 6. | ತೇ. ತುಹ. ತುಜ್ಝ, ತುಮ್ಹ | ವೋ. ಭೇ. ತುಜ್ಝಾಣಂ, ತುಮ್ಹಾಣಂ |
| 7. | ತಇ. ತಏ. ತುಮಾಇ. ತುಮೇ. ತುಜ್ಝಮ್ಮಿ. ತುಮ್ಮಿ | ತುಮ್ಹಾಸು. ತುಮ್ಹೇಸು |

## ಕೊಂಕಣಿ

ಕೊಂಕಣಿ ಮತ್ತು ಮರಾಠಿಗಳಲ್ಲಿ ದ್ವಿತೀಯಾ ಮತ್ತು ಚತುರ್ಥೀ ವಿಭಕ್ತಿಗಳು ಬೇರೆ ಬೇರೆಯಾಗಿಲ್ಲ

| | | |
|---|---|---|
| 1. | ಹಾಂಉ, ಹಾಂವ | ಆಮ್ಮಿ |
| 1-4. | ಮಾಕಾ, ಮಜ | ಆಮ್ಹಕಾ. ಆಮ್ಹಾ |

3. ಹಾಂವೆಂ, ಮಜ್ಯಾನ ಆಮಹಿಂ, ಆಮ್ಹಾಚ್ಯಾನ
5. ಮಜಸೂನ, ಮಜೆಲೂನ ಆಮ್ಹಾಚೆಲೂನ, ಆಮ್ಹಾಸೂನ
6. ಮಜ್ಜೊ, ಮಗೆಲೊ ಆಮ್ಹಾಚೊ, ಆಮ್ಹಾಗೆಲೊ
7. ಮಜಾಂ, ಮಜಿಂ ಆಮ್ಹಾಂತು, ಆಮ್ಹಾಚ್ಯಾಂತು

1. ತುಂ, ತುಂವ ತುಮ್ಮಿ
2-4. ತುಕಾ, ತುಜ ತುಮ್ಹಾಕಾಂ, ತುಮ್ಹಾ
3. ತುಂವೆಂ, ತುಜ್ಯಾನ ತುಮಹಿಂ, ತುಮ್ಹಾಚ್ಯಾನ
5. ತುಜಸೂನ, ತುಜೆಲೂನ ತುಮ್ಹಾಚೆಲೂನ, ತುಮ್ಹಾಸೂನ
6. ತುಜ್ಜೊ, ತುಗೆಲೊ ತುಮ್ಹಾಚೊ, ತುಮ್ಹಾಗೆಲೊ
7. ತುಜಾಂ, ತುಜಿಂ ತುಮ್ಹಾಂತು, ತುಮ್ಹಾಚ್ಯಾಂತು

ಕೊಂಕಣಿಯಲ್ಲಿ ಆಮ್ಹಾ. ತುಮ್ಹಾ ಎಂಬ ರೂಪಗಳಲ್ಲಿನ ಹಕಾರವು ಈಗ ಉಚ್ಚರಿಸಲ್ಪಡುವುದಿಲ್ಲ. ಆದುದರಿಂದ ಈಗ ಆಮಕಾಂ. ತುಮಕಾ, ಆಮಚೊ, ತುಮಚೊ ಎಂಬಂಥ ರೂಪಗಳು ಬಳಕೆಯಲ್ಲಿವೆ. ಶಿಂ, ಲಾಗಿ, ಗುಣೆಂ, ಕಡೆ ಮುಂತಾದ ನಾಮಸಾಧಿತ ಪ್ರತ್ಯಯಗಳು–ಮಜ, ತುಜ ಎಂಬ ರೂಪಗಳೊಂದಿಗೆ ಕೂಡುತ್ತವೆ. ಉದಾ:— ತುಜಶಿಂ = ನಿನ್ನೊಂದಿಗೆ, ಮಜಶಿಂ = ನನ್ನೊಂದಿಗೆ. ಮಜಲಾಗಿ = ನನ್ನ ಹತ್ತಿರ, ತುಜಗುಣೆಂ = ನಿನ್ನ ಸಲುವಾಗಿ, ಆಮಕಾಂ ಸಕಡಾಂಕ = ಆಮಾಸಕಡಾಂಕ = ನಮಗೆಲ್ಲರಿಗೆ, ತುಜಪಶಿಂ = ನಿನಗಿಂತ ಇತ್ಯಾದಿ. ತುಕಾ ಮೂರ್ಖಾಕ = ತುಜಮೂರ್ಖಾಕ = ಮೂರ್ಖನಾದ ನಿನಗೆ

ತೊs = ಅವನು

1. ತೊs ತೇ
2-4. ತಾಕಾ, ತಾಜ ತಾಂಕಾಂ, ತ್ಯಾಂ
3. ತಾಣೆ, ತಾಜ್ಯಾನ ತಾಂನ್ನಿ, ತಾಂಚ್ಯಾನ
5. ತಾಜಸೂನ, ತಾಜೆಲೂನ ತಾಂಸೂನ, ತಾಂಚೆಲೂನ
6. ತಾಜ್ಜೊ, ತಾಗೆಲೊ ತಾಂಚೊ, ತಾಂಗೆಲೊ
7. ತಾಜಾಂ, ತಾಹಿಂ ತಾಂತು, ತಾಂಚ್ಯಾಂತು

ತೀ = ಅವಳು

1. ತೀ ತ್ಯೋ
2-4. ತಿಕ್ಕಾ, ತಿಜ ತ್ಯಾಂ, ತ್ಯಾಂಕಾಂ, ತೀಂಕಾಂ

3. ತೀಣೆ. ತಿಜ್ಯಾನ ತೀಂಚ್ಯಾನ, ತ್ಯಾಂಸ್ಟಿ. ತ್ಯಾಂಚ್ಯಾನ, ತೀಂಣೆ
5. ತೀಸೂನು, ತಿಜೇಲೂನ ತ್ಯಾಂಸೂನ, ತ್ಯಾಂಚೇಲೂನ. ತೀಂಚೇಲೂನ
6. ತಿಜ್ಯೊ, ತಿಗೆಲೊ ತ್ಯಾಂಚೊ. ತ್ಯಾಂಗೆಲೊ, ತೀಂಚೊ. ತೀಂಗೆಲೊ
7. ತಿಜ್ಯಾಂ, ತಿಹಿಂ ತ್ಯಾಂತು. ತೀಂತು. ತ್ಯಾಂಚ್ಯಾಂತು

ತೇಂ

1. ತೆಂ ತೀಂ
7. ತಾಂತು ತಾಂತು, ತಾಂಚ್ಯಾಂತು

ಸ್ತ್ರೀಲಿಂಗದ ಬಹುವಚನಗಳಲ್ಲಿ ತೀಂಕಾ. ತೀಂಚ್ಯಾನ ಮೊದಲಾದ ರೂಪಗಳು ಪಾದ್ರಿ ಥಾಮಸ್ ಸ್ಟೀಫನ್‌ರವರ ವ್ಯಾಕರಣದಿಂದ ಎತ್ತಿಕೊಂಡವುಗಳಾಗಿರುತ್ತವೆ.

ಹೊ. ಹೀ. ಹೆಂ ಮತ್ತು ಜೊ. ಜೀ. ಜೆಂ ಎಂಬ ಸರ್ವನಾಮಗಳು—ತೊ. ತೀ. ತೆಂ ಎಂಬವುಗಳಂತೆಯೇ ರೂಪಾಂತರ ಹೊಂದಿ ವಿಭಕ್ತಿಪ್ರತ್ಯಯಗಳನ್ನು ಧರಿಸುತ್ತವೆ. ಆ ಸರ್ವನಾಮಗಳು ಇತರ ನಾಮಪದಗಳೊಂದಿಗೆ ವಿಶೇಷಣಗಳಾಗಿ ಬಂದಾಗ ಮುಂದೆ ಕೊಟ್ಟಿರುವಂತೆ ರೂಪಾಂತರ ಹೊಂದುತ್ತವೆ.

ತೊ ಚೆಲೊ = ಆ ಹುಡುಗ

ತ್ಯಾ ಚೆಲ್ಯಾಕ = ಆ ಹುಡುಗನನ್ನು, ಆ ಹುಡುಗನಿಗೆ

ತೇ ಚೆಲೆ = ಆ ಹುಡುಗರು

ತ್ಯಾಂ ಚೆಲ್ಯಾಂಕ = ಆ ಹುಡುಗರನ್ನು—ಇತ್ಯಾದಿ

ತೀ ಚೆಲಿ = ಆ ಹುಡುಗಿ

ತೇ ಚೆಲಿಯೇಕ = ಆ ಹುಡುಗಿಯನ್ನು—ಇತ್ಯಾದಿ

ತ್ಯೊ ಚೆಲಿಯೊ = ಆ ಹುಡುಗಿಯರು

ತ್ಯಾಂ ಚೆಲಿಯಾಂಕ = ಆ ಹುಡುಗಿಯರನ್ನು—ಇತ್ಯಾದಿ

ತೆಂ ಫಳೆಂ = ಆ ಹಲಗೆ

ತ್ಯಾ ಫಳ್ಯಾನ = ಆ ಹಲಗೆಯಿಂದ

ತೀಂ ಫಳಿಂ = ಆ ಹಲಗೆಗಳು

ತ್ಯಾಂ ಫಳ್ಯಾಂನಿ = ಆ ಹಲಗೆಗಳಿಂದ.

ಪದ್ಯದಲ್ಲಿ ತೆಯಾ ಚೆಲ್ಯಾಕ. ತೇಯಾಂ ಚೆಲ್ಯಾಂಕ. ತಿಯೇ ಚೆಲಿಯೇಕ. ತಿಯಾಂ ಚೆಲಿಯಾಂಕ ಎಂಬಂಥ ಪ್ರಯೋಗಗಳಾಗುತ್ತವೆ.

ತೀ = ಅವಳು ಎಂಬ ಸ್ತ್ರೀಲಿಂಗರೂಪವು ಕಾತ್ಯಾಯನನ ಕಾಲದಲ್ಲಿಯೇ ಬಳಕೆಗೆ ಬಂದಿರಬಹುದೆಂದು ತೋರುತ್ತದೆ. ಅದರ ಸಂಬಂಧವಾಗಿ ಕಾತ್ಯಾಯನನ ವ್ಯಾಕರಣದಲ್ಲಿ ಮುಂದೆ ಕೊಟ್ಟಿರುವ ಎರಡು ಸೂತ್ರಗಳಿವೆ:—ಏತಿಪಾಸಂ ಇ ॥ ೨-೧-೧೨ ॥ ತಸ್ಸಾವಾ ॥ ೨-೧-೧೩ ॥ ಏತಸ್ಸಾ ಮತ್ತು ತಸ್ಸಾ ಎಂಬ ರೂಪಗಳ ಬದಲಿಗೆ ಏತಿಸ್ಸಾ=ಇವಳಿಗೆ, ತಿಸ್ಸಾ=ಅವಳಿಗೆ ಎಂಬ ರೂಪಗಳೂ ಬರುತ್ತವೆ. ಅವುಗಳೇ ಮುಂದೆ ಕೊಂಕಣಿಯಲ್ಲಿ ಹಿಕ್ಕಾ ಮತ್ತು ತಿಕ್ಕಾ ಎಂಬುದಾಗಿ ಮಾರ್ಪಟ್ಟಿವೆಂದು ಹೇಳಬಹುದು.

## ಮರಾಠೀ ಸರ್ವನಾಮಗಳು

| | | |
|---|---|---|
| 1. | ಮಿ | ಆಮ್ಹಿ |
| 2-4. | ಮಲಾ, ಮಜಲಾ, ಮಾತೇ | ಆಮ್ಹಾಂಸ, ಆಮ್ಹಾಂಲಾ. ಆಮ್ಹಾಂತೇಂ |
| 3. | ಮೀಂ, ಮ್ಯಾಂ, ಮಾಝ್ಯಾನೇಂ | ಆಮ್ಹಿಂ. ಆಮಚ್ಯಾನೇಂ |
| 5. | ಮಜಹೂನ | ಆಮ್ಹಾಂಹೂನ |
| 6. | ಮಾಝಾ | ಆಮಚಾ |
| 7. | — | ಆಮ್ಹಾಂತ್ |
| 1. | ತೂಂ | ತುಮ್ಹಿ |
| 2-4. | ತುಲಾ, ತುಜಲಾ, ತೂಂತೇಂ | ತುಮ್ಹಾಂಸ, ತುಮ್ಹಾಂಲಾ. ತುಮ್ಹಾಂತೇಂ |
| 3. | ತೂ, ತ್ವಾಂ, ತುಝ್ಯಾನೇ | ತುಮ್ಹಿಂ, ತುಮಚ್ಯಾನೇಂ |
| 5. | ತುಜಹೂನ | ತುಮ್ಹಾಹೂನ |
| 6. | ತುಝಾ | ತುಮಚಾ |
| 7. | — | ತುಮ್ಹಾಂತ್ |
| 1. | ತೋ | ತೇ |
| 2-4. | ತ್ಯಾಸ್, ತ್ಯಾಲಾ, ತ್ಯಾತೇಂ | ತ್ಯಾಂಸ. ತ್ಯಾಂಲಾ. ತ್ಯಾಂನಾ. ತ್ಯಾಂತೇಂ |
| 3. | ತ್ಯಾನೇಂ, ತ್ಯಾಣೇಂ. ತ್ಯಾಚ್ಯಾನೇಂ | ತ್ಯಾಂನೀಂ. ತ್ಯಾಂಣೇಂ, ತ್ಯಾಂಚ್ಯಾನೇಂ |
| 5. | ತ್ಯಾಹೂನ | ತ್ಯಾಂಹೂನ |
| 6. | ತ್ಯಾಚಾ | ತ್ಯಾಂಚಾ |
| 7. | ತ್ಯಾಂತ್ | ತ್ಯಾಂತ್ |

| | | | |
|---|---|---|---|
| 1. ತೀ | ತ್ಯಾ | 1. ತೇಂ | ತೀಂ |
| ಬಹುವಚನಗಳು ಪುಲ್ಲಿಂಗದಂತೆ | | ಇತರ ವಿಭಕ್ತಿಗಳು ಪುಲ್ಲಿಂಗದಂತೆ | |
| 2-4. ತೀಸ, ತಿಲಾ, ತೀತೇಂ | | | |
| 3. ತಿನೇಂ, ತಿಣೇಂ, ತಿಚ್ಯಾನೇಂ | | | |
| 5. ತೀಹೂನ | | | |
| 6. ತಿಚಾ | | | |
| 7. ತೀಂತ್ | | | |

ಮುಂದೆ ಕೊಂಕಣಿ ಮತ್ತು ಮರಾಠಿಗಳ ಸಾಮಾನ್ಯ ನಾಮಪದಗಳ ವಿಭಕ್ತಿರೂಪಗಳನ್ನು ಜೊತೆ ಜೊತೆಯಾಗಿಯೇ ಕೊಡಲಾಗುವುದು. ಅಕಾರಾಂತ ನಪುಂಸಕಲಿಂಗದ ನಾಮಪದಗಳು ಪ್ರಥಮಾವಿಭಕ್ತಿ ಒಂದನ್ನು ಬಿಟ್ಟು ಇತರ ವಿಭಕ್ತಿಗಳಲ್ಲಿ ಅಕಾರಾಂತ ಪುಲ್ಲಿಂಗ ನಾಮಪದದಂತೆಯೇ ವಿಭಕ್ತಿಪ್ರತ್ಯಯಗಳನ್ನು ಧರಿಸುವುವು.

### **ಅ ಕಾರಾಂತ ಪುಲ್ಲಿಂಗ ಶಬ್ದ**—ಬಾಲಕ = ಮಗು, ಚಿಕ್ಕಹುಡುಗ

| | | | |
|---|---|---|---|
| 1. ಬಾಲಕು | ಬಾಲಕs | ಬಾಲಕ್ | ಬಾಲಕ್ |
| 2-4. ಬಾಲಕಾಕ | ಬಾಲಕಾಂಕ | ಬಾಲಕಾಸ–ಲಾ | |
| 3. ಬಾಲಕಾನ, ಬಾಲಕಾಚ್ಯಾನ | | | ಬಾಲಕಾಂಸ–ಲಾ, –ನಾ |
| | ಬಾಲಕಾಂನಿಂ, ಬಾಲಕಾಂಚ್ಯಾನ | ಬಾಕಾನೇಂ–ಚ್ಯಾನೇಂ | |
| 5. ಬಾಲಕಾಸೂನ | ಬಾಲಕಾಂಸೂನ | | ಬಾಲಕಾಂನಿಂ–ಚ್ಯಾನೆಂ |
| 6. ಬಾಲಕಾಲೊ -ಚೊ | | ಬಾಲಕಾಹೂನ | ಬಾಲಕಾಂಹೂನ |
| | ಬಾಲಕಾಂಲೊ–ಚೊ | ಬಾಲಕಾಚಾ | ಬಾಲಕಾಂಚಾ |
| 7. ಬಾಲಕಾಂ, ಬಾಲಕಿಂ | ಬಾಲಕಾಂತು | ಬಾಲಕಾಂತ, ಬಾಲಕೀಂ | ಬಾಲಕಾಂತ |

### **ಅ ಕಾರಾಂತ ನಪುಂಸಕಲಿಂಗ**—ಫಳ = ಫಲ, ಕಾಯಿ

| | | | |
|---|---|---|---|
| 1. ಫಳ | ಫಳಂs, ಫಳಾಂ | ಫಳ್ | ಫಳೇಂ |
| 3. ಫಳಾನ | ಫಳಾಂನಿಂ | ಫಳಾನೇಂ | ಫಳಾಂನೀಂ |
| 6. ಫಳಾಚೊ | ಫಳಾಂಚೊ | ಫಳಾಚಾ | ಫಳಾಂಚಾ |

ಮರಾಠಿಯಲ್ಲಿನ ಬಹುವಚನವು ಫಳೇಂ ಎಂದಿದ್ದರೂ ಅದರ ಉಚ್ಚಾರವು ಕೊಂಕಣಿಯಂತೆಯೇ ಫಳsಂ ಎಂದೇ ಇರುತ್ತದೆ. ಗೋವದ ಜನರು ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಕೊಂಕಣಿ ಕ್ರೈಸ್ತರು "ಫಳಾಂ" ಅನ್ನುತ್ತಾರೆ.

## ಇ ಕಾರಾಂತ ಮತ್ತು ಈ ಕಾರಾಂತ ಪುಲ್ಲಿಂಗ ಶಬ್ದಗಳು

ಅಗ್ನಿ=ಬೆಂಕಿ ಕೊಂಕಣಿ ಯೋಗೀ=ಯೋಗಿ

| | | | |
|---|---|---|---|
| 1. ಅಗ್ನಿ | ಅಗ್ನಿಯೆ | 1. ಯೋಗೀ | ಯೋಗಿಯೆ |
| 2-4. ಅಗ್ನೀಕ | ಅಗ್ನೀಂಕ | 2-4. ಯೋಗೀಕ | ಯೋಗೀಂಕ |
| 3. ಅಗ್ನೀನ- ನೆಂ | ಅಗ್ನೀನಿಂ | 3. ಯೋಗೀನ–ನೆಂ | ಯೋಗೀನಿಂ |

ಮರಾಠಿ

| | | | |
|---|---|---|---|
| 1. ಅಗ್ನಿ | ಅಗ್ನಿ | 1. ಯೋಗೀ | ಯೋಗೀ |
| 2-4. ಅಗ್ನೀಸ್ | ಅಗ್ನೀಂಸ್ | 2–4. ಯೋಗೀಸ್ | ಯೋಗೀಂಸ್ |
| 3. ಅಗ್ನೀನೇಂ | ಅಗ್ನೀನೀಂ | 3. ಯೋಗೀನೇಂ | ಯೋಗೀಂನೀಂ |

ಕೊಂಕಣಿ ತೇಲೀ=ಗಾಣಿಗ ಮರಾಠಿ

| | | | |
|---|---|---|---|
| 1. ತೇಲೀ | ತೇಲಿಯೆ | 1. ತೇಲೀ | ತೇಲೀ |
| 2-4. ತೇಲೀಕ–ಸ | ತೇಲ್ಯಾಂಕ | 2-4. ತೇಲೀಸ್ | ತೇಲ್ಯಾಂಸ್ |
| 3. ತೇಲೀನ–ನೆಂ | ತೇಲ್ಯಾಂನಿಂ | 3. ತೇಲೀನೇಂ | ತೇಲ್ಯಾಂನೀಂ |

## ಇ ಕಾರಾಂತ ನಪುಂಸಕಲಿಂಗ—ಮೋತಿಂ = ಮುತ್ತು (ರತ್ನ)

ಕೊಂಕಣಿ ಮರಾಠಿ

| | | | |
|---|---|---|---|
| 1. ಮೋತಿಂ | ಮೋತ್ಯsಂ, ಮೋತ್ಯಾಂ | 1. ಮೋತೀಂ | ಮೋತ್ಯೇಂ |
| 3-4. ಮೋತ್ಯಾನ–ನೆಂ | ಮೋತ್ಯಾಂನಿಂ | 3. ಮೋತ್ಯಾನೆಂ | ಮೋತ್ಯಾಂನೀಂ |
| 6. ಮೋತ್ಯಾಚೊ | ಮೋತ್ಯಾಂಚೊ | 6. ಮೋತ್ಯಾಚಾ | ಮೋತ್ಯಾಂಚಾ |

## ಉ ಕಾರಾಂತ ಪುಲ್ಲಿಂಗ ಶಬ್ದ

| | | | |
|---|---|---|---|
| 1. ಗುರು | ಗುರು, ಗುರವ | ಗುರೂ | ಗುರೂ |
| 2-4. ಗುರೂಕ | ಗುರೂಂಕ | ಗೂರೂಸ | ಗುರೂಂಸ |
| 3. ಗುರೂನ-ನೆಂ | ಗುರೂಂನಿಂ | ಗುರೂನೇಂ | ಗೂರೂಂನೀಂ |

### ಉ ಕಾರಾಂತ ನಪುಂಸಕಲಿಂಗ—ತಾರುಂ = ಹಡಗು

| | ಕೊಂಕಣಿ | | ಮರಾಠಿ | |
|---|---|---|---|---|
| 1. | ತಾರುಂ | ತಾರವಂ–ವಾಂ | ತಾರೂಂ | ತಾರವೇಂ |
| 2-4. | ತಾರವಾಕ | ತಾರವಾಂಕ | ತಾರವಾಸ್ | ತಾರವಾಂಸ್ |
| 6. | ತಾರವಾಚೊ | ತಾರವಾಂಚೊ | ತಾರವಾಚಾ | ತಾರವಾಂಚಾ |

### ಏ ಕಾರಾಂತ ಸಪುಂಸಕಲಿಂಗ—ಕೇಳೆಂ = ಬಾಳೆ–ಹಣ್ಣು

| | ಕೊಂಕಣಿ | | ಮರಾಠಿ | |
|---|---|---|---|---|
| 1. | ಕೇಳೆಂ | ಕೇಳಿಂ | 1. ಕೇಳೇಂ | ಕೇಳಿಂ |
| 3. | ಕೇಳ್ಯಾನ-ನೆಂ | ಕೇಳ್ಯಾಂನಿಂ | 3. ಕೇಳ್ಯಾನೇಂ | ಕೇಳ್ಯಾಂನಿಂ |
| 6. | ಕೇಳ್ಯಾಚೊ | ಕೇಳ್ಯಾಂಚೊ | 6. ಕೇಳ್ಯಾಚಾ | ಕೇಳ್ಯಾಂಚಾ |

### ಕೊಂಕಣಿ ಓ ಕಾರಾಂತ—ಪುಲ್ಲಿಂಗ ಘೋಡೊ
### ಮರಾಠಿ ಆ ಕಾರಾಂತ—ಘೋಡಾ

| | | | | |
|---|---|---|---|---|
| 1. | ಘೋಡೊ | ಘೋಡೆ | ಘೋಡಾ | ಘೋಡೇ |
| 2-4. | ಘೋಡ್ಯಾಕ | ಘೋಡ್ಯಾಂಕ | ಘೋಡ್ಯಾಸ್ | ಘೋಡ್ಯಾಂಸ್ |
| 3. | ಘೋಡ್ಯಾನ-ನೆಂ | ಘೋಡ್ಯಾಂನಿಂ | ಘೋಡ್ಯಾನೇಂ | ಘೋಡ್ಯಾನೀಂ |
| 6. | ಘೋಡ್ಯಾಚೊ | ಘೋಡ್ಯಾಂಚೊ | ಘೋಡ್ಯಾಚಾ | ಘೋಡ್ಯಾಂಚಾ |

### ಅ ಕಾರಾಂತ ಸ್ತ್ರಿಲಿಂಗ ಶಬ್ದ ವಾಟ = ದಾರಿ

| | ಕೊಂಕಣಿ | | ಮರಾಠಿ | |
|---|---|---|---|---|
| 1. | ವಾಟ | ವಾಟೊ | ವಾಟ | ವಾಟಾ |
| 3. | ವಾಟೇನ-ನೆಂ | ವಾಟಾಂನಿಂ | ವಾಟೇನೇಂ | ವಾಟಾಂನೀಂ |
| 7. | ವಾಟೇರಿ=ದಾರಿಯಲ್ಲಿ | ವಾಟಾಂರಿ | ವಾಟೇವರ್ | ವಾಟಾಂವರ್ |

### ಆ ಕಾರಾಂತ ಸ್ತ್ರಿಲಿಂಗ ಮಾಳಾ = ಮಾಲೆ

| | | | | |
|---|---|---|---|---|
| 1. | ಮಾಳಾ | ಮಾಳೋ | ಮಾಳ್ | ಮಾಳಾ |
| 3. | ಮಾಳೇನ-ನೆಂ | ಮಾಳಾಂನಿಂ | ಮಾಳೇನೇಂ | ಮಾಳಾಂನೀಂ |
| 6. | ಮಾಳೇಚೊ | ಮಾಳಾಂಚೊ | ಮಾಳೇಚಾ | ಮಾಳಾಂಚಾ |

### ಇ ಕಾರಾಂತ ಸ್ತ್ರಿಲಿಂಗ ವಾತಿ = ಬತ್ತಿ

| | | | |
|---|---|---|---|
| 1. ವಾತಿ | ವಾತ್ಯೊ | ವಾತ್ | ವಾತೀ |
| 2-4. ವಾತ್ತೀಕ | ವಾತ್ಯಾಂಕ | ವಾತೀಸ್ | ವಾತ್ಯಾಂಸ್ |
| 3. ವಾತ್ತೀನ-ನೆಂ | ವಾತ್ಯಾಂನಿಂ | ವಾತೀನೇಂ | ವಾತ್ಯಾಂನೀಂ |

### ಈ ಕಾರಾರಾಂತ ಸ್ತ್ರಿಲಿಂಗ—ಸ್ತ್ರೀ = ಹೆಂಗಸು

| | | | |
|---|---|---|---|
| 1. ಸ್ತ್ರೀ | ಸ್ತ್ರಿಯೊ | ಸ್ತ್ರೀ | ಸ್ತ್ರಿಯಾ |
| 2-4. ಸ್ತ್ರಿಯೇಕ | ಸ್ತ್ರಿಯಾಂಕ | ಸ್ತ್ರಿಯೇಸ್ | ಸ್ತ್ರಿಯಾಂಸ್ |
| 3. ಸ್ತ್ರಿಯೇನ-ನೆಂ | ಸ್ತ್ರಿಯಾಂನಿಂ | ಸ್ತ್ರಿಯೇನೇಂ | ಸ್ತ್ರಿಯಾಂನೀಂ |

### ಉ ಕಾರಾಂತ ಸ್ತ್ರಿಲಿಂಗ ಶಬ್ದ ಭಾಲೂ = ಹೆಣ್ಣುಕರಡಿ

| ಕೊಂಕಣಿ | | ಮರಾಠಿ | |
|---|---|---|---|
| 1. ಭಾಲು | ಭಾಲುವೊ | ಭಾಲೂ | ಭಾಲುವಾ |
| 2-4. ಭಾಲುವೇಕ | ಭಾಲುವಾಂಕ | ಭಾಲವೇಸ್ | ಭಾಲವಾಂಸ |
| 3. ಭಾಲುವೇನ-ನೆಂ | ಭಾಲುವಾಂನಿಂ | ಭಾಲವೇನೇಂ | ಭಾಲವಾಂನೀಂ |

### ವಿಭಕ್ತಿರೂಪಗಳ ವಿಮರ್ಶೆ

### ೧. ಪ್ರಥಮಾ ವಿಭಕ್ತಿ

ಸರ್ವನಾಮಗಳಲ್ಲಿ ಮಿೂ = ನಾನು, ಮತ್ತು ಹಾ = ಇವನು ಎಂಬ ಎರಡು ರೂಪಗಳನ್ನು ಬಿಟ್ಟರೆ — ಉಳಿದ — ಪುಲ್ಲಿಂಗ ರೂಪಗಳೆಲ್ಲವೂ ಸಮಾನ ವಾಗಿವೆ. ಶಬ್ದದ ಕೊನೆಯ ಸ್ವರದ ವಿಷಯದಲ್ಲಿ ಕೊಂಕಣಿಯ ಒಲವು ಹ್ರಸ್ವದ ಕಡೆಗಿದ್ದರೆ ಮರಾಠಿಯ ಒಲವು ದೀರ್ಘದ ಕಡೆಗಿರುತ್ತದೆ.

ತೀ — ಹೀ ಎಂಬ ಸರ್ವನಾಮಗಳ (ಸ್ತ್ರೀಲಿಂಗ) ಪ್ರಥಮಾ ಬಹುವಚನ ಗಳು — ಕೊಂಕಣಿಯಲ್ಲಿ ತ್ಯೊ ಮತ್ತು ಹ್ಯೊ ಎಂದಿವೆ. ಅವುಗಳು ಮರಾಠಿ ಯಲ್ಲಿ ತ್ಯಾ ಮತ್ತು ಹ್ಯಾ ಎಂದಾಗಿವೆ. ಅಂದರೆ ಕೊಂಕಣಿ ಶಬ್ದದ ಕೊನೆಯಲ್ಲಿನ 'ಒ'ಕಾರವು ಮರಾಠಿಯಲ್ಲಿ 'ಆ'ಕಾರವಾಗಿ ಮಾರ್ಪಟ್ಟಿದೆ ಎಂಬುದು ಸ್ಪಷ್ಟವಾಗಿ ಕಂಡುಬರುತ್ತದೆ.

ಪ್ರಾಚೀನ ಕಾಲದ ಕೊಂಕಣಿಯಲ್ಲಿ ಅಥವಾ ಪ್ರಾಕೃತದಲ್ಲಿ — ಆಮ್ಹಿ, ತುಮ್ಹಿ — ಮುಂತಾದ ರೂಪಗಳಲ್ಲಿದ್ದ ಹಕಾರವು ಈಗಿನ ಕೊಂಕಣಿಯಲ್ಲಿ

ಉಚ್ಚರಿಸಲ್ಪಡುವುದೂ ಇಲ್ಲ, ಬರೆಯಲ್ಪಡುವುದೂ ಇಲ್ಲ. ಆದರೆ ನಾನು 'ಹ'ಕಾರದಿಂದ ಕೂಡಿರುವ ರೂಪಗಳನ್ನು — ಶುದ್ಧರೂಪದ ನಿದರ್ಶನಕ್ಕಾಗಿ ಮಾತ್ರ ಕೊಟ್ಟಿರುತ್ತೇನೆ. ಕೊಂಕಣಿಯಲ್ಲಿ ಸಾಹಿತ್ಯರಚನೆಯು ಹದಿನಾರನೆಯ ಶತಮಾನದ ಆರಂಭದಲ್ಲಿ ನಿಂತುಹೋದುದರಿಂದ ಮತ್ತು ಹಳೆಯ ಸಾಹಿತ್ಯವೆಲ್ಲ ಕಳೆದುಹೋದುದರಿಂದ — ಪ್ರಾಚೀನ ರೂಪಗಳ ಸಂಬಂಧವು ಒಮ್ಮೆಲೇ ಕಡಿದು ಹೋಯಿತು. ಮಹಾರಾಷ್ಟ್ರದಲ್ಲಿ ಸ್ವಲ್ಪ ಹಳೆಯ ಸಾಹಿತ್ಯ — ಉಳಿದುಕೊಂಡುದರಿಂದ — ಅವರು ಹಳೆಯ ರೂಪಗಳನ್ನು ಮುಂದಕ್ಕೆ ಸಾಗಿಸಿಕೊಂಡು ಬಂದರು. ಹೀಗಾಗಿ ಮರಾಠಿಯಲ್ಲಿ ಆಮ್ಹಾಂಸ್, ಆಮ್ಹಾಹೂನ. ಆಮ್ಹಾಂತ್ ಮುಂತಾದ ರೂಪಗಳು ಕಾಣಬರುತ್ತವೆ.

ತೆಂ = ಅದು, ಹೆಂ = ಇದು ಎಂಬ ಸರ್ವನಾಮಗಳ ವಿಭಕ್ತಿರೂಪಗಳು ಎರಡು ಭಾಷೆಗಳಲ್ಲಿಯೂ ಸಮಾನವಾಗಿರುತ್ತವೆ.

ಅಕಾರಾಂತ ಪುಲ್ಲಿಂಗ ನಾಮಪದಗಳು — ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮತ್ತು ಕೇರಳ ಪ್ರದೇಶದಲ್ಲಿ ಇಂದಿಗೂ ಪ್ರಾಚೀನ ರೀತಿಯಲ್ಲಿಯೇ ಅಂದರೆ — ಬಾಲಕು = ಹುಡುಗ ಮತ್ತು ಬಾಲಕಃ = ಹುಡುಗರು — ಎಂದೇ ಉಚ್ಚರಿಸಲ್ಪಡುತ್ತವೆ. ಆದರೆ — ಇಂಥ ಬಳಕೆಯು — ಅಲ್ಪ ಸಂಖ್ಯಾಕರಾಗಿರುವ — ಸಾರಸ್ವತ ಬ್ರಾಹ್ಮಣರಲ್ಲಿ ಮತ್ತು ಇಲ್ಲಿನ ವಾಣಿಯರಲ್ಲಿ ಮಾತ್ರ ಉಳಿದುಕೊಂಡಿರುವುದರಿಂದ — ಅದನ್ನು ಸಾಹಿತ್ಯಿಕ ಕೊಂಕಣಿಯಲ್ಲಿಯೂ ಅನುಸರಿಸಬೇಕೋ, ಬೇಡವೋ ಎಂಬುದನ್ನು — ಸಾಹಿತ್ಯದಲ್ಲಿ ಅಭಿರುಚಿಯುದ್ದವರು ಸಭೆ ಸೇರಿ ನಿರ್ಣಯಿಸಬೇಕಾದ ವಿಷಯವಾಗಿರುತ್ತದೆ. ಗೋವದ ಕೊಂಕಣಿಗರೂ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಕ್ರೈಸ್ತರೂ ಬಹುಕಾಲ ಮೊದಲೇ ಆ ಪ್ರಾಚೀನ ಕ್ರಮವನ್ನು ಬಿಟ್ಟುಕೊಟ್ಟು — ಮರಾಠಿ — ಕ್ರಮವನ್ನು ಅನುಸರಿಸಿದ್ದಾರೆ. ಮತ್ತು ಬಹಳಷ್ಟು ಸಾಹಿತ್ಯವನ್ನು ನಿರ್ಮಿಸಿಹಾಕಿದ್ದಾರೆ. ಪುಲ್ಲಿಂಗ ಶಬ್ದಗಳ ಮಟ್ಟಿಗೆ ಏಕವಚನದಲ್ಲಿನ 'ಉ' ಪ್ರತ್ಯಯವನ್ನು ತೊರೆಯಬಹುದಾದರೂ ಸ್ತ್ರೀಲಿಂಗ ಶಬ್ದಗಳ ಪ್ರಥಮಾ ವಿಭಕ್ತಿಯ ಬಹುವಚನದಲ್ಲಿ ಬರುವ — ಓಕಾರವನ್ನು — ಬಿಟ್ಟುಬಿಡುವುದು — ಮತ್ತು ಇ ಕಾರಾಂತ ಸ್ತ್ರೀಲಿಂಗ ಶಬ್ದಗಳನ್ನು ಪ್ರಥಮಾ ಏಕವಚನದಲ್ಲಿ ಸ್ವರರಹಿತವಾಗಿ ಬಳಸುವುದು ಎಷ್ಟು ಮಾತ್ರಕ್ಕೂ ಸರಿಯಾದುದಲ್ಲ "ವಾತಿ" ಎಂಬ ಶಬ್ದವನ್ನು "ವಾತ್" ಎಂದು ಬಳಸುವ ಆವಶ್ಯಕತೆಯಾದರೂ ಏನಿದೆ?

ಅಕಾರಾಂತ ನಪುಂಸಕಲಿಂಗ ನಾಮಪದಗಳ ಪ್ರಥಮಾ ವಿಭಕ್ತಿಯ ಬಹು

ವಚನಗಳು — ಬರವಣಿಗೆಯಲ್ಲಿ ಫುಲಂ (ಕೊಂಕಣಿ) ಫುಲೇಂ ( = ಮರಾಠಿ) ಬೇರೆ ಬೇರೆಯಾಗಿ ತೋರಿದರೂ ಮರಾಠಿಯ "ಫುಲೇಂ" ಎಂಬುದರ ಉಚ್ಚಾರವು ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಸಾರಸ್ವತ ಬ್ರಾಹ್ಮಣರ ಉಚ್ಚಾರದಂತೆಯೇ "ಫುಲಂ" ಎಂದೇ ಇರುತ್ತದೆ. ಕ್ರೈಸ್ತರು ಮಾತ್ರ "ಫುಲಾಂ" ಎಂದು ನುಡಿಯುತ್ತಾರೆ.

ಕೊಂಕಣಿಯಲ್ಲಿ ಎಲ್ಲ — ಇ ಕಾರಾಂತ ಇಲ್ಲವೇ ಈ ಕಾರಾಂತ ಪುಲ್ಲಿಂಗ ಶಬ್ದಗಳು ಪ್ರಥಮಾ ಬಹುವಚನದಲ್ಲಿ 'ಎ'ಯನ್ನು ಕೂಡಿಸಿಕೊಳ್ಳುತ್ತವೆ. "ಅಗ್ನಿ" ಶಬ್ದವು "ಅಗ್ನಿದೇವ" ಎಂಬ ಅರ್ಥದಲ್ಲಿ ಪುಲ್ಲಿಂಗವಾಗಿದ್ದು — ಯಜ್ಞದ "ಅಗ್ನಿಗಳಿಗಾಗಿ" ಬಳಸಲ್ಪಡುವುದಾದರೆ ಅದರ ಬಹುವಚನವು "ಅಗ್ನಿಯೆ" ಎಂದೇ ಆಗಬೇಕು. ಯೋಗೀ ಶಬ್ದದ ಬಹುವಚನವು ಯೋಗಿಯೆ ಎಂದೇ ಆಗಬೇಕು ಮತ್ತು ಜ್ಞಾನೇಶ್ವರಿಯಲ್ಲಿ ಕೂಡ ಅದೇ ರೂಪವು ಬಳಸಲ್ಪಟ್ಟಿದೆ. ಉದಾ:—"ಯೇರ ಯೋಗಿಯೇ — ಇತರ ಯೋಗಿಗಳು" ॥ ೩—೪೪ ॥

ಉ ಕಾರಾಂತ ಪುಲ್ಲಿಂಗ ಶಬ್ದಗಳ ಬಳಕೆಯು ಕೊಂಕಣಿಯಲ್ಲಿ ಇಲ್ಲವೇ ಇಲ್ಲವೆನ್ನಬೇಕು. ಸಂಸ್ಕೃತದಲ್ಲಿನ "ರಜ್ಜು = ಹಗ್ಗ, ಬಾವಿಹಗ್ಗ" ಎಂಬ ಸ್ತ್ರೀಲಿಂಗ ಶಬ್ದವು ದಕ್ಷಿಣ ಕನ್ನಡದಲ್ಲಿ "ರಾಜ್ಜು" ಎಂಬ ರೂಪದಿಂದ ಪುಲ್ಲಿಂಗದಲ್ಲಿ ಬಳಸಲ್ಪಡುತ್ತದೆ. ಅದರ ಬಹುವಚನ "ರಾಜವ" ಎಂದಾಗುತ್ತದೆ ಮತ್ತು — ವಿಭಕ್ತಿರೂಪಗಳು ರಾಜವಾಕ, ರಾಜವಾಂಕ ಇತ್ಯಾದಿ ಆಗುತ್ತವೆ. ಆದುದರಿಂದ ಗುರು, ಸಾಧು — ಮುಂತಾದ ಶಬ್ದಗಳನ್ನು ಕೂಡ ರಾಜ್ಜು ಶಬ್ದದಂತೆಯೇ ಬಳಸಬೇಕಾಗಿದ್ದಿತ್ತಾದರೂ "ಗುರೂಕ", "ಗುರೂಂಕ" ಮುಂತಾದ ರೂಪಗಳು ಈಗಾಗಲೇ ಬಳಕೆಗೆ ಬಂದಿರುವುದರಿಂದ ಇನ್ನು ಅವುಗಳನ್ನು ತೊರೆಯಲು ಸಾಧ್ಯವಿಲ್ಲ — ಮತ್ತು ತೊರೆಯಬೇಕೆನ್ನುವುದು ಸರಿಯೂ ಅಲ್ಲ. ಆದರೆ ಪ್ರಥಮಾ ವಿಭಕ್ತಿಯ ಬಹುವಚನದ ಮಟ್ಟಿಗೆ ಒಂದು ವಿಶಿಷ್ಟ ನಿಯಮವನ್ನು ಅನುಸರಿಸಬಹುದು. "ಗುರು" ಎಂಬ ಶಬ್ದವನ್ನು ಒಂದೇ ವ್ಯಕ್ತಿಗಾಗಿ ಬಹುವಚನದ ಅರ್ಥದಲ್ಲಿ ಬಳಸುವಾಗ "ಗುರು" ಎಂಬ ಮೂಲ ರೂಪವನ್ನೇ ಬಳಸಿ, ಹೆಚ್ಚು ಮಂದಿಗಳಿಗಾಗಿ "ಗುರುವ" ಎಂದೂ, ಉಪಾಂತ್ಯದಲ್ಲಿ ದೀರ್ಘ ಸ್ವರವಿರುವ " 'ಸಾಧು' = ಸಂತ" ಶಬ್ದದ ಬಹುವಚನವನ್ನು "ಸಾಧುವ" ಎಂದೂ ಬಳಸಬಹುದು.

ಕೊಂಕಣಿ ಮತ್ತು ಮರಾಠಿಗಳಲ್ಲಿನ — ಅ ಕಾರಾಂತ, ಆ ಕಾರಾಂತ, ಇ ಕಾರಾಂತ ಮತ್ತು ಉ ಕಾರಾಂತ ಸ್ತ್ರೀಲಿಂಗ ನಾಮಪದಗಳು ಪ್ರಥಮಾ

ವಿಭಕ್ತಿಯ ಬಹುವಚನ ಒಂದನ್ನು ಬಿಟ್ಟು ಉಳಿದ ವಿಭಕ್ತಿಗಳಲ್ಲಿ ಸಮಾನವಾಗಿ ರೂಪಾಂತರವಾಗುತ್ತವೆ. ಇದು ನಪುಂಸಕ ಲಿಂಗದ ನಾಮಪದಗಳಿಗೂ ಅನ್ವಯಿಸುತ್ತದೆ.

ಕೊಂಕಣಿಯಲ್ಲಿನ ಓ ಕಾರಾಂತ ಪುಲ್ಲಿಂಗ ಶಬ್ದವು ಮರಾಠಿಯ ಪ್ರಥಮಾ ವಿಭಕ್ತಿಯ ಏಕವಚನದಲ್ಲಿ ಆ ಕಾರಾಂತವಾಗಿ ಮಾರ್ಪಟ್ಟರೂ ಇತರ ಎಲ್ಲ ರೂಪ ಗಳು ಸಮಾನವಾಗಿವೆ.

## ೨. ದ್ವಿತೀಯಾ ಮತ್ತು ಚತುರ್ಥೀ ವಿಭಕ್ತಿಗಳು

ಪ್ರಾಕೃತ ಭಾಷೆಗಳಲ್ಲಿ ಚತುರ್ಥೀ ವಿಭಕ್ತಿ ಇಲ್ಲ. ಆದುದರಿಂದ ಷಷ್ಠೀ ವಿಭಕ್ತಿಯ ರೂಪಗಳು ಚತುರ್ಥೀ ವಿಭಕ್ತಿಯ ಅರ್ಥದಲ್ಲಿಯೂ ಬಳಸಲ್ಪಡುತ್ತವೆ. ತರುವಾಯ ವಿಕಸಿತವಾದ ಪ್ರಾಕೃತ ವಿಭೇದಗಳಲ್ಲಿ–ಅಂದರೆ ಹಿಂದೀ, ಕೊಂಕಣೀ ಮೊದಲಾದ ಭಾಷೆಗಳಲ್ಲಿ ದ್ವಿತೀಯಾ ವಿಭಕ್ತಿ ಇಲ್ಲ. ಮತ್ತು ಕೆಲವು ಸಂದರ್ಭ ಗಳಲ್ಲಿ ದ್ವಿತೀಯಾ ವಿಭಕ್ತಿಯ ಆವಶ್ಯಕತೆಯೂ ಇರುವುದಿಲ್ಲ. ಆವಶ್ಯಕತೆ ಇದ್ದಾಗ—ಪ್ರಾಚೀನ—ಪ್ರಾಕೃತದಲ್ಲಿನ ಚತುರ್ಥೀ ವಿಭಕ್ತಿಯ ಅಂದರೆ ಮೂಲ ದಲ್ಲಿ ಷಷ್ಠೀ ವಿಭಕ್ತಿಯ ರೂಪಗಳೇ ದ್ವಿತೀಯಾ ವಿಭಕ್ತಿಯಲ್ಲಿ ಬಳಸಲ್ಪಡುತ್ತವೆ. ಹೀಗಾಗಿ ದ್ವಿತೀಯಾ ಮತ್ತು ಚತುರ್ಥೀ ವಿಭಕ್ತಿಯ ರೂಪಗಳು ಒಂದೇ ಆಗಿರುತ್ತವೆ. ಉದಾ:— ಕೊಂಕಣಿ— ಗಾಯಿ ತಣ ಚರತಾ = ಹಿಂದೀ— ಗಾಯ್ ಘಾಸ್ ಚರ್‌ತೀ ಹೈ = ದನವು ಹುಲ್ಲನ್ನು ಮೇಯುತ್ತದೆ. ಕೊಂಕಣಿ– ರಾಮು ಅಂಬೊ ಖಾತಾ = ಹಿಂದಿ–ರಾಮ್ ಆಮ್ ಖಾತಾ ಹೈ = ರಾಮನು ಮಾವಿನಹಣ್ಣನ್ನು ತಿನ್ನುತ್ತಾನೆ. ಈ ಎರಡು ವಾಕ್ಯಗಳಲ್ಲಿ ತಣ ಮತ್ತು ಅಂಬೊ ಎಂಬ ಶಬ್ದಗಳು ಪ್ರಥಮಾ ವಿಭಕ್ತಿಯ ಏಕವಚನಗಳಾಗಿದ್ದರೂ ಅವು ದ್ವಿತೀಯಾ ವಿಭಕ್ತಿಯ ಅರ್ಥದಲ್ಲಿ ಬಳಸಲ್ಪಟ್ಟಿವೆ. ಆದರೆ ರಾಮಾಕ ಚೋಯಿ= ರಾಮನನ್ನು ನೋಡು. ಗಾಯಿಕ ಅಂಬುಡಿ = ದನವನ್ನು ಅಟ್ಟು. ತೋs ಅಮ್ಕಾಂ ಪಳೆಯಿತಾ=ಅವನು ನಮ್ಮನ್ನು ನೋಡುತ್ತಾನೆ ಎಂಬ ಪ್ರಯೋಗ ಗಳಲ್ಲಿ "ಕ" ಮತ್ತು "ಕಾಂ" ಷಷ್ಠೀ ವಿಭಕ್ತಿಯ ಪ್ರತ್ಯಯಗಳಾಗಿದ್ದು, ದ್ವಿತೀಯಾ ವಿಭಕ್ತಿಯಲ್ಲಿ ಬಳಸಲ್ಪಟ್ಟಿವೆ. ಷಷ್ಠೀ ವಿಭಕ್ತಿಯ ರೂಪಗಳನ್ನು ಚತುರ್ಥೀ ಮತ್ತು ದ್ವಿತೀಯಾ ವಿಭಕ್ತಿಗಳಲ್ಲಿ ಬಳಸುವ ಕ್ರಮವು ಪ್ರಾಚೀನ ಕಾಲದಿಂದಲೇ ಸಾಗಿಬಂದಿದೆ. ಕಾತ್ಯಾಯನನ ವ್ಯಾಕರಣದಲ್ಲಿ ಇದರ ಸ್ಪಷ್ಟವಾದ ಉದಾಹರಣೆ ಗಳಿವೆ:— ಅಮ್ಹಾಕಂ ಪಸ್ಸಸಿ ತ್ವಂ ॥ ೨-೨-೨ ॥ ಇದನ್ನು ಕೊಂಕಣಿಯನ್ನಾಗಿ

ಪರಿವರ್ತಿಸುವುದಾದರೆ ಅದರ ರೂಪವು—"ತೂಂವ ಆಮ್ಹಾಕಾಂ ಪಹೇಸಿ= ನೀನು ನಮ್ಮನ್ನು ನೋಡುತ್ತಿ" ಎಂದಾಗುವುದು.

ಆದ್ಯ ಪ್ರಾಕೃತದ ವಿಭಕ್ತಿರೂಪಗಳಲ್ಲಿ "ಅಮ್ಹಾಕಂ" ಮತ್ತು "ತುಮ್ಹಾಕಂ" ಎಂಬ ರೂಪಗಳು ಷಷ್ಟೀ ವಿಭಕ್ತಿಯಲ್ಲಿ ಮಾತ್ರವಲ್ಲದೇ ಚತುರ್ಥೀ ಮತ್ತು ದ್ವಿತೀಯಾ ವಿಭಕ್ತಿಗಳಲ್ಲಿಯೂ ಬಂದಿವೆ. ಅಮ್ಹಾಕಂ ಮತ್ತು ತುಮ್ಹಾಕಂ ಎಂಬ ರೂಪಗಳು ಮೂಲದಲ್ಲಿ ಸಂಸ್ಕೃತದ "ಅಸ್ಮಾಕಮ್ ಮತ್ತು ಯುಷ್ಮಾಕಮ್" ಎಂದು ಷಷ್ಟೀ ವಿಭಕ್ತಿಯ ರೂಪಗಳಾಗಿದ್ದವು. ಆದರೆ ಪ್ರಾಕೃತದಲ್ಲಿ ಚತುರ್ಥಿಯ ಅರ್ಥದಲ್ಲಿ ಷಷ್ಟೀ ವಿಭಕ್ತಿಯೇ ಬಳಸಲ್ಪಡುತಿದ್ದುದರಿಂದ ವರರುಚಿಯು ಪ್ರಾಕೃತ ಪ್ರಕಾಶದಲ್ಲಿ "ಚತುರ್ಥ್ಯಾಃಷಷ್ಟೀ ॥ ೬-೬೪ ॥=ಚತುರ್ಥಿಯ ಅರ್ಥದಲ್ಲಿ ಷಷ್ಟೀವಿಭಕ್ತಿ" ಎಂಬ ಸೂತ್ರವನ್ನು ಹೇಳಿದ್ದಾನೆ. ಪರಂತು ಚತುರ್ಥೀ ಅಥವಾ ಮೂಲ ಷಷ್ಟೀವಿಭಕ್ತಿಯ ರೂಪಗಳು ವರರುಚಿಗಿಂತ ಏಳುನೂರು ವರ್ಷಗಳ ಮೊದಲೇ ದ್ವಿತೀಯಾ ವಿಭಕ್ತಿಯಲ್ಲಿ ಬಳಸಲ್ಪಡುತಿದ್ದವೆಂದು ಕಾತ್ಯಾಯನನ ಸುಸಂಧಿಕಲ್ಪದಿಂದ ತಿಳಿದುಬರುತ್ತದೆ. ಉದಾ:- ತುಮ್ಹಾಮ್ಹೇಹಿ ನಂ ಆಕಂ ॥ ೨-೩-೧ ॥ =ತುಮ್ಹ ಮತ್ತು ಅಮ್ಹ ಎಂಬ ಶಬ್ದಗಳಿಗೆ ಷಷ್ಟೀ ವಿಭಕ್ತಿಯ ಬಹುವಚನದಲ್ಲಿ "ನಂ" ಪ್ರತ್ಯಯದ ಬದಲಿಗೆ "ಆಕಂ" ಪ್ರತ್ಯಯ ಬರುತ್ತದೆ. ಮತ್ತು ಅವುಗಳ ರೂಪಗಳು "ತುಮ್ಹಾಕಂ" ಮತ್ತು "ಅಮ್ಹಾಕಂ" ಆಗುತ್ತವೆ. ತರುವಾಯ "ವಾಯ್ವಪ್ಪಠಮೋ" ॥ ೨-೩-೨ ॥ = ಆಕಂ ಪ್ರತ್ಯಯವು ದ್ವಿತೀಯಾ ಬಹುವಚನದಲ್ಲಿಯೂ ಬರುತ್ತದೆ. ಅಂದರೆ ದ್ವಿತೀಯಾ ಬಹುವಚನದಲ್ಲಿ ತುಮ್ಹಾಕಂ = ನಿಮ್ಮನ್ನು ಅಮ್ಹಾಕಂ = ನಮ್ಮನ್ನು ಎಂಬ ರೂಪಗಳು ಬರುತ್ತವೆ. ಇವುಗಳು ಕೊಂಕಣಿಯಲ್ಲಿ ತುಮ್ಕಾಂ ಮತ್ತು ಆಮ್ಕಾಂ ಎಂದು ಮಾರ್ಪಟ್ಟಂತೆಯೇ ಸಂಸ್ಕೃತದಲ್ಲಿನ ತಾವಕ ಮತ್ತು ಮಾಮಕ ಎಂಬ ಶಬ್ದಗಳು ಕೊಂಕಣಿಯಲ್ಲಿ ತುಕ = ನಿನ್ನನ್ನು, ನಿನಗೆ: ಮಾಕ = ನನ್ನನ್ನು ನನಗೆ ಎಂದು ಮಾರ್ಪಟ್ಟಿದ್ದವು.

ಇತರ ನಾಮಪದಗಳೊಂದಿಗೆ ಸಂಸ್ಕೃತದ ಷಷ್ಟೀ ವಿಭಕ್ತಿಯ ಏಕವಚನದಲ್ಲಿ "ಸ್ಯ" ಪ್ರತ್ಯಯವು ಬಳಸಲ್ಪಡುತ್ತದೆ. ಉದಾ:—ರಾಮಸ್ಯ = ರಾಮನ ಕೆಲವು ಸಂದರ್ಭಗಳಲ್ಲಿ "ರಾಮಸ್ಯ" ಎಂಬುದರ ಅರ್ಥವು "ರಾಮನಿಗೆ" ಎಂಬುದಾಗಿಯೂ ಆಗುತ್ತದೆ. ಹೀಗಾಗಿ ಆ ಶಬ್ದವು ಪ್ರಾಕೃತದಲ್ಲಿ ರಾಮಸ್ಸ ಎಂಬ ರೂಪದಲ್ಲಿ ಚತುರ್ಥೀ ವಿಭಕ್ತಿಯಲ್ಲಿಯೂ ಬಳಸಲ್ಪಡುತಿತ್ತು. ಅದು ಕಾಲಕ್ರಮೇಣ ಕೊಂಕಣಿಯಲ್ಲಿ "ರಾಮಾಸ" ಎಂದು ಮಾರ್ಪಟ್ಟು ದ್ವಿತೀಯಾ

ವಿಭಕ್ತಿಯ ಅರ್ಥದಲ್ಲಿ "ರಾಮುನನ್ನು" ಎಂತಲೂ, ಚತುರ್ಥೀ ವಿಭಕ್ತಿಯ ಅರ್ಥದಲ್ಲಿ "ರಾಮುನಿಗೆ" ಎಂತಲೂ ಬಳಕೆಗೆ ಬಂತು. ಸಂಸ್ಕೃತದಲ್ಲಿನ "ತಸ್ಯ = ಅವನ" ಇದ್ದುದು ಪ್ರಾಕೃತದಲ್ಲಿ "ತಸ್ಸ = ಅವನಿಗೆ" ಎಂದಾಗಿ ಕೊಂಕಣಿಯಲ್ಲಿ "ತಾಸ = ಅವನನ್ನು ಮತ್ತು ಅವನಿಗೆ" ಎಂದಾಯಿತು. ಸಂಸ್ಕೃತದಲ್ಲಿನ "ತಸ್ಯಾಃ = ಅವಳ" ಎಂಬ ಶಬ್ದವು ಕಾತ್ಯಾಯನನ ಕಾಲದಲ್ಲಿಯೇ "ತಿಸ್ಸಾ = ಅವಳ ಮತ್ತು ಅವಳಿಗೆ" ಎಂದಾಗಿತ್ತು. ಕಾಲಕ್ರಮೇಣ ಕೊಂಕಣಿಯಲ್ಲಿ ಬಳಸಲ್ಪಡುತ್ತಿದ್ದ ತುಕ = ನಿನ್ನನ್ನು, ನಿನಗೆ; ತುಮ್ಹಾಕಾಂ = ನಿಮ್ಮನ್ನು, ನಿಮಗೆ; ಮಾಕ=ನನ್ನನ್ನು, ನನಗೆ; ಆಮ್ಹಾಕಾಂ=ನಮ್ಮನ್ನು. ನಮಗೆ ಎಂಬ ರೂಪಗಳಲ್ಲಿನ "ಕ" ಪ್ರತ್ಯಯದ ಪ್ರಭಾವದಿಂದಾಗಿ ಇತರ ರೂಪಗಳಲ್ಲಿನ "ಸ" ಪ್ರತ್ಯಯವು ಕೂಡ "ಕ" ಆಗಿ ಮಾರ್ಪಟ್ಟಿತು. ಅಂದರೆ ರಾಮಾಸ ಇದ್ದುದು ರಾಮಾಕ ಎಂತಲೂ ತಾಸ ಇದ್ದುದು ತಾಕ ಎಂತಲೂ, ತಿಸ್ಸಾ ಇದ್ದುದು ತಿಕ್ಕಾ ಎಂತಲೂ ಮಾರ್ಪಟ್ಟವು.

ಮರಾಠಿಯ ದ್ವಿತೀಯಾ ಹಾಗೂ ಚತುರ್ಥೀ ವಿಭಕ್ತಿಗಳಲ್ಲಿ "ಸ" ಪ್ರತ್ಯಯದ ಹೊರತಾಗಿ ತೇಂ. ಲಾ. ಮತ್ತು ನಾ ಎಂಬ ಮೂರು ಪ್ರತ್ಯಯಗಳಿವೆ. ನಾ ಮತ್ತು ಲಾ ಪ್ರತ್ಯಯಗಳು ಜ್ಞಾನೇಶ್ವರಿಯಲ್ಲಿ ಬಳಸಲ್ಪಟ್ಟಿಲ್ಲ. "ಸ" ಇದ್ದುದು "ಸಿ" ಆಗಿ ಬಂದಿದೆ. ತೇಂ ಎಂಬುದು ಅತ್ಯಧಿಕವಾಗಿ ಬಂದಿದೆ. ಮತ್ತು ಇದು ಮುಖ್ಯವಾಗಿ ದ್ವಿತೀಯಾ ವಿಭಕ್ತಿಯ ಅರ್ಥದಲ್ಲಿಯೇ ಬಳಸಲ್ಪಟ್ಟಿದೆ. ಚತುರ್ಥೀ ಅರ್ಥದಲ್ಲಿ ಅದು ಬಳಸಲ್ಪಟ್ಟಿಲ್ಲ. "ಮ್ಹಣ" ಕ್ರಿಯೆಯ ಜೊತೆಯಲ್ಲಿ ಅದು ತೃತೀಯಾ ವಿಭಕ್ತಿಯ ಅರ್ಥವನ್ನು ಕೊಡಬಹುದು. ಉದಾ:—ಸಂಜಯೋ ಮ್ಹಣೇ ರಾಯಾತೇಂ ॥ ೨-೧ ॥ ಸಂಜಯನು ಅರಸನೊಂದಿಗೆ ಅನ್ನುತ್ತಾನೆ:— ರುದನಾತೇ ಕರಿತ ಅಸೇ ॥ ೧-೨೧೫ ॥ ರೋದನವನ್ನು ಮಾಡುತ್ತ ಇದ್ದನು; ಪುತ್ರಾತೇಂ ಇಚ್ಛೀಕುಳ ಕುಲವು ಪುತ್ರನನ್ನು ಬಯಸುತ್ತದೆ. ಇದನ್ನು ನೋಡು ವಾಗ ಸಂತ ಏಕನಾಥರು "ತೇಂ=ಅದು ಅದನ್ನು" ಎಂಬ ಸರ್ವನಾಮವನ್ನು ದ್ವಿತೀಯಾ ವಿಭಕ್ತಿಯ ಪ್ರತ್ಯಯವನ್ನಾಗಿ ಬಳಸಿರಬಹುದೋ ಎಂಬ ಅನುಮಾನ ವಾಗುತ್ತದೆ. ಏಕೆಂದರೆ ಕೊಂಕಣಿಯ ಒಂದು ಪ್ರಯೋಗದಲ್ಲಿ "ತೇಂ" ಎಂಬುದು ದ್ವಿತೀಯಾ ವಿಭಕ್ತಿಯ ಅರ್ಥವನ್ನು ಕೊಡುತ್ತದೆ. ಉದಾ:– ಪಳೈತ ತೇಂ ಘೆತ್ತಾ = ನೋಡಿದ್ದನ್ನು ತೆಗೆದುಕೊಳ್ಳುತ್ತಾನೆ = ನೋಡಿದ ಪ್ರತಿಯೊಂದನ್ನು ತೆಗೆದುಕೊಳ್ಳುತ್ತಾನೆ.

ಆದರೆ ಕೊಂಕಣಿಯಲ್ಲಿ ನೂರಾರು ಹಿಂದೀ ಶಬ್ದಗಳನ್ನು ಸೇರಿಸಿದ

ಏಕನಾಥರು ಹಿಂದಿಯಿಂದಲೇ ಈ "ತೇಂ" ಪ್ರತ್ಯಯುವನ್ನು ಸ್ವೀಕರಿಸಿರಬಹುದೋ ಎಂಬ ಅನುಮಾನವೂ ಇದೆ. ಪ್ರಾಚೀನ ಹಿಂದಿಯಲ್ಲಿ "ತೇಂ" ಪ್ರತ್ಯಯುವು ತೃತೀಯಾ ವಿಭಕ್ತಿಯ ಅರ್ಥದಲ್ಲಿ ಬಳಸಲ್ಪಡುತ್ತದೆ. ಅಲ್ಲದೇ ಏಕನಾಥರು ಕೊಂಕಣಿಯ "ಲಾಗಿ" ಎಂಬ ಶಬ್ದವನ್ನು "ಲಾಗೀಂ" ಎಂಬುದಾಗಿ–ಹಿಂದೀ ಕ್ರಮ ದಂತೆ ಚತುರ್ಥೀ ವಿಭಕ್ತಿಯ ಅರ್ಥದಲ್ಲಿ ಅಂದರೆ "ಸಲುವಾಗಿ. ಗೋಸ್ಕರ" ಎಂಬಂತೆ ಬಳಸಿರುವುದನ್ನು ಯೋಚಿಸಿದರೆ—ಅವರು "ತೇಂ" ಪ್ರತ್ಯಯುವನ್ನು ಹಿಂದಿಯಿಂದಲೇ ಸ್ವೀಕರಿಸಿರಬಹುದೆಂದು ತೋರುತ್ತದೆ. ಕೊಂಕಣಿಯಲ್ಲಿ ಲಾಗಿ ಅಥವಾ ಲಾಗಿಂ ಎಂಬುದರ ಅರ್ಥವು ೧. ಹತ್ತಿರ ೨. ಜೊತೆಯಲ್ಲಿ. ಒಂದಿಗೆ ಎಂದಿರುತ್ತದೆ.

ಲಾ ಮತ್ತು ನಾ ಪ್ರತ್ಯಯಗಳು ಜ್ಞಾನೇಶ್ವರಿಯಲ್ಲಿ ಬಳಸಲ್ಪಟ್ಟಿಲ್ಲವೆಂದ ಮೇಲೆ ಈ ಎರಡು ಪ್ರತ್ಯಯಗಳು ಮರಾಠಿಯಲ್ಲಿ ಎಲ್ಲಿಂದ ಬಂದವು? ಈ ಲಾ ಮತ್ತು ನಾ ಗಳು ತೋರಿಕೆಗೆ–ಎರಡಾಗಿದ್ದರೂ ಅವುಗಳು ಮೂಲದಲ್ಲಿ ಒಂದೇ "ಲಾ" ಇದ್ದುದು ರೂಪಾಂತರವಾಗಿ "ನಾ" ಆಗಿತ್ತೆಂದು ಮುಂದಿನ ವಿಮರ್ಶೆ ಯಿಂದ ಸ್ಪಷ್ಟವಾಗಿ ಕಂಡುಕೊಳ್ಳಬಹುದು. ಉದಾ:–ತುಲಾ=ನಿನ್ನನ್ನು, ನಿನಗೆ; ತುಮ್ಹಾಂಲಾ=ನಿಮ್ಮನ್ನು, ನಿಮಗೆ; ಮಲಾ=ನನ್ನನ್ನು, ನನಗೆ; ಆಮ್ಹಾಂಲಾ= ನಮ್ಮನ್ನು, ನಮಗೆ; ಈ ರೂಪಗಳಲ್ಲಿ ಏಕವಚನ, ಬಹುವಚನಗಳೆರಡರಲ್ಲಿಯೂ "ಲಾ" ಪ್ರತ್ಯಯುವು ಬಂದಿದೆ. ಆದರೆ ತ್ಯಾಲಾ=ಅವನಿಗೆ. ತ್ಯಾಂನಾ=ಅವರಿಗೆ. ಹ್ಯಾಲಾ=ಇವರಿಗೆ; ಹ್ಯಾಂನಾ=ಇವರಿಗೆ–ಎಂಬ ರೂಪಗಳ ಬಹುವಚನದಲ್ಲಿ "ಲಾ" ಬಂದಿಲ್ಲ ಮತ್ತು ಬರುವುದಿಲ್ಲ. "ಲಾ"ದ ಬದಲಿಗೆ "ನಾ" ಬಂದಿದೆ ಮತ್ತು ಬರುತ್ತದೆ. ಟಿಪ್ಪುವು ಮೈಸೂರನ್ನು ಆಳುತ್ತಿದ್ದಾಗ ಮುಸಲ್ಮಾನರನ್ನಾಗಿ ಮತಾಂತಂಸಿದ ಮರಾಠಿಗರು ಆಡುವ ಹಿಂದುಸ್ಥಾನಿಯಲ್ಲಿ ಆಮ್ಹಾಂಲಾ ಮತ್ತು ತುಮ್ಹಾಂಲಾ ಎಂಬ ಮರಾಠಿ ರೂಪಗಳು ಹಮನಾ ಮತ್ತು ತುಮನಾ ಎಂದು ರೂಪಾಂತರವಾಗಿವೆ. ಉತ್ತರ ಭಾರತದಲ್ಲಿನ ಹಿಂದಿಯಲ್ಲಿ ಆ ರೂಪಗಳಿಲ್ಲ ಮಾತ್ರವಲ್ಲ ದಕ್ಷಿಣ ಭಾರತದ ಅನ್ಯ ಮುಸಲ್ಮಾನರಾಡುವ ಹಿಂದಿಯಲ್ಲಿ ಹಮಕು ಮತ್ತು ತುಮಕು ಎಂಬ ರೂಪಗಳು ಹಮನಾ ಮತ್ತು ತುಮನಾ ಎಂಬ ರೂಪಗಳ ಬದಲಿಗೆ ಬಳಸಲ್ಪಡುತ್ತವೆ. ಅರ್ಥಾತ್–ಮೂಲದಲ್ಲಿನ "ಲಾ" ಪ್ರತ್ಯಯುವೇ "ನಾ" ಆಗಿ ಮಾರ್ಪಟ್ಟಿದ್ದಿತೆಂದು ಸಿದ್ಧವಾಗುತ್ತದೆ.

"ಲಾ" ಪ್ರತ್ಯಯದ ಮೂಲವು ಕೊಂಕಣಿಯಲ್ಲಿನ ಷಷ್ಟೀ ವಿಭಕ್ತಿಯಲ್ಲಿ ಬರುವ "ಲೊ" ಪ್ರತ್ಯಯುವಾಗಿರುತ್ತದೆ. ಆದುದರಿಂದಲೇ ಅದು ಏಕವಚನ

ಬಹುವಚನಗಳೆರಡರಲ್ಲಿಯೂ ಬರುವುದಾಗಿದೆ. ಆದುದರಿಂದ ಷಷ್ಠೀ ವಿಭಕ್ತಿಯು "ಲೊ" ಪ್ರತ್ಯಯವೇ ಮರಾಠಿಯಲ್ಲಿ "ಲಾ" ಆಗಿ ದ್ವಿತೀಯಾ ಮತ್ತು ಚತುರ್ಥೀ ವಿಭಕ್ತಿಗಳಲ್ಲಿ ಬಳಸಲ್ಪಡುತ್ತದೆಂದು ಹೇಳುವುದೇ ಸೂಕ್ತವಾಗಿದೆ. ಮರಾಠಿಯ ಷಷ್ಠೀ ವಿಭಕ್ತಿಯಲ್ಲಿ "ಚಾ" ಪ್ರತ್ಯಯ ಮಾತ್ರ ಬಳಕೆಯಲ್ಲಿದೆ. ಹೀಗಿದ್ದರೂ ಮರಾಠಿಯು ಕೊಂಕಣಿಯಿಂದಲೇ ಹುಟ್ಟಿದುದರಿಂದ ಮೊದಲು ಮರಾಠಿಯಲ್ಲಿ ಕೂಡ ಕೊಂಕಣಿಯ ಷಷ್ಠೀ ವಿಭಕ್ತಿ ಪ್ರತ್ಯಯ "ಲೊ" ಇದ್ದುದು "ಲಾ" ಆಗಿ ಬಳಕೆಯಲ್ಲಿದ್ದಿತೆಂದು ತಿಳಿಯಬಹುದಾದ ಪ್ರಮಾಣಗಳು ಮರಾಠಿಯಲ್ಲಿ ಇಂದಿಗೂ ಇವೆ. ಅಂದರೆ ಮರಾಠಿಯಲ್ಲಿ ಷಷ್ಠೀ ವಿಭಕ್ತಿಯ "ಲಾ" ಪ್ರತ್ಯಯದಿಂದ ಕೂಡಿದ "ಹಾತಾಂತಲಾ=ಕೈಯೊಳಗಿನ" ಮಧಲಾ=ನಡುವಿನ ಮಾಗಲಾ=ತರುವಾಯದ ಘರಾಂತಲಾ=ಮನೆಯೊಳಗಿನ ಆಪಲಾ=ತನ್ನ ಮುಂತಾದ ಶಬ್ದಗಳು ಮರಾಠಿಯ ಷಷ್ಠೀ ವಿಭಕ್ತಿಯ ಪ್ರತ್ಯಯವು "ಲಾ" ಆಗಿದ್ದಿತೆಂದು ಸಿದ್ಧಪಡಿಸುತ್ತವೆ. ಅರ್ಥಾತ್ ಮರಾಠಿಯಲ್ಲಿ "ಲಾ" ಪ್ರತ್ಯಯದಿಂದ ಕೂಡಿರುವ ಶಬ್ದಗಳ ಇರುವಿಕೆಯು ಮರಾಠಿಯು ಕೊಂಕಣಿಯಿಂದಲೇ ಹುಟ್ಟಿದುದೆಂಬುವರ ಇನ್ನೊಂದು ಪ್ರಮಾಣವಾಗಿರುತ್ತದೆ.

ಅಷ್ಟೇ ಏಕೆ ಸಂತ ಏಕನಾಥರು ಜ್ಞಾನೇಶ್ವರಿಯನ್ನು ಮರಾಠಿಯದನ್ನಾಗಿ ಪರಿವರ್ತಿಸಿದ್ದರೂ ಷಷ್ಠೀ ವಿಭಕ್ತಿಯಲ್ಲಿ "ಲೊ" ಅಥವಾ "ಲಾ" ಪ್ರತ್ಯಯವನ್ನು ಬಳಸಿದ ಒಂದು ಪ್ರಯೋಗವು ಅದರಲ್ಲಿ ಇಂದಿಗೂ ಉಳಿದುಕೊಂಡಿದೆ. ಆಪ್ಲೊ ಇಲ್ಲವೇ ಆಪಲೊ ಎಂಬ ಶಬ್ದವು ತನ್ನ ಇಲ್ಲವೇ ನಿಮ್ಮ ಎಂಬ ಅರ್ಥಕೊಡುತ್ತಿದ್ದರೂ ಪ್ರಸಂಗವಶಾತ್ ಒಮ್ಮೊಮ್ಮೆ ಅದರೊಂದಿಗೆ ಮತ್ತೊಂದು "ಲೊ" ಇಲ್ಲವೇ "ಲೆಂ" ಕೂಡುವುದುಂಟು. ಆಗ ಅದರ ಕೊಂಕಣಿ ರೂಪವು "ಆಪಲ್ಯಾಲೊ" ಎಂದಾಗುತ್ತದೆ. ಮತ್ತು ಮರಾಠಿಯಲ್ಲಿ ಆಪಲಾಲಾ ಆಗುತ್ತದೆ. ಹೀಗೆ ಜೋಡು ಪ್ರತ್ಯಯದಿಂದ ಅಂದರೆ ಎರಡು "ಲೊ"ಗಳಿಂದ ಅಥವಾ ಎರಡು "ಲಾ"ಗಳಿಂದ ಕೂಡಿದ ಒಂದು ಷಷ್ಠೀ ವಿಭಕ್ತಿಯ ರೂಪವು ಜ್ಞಾನೇಶ್ವರಿಯಲ್ಲಿ ಮುಂದೆ ಕೊಟ್ಟಿರುವ ಪದ್ಯದಲ್ಲಿದೆ:— **ಸಕಳ ಸೈನಿಕಾತೇಂ ಮ್ಹಣೆತಲೇಂ । ಆತಾಂ ದಳಭಾರ ಆಪುಲಾಲೇ । ಸರಸೇಕರಾ ॥ ೧–೧೨೧ ॥** —ಸಕಲ ಸೈನಿಕರನ್ನು ಉದ್ದೇಶಿಸಿ ಅಂದನು ಈಗ ನಿಮ್ಮ ನಿಮ್ಮ ಸೈನ್ಯಗಳನ್ನು ಸಜ್ಜುಗೊಳಿಸಿರಿ: ಎಂದರ್ಥ. ಇದರ ಮೇಲಿಂದ ಮರಾಠಿಯು ಕೊಂಕಣಿಯಿಂದ ಸಂಪೂರ್ಣ ಬೇರೆಯಾಗುವ ಮೊದಲು ಮರಾಠಿಯ ಷಷ್ಠೀ ವಿಭಕ್ತಿಯಲ್ಲಿ ಕೂಡ "ಲೋ" ಪ್ರತ್ಯಯವಿದ್ದಿತೆಂದೂ. ಅದನ್ನು ದ್ವಿತೀಯಾ

ಮತ್ತು ಚತುರ್ಥೀ ವಿಭಕ್ತಿಗಳಲ್ಲಿ ಬಳಸತೊಡಗಿದ ತರುವಾಯ ಷಷ್ಠೀವಿಭಕ್ತಿಯಲ್ಲಿ ಅದರ ಬಳಕೆಯು ನಿಂತುಹೋಯಿತೆಂದೂ ಹೇಳಬಹುದು.

ಕೊಂಕಣಿಯಲ್ಲಿನ ಅಂದರೆ ಹಳೆಯ ಪ್ರಾಕೃತದಲ್ಲಿನ "ಲೋ" ಪ್ರತ್ಯಯವು ಗುಜರಾತಿಯಲ್ಲಿ ನೋ ಮತ್ತು ರೋ ಎಂಬುದಾಗಿ ಎರಡು ರೂಪಗಳನ್ನು ತಾಳಿದೆ: ಉದಾ:—ದಾದಾನೋ ಡಗಲೊ=ಅಜ್ಜನ ನಿಲುವಂಗಿ. ಮಾರೋ ಘೋಡೋ =ನನ್ನ ಕುದುರೆ. ರೋ ಮತ್ತು ನೋಗಳ ನಡುವಿನ ಗೊಣಸು ಕೊಂಕಣಿಯಲ್ಲಿನ "ಲೊ" ಎಂಬುದು ಸ್ಪಷ್ಟವಿದೆ. ಏಕೆಂದರೆ "ಲ" ಇದ್ದುದು ರ ಆಗಬಲ್ಲುದು. ಇಲ್ಲವೇ ನ ಆಗಬಲ್ಲುದು. ಹಾಗೆಯೇ ನ ಮತ್ತು ರ ಎರಡೂ "ಲ" ಆಗಬಲ್ಲವು. ಆದರೆ ನ ಇದ್ದುದು ರ ಆಗಲೀ, ರ ಇದ್ದುದು "ನ" ಆಗಲೀ ಆಗಲಾರವು. ಅಂಥ ಪರಿವರ್ತನದ ಮೊದಲು "ಲ" ಎಂಬ ನಡುವಿನ ಒಂದು ಹಂತವು ಬೇಕೇ ಬೇಕು.

ಕೆಲವು ಮರಾಠೀ ಪಂಡಿತರು ತೇಂ, ನಾ ಮತ್ತು ಲಾ ಪ್ರತ್ಯಯಗಳ ಕುರಿತು ಕೆಲವು ಉಹಾಪೋಹಗಳನ್ನು ನಡಿಸಿದ್ದಾರೆ. ಆದರೆ ಅವರ ಎಲ್ಲ ಊಹಾಪೋಹಗಳು ಅವರ ಮರಾಠಿ ಭಾಷೆಯು ನೇರಾಗಿ ಯಾವುದೋ ಪ್ರಾಕೃತದಿಂದ ಅಥವಾ ಸಂಸ್ಕೃತದಿಂದಲೇ ರೂಪಾಂತರವಾದುದೆಂಬ ಕಲ್ಪನೆಯನ್ನವಲಂಬಿಸಿ ಮಾಡುವಂಥವುಗಳಾಗಿರುವುದರಿಂದ ಅವರ ಊಹೆಗಳು ತಪ್ಪುತ್ತಲೇ ಇರುತ್ತವೆ. ಮರಾಠಿ ವ್ಯಾಕರಣಾಚೀಂ ಮೂಳತತ್ವೇಂ ಎಂಬ ಪುಸ್ತಕದ ೯೫ನೆಯ ಪುಟವಲ್ಲಿ ಶ್ರೀ ಗಣೇಶ ಹರೀ ಕೇಳಕರ್, ಎಮ್, ಎ, ಅವರು ಒಂದು ಊಹೆಯನ್ನು ಮಂಡಿಸಿದ್ದಾರೆ. ಅದು ಮುಂದಿನಂತಿದೆ. "ಲಾ ಪ್ರತ್ಯಯದ ಕುರಿತು ತುಂಬಾ ಮತಭೇದವಿದೆ. ಆದರೆ ಅದರಲ್ಲಿಯೂ "ಲಾಗೀಂ" ಎಂಬ ಶಬ್ದದಿಂದ ಅದರ ಉತ್ಪತ್ತಿಯಾಗಿರಬಹುದು. ಸಂಸ್ಕೃತದ ಷಷ್ಠೀ ಬಹುವಚನ ಪ್ರತ್ಯಯ "ನಾಮ್" ದಿಂದ ಮರಾಠಿಯೊಳಗೆ "ನಾ" ಪ್ರತ್ಯಯವು ಬಂತು. ಮತ್ತು "ಅಂತೇ" ಈ ನಾಮರೂಪದಿಂದ "ತೇ" ಬಂದಿರಬೇಕು" ಆದರೆ ಪ್ರತ್ಯಯವು "ತೇ" ಆಗಿರದೇ "ತೇಂ" ಎಂದಿರುತ್ತದೆ. "ಲಾಗೀಂ' ಪ್ರತ್ಯಯವು ಮರಾಠಿಯಲ್ಲಿ ಇಂದಿಗೂ ಇದೆ. ಸಂಸ್ಕೃತದ "ನಾಮ್" ಪ್ರತ್ಯಯವು "ನಾ" ಎಂಬ ರೂಪದಲ್ಲಿ ಯಾವುದೊಂದು ಪ್ರಾಕೃತದಲ್ಲಿಯೂ ಬಳಸಲ್ಪಟ್ಟಿಲ್ಲ. ಮಾತ್ರವಲ್ಲ ಜ್ಞಾನೇಶ್ವರಿಯಲ್ಲಿ "ಲಾ" ಮತ್ತು "ನಾ" ಬಳಸಲ್ಪಟ್ಟಿಲ್ಲವೆಂಬುದೂ ಗಮನಾರ್ಹವಾಗಿದೆ. ಅಂದರೆ ಲಾ ಮತ್ತು ನಾ ಪ್ರತ್ಯಯಗಳೆರಡೂ ಬಹಳ ಅರ್ವಾಚೀನ ಪ್ರಯೋಗಗಳೆಂದು ತೋರುತ್ತದೆ. ಅವುಗಳ ಮೂಲವು ಕೊಂಕಣಿಯ "ಲೊ" ಪ್ರತ್ಯಯವೇ ಹೊರತು ಬೇರೆ ಯಾವುದೂ ಅಲ್ಲ.

## ೩. ತೃತೀಯಾ ವಿಭಕ್ತಿ

ಕೊಂಕಣಿಯಲ್ಲಿ ಹಾಂವ ಮತ್ತು ತುಂವ ಎಂಬ ಸರ್ವನಾಮಗಳ ತೃತೀಯಾ ವಿಭಕ್ತಿಯ ಏಕವಚನಗಳು ಹಾಂವೆ ಮತ್ತು ತುಂವೆ ಎಂತಲೂ ಬಹುವಚನಗಳು ಆಮುಹಿಂ ಮತ್ತು ತುಮುಹಿಂ ಎಂತಲೂ ಇವೆ. ಮತ್ತು ಮರಾಠಿಯಲ್ಲಿ ಏಕ ವಚನಗಳು ಮ್ಯಾಂ ಮತ್ತು ತ್ವಾಂ ಎಂತಲೂ, ಬಹುವಚನಗಳು ಆಮ್ಹೀಂ ಮತ್ತು ತುಮ್ಹೀಂ ಎಂತಲೂ ಇವೆ. ಪದ್ಯಗಳಲ್ಲಿ ಮ್ಯಾಂ ಮತ್ತು ತ್ವಾಂ ಗಳು ಮಿಯಾಂ ಮತ್ತು ತುಂವಾಂ ಎಂಬ ರೂಪಗಳಲ್ಲಿ ಬಳಸಲ್ಪಟ್ಟಿವೆ.

ಕೊಂಕಣಿಯಲ್ಲಿನ ತುಂವೆಂ ಎಂಬ ರೂಪವು ಪ್ರಾಕೃತದಲ್ಲಿನ "ತುಮೇ" ಎಂಬುದರ ರೂಪಾಂತರವಾಗಿರುತ್ತದೆ. ಮತ್ತು ಸೇತುಬಂಧ ಕಾವ್ಯದಲ್ಲಿ "ತುಮೇ" ಎಂಬ ರೂಪವೇ ಬಳಸಲ್ಪಟ್ಟದೆ. ಉದಾ:—ಸಂಸ್ಕೃತ—ತ್ವಯಾ ಏವ ಸ್ಥಾಪಿತಮ್ = ಸೇತುಬಂಧ; ತುಮೇ ಚಿ ಅ ಠವಿಅಂ=ಕೊಂಕಣಿ; ತುಂವೇಂಚಿ ಠಇಲ್ಲೆಂ=ನೀನೇ ಇಟ್ಟದ್ದು. ಸಂಸ್ಕೃತ ಶಬ್ದಗಳಲ್ಲಿನ "ಮ"ಕಾರವು ಕೊಂಕಣಿ ಯಲ್ಲಿ ಸಾಮಾನ್ಯವಾಗಿ "ಂವ" ಎಂದು ಮಾರ್ಪಡುತ್ತದೆ. ಉದಾ:-ಭ್ರಮ್= ಭೊಂವ್=ತಿರುಗಾಡು, ತಿರುಗು; ಘುಮ್=ಘುಂವ್; ತ್ವಮ್=ತುಂವ್ ಸಂಕ್ರಮ=ಸಾಂಕವ ಇತ್ಯಾದಿ. ತುಂವ್ ಎಂಬ ಶಬ್ದದೊಂದಿಗೆ ಏಂ ಕೂಡಿದರೂ ತುಂವೇಂ ಎಂಬ ರೂಪ ಸಿದ್ಧಿಸುತ್ತದಾದರೂ ತುಂವೇಂ ಎಂಬುದರ ಮೂಲವು ಪ್ರಾಕೃತದಲ್ಲಿನ "ತುಮೇ" ಎಂಬುದರಲ್ಲಿ ಸಂದೇಹವಿಲ್ಲ.

ಹಾಂವ್, ತುಂವ್, ಮತ್ತು ಕೋಣ=ಯಾರು? ಎಂಬ ಶಬ್ದಗಳಿಗೆ ಕರ್ಮಾರ್ಥಕ ಭೂತಕಾಲಿಕ ಪ್ರಯೋಗಗಳಲ್ಲಿ "ಏಂ" ಪ್ರತ್ಯಯವೂ ಇತರ ಸರ್ವ ನಾಮ ಶಬ್ದಗಳಿಗೆ "ಣೆಂ" ಪ್ರತ್ಯಯವೂ. ಇತರ ನಾಮಪದಗಳ ಏಕವಚನದಲ್ಲಿ ನ ಇಲ್ಲವೇ ನೇಂ ಪ್ರತ್ಯಯವೂ ಬಹುವಚನದಲ್ಲಿ ನಿಂ ಪ್ರತ್ಯಯವೂ ಬರುತ್ತದೆ. ಆಮು ಮತ್ತು ತುಮು ಶಬ್ದಗಳ ತರುವಾಯ ಹಿಂ ಪ್ರತ್ಯಯವೂ ಇತರ ಸರ್ವ ನಾಮಗಳಿಗೆ ಬಹುವಚನದಲ್ಲಿ ನ್ಹಿಂ ಪ್ರತ್ಯಯವೂ ಬರುತ್ತದೆ. ಮರಾಠಿಯ ನಾಮಪದಗಳಿಗೆ ಏಕವಚನದಲ್ಲಿ ನೇಂ ಮತ್ತು ಬಹುವಚನದಲ್ಲಿ ನೀಂ ಪ್ರತ್ಯಯ ಬರುತ್ತದೆ. ಸರ್ವನಾಮಗಳಿಗೆ ಬಹುವಚನದಲ್ಲಿ "ಹೀಂ" ಬರುವುದೂ ಉಂಟು. ಅರ್ಥಾತ್ ಕೊಂಕಣಿ ಮತ್ತು ಮರಾಠಿಗಳ ತೃತೀಯಾ ವಿಭಕ್ತಿಯ ಪ್ರತ್ಯಯಗಳು ಸಾಧಾರಣ ಸಮಾನವಾಗಿರುತ್ತವೆನ್ನಬಹುದು.

ಹಿಂದೆ ಹೇಳಿದ ನ, ನೇಂ. ನಿಂ. ಹಿಂ ಮೊದಲಾದ ತೃತೀಯಾ ವಿಭಕ್ತಿಯ ಪ್ರತ್ಯಯಗಳು ಪ್ರಾಣಿಗಳ ಇಲ್ಲವೇ ಮನುಷ್ಯರ ಹೆಸರುಗಳೊಂದಿಗೆ ಸಕರ್ಮಕ

ಕ್ರಿಯೆಗಳ ಭೂತಕಾಲಿಕ ಪ್ರಯೋಗಗಳಲ್ಲಿ ಬಂದಾಗ ಅವುಗಳಿಗೆ ಕರಣ ಕಾರಕದ ಅರ್ಥವು ಇರುವುದಿಲ್ಲ. ಅಂದರೆ ಕರ್ತೃವು ತೃತೀಯಾ ವಿಭಕ್ತಿಯ "ನ" ಮೊದಲಾದ ಪ್ರತ್ಯಯಗಳಿಂದ ಕೂಡಿದ್ದರೂ, ಕನ್ನಡದಲ್ಲಿ ಅದರ ಅರ್ಥವು ಪ್ರಥಮಾ ವಿಭಕ್ತಿಯಂತೆಯೇ ಇರುತ್ತದೆ. ಏಕೆಂದರೆ ಕೊಂಕಣಿಯಲ್ಲಿ ಭೂತ ಕಾಲಿಕ ಕ್ರಿಯಾರೂಪಗಳೆಲ್ಲವೂ ಸಂಸ್ಕೃತದಲ್ಲಿನ ಭೂತಕಾಲಿಕ ಕೃದಂತಗಳಿಂದಲೇ ಮಾರ್ಪಾಟು ಹೊಂದಿ ಬಂದವುಗಳಾದುದರಿಂದ ಸಕರ್ಮಕ ಕ್ರಿಯೆಗಳ ಅಧಿಕಾಂಶ ಭೂತಕಾಲಿಕ ರೂಪಗಳು ಸಂಸ್ಕೃತದಂತೆಯೇ ತೃತೀಯಾ ವಿಭಕ್ತಿಯ ಕರ್ತೃವಿ ನೊಂದಿಗೆ ಬಳಸಲ್ಪಡುತ್ತವೆ. ಅಂದರೆ ಅಂಥ ವಾಕ್ಯಗಳು ಮೂಲ ಸಂಸ್ಕೃತದಲ್ಲಿ ಕರ್ಮಣಿ ಪ್ರಯೋಗ ಅಥವಾ ಕರ್ಮವಾಚ್ಯಗಳಾಗಿದ್ದರೂ, ಕೊಂಕಣಿಯಲ್ಲಿನ ರೂಢಿಯ ಬಲದಿಂದ ಅವುಗಳು ಕರ್ತೃವಾಚ್ಯದಂತಾಗಿ ಬಿಟ್ಟಿವೆ. ಉದಾ:-ಸಂಸ್ಕೃತದ "ರಾಮೇಣ ವ್ಯಾಘ್ರೋ ಮಾರಿತಃ" ಎಂಬ ವಾಕ್ಯವು "ಕೊಂಕಣಿಯಲ್ಲಿ ರಾಮಾನ ವಾಘೊ (ಘು) ಮಾರಿಲೊ" ಎಂದಾಗುತ್ತದೆ. ಸಂಸ್ಕೃತ ವಾಕ್ಯದ ಅರ್ಥವು "ರಾಮನಿಂದ ಹುಲಿಯು ಕೊಲ್ಲಲ್ಪಟ್ಟಿತು." ಎಂದಾಗುತ್ತದಾದರೂ—ಕೊಂಕಣಿ ವಾಕ್ಯವು ಕನ್ನಡದಲ್ಲಿನ "ರಾಮನು ಹುಲಿಯನ್ನು ಕೊಂದನು" ಎಂಬ ವಾಕ್ಯಕ್ಕೆ ಸರಿಯಾಗಿರುತ್ತದೆ. ಅಂದರೆ "ರಾಮನು ಹುಲಿಯನ್ನು ಕೊಂದನು" ಎಂಬ ಕನ್ನಡ ವಾಕ್ಯವನ್ನು ಕೊಂಕಣಿಯಲ್ಲಿ ಬೇರೆ ರೀತಿಯಿಂದ ರಚಿಸಲು ಸಾಧ್ಯವಿಲ್ಲ. ಸಂಸ್ಕೃತ ದಲ್ಲಿನ ಕರ್ಮಣಿ ಪ್ರಯೋಗವು ಕೊಂಕಣಿಯಲ್ಲಿ ಕರ್ತರಿ ಪ್ರಯೋಗದಂತೆ ಬಳಕೆಗೆ ಬಂದುದರಿಂದ ಕೊಂಕಣಿಯಲ್ಲಿ ಶುದ್ಧ ಕರ್ಮಣಿ ಪ್ರಯೋಗವು ಸಾಧ್ಯವಿಲ್ಲ. ಮತ್ತು ಕರ್ಮಣಿ ಪ್ರಯೋಗವನ್ನು ಮಾಡುವುದಾದರೂ ಸುತ್ತಿ ಬಳಸಿ ಮಾಡ ಬೇಕಾಗುತ್ತದೆ. ಹೀಗೆ ತೃತೀಯಾ ವಿಭಕ್ತಿ ಪ್ರತ್ಯಯಗಳು ಹಿಂದೆ ವಿವರಿಸಿದ ಕಾರಣದಿಂದಾಗಿ ತಮ್ಮ ಕರಣಾರ್ಥವನ್ನು ಕಳೆದುಕೊಳ್ಳುವುದರಿಂದ ಪ್ರಾಣಿ ಮತ್ತು ಮನುಷ್ಯರ ಹೆಸರುಗಳೊಂದಿಗೆ ನ, ನಿಂ, ಮೊದಲಾದ ಪ್ರತ್ಯಯಗಳ ಬದಲಿಗೆ ಕರಣಾರ್ಥದಲ್ಲಿ ಪಂಚಮೀ ವಿಭಕ್ತಿಯ "ಚೆ ಊನ" ಎಂಬ ಸಂಯುಕ್ತ ಪ್ರತ್ಯಯವನ್ನು "ಚ್ಯಾನ" ಎಂಬುದಾಗಿ ಮಾರ್ಪಡಿಸಿ ತೃತೀಯಾ ವಿಭಕ್ತಿಯಲ್ಲಿ ಬಳಸಲಾಗುತ್ತದೆ. ಉದಾ:–ರಾಮಾಚ್ಯಾನ ಹೆಂ ಕಾಮು ಜಾಇನಾ=ರಾಮನಿಂದ ಈ ಕೆಲಸ ಆಗುವುದಿಲ್ಲ. ಕೊಂಕಣಿಯಲ್ಲಿನ ಈ "ಚ್ಯಾನ" ಎಂಬ ಪ್ರತ್ಯಯವು ಮರಾಠಿಯಲ್ಲಿ "ಚ್ಯಾನೇಂ" ಎಂಬ ರೂಪದಲ್ಲಿ ಬಳಸಲ್ಪಡುತ್ತದೆ. ಆದರೆ ಕೊಂಕಣಿಯಲ್ಲಿನ "ಚ್ಯಾನ" ಎಂಬ ರೂಪವು ಶುದ್ಧವಾಗಿರುವುದಲ್ಲದೇ ಅದರ ಮೂಲವು "ಚೆ ಊನ" ಎಂಬುದೇ ಆಗಿರುತ್ತದೆ. ಮರಾಠಿಯಲ್ಲಿ "ಚೆ ಊನ"

ಎಂಬ ಪ್ರಯೋಗವಿಲ್ಲ. ಮರಾಠಿಯ "ತೋ" ಸರ್ವನಾಮದ ಪಂಚಮಿೀ ವಿಭಕ್ತಿಯಲ್ಲಿ ತ್ಯಾಹೂನ ಇಲ್ಲವೇ ತ್ಯಾಚ್ಯಾಹೂನ ಎಂಬ ರೂಪಗಳಿವೆ. ಆದರೆ ತೃತೀಯಾ ವಿಭಕ್ತಿಯಲ್ಲಿ ಮಾತ್ರ "ತ್ಯಾಚ್ಯಾನೇಂ" ಎಂಬ ರೂಪವಿದೆ. ಅದರಲ್ಲಿನ "ನೇಂ"ಯು ಮೊದಲು "ಚ್ಯಾ" ಹೇಗೆ ಮತ್ತು ಏಕೆ ಬಂತೆಂದು ಮರಾಠಿ ಪಂಡಿತರು ಸಮರ್ಪಕವಾಗಿ ವಿವರಿಸಲಾರರು. ಕೊಂಕಣಿಯಲ್ಲಿ "ತೋ" ಸರ್ವನಾಮದ ಪಂಚಮೀ ವಿಭಕ್ತಿಯ ರೂಪವು ತಾಜೆ ಊನ ಮತ್ತು ತಾಜೆ ಸೂನ ಎಂದು ಎರಡು ರೀತಿಯಲ್ಲಿರುತ್ತದೆ. ಮತ್ತು ತೃತೀಯಾ ವಿಭಕ್ತಿಯಲ್ಲಿ "ತಾಜ್ಯಾನ" ಎಂಬ ರೂಪವಿದೆ. ಅನ್ನುವಾಗ "ತಾಜೆ ಊನ" ಇದ್ದುದನ್ನೇ "ತಾಜ್ಯಾನ" ಎಂದು ಮಾರ್ಪಡಿಸಲಾಗಿದೆಯೆಂಬುದು ತಾನಾಗಿ ಹೊಳೆಯುತ್ತದೆ. ಅಂದರೆ ಮರಾಠಿಯ ಲ್ಲಿನ ಪ್ರಯೋಗದ ಮೂಲವು ಕೊಂಕಣಿಯೇ ಆಗಿತ್ತೆಂಬುದು ಸಿದ್ಧವಾಗುತ್ತದೆ.

ಲಾಗಿ ಅಥವಾ ಲಾಗಿಂ ಎಂಬುದು ಮೂಲದಲ್ಲಿ–ಸಮೀಪದಲ್ಲಿ ಮತ್ತು ಸಂಬಂಧದಲ್ಲಿ ಎಂಬ ಎರಡು ಅರ್ಥಗಳ ಶಬ್ದವಾಗಿರುತ್ತದೆ. ಆದರೆ ಈಗ ಅದು ಹತ್ತಿರೆ ಇಲ್ಲವೇ ಒಂದಿಗೆ ಎಂಬ ಅರ್ಥದಲ್ಲಿ ಮಾತ್ರ ಬಳಸಲ್ಪಡುತ್ತದೆ. ಮತ್ತು ಸಂಸ್ಕೃತದಲ್ಲಿನ ಸಮೀಪದ ಪ್ರದೇಶ ಎಂಬ ಅರ್ಥದ "ಕಟ" ಶಬ್ದದ ಸಪ್ತಮೀ ವಿಭಕ್ತಿಯ "ಕಟೇ" ಎಂಬ ರೂಪವು ಕೊಂಕಣಿಯಲ್ಲಿ "ಕಡೆ" ಎಂಬ ರೂಪದಲ್ಲಿ–ಲಾಗಿಂ ಎಂಬ ಅರ್ಥವಲ್ಲಿಯೇ ಬಳಸಲ್ಪಡುತ್ತದೆ. ಈ "ಕಡೆ" ಎಂಬ ಶಬ್ದವು ಕನ್ನಡದಲ್ಲಿನ "ಕಡೆ=ದಿಕ್ಕು" ಎಂಬರ್ಥದ ಶಬ್ದವಲ್ಲ. ಘರಕಡೆ=ಘರಲಾಗಿ= ಮನೆಯಲ್ಲಿ; ತಾಜೆಲಾಗಿ=ತಾಜೆಕಡೆ=ಅವನೊಡನೆ. ಇದನ್ನು ತಾಜಲಾಗಿ, ತುಜಲಾಗಿ ಎಂಬಂತೆಯೂ ಬಳಸುತ್ತಾರೆ. ಮರಾಠಿಯಲ್ಲಿ ಲಾಗಿಂ ಎಂಬ ಶಬ್ದವು ಸಲುವಾಗಿ ಎಂಬರ್ಥವಲ್ಲಿ ಬಳಸಲ್ಪಡುತ್ತದೆ.

## ೮. ಪಂಚಮೀ ವಿಭಕ್ತಿ

ಕೊಂಕಣಿಯ ಪಂಚಮೀ ವಿಭಕ್ತಿಯಲ್ಲಿ ಸೂನ, ಹೂನ ಮತ್ತು ಊನ ಎಂಬ ಮೂರು ಪ್ರತ್ಯಯಗಳು ಬರುತ್ತವೆ. "ಸೂನ" ಎಂಬುದು ಮೂಲ ರೂಪವಾಗಿದ್ದು. ಹೂನ ಮತ್ತು ಊನ ಎಂಬವುಗಳು ಸೂನ ಎಂಬುದರ ರೂಪಾಂತರಗಳಾಗಿರುತ್ತವೆ. ಪ್ರಾಕೃತದಲ್ಲಿನ ಸುಂತೋ ಮತ್ತು ಹಿಂತೋ ಎಂಬ ಪ್ರತ್ಯಯಗಳು ಕೊಂಕಣಿಯಲ್ಲಿ ಸೂನ ಮತ್ತು ಹಿಂ ಎಂದು ಮಾರ್ಪಟ್ಟಿದ್ದ ವೆಂದು ಈಗಿನ ಪ್ರಯೋಗಗಳ ಮೇಲಿಂದ ಹೇಳಬೇಕಾಗಿದೆ. ಹಿಂ ಪ್ರತ್ಯಯದ ಪ್ರಯೋಗವು ತೃತೀಯಾ ವಿಭಕ್ತಿಯಲ್ಲಾಗುತ್ತದೆ. ತೃತೀಯಾ ಮತ್ತು ಪಂಚಮೀ

ವಿಭಕ್ತಿಗಳಲ್ಲಿನ ಭೇದವು ಬಹಳ ಸೂಕ್ಷ್ಮವಾಗಿರುತ್ತದೆ. ಉಪಾದಾನ ಮತ್ತು ಉಪಕರಣದ ಅರ್ಥದಲ್ಲಿ ತೃತೀಯಾ ವಿಭಕ್ತಿಯು ಬರುತ್ತದೆ. ಒಂದರಿಂದ ಇನ್ನೊಂದನ್ನು ಬೇರ್ಪಡಿಸುವಲ್ಲಿ ಮತ್ತು ತುಲನಾತ್ಮಕ ವಿಭಾಗದಲ್ಲಿ ಪಂಚಮೀ ವಿಭಕ್ತಿ ಬರುತ್ತದೆ. ಉದಾ:– ಹಲಗೆಯಿಂದ ಪೆಟ್ಟಿಗೆಯನ್ನು ತಯಾರಿಸುತ್ತಾರೆ. ರಾಮನು ಬೆತ್ತದಿಂದ ಹೊಡೆಯುತ್ತಾನೆ. ಮೊದಲನೆಯ ವಾಕ್ಯದಲ್ಲಿ ಹಲಗೆಯು ಉಪಾದಾನವಾಗಿರುತ್ತದೆ. ಎರಡನೆಯ ವಾಕ್ಯದಲ್ಲಿ ಬೆತ್ತವು ಉಪಕರಣವಾಗಿರುತ್ತದೆ. ಶರೀರದಿಂದ ಶಿರಸ್ಸನ್ನು ಬೇರ್ಪಡಿಸಿದನು. ಅವನು ಇಂದು ಊರಿನಿಂದ ಹೊರಡುವನು. ಮರದಿಂದ ಹಣ್ಣು ಬಿತ್ತು. ಈ ಮೂರು ವಾಕ್ಯಗಳಲ್ಲಿ, ಶರೀರದಿಂದ, ಊರಿನಿಂದ ಮತ್ತು ಮರದಿಂದ ಎಂಬ ಶಬ್ದಗಳು ಪಂಚಮೀ ವಿಭಕ್ತಿಯಲ್ಲಿವೆ. ಕೊಂಕಣಿಯಲ್ಲಿ ಆ ವಾಕ್ಯಗಳು ಮುಂದಿನಂತಾಗುತ್ತವೆ:— ಧಡಾಸೂನ ಶಿರಸ್ಸ ವೆಗಳೆಂ ಕೆಲೆಂ. ತೊ ಆಜಿ ಗಾಂವಾಹೂನ ಭಾಇರ ಸರತಲೊ. ರುಕ್ಕಾರಿಸೂನ ಫಳ ಪಡಲೆಂ. ಮರಾಠಿಯ ಪಂಚಮೀ ವಿಭಕ್ತಿಯಲ್ಲಿ ಕೊಂಕಣಿ ಪ್ರತ್ಯಯಗಳೇ ಬಳಸಲ್ಪಡುತ್ತವೆ. ತುಲನೆಯಲ್ಲಿ ಪಾಸೂನ ಮತ್ತು ಪಕ್ಷಿಂ ಇಲ್ಲವೇ ಪಶಿಂ ಎಂಬ ಶಬ್ದಗಳು ಬರುತ್ತವೆ.

## ೫. ಷಷ್ಠೀ ವಿಭಕ್ತಿ

ಮೂಲ ಷಷ್ಠೀ ವಿಭಕ್ತಿಯ ಪ್ರತ್ಯಯಗಳನ್ನು ದ್ವಿತೀಯಾ ಮತ್ತು ಚತುರ್ಥೀ ವಿಭಕ್ತಿಗಳಲ್ಲಿ ಬಳಸತೊಡಗಿದುದರಿಂದ – ಅವುಗಳನ್ನು ಷಷ್ಠೀ ವಿಭಕ್ತಿಯಲ್ಲಿ ಬಳಸಿದರೆ ಅರ್ಥದಲ್ಲಿ ಹುಟ್ಟಬಹುದಾದ ಗೊಂದಲವನ್ನು ನಿವಾರಿಸಲಿಕ್ಕಾಗಿಯೂ, ವಸ್ತುಗಳ ಒಡೆತನವನ್ನು ಸೂಚಿಸಲಿಕ್ಕಾಗಿಯೂ ಷಷ್ಠೀ ವಿಭಕ್ತಿಯ ಅರ್ಥವನ್ನೇ ಸೂಚಿಸುವ ಬೇರೊಂದು ಪ್ರತ್ಯಯವನ್ನು ಕಂಡು ಕೊಳ್ಳಬೇಕಾಯಿತು. ಸಂಸ್ಕೃತದಲ್ಲಿ ಇಂಥ ಪ್ರತ್ಯಯಗಳಿಗೇನೂ ಕೊರತೆಯಿರಲಿಲ್ಲ.

ಆಚಾರ್ಯ ಪಾಣಿನಿಯ ಪ್ರತ್ಯಯೋತ್ತರ ಪದಯೋಶ್ಚ ॥ ೭-೨-೯೮ ॥ ಯುಷ್ಮದಸ್ಮದೋರನ್ಯತರಸ್ಯಾಂ ಖಂ ಚ ॥ ೪-೩-೧ ॥ ತಸ್ಮಿನ್ನಣಿಚಯುಷ್ಮಾಕಾಸ್ಮಾಕೌ ॥ ೪-೩-೨ ॥ ತವಕಮಮಕಾವೇಕವಚನೇ ॥ ೪-೩-೩ ॥ ಮುಂತಾದ ಸೂತ್ರಗಳಿಂದ ವಿಶೇಷಣಗಳಂತೆ ಬಳಸಬಹುದಾದ ಶಬ್ದಗಳ ಒಂದು ಮಾಲೆಯೇ ಸಿದ್ಧವಾಯಿತು. ಮದೀಯಃ = ನನ್ನ, ಅಸ್ಮದೀಯಃ = ನಮ್ಮ, ತ್ವದೀಯಃ = ನಿನ್ನ, ಯುಷ್ಮದೀಯಃ = ನಿಮ್ಮ, ಮಾಮಕಃ = ನನ್ನ, ಆಸ್ಮಾಕಃ = ನಮ್ಮ, ತಾವಕಃ = ನಿನ್ನ, ಯೌಷ್ಮಾಕಃ = ನಿಮ್ಮ, ಮಾಮಕೀನಃ = ನನ್ನ, ಆಸ್ಮಾಕೀನಃ =

ನಮ್ಮ, ತಾವಕೀನಃ =ನಿನ್ನ. ಯೌಷ್ಮಾಕೀನಃ =ನಿಮ್ಮ ಮುಂತಾದ ರೂಪಗಳು ಆ ಸೂತ್ರಗಳಿಂದಾಗಿ ದೊರೆತವು. ಈ ರೂಪಗಳೇ ಕಾಲಕ್ರಮೇಣ ಕೊಂಕಣಿಯಲ್ಲಿ ಮುಂದಿನಂತೆ ಮಾರ್ಪಟ್ಟವು:— ಮದೀಯಃ =ಮಇಜೊ =ಮೆಜೊ ಇಲ್ಲವೇ ಮಜೊ, ಅಸ್ಮದೀಯಃ =ಅಮ್ಹುಜೊ =ಅಮ್ಹುಚೊ. ತ್ವದೀಯಃ = ತುಜೊ, ಯುಷ್ಮದೀಯಃ - ತುಮ್ಹುಜೊ =ತುಮ್ಹುಚೊ. ಮಾಮಕೀನಃ = ಮಕೇಲೊ = ಮೆಗೆಲೊ ಇಲ್ಲವೇ ಮಗೆಲೊ. ಆಸ್ಮಾಕೀನಃ =ಅಮ್ಹಾಕೇಲೊ = ಅಮ್ಹಾಗೆಲೊ ಇಲ್ಲವೇ ಅಮ್ಹುಗೆಲೊ. ತಾವಕೀನಃ =ತುಕೇಲೋ =ತುಗೆಲೊ, ಯೌಷ್ಮಾಕೀನಃ =ತುಮ್ಹಾಕೇಲೊ = ತುಮ್ಹಾಗೆಲೊ ಇಲ್ಲವೇ ತುಮ್ಹುಗೆಲೊ.

"ಕೇಲೊ" ಎಂಬ ಪ್ರತ್ಯಯವು ಉತ್ತರ ಭಾರತದಲ್ಲಿನ ಗುಜರಾತೀ ಮತ್ತು ಹಿಂದೀ ಭಾಷೆಗಳಲ್ಲಿ "ಕೇರೋ" ಆಗಿ ಮಾರ್ಪಟ್ಟಿತ್ತು. ಅದನ್ನು ಕಂಡ ಹೇಮಚಂದ್ರನು ತನ್ನ ವ್ಯಾಕರಣದಲ್ಲಿ "ಇದಮರ್ಥಸ್ಯಕೇರಃ ॥ ೮-೨-೧೪೭ ॥" ಎಂಬ ಸೂತ್ರವನ್ನೂ, ಕೊಂಕಣಿಯಲ್ಲಿನ ಅಮ್ಹುಚೆಂ, ಅಮ್ಹುಚೊ ಮುಂತಾದ ರೂಪಗಳನ್ನು ಕಂಡು "ಯುಷ್ಮದಸ್ಮದೊ ಇ ಏಚ್ಚಯಂ ॥ ೮-೨-೧೪೯ ॥ ಎಂಬ ಸೂತ್ರವನ್ನೂ ರಚಿಸಿದನೆನ್ನಬಹುದು. ಆ ಸೂತ್ರಗಳಂತೆ ಅಮ್ಹುಕೇರೋ, ತುಮ್ಹುಕೇರೋ, ಅಮ್ಹೇಚ್ಚಯಂ, ತುಮ್ಹೇಚಯಂ ಎಂಬ ರೂಪಗಳು ಸಿದ್ಧಿಸುತ್ತವೆ. ಅವುಗಳ ಮೇಲಿಂದ ಹೇಮಚಂದ್ರನ ಕಾಲದಲ್ಲಿ ಕೊಂಕಣಿಯ ರೂಪಗಳು ಅವನು ಹೇಳಿದ ರೂಪಗಳಲ್ಲಿ ಬಳಸಲ್ಪಡುತ್ತಿದ್ದಿರಬಹುದೆಂದು ಅನುಮಾನಿಸಬಹುದು. ಆದರೆ ಅವನಿಗೆ ಆ ಪ್ರತ್ಯಯಗಳ ಪೂರ್ಣ ಪರಿಚಯವಿರಲಾರದೆಂದು ಅವನು ಆ ಶಬ್ದಗಳ ಏಕವಚನ ರೂಪಗಳನ್ನು ಕೊಡದಿರುವುದರ ಮೇಲಿಂದ ಹೇಳಬಹುದಾಗಿದೆ. ಹಿಂದೆ ವಿವರಿಸಿದಂತೆ— ಮರಾಠಿಯಲ್ಲಿ "ಲಾ" ಪ್ರತ್ಯಯವು ಕಂಡುಬಂದರೂ "ಗೆಲೊ" ಪ್ರತ್ಯಯ ಕಂಡುಬರುವುದಿಲ್ಲವಾದುದರಿಂದ ಗೆಲೊ ಪ್ರತ್ಯಯದ ಬಳಕೆಯು ವಿದರ್ಭ ಪ್ರದೇಶದಲ್ಲಿ ಇರಲಿಲ್ಲವೆಂದು ಹೇಳಬಹುದು. ಅಂದರೆ ಕೊಂಕಣಿಯಿಂದ ಮರಾಠಿಯೆಂಬ ಕವಲೊಡೆದುದು ವಿದರ್ಭದಲ್ಲಿಯೇ ಎಂದು ನನ್ನ ದೃಢವಾದ ನಂಬಿಕೆಯಾಗಿರುತ್ತದೆ.

## ೬. ಸಪ್ತಮೀ ವಿಭಕ್ತಿ

ಪ್ರಾಚೀನ ಕೊಂಕಣಿಯಲ್ಲಿ ಸಪ್ತಮೀ ವಿಭಕ್ತಿಯ ಏಕವಚನ ಪ್ರತ್ಯಯಗಳು "ಅಂ, ಆಇಂ, ಇ, ಇಂ, ಎ, ಎಂ" ಎಂಬುದಾಗಿಯೂ, ಬಹುವಚನದಲ್ಲಿ "ತು" ಎಂಬ ಪ್ರತ್ಯಯವೂ ಇದ್ದಿತೆಂದು ಈಗ ಉಪಸ್ಥಿತವಿರುವ ರೂಪಗಳ ಮೇಲಿಂದ

ಹೇಳಬಹುದಾಗಿದೆ, "ತು" ಎಂಬುದು ಸಂಸ್ಕೃತದಲ್ಲಿನ "ಸು" ಪ್ರತ್ಯಯದ ರೂಪಾಂತರವಾಗಿತ್ತು. ಪ್ರಾಚೀನ ಕಾಲದಲ್ಲಿ ಸಪ್ತಮೀ ವಿಭಕ್ತಿಯ ರೂಪಗಳು ಮುಂದಿನಂತಾಗುತಿದ್ದಿರಬೇಕು. ಘರಿಂ = ಮನೆಯಲ್ಲಿ, ಘರಾಂತು = ಮನೆಗಳಲ್ಲಿ. ಈ ಹೇಳಿಕೆಗೆ ಆಧಾರವಾಗಿ ಕೊಂಕಣಿಯಲ್ಲಿ ಇಂದಿಗೂ ಬಳಕೆಯಲ್ಲಿರುವ ಹಲವು ಸಪ್ತಮ್ಯಂತ ಶಬ್ದಗಳನ್ನು ಉದಹರಿಸಬಹುದು. ಉದಾ:— ಉದಯಾಂ = ಬೆಳಗಾತ ಇಲ್ಲವೇ ನಾಳೆ. ದೊನ್‌ಪಾರಾಂ = ಮಧ್ಯಾಹ್ನ ಹೊತ್ತಿನಲ್ಲಿ ಅಂದರೆ "ಎರಡು ಪ್ರಹರಗಳ ಸಮಯದಲ್ಲಿ. ಪಂತಾಂ = ಸರ್ತಿ ( = ಪದಾಂ) ಪಾವಟಿ = ಸರ್ತಿ; ನಂತರಿ = ತರುವಾಯ; ಆದಿಂ = ಮೊದಲು; ಸಕಾಳಿಂ = ಬೆಳಗಾತ; ನಿಮಿತ್ತಿಂ = ಕಾರಣದಿಂದ: ಗುಣೆಂ = ಸಲುವಾಗಿ; ಪೂರ್ವಿಂ = ಪ್ರಾಚೀನಕಾಲದಲ್ಲಿ: ಸಾಂಜೆ = ಬೈಗುಹೊತ್ತಿನಲ್ಲಿ; ವೇಳೀ = ಹೊತ್ತಿನಲ್ಲಿ, ಸರ್ತಿ; ವೇಳಿಂ = ಸಮಯದಲ್ಲಿ: ಮಣಕೆ = ಪ್ರಮಾಣೆಂ = ಪ್ರಮಾಣೆ = ಅಂತೆ. ಹಾಗೆ: ಉಪರಾಂತೆಂ = ತರುವಾಯ: ತುಮ್ಗೆಲೆ ಘರಿಂ = ತುಮ್ಗೆಘೇರಿ = ನಿಮ್ಮಲ್ಲಿ; ತಾಂಚೆ ಘರಿಂ = ತಾಂಘೇರಿ = ಅವರಲ್ಲಿ; ಆಮ್ಗೆಲೆಘರಿಂ = ಆಮ್ಗೆಘೇರಿ = ನಮ್ಮಲ್ಲಿ ಇತ್ಯಾದಿ.

ಆದರೆ ಸಂಸ್ಕೃತದಲ್ಲಿನ "ಅಂತಃ = ಒಳಗೆ" ಎಂಬ ಶಬ್ದದ ಕೊಂಕಣಿ ರೂಪವು "ಆಂತು" ಎಂದಾಗುವುದರಿಂದ ಅದೇ ಆಂತು ಶಬ್ದವು ಸಪ್ತಮೀ ವಿಭಕ್ತಿಯ ಬಹುವಚನದಲ್ಲಿ ಕೂಡಿರಬಹುದೆಂದು ಎಣಿಸಿದುದರ ಪರಿಣಾಮವಾಗಿ ಇಂದು ಸಪ್ತಮೀ ವಿಭಕ್ತಿಯ ಏಕವಚನ-ಬಹುವಚನಗಳೆರಡರಲ್ಲಿಯೂ ಆಂತು ಪ್ರತ್ಯಯವು ಕೂಡಿ ಎರಡು ರೂಪಗಳೂ ಸಮಾನವಾಗಿಬಿಟ್ಟವೆ. ಆಂತು ಶಬ್ದವನ್ನು ನಾಮಪದಕ್ಕೆ ಕೂಡಿಸಿ ಒಂದುಮಾಡದೇ ಬೇರೆಯಾಗಿ ಬಳಸಿದ ಹಲವು ವಾಕ್ಯಗಳು ಜ್ಞಾನೇಶ್ವರಿಯಲ್ಲಿ ಇವೆ. "ತೋ ಗಾಜತ ಅಸೇ। ದೋಹೀಂ ಸೈನ್ಯಾ ಆಂತು ॥ ೧-೧೨೬ ॥ ಅದು ಎರಡೂ ಸೈನ್ಯಗಳಲ್ಲಿ ಮೊಳಗುತಿತ್ತು; ತಂವ ಪಾಂಡವದಳಾ ಆಂತು ॥ ೧-೧೩೭ ॥ ಆಗ ಪಾಂಡವದಳದೊಳಗೆ ಇತ್ಯಾದಿ. ಈ ಆಂತು ಪ್ರತ್ಯಯವು ಬಳಕೆಗೆ ಬಂದ ತರುವಾಯ ಹಳೆಯ ಪ್ರಯೋಗಗಳು ನಿಂತುಹೋದವು.

ಆಂತು ಪ್ರತ್ಯಯವು ಬಳಕೆಗೆ ಬಂದ ತರುವಾಯ "ಒಳಗಿನಿಂದ" ಎಂಬ ಅರ್ಥವನ್ನು ಹೊರಡಿಸಲು ಆಂತು ಎಂಬುದರೊಂದಿಗೆ ಸೂನ, ಹೂನ ಮತ್ತು ಊನ ಎಂಬ ಪ್ರತ್ಯಯಗಳನ್ನು ಕೂಡಿಸಿ ಬಳಸಿದುದರಿಂದ, ತಸೂನ, ತಹೂನ, ತಲೂನ ಎಂಬ ರೂಪಗಳು ಹುಟ್ಟಿ ಅವುಗಳು ಕಾಲಕ್ರಮೇಣ ತಾಕೂನ.

ಘಾಸ್, ಘಾಉಸ ಮೊದಲಾಗಿ ಮಾರ್ಪಟ್ಟು ಈಗ ಎಲ್ಲ ಶಬ್ದಗಳೊಂದಿಗೆ ವಿವೇಚನೆ ಮಾಡದೇನೇ ಬಳಸಲ್ಪಡುತ್ತವೆ. ಅಂದರೆ ಘರಾಂತಸೂಸ, ಘರಾಂತಕೂಸ, ಘರಾಂತಪೂಸ, ಘರಾಂಘಾಉಸ, ಘರಾಂತಊಸ, ಘರಾಂತೂಸ ಎಂಬ ಪ್ರಯೋಗಗಳು ಭಾಷಾವಿಕಾಸ ದೃಷ್ಟಿಯಿಂದ ಸರಿಯಾಗಿಯೇ ಇವೆಯಾದರೂ ಅವುಗಳಲ್ಲಿರುವ "ತಕೂಸ" ಮೊದಲಾದ ಅಂಶಗಳನ್ನು ತಹಿಂ, ಕಹಿಂ, ಮುಂತಾದ ಶಬ್ದಗಳೊಂದಿಗೆ ಕೂಡಿಸಿ ತಹಿಂತಾಕೂಸ, ಕಹಿಂತಾಕೂಸ ಎಂದು ಬಳಸುವುದು ಸಂಪೂರ್ಣ ತಪ್ಪಾಗಿರುತ್ತದೆ. ಅವುಗಳನ್ನು ತಹಿಂಸೂಸ, ಕಹಿಂಸೂಸ ಮುಂತಾಗಿ ಬಳಸುವುದೇ ಸರಿಯಾಗಿರುತ್ತದೆ. ಹಾಗೆಯೇ "ರುಕ್ಕ್ಯಾರಿತಾಕೂಸ" ಎನ್ನುವುದು ತಪ್ಪಾಗಿರುತ್ತದೆ. ರುಕ್ಕ್ಯಾರಿಸೂಸ ಎನ್ನುವುದು ಸರಿಯಾಗಿರುತ್ತದೆ. ಹಿಂದೆ ಹೇಳಿದ ಅಂಶಗಳಲ್ಲಿ ಆಂತೂಸ್ ಮತ್ತು ತೂಸ್ ಎಂಬ ಅಂಶಗಳು ಮಾತ್ರ ಮರಾಠಿಯಲ್ಲಿ ಬಳಸಲ್ಪಡುತ್ತವೆ.

ಹಿಂದಿನ ವಿವರಣೆಯಿಂದ ಮರಾಠಿಯಲ್ಲಿನ ಒಂದು "ತೇಂ" ಎಂಬ ಪ್ರತ್ಯಯವನ್ನು ಬಿಟ್ಟು ಉಳಿದ ಎಲ್ಲ ವಿಭಕ್ತಿ ಪ್ರತ್ಯಯಗಳು ಕೊಂಕಣಿಯವುಗಳೇ ಎಂಬುದು ಸ್ಪಷ್ಟವಾಗಿ ಸಿದ್ಧವಾಗುತ್ತದೆ.

## ೧೮

## ಆಖ್ಯಾತ ರೂಪಗಳು

ಸಂಸ್ಕೃತದಲ್ಲಿ ಧಾತುಗಳು ಹತ್ತುಗಣಗಳಾಗಿ ವಿಭಾಗಿಸಲ್ಪಟ್ಟಿರುತ್ತವಲ್ಲದೇ, ಆಖ್ಯಾತ ಪ್ರತ್ಯಯಗಳು ಆತ್ಮನೇ (ತನಗಾಗಿ) ಮತ್ತು ಪರಸ್ಮೈ (ಬೇರೆಯವರಿಗಾಗಿ) ಎಂದು ಎರಡು ವರ್ಗಗಳಾಗಿವೆ. ಹಾಗೂ ಹತ್ತು ಕಾಲಾರ್ಥಗಳಿವೆ. ಅವುಗಳನ್ನೆಲ್ಲ ತಿಳಿದುಕೊಂಡು, ವ್ಯಾಕರಣದ ಸಂಧಿ ನಿಯಮಗಳಿಗನುಸಾರವಾಗಿ ಕ್ರಿಯಾಪದಗಳ ರೂಪಗಳನ್ನು ಸಿದ್ಧಗೊಳಿಸುವುದು ಸಂಪೂರ್ಣ ಅಷ್ಟಾಧ್ಯಾಯಿಯನ್ನು ಕಲಿತವರಿಗೆ ಕೂಡ ಕಷ್ಟಸಾಧ್ಯವಾಗಿರುತ್ತದೆ. ಹೀಗಿರುವಾಗ ವ್ಯಾಕರಣ ಕಲಿಯದವರಿಗೆ ಅದು ಅಸಾಧ್ಯವೇ ಸರಿ. ಆದ್ದರಿಂದ ಹಿಂದೆ ಸಂಸ್ಕೃತವು ತಾಯಿನುಡಿಯಾಗಿದ್ದ ಸಾಮಾನ್ಯ ಜನರು ಅಂದರೆ ವ್ಯಾಕರಣ ಕಲಿಯದವರು ತಮಗೆ ತಿಳಿದಿರುವ ಆಯಾ ಕಾಲದ ಕೃದಂತ ರೂಪದೊಂದಿಗೆ ಅಸ್ ಇಲ್ಲವೇ ಭೂ ಕ್ರಿಯೆಯ ಆಯಾ ಕಾಲದ ಆಖ್ಯಾತಗಳನ್ನು ಸಹಾಯಕ್ಕಾಗಿ ತೆಗೆದುಕೊಂಡು ತಮ್ಮ ಮಾತುಕತೆಯನ್ನು ಸುಲಭವಾಗಿ ಸಾಗಿಸುತ್ತಿದ್ದರು. ಹೀಗಿದ್ದುದ

ರಿಂದ ಇಂದು ಬಳಕೆಯಲ್ಲಿರುವ ಸಕಲ ಪ್ರಾಕೃತ ವಿಭೇದಗಳಲ್ಲಿನ ಆಖ್ಯಾತ ರೂಪಗಳ ಮೂಲದಲ್ಲಿ ಯಾವುದೊಂದು ಕೃದಂತವು ಇದ್ದೇಇರುತ್ತದೆ.

ಪೊರ್ತುಗೀಸರು ಗೋವವನ್ನು ಹಿಡಿಯುವ ಕಾಲದಲ್ಲಿ ಅಂದರೆ 1510 ನೆಯ ಇಸವಿಗಿಂತ ಮೊದಲು ಗೋವದಲ್ಲಿ ಬಳಕೆಯಲ್ಲಿದ್ದ ಕೊಂಕಣಿಯ ವರ್ತಮಾನಕಾಲಿಕ ಕ್ರಿಯಾರೂಪಗಳು ಇಂದಿನಂತೆ "ಹಾಂವಕರ್ತಾಂ" "ತೊಕರ್ತಾ" ಎಂದಿರದೇ "ಹಾಂವ ಕರಿತಾಂ" ತುಂವ್ ಕರಿತಾಸಿ, ತೊs ಕರಿತಾ ಇತ್ಯಾದಿ ಯಾಗಿದ್ದವೆಂದು ಪಾದ್ರಿ ಸ್ಟೀಫನ್ಸ್‌ರವರ ವ್ಯಾಕರಣದಿಂದಲೂ, ಕೊಚ್ಚಿಯಲ್ಲಿ ಇಂದಿಗೂ ಬಳಕೆಯಲ್ಲಿರುವ ಕೆಲವು ಪ್ರಯೋಗಗಳಿಂದಲೂ ತಿಳಿದುಬರುತ್ತದೆ. ಆದರೆ ವರ್ತಮಾನ ಕಾಲದಲ್ಲಿ "ತಾ" ಪ್ರತ್ಯಯದಿಂದ ಕೂಡಿದ ಕರಿತಾ, ಧರಿತಾ ಎಂಬಂಥ ರೂಪಗಳು ಗೋವದಲ್ಲಿ ಎಂದಿನಿಂದ ಬಳಕೆಗೆ ಬಂದವೆಂದು ನಿಶ್ಚಿತವಾಗಿ ಹೇಳಲಾಗುವಂಥ ಯಾವುದೊಂದು ಪ್ರಮಾಣವೂ ದೊರೆಯುವುದಿಲ್ಲ. ಆ ಸಂಬಂಧದಲ್ಲಿ ಜ್ಞಾನೇಶ್ವರಿಯಿಂದ ನಮಗೆ ಯಾವ ಸಹಾಯವೂ ಆಗುವಂತಿಲ್ಲ. ಏಕೆಂದರೆ ಅದರಲ್ಲಿ ಹಲವು ಬಗೆಯ ಪ್ರಯೋಗಗಳು ದೊರೆಯುತ್ತವೆ. ಉದಾ:—ಮ್ಹಣೇ, ಬೋಲೇ, ಅಸತ, ಅಸತೀ, ಪಿಟತ, ಫಿಟತೀ, ಆಹಾತಿ. ಸಾಂಗಿಜತಿ, ಜಾಯಿಜತಿ ಇತ್ಯಾದಿ. ಮಹಾರಾಷ್ಟ್ರದಲ್ಲಿ ಈಗ ಉಪಸ್ಥಿತವಿರುವ ಸಾಹಿತ್ಯದ ಮೇಲಿಂದ ಕ್ರಿಸ್ತನ ಹತ್ತನೆಯ ಶತಮಾನಕ್ಕಿಂತ ಮೊದಲು ಕರಿತಾ. ಧರಿತಾ ಎಂಬಂಥ ರೂಪಗಳು ಬಳಕೆಗೆ ಬಂದಿರಲಿಲ್ಲವೆನ್ನಬಹುದು. ಆ ಕಾಲದವರೆಗೆ ಮೂಲ ಪ್ರಾಕೃತ ರೂಪಗಳೇ ಬಳಕೆಯಲ್ಲಿದ್ದಿರಬಹುದು. ಮೂಲ ಪ್ರಾಕೃತ ರೂಪಗಳು ಮುಂದೆ ಕೊಟ್ಟಂತಿದ್ದವು:—

| | |
|---|---|
| ಅಹಂ ಭಣಾಮಿ = ನಾನು ಅನ್ನುತ್ತೇನೆ | ಅಮ್ಹೇ ಭಣಾವಂ = ನಾವು ಅನ್ನುತ್ತೇವೆ |
| ತುವಂ ಭಣಸಿ = ನೀನು ಅನ್ನುತ್ತೀ | ತುಮ್ಹೇ ಭಣೆತ್ಥಾ = ನೀವು ಅನ್ನುತ್ತೀರಿ |
| ಸೋ ಭಣಇ = ಅವನು ಅನ್ನುತ್ತಾನೆ | ತೇ ಭಣಂತಿ = ಅವರು ಅನ್ನುತ್ತಾರೆ |

ತರುವಾಯ ಅವುಗಳು ಮುಂದಿನಂತೆ ರೂಪಾಂತರವಾಗಿದ್ದವು:—

| | |
|---|---|
| ಹಾಂವು ಮ್ಹಣಇಂ | ಆಮ್ಹಿ ಮ್ಹಣಾಂವು |
| ತುಂವ ಮ್ಹಣಸಿ | ತುಮ್ಹಿ ಮ್ಹಣಥ |
| ತೊs ಮ್ಹಣಇ | ತೆs ಮ್ಹಣಂತಿ |

ಆ ತರುವಾಯದ ರೂಪಗಳು ಮುಂದಿನಂತಿದ್ದವು— ಮತ್ತು ಅವುಗಳ ಕುರುಹುಗಳು ಈಗಲೂ ಇವೆ.

| | |
|---|---|
| ಹಾಂವ ಮ್ಹಣೇ | ಆಮ್ಮಿ ಮ್ಹಣಂವ್ |
| ತುಂವ ಮ್ಹಣಸಿ | ತುಮ್ಮಿ ಮಣಥ |
| ತ್ತೋ ಮ್ಹಣೇ | ತ್ತೇ ಮ್ಹಣತಿ |

ಇದರ ಪ್ರತ್ಯಕ್ಷ ಪ್ರಮಾಣವಾಗಿ ಕೊಂಕಣಿಯಲ್ಲಿ ಈಗಲೂ ಬಳಕೆಯಲ್ಲಿ ರುವ ಅಸ =ಇರು ಮತ್ತು ಜಾಣ = ಅರಿ ಎಂಬ ಕ್ರಿಯೆಗಳ ರೂಪಗಳನ್ನು ಉದಹರಿಸಬಹುದು.

| | |
|---|---|
| ಹಾಂವ ಅಸ್ಸಂ - ನಾನು ಇದ್ದೇನೆ | ಆಮ್ಮಿ ಆಸಂವ್ = ನಾವು ಇದ್ದೇವೆ |
| ತುಂವ ಅಸಸಿ = ನೀನು ಇರುತ್ತೀ | ತುಮ್ಮಿ ಆಸಥ = ನೀವು ಇರುತ್ತೀರಿ |
| ತ್ತೋ ಅಸ್ಸ = ಅವನು ಇದ್ದಾನೆ | ತ್ತೇ ಅಸ್ಸತಿ = ಅವರು ಇದ್ದಾರೆ |
| ಹಾಂವ ಜಾಣಂ = ನಾನು ಬಲ್ಲೆ | ಆಮ್ಮಿ ಜಾಣಂವ್ = ನಾವು ಬಲ್ಲೆವು |
| ತುಂವ ಜಾಣಸಿ = ನೀನು ಬಲ್ಲಿ | ತುಮ್ಮಿ ಜಾಣಥ = ನೀವು ಬಲ್ಲಿರಿ |
| ತ್ತೋ ಜಾಣ ( = ಜಾಣೇ) ಅವನು ಬಲ್ಲ | ತ್ತೇ ಜಾಣತಿ = ಅವರು ಬಲ್ಲರು |

ಹೀಗಿರುವುದರಿಂದ ಆ ಎರಡು ಕ್ರಿಯೆಗಳು ವರ್ತಮಾನ ಕಾಲದಲ್ಲಿ ಎರಡು ವಿಧದ ರೂಪಗಳನ್ನು ತಾಳುತ್ತವೆ. ಉದಾ:—ಅಸ್ಸ = ಇದ್ದಾನೆ. ಇದ್ದಾಳೆ, ಇದೆ. ಅಸತಾ = ಇರುತ್ತಾನೆ. ಇರುತ್ತಾಳೆ. ಇರುತ್ತದೆ. ಜಾಣ = ಬಲ್ಲನು, ಬಲ್ಲಳು, ಬಲ್ಲದು. ಜಾಣತಾ = ಅರಿತಿದ್ದಾನೆ ಅಥವಾ ಅರಿತುಕೊಳ್ಳುತ್ತಾನೆ ಇತ್ಯಾದಿ.

ಆಸ್ ಕ್ರಿಯೆಯ ಗ್ರಾಮ್ಯರೂಪಗಳು ಮುಂದಿನಂತಿವೆ. ಮತ್ತು ಅವುಗಳು ಇಂದಿಗೂ ದಕ್ಷಿಣ ಕನ್ನಡ ಜಿಲ್ಲೆಯ ಹಳ್ಳಿಗಳಲ್ಲಿರುವ ಗಾಂವುಂಡೆ ಮತ್ತು ಕ್ರೈಸ್ತರಲ್ಲಿ ಬಳಸಲ್ಪಡುತ್ತವೆ.

| | |
|---|---|
| ಹಾಂವ ಆಹಾಂ | ಆಮಿ ಆಹಾಂವ್ |
| ತೂ ಆಹಾಹಿ | ತುಮಿ ಆಹಾಥ್ |
| ತೊ ಆಹಾ-ಇ | ತೆ ಆಹಾತಿ |

ಆಹಾ ಮತ್ತು ಆಹಾತಿ ಎಂಬ ರೂಪಗಳು ಜ್ಞಾನೇಶ್ವರಿಯಲ್ಲಿ ಬಳಸಲ್ಪಟ್ಟಿವೆ.

ಕಾಲಕ್ರಮೇಣ ಕೊಂಕಣಿಯಲ್ಲಿ ಕರ್, ಧರ್ ಮೊದಲಾದ ಕ್ರಿಯೆಗಳ ವರ್ತಮಾನಕಾಲಿಕ ರೂಪಗಳು ತ್ತೋ ಕರೀ; ತ್ತೇ ಕರಿತಿ ಇತ್ಯಾದಿಯಾಗತೊಡಗಿದ ವೆಂಬುದರ ಪ್ರಮಾಣಗಳು ಈಗ ಬಳಕೆಯಲ್ಲಿರುವ ಭಾಷೆಯಲ್ಲಿ ದೊರಕುತ್ತವೆ.

ಹಿಂದಿನ ಉದಾಹರಣೆಗಳ ಮೇಲಿಂದ ಮರಾಠೀ ವ್ಯಾಕರಣಕಾರರು ಹಾಗೂ ಪಂಡಿತರು ಪದ್ಯಗಳಲ್ಲಿ ಬಳಸಲ್ಪಡುವ ರೂಪಗಳೆಂದು ಉದಹರಿಸುವ ತುಕಾವ್ಹಣೇ ಮೊದಲಾದ ರೂಪಗಳು ಮೂಲದಲ್ಲಿ ಕೊಂಕಣಿಯವುಗಳೇ ಆಗಿವೆಯೆಂದು ಸಿದ್ಧವಾಗುತ್ತದೆ. ಇದನ್ನು ಪೂರ್ಣರೀತಿಯಿಂದ ಸಿದ್ಧಗೊಳಿಸಲು ನಮ್ಮ ಬಳಿಯಲ್ಲಿ ಕೊಂಕಣಿಯ ಪ್ರಾಚೀನ ಸಾಹಿತ್ಯವು ಇಲ್ಲದಿದ್ದರೂ ಕೊಂಕಣಿಯಲ್ಲಿ ಉಳಿದಿರುವ ಪ್ರಾಚೀನ ಪ್ರಯೋಗಗಳನ್ನು ಮತ್ತು ಪಾದ್ರಿ ಸ್ಟೀಫನ್ಸ್‌ರವರು ತನ್ನ ವ್ಯಾಕರಣ ಗ್ರಂಥದಲ್ಲಿ ಸಂಗ್ರಹಿಸಿರುವ ಮೂರು ಹಳೆಯ ಕೊಂಕಣಿ ಗಾದೆಗಳನ್ನು ಇಲ್ಲಿ ಉದಹರಿಸಬಹುದು..

೧. ಬಳೀ ತೋ ಕಾನ್ ವಳೀ=ಬಲಿಷ್ಠನಾದವನು ಸಿರ್ಬಲರ ಕಿವಿಯನ್ನು ಹಿಂಡಿಯೇ ಹಿಂಡುತ್ತಾನೆ. (ವಳ್=ತಿರುಹು.ಹೊಸೆಯು, ಮುರಿಹಾಕು).

೨. ಚೆಡವಾಚ್ಯಾ ನಿಭಾನ ಮಾಯ್ ಜೇವೀ ದುಧಾನ=ಮಗುವಿನ ನೆವದಿಂದ ತಾಯಿ ಉಣ್ಣುತ್ತಾಳೆ ಹಾಲಿನಿಂದ.

೩. ಮ್ಹಾಲೊ ವಿಕೀ ಮ್ಹೊಳಿ ಧಾಲೊ ಮಾಗೀ ಉಧಾರ=ಮಲ್ಯ ತನ್ನ ಅಡಚಣೆಗೆ ಹಣವಾಗಲಿ ಎಂದು ಮಾರುತ್ತಾನಾದರೆ–ಹೊಟ್ಟೆ ತುಂಬಿದ ಗಿರಾಕಿ ಕಡ ಕೊಡುತ್ತಿಯಾದರೆ ಇರಲಿ ಅನ್ನುತ್ತಾನೆ.

ಕೊಂಕಣಿಯಲ್ಲಿನ ನಿಭ ಶಬ್ದವು ನಿಬವಾಗಿ ತರುವಾಯ ನೆವವಾಗಿ ಕನ್ನಡದಲ್ಲಿ ಸೇರಿದೆ. ಮರಾಠಿಯಲ್ಲಿ ನಿಭ ಶಬ್ದವಿಲ್ಲ.

ಈಗ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಳಕೆಯಲ್ಲಿರುವ ವರ್ತಮಾನಕಾಲಿಕ ಕ್ರಿಯಾಪದಗಳ ರೂಪಗಳು ಮುಂದಿನಂತಿರುತ್ತವೆ.

| ದಕ್ಷಿಣ ಕನ್ನಡ ಜಿಲ್ಲೆ | | ಪಾದ್ರಿ ಥಾಮಸ್ ಸ್ಟೀಫನ್ಸ್ | |
|---|---|---|---|
| ಹಾಂವ ಕರ್ತಾ | ಆಮ್ಮಿ ಕರ್ತಾಂತಿ | ಹಾಂವ ಕರಿತಾಂ | ಆಮ್ಮಿ ಕರಿತಾಂವ |
| ತುಂವ ಕರ್ತಾ | ತುಮ್ಮಿ ಕರ್ತಾತಿ | ತುಂವ ಕರಿತಾಸಿ | ತುಮ್ಮಿ ಕರಿತಾಥ |
| ತೋ ಕರ್ತಾ | ತೇ ಕರ್ತಾತಿ | ತೋ ಕರಿತಾ | ತೇ ಕರಿತಾತಿ |

ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಕ್ರೈಸ್ತರಲ್ಲಿ ಮತ್ತು ಕೆಲವು ಕೊಂಕಣಿ ಹಿಂದುಗಳಲ್ಲಿ ಆಮ್ಮಿ ಕರ್ತಾಂವ್: ತುಂವ ಕರ್ತಾಇ; ತುಮ್ಮಿ ಕರ್ತಾತ್: ತೋ ಕರ್ತಾಇ ಎಂಬ ರೂಪಗಳು ಬಳಕೆಯಲ್ಲಿವೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಸಾರಸ್ವತ ಬ್ರಾಹ್ಮಣರು ಮಾತ್ರ ಆಮ್ಮಿ ಕರ್ತಾಂತಿ; ತುಮಿ ಕರ್ತಾತಿ ಮುಂತಾದ ತಪ್ಪು

ರೂಪಗಳನ್ನು ಬಳಸುತ್ತಾರೆ. ಮೊದಲಿನಿಂದಲೂ ದಕ್ಷಿಣಕನ್ನಡ ಜಿಲ್ಲೆಯಲ್ಲಿಯೇ ನೆಲಸಿದ್ದ ಅವರಿಗೆ "ತಾ"ದಿಂದ ಕೂಡಿದ ವರ್ತಮಾನಕಾಲಿಕ ರೂಪಗಳು ಸಹಜವಾಗಿದ್ದುವು. ಅಂದರೆ ಅವರಲ್ಲಿ ಮೊದಲು ಹಾಂವ ವಚ್ಚೇಂ: ಆಮ್ಮಿ ವಚ್ಚಾಂವ್ ಮುಂತಾದ ರೂಪಗಳು ಬಳಕೆಯಲ್ಲಿದ್ದುವು. ಪೋರ್ತುಗೀಸರು ಗೋವವನ್ನು ಹಿಡಿದ ತರುವಾಯ ವಲಸೆ ಬಂದ ಜನರಿಂದಾಗಿ ಅವರಲ್ಲಿ ಹಾಂವ ವಚ್ಚಾತಾಂ ಮುಂತಾದ ರೂಪಗಳು ಬಳಕೆಗೆ ಬಂದಿದ್ದುವು.

ಈಗ ಬಳಕೆಯಲ್ಲಿರುವ ವರ್ತಮಾನಕಾಲಿಕ ಕ್ರಿಯಾರೂಪಗಳು ಕ್ರಿಸ್ತನ ಮರಣ ಪ್ರಥಮ ಶತಮಾನದಲ್ಲಿ ಬಳಕೆಗೆ ಬಂದವುಗಳಾಗಿರಬಹುದು. ಅವುಗಳು ಸಂಸ್ಕೃತದ ಭೂತಕಾಲಿಕ ಕೃದಂತಗಳಾಗಿರುವ ರಕ್ಷಿತಾ. ಶೋಧಿತಾ ಮುಂತಾದ ರೂಪಗಳೊಂದಿಗೆ ಅಸ್ ಕ್ರಿಯೆಯ ವರ್ತಮಾನಕಾಲಿಕ ರೂಪಗಳು ಕೂಡಿ ಸಿದ್ಧವಾಗಿವೆ. ಸಂಸ್ಕೃತದಲ್ಲಿ ವರ್ತಮಾನಕಾಲಿಕ ಕ್ರಿಯಾರೂಪಗಳು ಮೂರು ಲಿಂಗಗಳಲ್ಲಿಯೂ ಸಮಾನವಾಗಿರುತ್ತವೆ. ಹೀಗಾಗಿ ಕೊಂಕಣಿಯಲ್ಲಿಯೂ ಹಾಗೆಯೇ ಇರುತ್ತವೆ. ಅಸ್ ಕ್ರಿಯೆಯ ವರ್ತಮಾನಕಾಲಿಕ ರೂಪಗಳು ಮುಂದಿನಂತಿವೆ.

| | |
|---|---|
| ೧. ಅಹಮ್ ಅಸ್ಮಿ=ನಾನು ಇದ್ದೇನೆ | ವಯಮ್ ಸ್ಮಃ=ನಾವು ಇದ್ದೇವೆ |
| ೨. ತ್ವಮ್ ಅಸಿ=ನೀನು ಇದ್ದೀ | ಯೂಯಂ ಸ್ಥ=ನೀವು ಇದ್ದೀರಿ |
| ೩. ಸಃ. ಸಾ. ತತ್ ಅಸ್ತಿ=ಇದ್ದಾನೆ, ಇದ್ದಾಳೆ, ಇದೆ. | ತೇ, ತಾಃ, ತಾನಿ ಸಂತಿ=ಇದ್ದಾರೆ, ಇವೆ. |

ಇವುಗಳು "ತಾ" ಪ್ರತ್ಯಯದೊಂದಿಗೆ ಕೂಡಿ ಕೊಂಕಣಿಯಲ್ಲಿ ಮುಂದಿನಂತೆ ರೂಪಾಂತರ ಹೊಂದುತ್ತವೆ.

| | |
|---|---|
| ೧. ಹಾಂವ ಸೋಧಿತಾಇಂ | ಆಮ್ಮಿ ಸೋಧಿತಾಂವ |
| ೨. ತುಂವ ಸೋಧಿತಾಸಿ | ತುಮ್ಮಿ ಸೋಧಿತಾಥ |
| ೩. ತೊ. ತಿ. ತೆಂ ಸೋಧಿತಾಇ | ತೆ. ತ್ಯೊ. ತಿಂ ಸೋಧಿತಾತಿ |

ತರುವಾಯ ಅವುಗಳು ಮುಂದಿನಂತೆ ಮಾರ್ಪಟ್ಟಿವೆನ್ನಬಹುದು.

| | |
|---|---|
| ೧. ಹಾಂವ ಸೋಧಿತಾಂ=ನಾನು ಹುಡುಕುತ್ತೇನೆ | ಆಮ್ಮಿ ಸೋಧಿತಾಂವ=ಹುಡುಕುತ್ತೇವೆ |
| ೨. ತುಂವ ಸೋಧಿತಾಸಿ=ನೀನು ಹುಡುಕುತ್ತೀ | ತುಮ್ಮಿ ಸೋಧಿತಾಥ್=ಹುಡುಕುತ್ತೀರಿ |
| ೩. ತೊ. ತಿ. ತೆಂ ಸೋಧಿತಾ | ತೆ, ತ್ಯೊ, ತಿಂ ಸೋಧಿತಾತಿ |

ಮರಾಠಿಯಲ್ಲಿ ಸೋಧಿತಾ ಇದ್ದುದು ಸೋಧಿತೋ ಎಂದಾಗುತ್ತದೆ.

ಉದಾ:—೧. ಮಿಯಾ ಸೋಧಿತೋಂ — ಆಮ್ಹೀ ಸೋಧಿತೋಂ
೨. ತೂ ಸೋಧಿತೋಸ್ — ತುಮ್ಹೀ ಸೋಧಿತಾಂ
೩. ತೋ ಸೋಧಿತೋ — ತೇ ಸೋಧಿತಾತ್
ತೀ ಸೋಧಿತೆ ತೀ, ತ್ಯೇ — ತ್ಯಾ ಸೋಧಿತಾತ್
ತೇಂ ಸೋಧಿತೇಂ — ತೀಂ ಸೋಧಿತಾತ್

ಕೊಂಕಣಿ ಶಬ್ದಗಳಲ್ಲಿನ ಕೊನೆಯ ಆಕಾರವು ಮರಾಠಿಯಲ್ಲಿ ಓಕಾರ ವಾಗಿಯೂ ಓಕಾರವು ಆಕಾರವಾಗಿಯೂ ಮಾರ್ಪಡುವುದೆಂದು ಮತ್ತು ಕೊಂಕಣಿ ಮತ್ತು ಮರಾಠಿಗಳಲ್ಲಿ ಅದುವೇ ಮುಖ್ಯವಾದ ಭೇದವೆಂದೂ ಹಿಂದೆ ಹೇಳಿದೆ. ಆ ನಿಯಮಕ್ಕೆ ಅನುಸಾರವಾಗಿ ಕೊಂಕಣಿಯ "ಸೋಧಿತಾ, ಸೋಧಿತಾಸಿ. ಮತ್ತು ಸೋಧಿತಾ ಎಂಬ ರೂಪಗಳು ಮರಾಠಿಯಲ್ಲಿ ಸೋಧಿತೋಂ, ಸೋಧಿತೋಸ್ ಮತ್ತು ಸೋಧಿತೋ ಎಂದು ಮಾರ್ಪಟ್ಟಿವೆ. ಆದರೆ ಬಹುವಚನದ ರೂಪಗಳು ನಿಯಮಬದ್ಧವಾಗಿರದೇ ಅವ್ಯವಸ್ಥಿತವಾಗಿವೆ. ಅಂದರೆ ಸೋಧಿತಾಂ ಇದ್ದುದು ಸೋಧಿತೋಂ ಆಗಿರುವಾಗ ಸೋಧಿತಾಂವ್ ಇದ್ದುದು ಸೋಧಿತೋಂವ್ ಎಂದಿರಬೇಕಿತ್ತು. ಆದರೆ ಅಲ್ಲಿಯೂ ಸೋಧಿತೋಂ ಎಂಬ ರೂಪವೇ ಇರುವುದರಿಂದ ಕೊನೆಯಲ್ಲಿನ "ವ್" ಲೋಪವಾಗಿದೆಯೆನ್ನಬಹುದು. ಪರಂತು ತುಮ್ಹೀ "ಸೋಧಿತಾಂ" ಎಂಬುದು ಸರ್ವಥಾ ಸರಿಯಾದುದಲ್ಲ.

ಕೊಂಕಣಿ ಕ್ರಿಯಾಪದಗಳ ಕೊನೆಯಲ್ಲಿನ "ತಾ" ಇದ್ದುದು ಮರಾಠಿಯಲ್ಲಿ "ತೋ" ಆಗಿ ಮಾರ್ಪಟ್ಟಿದೆಯೆಂದು ಇಷ್ಟು ಸರಳ ರೀತಿಯಿಂದ ಸಿದ್ಧವಾಗುತ್ತ ದಾದರೂ ಮರಾಠಿ ಪಂಡಿತರು ಅದನ್ನು ಕಡೆಗಣಿಸಿ ಅಥವಾ ಮರೆಮಾಜಿ ಆ "ತೋ"ದ ಮೂಲವನ್ನು ಕಂಡುಹಿಡಿಯಲು ಹಾಸ್ಯಾಸ್ಪದವಾದ ಊಹಾಪೋಹ ಗಳನ್ನು ಅಥವಾ ಶಾಬ್ದಿಕ ಕಸರತ್ತುಗಳನ್ನು ನಡಿಸುತ್ತಲೇ ಬಂದಿದ್ದಾರೆ. ಹಾಗಿದ್ದರೂ ಆ ಪಂಡಿತರುಗಳಲ್ಲಿ ಆ ಕುರಿತು ಇಂದಿನ ತನಕ ಒಮ್ಮತವಾಗಿಲ್ಲ. ಆ ಕುರಿತಾದ ಊಹಾಪೋಹಗಳನ್ನು "ಮರಾಠೀ ವ್ಯಾಕರಣಾಚೇಂ ಮೂಳತತ್ವೇಂ" ಎಂಬ ಪುಸ್ತಕದಲ್ಲಿ ಓದಬಹುದು.

## ಕೊಂಕಣಿ—ಸಾಮಾನ್ಯ ಭೂತಕಾಲ

ಕೊಂಕಣಿಯಲ್ಲಿನ ಭೂತಕಾಲಿಕ ಕ್ರಿಯೆಗಳು ಸಂಸ್ಕೃತದ ಭೂತಕಾಲಿಕ ಕೃದಂತ ವಿಶೇಷಣದಿಂದಲೇ ಮಾರ್ಪಟ್ಟಿರುವುದರಿಂದ ಆ ಕ್ರಿಯೆಗಳು ಅಕರ್ಮಕ

ವಾಗಿದ್ದರೆ ಕರ್ತೃವಿನ ಲಿಂಗವಚನಗಳಿಗೆ ಅನುಸಾರವಾಗಿಯೂ. ಸಕರ್ಮಕ ವಾಗಿದ್ದರೆ ಕರ್ಮಪದದ ಲಿಂಗವಚನಗಳಿಗನುಸಾರವಾಗಿಯೂ ರೂಪಾಂತರ ಹೊಂದುವವು.

| ಪುಲ್ಲಿಂಗ | ಸ್ತ್ರೀಲಿಂಗ |
|---|---|
| ಹಾಂವ ಗೆಲೊಂ=ನಾನು ಹೋದೆನು | ಹಾಂವ ಗೆಲೀಂ=ನಾನು ಹೋದೆನು |
| ಆಮ್ಮಿ ಗೆಲೇಂವ್=ನಾವು ಹೋದೆವು | ಆಮ್ಮಿ ಗೆಲ್ಯೋಂವ್=ನಾವು ಹೋದೆವು |
| ತುಂವ ಗೆಲೋಸಿ=ನೀನು ಹೋದಿ | ತುಂವ ಗೆಲೀಸಿ=ನೀನು ಹೋದಿ |
| ತುಮ್ಮಿ ಗೆಲೇಥ=ನೀವು ಹೋದಿರಿ | ತುಮ್ಮಿ ಗೆಲ್ಯೋಥ=ನೀವು ಹೋದಿರಿ |
| ತ್ರೋ ಗೆಲೊ=ಅವನು ಹೋದನು | ತೀ ಗೆಲೀ=ಅವಳು ಹೋದಳು |
| ತೆ ಗೆಲೇ-ತಿ - ಅವರು ಹೋದರು | ತ್ಯೊ ಗೆಲ್ಯೋ-ತಿ=ಅವರು ಹೋದರು |

## ಮರಾಠಿ

| ಪುಲ್ಲಿಂಗ | | ಸ್ತ್ರೀಲಿಂಗ | |
|---|---|---|---|
| ಮೀ ಗೇಲೋಂ | ಆಮ್ಹೀ ಗೇಲೋಂ | ಮೀ ಗೇಲೇಂ. | ಆಮ್ಹೀ ಗೇಲೋಂ<br>ಗೇಲ್ಯೇಂ |
| ತೂ ಗೇಲಾಸ್ | ತುಮ್ಹೀ<br>ಗೇಲಾಂತ್.<br>ಗೇಲಾಂ. ಗೆಲೇತ್ | ತೂಂಗೇಲೀಸ್ | ತುಮ್ಹೀ ಗೇಲ್ಯಾತ್ |
| | | ತೀ ಗೇಲೀ | ತ್ಯಾ ಗೇಲ್ಯಾ |
| ತೋ ಗೇಲಾ | ತೇ ಗೇಲೇ | | |
| ತೇಂ ಗೇಲೇಂ | ತೀಂ ಗೇಲೀಂ | | |

ಹಿಂದೆ ಹೇಳಿದ ನಿಯಮಗಳಿಗನುಸಾರವಾಗಿ ಮರಾಠಿಯಲ್ಲಿ ನಾನು ಹೋದೆನು ಅನ್ನಲು "ಮೀ ಗೇಲಾಂ" ಎಂದಿರಬೇಕಿತ್ತು. ಆದರೆ ಅದು ಕೊಂಕಣಿ ರೂಪದಲ್ಲಿಯೇ ಉಳಿದುಕೊಂಡಿದೆ. ಮತ್ತು "ತುಮ್ಹೀ"ಯೊಂದಿಗ ಮೂರು ರೂಪಗಳು ಬಂದಿವೆ. ಅವುಗಳಲ್ಲಿ "ಗೆಲೇತ್" ಎಂಬುದು ಕೊಂಕಣಿಯದೇ ಆಗಿರುತ್ತದೆ. ಅಲ್ಲದೇ ಸ್ತ್ರೀಲಿಂಗದ ಆಮ್ಹೀ ಎಂಬಲ್ಲಿ ಪುಲ್ಲಿಂಗ ಕ್ರಿಯಾಪದ ಬಂದಿದೆ. ಅಂದರೆ ಮರಾಠಿಯ ಆಖ್ಯಾತ ರೂಪಗಳಲ್ಲಿ ನಿಯಮಬದ್ಧವಾದ ವ್ಯವಸ್ಥೆ ಇಲ್ಲ. ಕೊಂಕಣಿಯು ಮರಾಠಿಯ ಉಪಭೇದವೆನ್ನುವ ಮರಾಠಿ ಪಂಡಿತರು ಮರಾಠಿಯಲ್ಲಿನ ಇಂಥ ಅವ್ಯವಸ್ಥೆಯನ್ನು ಕಡೆಗಣಿಸಿದ್ದಾರೆ.

## ಕೊಂಕಣಿಯ ಸಂಭಾವ್ಯ ಮತ್ತು ಮರಾಠಿಯ ಭವಿಷ್ಯತ್ಕಾಲ

| ಕೊಂಕಣಿ | ಮರಾಠಿ |
|---|---|
| ಹಾಂವ ಸೋಧೀನ ಆಮ್ಮಿ ಸೋಧೂಂ | ಮಿ ಸೋಧೀನ್ ಆಮ್ಹಿ ಸೋಧೂಂ |
| ತೂಂ ಸೋಧಿಶಿ ತುಮ್ಮಿ ಸೋಧಿಶ್ಯಾಥ | ತೂಂ ಸೋಧಿಶೀಲ್ ತುಮ್ಹಿ ಸೋಧಾಲ್ |
| ತ್ಯೊ ಸೋಧೀತ ತೆ ಸೋಧೀತೀತ | ತೋ ಸೋಧೀಲ್ ತೇ ಸೋಧಿತೀಲ್ |

ಈ ಕಾಲದ ರೂಪಗಳ ಕುರಿತು ಹಿಂದೆ ವಿವರಿಸಿದೆ. ಅಂದರೆ ಮರಾಠಿಯಲ್ಲಿನ ಈ ಕಾಲದ ರೂಪಗಳು, ಮರಾಠಿಯು ಕೊಂಕಣಿಯಿಂದಲೇ ಹುಟ್ಟಿದುದೆಂಬುದನ್ನು ಮರಾಠಿ ಪಂಡಿತರು ಅಲ್ಲಗಳೆಯಲಾಗದಂತೆ ಸಿದ್ಧಪಡಿಸುತ್ತವೆ.

ಹಿಂದೆ ಕೊಟ್ಟ ರೂಪಗಳು ಕೊಂಕಣಿಯಲ್ಲಿ ಭವಿಷ್ಯತ್ತಿನ ಕುರಿತು ಸಂಭಾವನೆಯನ್ನು ಮಾತ್ರ ಸೂಚಿಸುತ್ತವೆಯೇ ಹೊರತು ನಿಶ್ಚಯವನ್ನು ಸೂಚಿಸುವುದಿಲ್ಲ. ನಿಶ್ಚಯಾರ್ಥಕ ಭವಿಷ್ಯತ್ಕಾಲದ ರೂಪಗಳು ಮುಂದೆ ಕೊಟ್ಟಂತಿವೆ. ಅವುಗಳು ಕರ್ತೃವಿನ ಲಿಂಗವಚನಗಳಿಗನುಸಾರವಾಗಿ ರೂಪಾಂತರಗಳನ್ನು ಹೊಂದುತ್ತವೆ.—ಆ ರೂಪಗಳು ಸಂಸ್ಕೃತದ ಭವಿಷ್ಯತ್ಕಾಲಿಕ ಕೃದಂತದಿಂದಲೇ ರೂಪಾಂತರವಾದವುಗಳಾಗಿರುತ್ತವೆ.

| | ಪುಲ್ಲಿಂಗ | | ಸ್ತ್ರೀಲಿಂಗ | |
|---|---|---|---|---|
| | ಏಕವಚನ | ಬಹುವಚನ | ಏಕವಚನ | ಬಹುವಚನ |
| ೧. | ಸೋಧಿತಲೊಂ | ಸೋಧಿತಲೇಂವ | ಸೋಧಿತಲಿಂ | ಸೋಧಿತಲ್ಯೋಂವ |
| ೨. | ಸೋಧಿತಲೋಸಿ- | ಸೋಧಿತಲೇಥ | ಸೋಧಿತಲೀಸಿ | ಸೋಧಿತಲ್ಯೋಥ |
| ೩. | ಸೋಧಿತಲೊ | ಸೋಧಿತಲೇತಿ | ಸೋಧಿತಲಿ | ಸೋಧಿತಲ್ಯೋತಿ |

ನಪುಂಸಕಲಿಂಗ— ತೆಂ ಸೋಧಿತಲೆಂ; ತೀಂ ಸೋಧಿತಲೀಂ.

ಕೆಲವರು ಸ್ತ್ರೀಲಿಂಗ ರೂಪಗಳಲ್ಲಿ "ತ"ದ ಬದಲಿಗೆ "ತೆ" ಬಳಸುತ್ತಾರೆ.

## ಅಪೂರ್ಣಭೂತ ಹಾಗೂ ಅಭ್ಯಾಸಾರ್ಥಕ

ಈ ಕಾಲದ ರೂಪಗಳು ಭವಿಷ್ಯತ್ಕಾಲಿಕ ರೂಪಗಳಲ್ಲಿನ "ತ"ವನ್ನು "ತಾ" ಮಾಡುವುದರಿಂದ ಸಿದ್ಧವಾಗುತ್ತವೆ. ಉದಾ:— ಹಾಂವ ಸೋಧಿತಾಲೊಂ = ೧. ನಾನು ಹುಡುಕುತ್ತಿದ್ದೆನು. ೨. ನಾನು ಹುಡುಕುವುದಿತ್ತು. ಇಂಥ

ರೂಪಗಳು ಮರಾಠಿಯಲ್ಲಿ ಇಲ್ಲ. ಬದಲಿಗೆ ಕೊಂಕಣಿಯಲ್ಲಿನ ಸೋಧಿತ ಆಶಿಲ್ಲೊ ಎಂಬುದಕ್ಕೆ ಸರಿಯಾದ ಸೋಧೀತಹೋತಾ = ಹುಡುಕುತ್ತಲಿದ್ದನು ಎಂಬಂಥ ರೂಪಗಳು ಬರುತ್ತವೆ. ಪದ್ಯಗಳಲ್ಲಿ ಸೋಧೀತಅಸೇ ಎಂಬಂಥ ರೂಪಗಳು ಬರುತ್ತವೆ.

ಪದ್ಯಗಳಲ್ಲಿ ಪ್ರಾಚೀನ ವರ್ತಮಾನಕಾಲಿಕ ರೂಪಗಳು ಸಂದರ್ಭಾನುಸಾರವಾಗಿ ವರ್ತಮಾನಕಾಲಿಕ ಅರ್ಥವನ್ನು ಮಾತ್ರವಲ್ಲದೇ ಅಪೂರ್ಣ ಭೂತಕಾಲದ ಹಾಗೂ ಅಭ್ಯಾಸದ ಅರ್ಥಗಳನ್ನೂ ಕೊಡುತ್ತವೆ. ಉದಾ:– ಕರೀ = ೧. ಮಾಡುತ್ತಾನೆ: ೨. ಮಾಡುತಿದ್ದನು: ೩. ಮಾಡುವುದಿತ್ತು. ಮ್ಹಣೇ = ೧. ಅನ್ನುತ್ತಾನೆ: ೨. ಅನ್ನುತಿದ್ದನು: ೩. ಅನ್ನುವುದಿತ್ತು.

ಪದ್ಯದಲ್ಲಿನ ರೂಪಗಳು

ಹಾಂವ ಸೋಧೀಂ<br>ತುಂವೆ ಸೋಧೀಸ } ಸೋಧಿತಿ.<br>ತೊ, ಸೋಧೀ

## ಸಂಕೇತಾರ್ಥ

| ಪುಲ್ಲಿಂಗ | | | ಸ್ತ್ರೀಲಿಂಗ | |
|---|---|---|---|---|
| ೧. | ಸೋಧಿತೊಂ | ಸೋಧಿತೆ(ಂವ) | ಸೋಧಿತೀಂ | ಸೋಧಿತ್ಯೊ(ಂವ) |
| ೨. | ಸೋಧಿತೋ-ಸ | ಸೋಧಿತೇ(ಥ) | ಸೋಧಿತೀ(ಸ) | ಸೋಧಿತ್ಯೊ(ಥ) |
| ೩. | ಸೋಧಿತೊ | ಸೋಧಿತೇ(ತಿ) | ಸೋಧಿತೀ | ಸೋಧಿತ್ಯೊ(ತಿ) |

ನಪುಂಸಕಲಿಂಗ ತೆಂ ಸೋಧಿತೆಂ. ತೀಂ ಸೋಧಿತೀಂ.

## ಮರಾಠಿ

| | | | | |
|---|---|---|---|---|
| ೧. | ಸೋಧಿತೋಂ | ಸೋಧಿತೋಂ | ಸೋಧಿತೇಂ-ತ್ಯೇಂ | ಸೋಧಿತೋಂ |
| ೨. | ಸೋಧಿತಾಸ್ | ಸೋಧಿತಾಂ | ಸೋಧಿತೀಸ್ | ಸೋಧಿತೇಂತ-ತ್ಯಾಂತ |
| ೩. | ಸೋಧಿತಾ | ಸೋಧಿತೇಂ | ಸೋಧಿತೀ | ಸೋಧಿತ್ಯಾ |

ಕೃದಂತರೂಪಗಳು ಮರಾಠಿ ಮತ್ತು ಕೊಂಕಣಿಗಳಲ್ಲಿ ಹೆಚ್ಚಿನವುಗಳೆಲ್ಲ ಸಮಾನರೂಪದವುಗಳಾಗಿರುವುದರಿಂದ ಅವುಗಳ ತುಲನೆಯು ಅವಶ್ಯಕವಲ್ಲ. ಹಿಂದಿನ ವಿವರಣೆಯಿಂದ ಕೊಂಕಣಿಯು ಮರಾಠಿಗಿಂತ ಪ್ರಾಚೀನವಾಗಿರುತ್ತದೆಂಬುದು ಮಾತ್ರವಲ್ಲದೇ ಮರಾಠಿಯು ಕೊಂಕಣಿಯಿಂದಲೇ ಹುಟ್ಟಿದುದೆಂದು ಪೂರ್ಣರೀತಿಯಿಂದ ಸಿದ್ಧವಾಗಿದೆ. ಅಲ್ಪವಾದ ಪ್ರಾದೇಶಿಕ ಭೇದಗಳ ಮತ್ತು

ದೇಶೀ ಶಬ್ದಗಳ ವಿಚಾರವು ಈ ವಿಮರ್ಶೆಗೆ ಸಂಬಂಧಪಟ್ಟಿಲ್ಲವಾದುದರಿಂದ ಅದನ್ನು ವಿಮರ್ಶಿಸಿಲ್ಲ. ವಿಭಕ್ತಿ ರೂಪಗಳು ಮತ್ತು ಆಖ್ಯಾತ ರೂಪಗಳು ಭಾಷೆಯ ಮುಖ್ಯ ಅಂಗಗಳಾಗಿರುವುದರಿಂದ ಅವುಗಳಿಗೆ ಇವರಲ್ಲಿ ಹೆಚ್ಚಿನ ಮಹತ್ವ ಕೊಡಲಾಗಿದೆ. ಮತ್ತು ಅವುಗಳ ತುಲನೆಯಿಂದಾಗಿ ಮರಾಠಿಯ ವಾಸ್ತವಿಕ ಸ್ವರೂಪವು ತಿಳಿಯುವಂತಾಗಿದೆ. ಹೀಗಾಗಿ ಅಲ್ಲಿಗೇನೇ ನನ್ನ ಉದ್ದೇಶವು ಪೂರ್ಣರೀತಿಯಿಂದ ಸಿದ್ಧಿಸಿದೆ.

## ಉಪಸಂಹಾರ

ಒಂದು ನುಡಿಯು ತನ್ನದೇ ಆದ ವಿಭಕ್ತಿ ರೂಪಗಳನ್ನೂ. ಆಖ್ಯಾತ ರೂಪಗಳನ್ನೂ ಹೊಂದಿದ ತರುವಾಯ ಇತರ ವಿಷಯುಗಳಲ್ಲಿ ಅದು ಮೂಲವನ್ನೇ ಹೋಲುತ್ತಿದ್ದರೂ ಅದೊಂದು ಭಿನ್ನ ಭಾಷೆಯೆಂದೇ ಗಣಿಸಲಾಗುವುದು. ಅದೇ ರೀತಿಯಲ್ಲಿ ಮರಾಠಿಯು ತನ್ನದೇ ಆದ ವಿಭಕ್ತಿ ರೂಪಗಳನ್ನೂ, ಆಖ್ಯಾತ ರೂಪಗಳನ್ನೂ ಪಡೆದಿದೆ. ಆದುದರಿಂದ ಅದು ಕೊಂಕಣಿಯ ಒಳಭೇದವಾಗಿದ್ದರೂ ಅದು ಕೊಂಕಣಿಯಿಂದ ಭಿನ್ನವಾದ ಹೊಸ ಕೊಂಕಣಿಯಾಗಿರುತ್ತದೆ. ಅಥವಾ ಕೊಂಕಣಿಯನ್ನು ಹಳೆಯ ಮರಾಠಿಯೆನ್ನುವುದೆಂದಾದರೆ ಅದು ಹೊಸ ಮರಾಠಿಯಾಗಿರುತ್ತದೆ. ಈ ಲೇಖನದಿಂದಾಗಿ ಕೊಂಕಣಿ ಮತ್ತು ಮರಾಠಿಗಳ ವಿವಾದವು ಕೊನೆಗೊಳ್ಳಬಹುದೆಂದು ಆಶಿಸಲಾಗಿದೆ. ಇತಿಶಮ್.

# ೧

## ಆರ್ಯರು ಅಥವಾ ಸಾರಸ್ವತ ಬ್ರಾಹ್ಮಣರ ಪೂರ್ವಜರು

ಪಾಶ್ಚಿಮಾತ್ಯರು ಭಾರತವರ್ಷವನ್ನು ಪ್ರವೇಶಿಸಿ ಭಾರತವರ್ಷದ ರಾಜಕೀಯ ಮತ್ತು ಧಾರ್ಮಿಕ ವಿಷಯಗಳಲ್ಲಿ ಕೈಯಾಡಿಸತೊಡಗುವ ಮೊದಲು ಭಾರತವರ್ಷದೊಳಗಿನ ಜನರೆಲ್ಲರೂ ಒಂದೇ ಜನಾಂಗವೆಂತಲೂ. ಅವರು ನುಡಿಯುವ ಭಾಷೆಗಳೆಲ್ಲವೂ ಸಂಸ್ಕೃತದಿಂದಲೇ ರೂಪಾಂತರ ಹೊಂದಿದವುಗಳೆಂತಲೂ, ಎಲ್ಲ ಜನರು ಭಾರತವರ್ಷದ ಮೂಲನಿವಾಸಿಗಳೆಂತಲೂ ಭಾರತೀಯ ವಿದ್ವಾಂಸರ ಎಣಿಕೆಯಾಗಿತ್ತು. ಆದರೆ ಪಾಶ್ಚಿಮಾತ್ಯ ವಿದ್ವಾಂಸರು ಅವರಲ್ಲಿಯೂ ಡಾಕ್ಟರ್ ಪದವೀಧರರಾದ ಪಾದ್ರಿಗಳು ಭಾರತೀಯ ಭಾಷೆಗಳ ಅಧ್ಯಯನವನ್ನು ಕೈಗೊಂಡುದರ ಫಲವಾಗಿ ಭಾರತೀಯ ಭಾಷೆಗಳೆಲ್ಲವೂ ಒಂದೇ ಮೂಲದಿಂದ ಹುಟ್ಟಿದವುಗಳಲ್ಲವೆಂತಲೂ. ಭಾರತೀಯ ಜನಸಮುದಾಯದಲ್ಲಿ ಆರ್ಯ, ದ್ರಾವಿಡ, ಮುಂಡ, ಬುರುಷಸ್ಕಿ ಮೊದಲಾದ ಭಿನ್ನವರ್ಗದ ಜನರಿದ್ದಾರೆಂತಲೂ. ದ್ರಾವಿಡರನ್ನುಳಿದು ಇತರರು ಹೊರಗಿನಿಂದ ಬಂದು ಭಾರತವರ್ಷದಲ್ಲಿ ನೆಲಸಿದ್ದರೆಂತಲೂ ಸಿದ್ಧವಾಯಿತು. ಅವರು ಮಾಡಿದ ವರ್ಗೀಕರಣವು ವೈಜ್ಞಾನಿಕವಾಗಿದ್ದುದರಿಂದ ಆಧುನಿಕ ಭಾರತೀಯ ವಿದ್ವಾಂಸರಲ್ಲಿ ಹೆಚ್ಚಿನವರು ಅವರ ಸಿದ್ಧಾಂತವನ್ನು ಒಪ್ಪಿಕೊಂಡಿದ್ದಾರೆ. ಆದರೆ ಆರ್ಯರು ಎಲ್ಲಿಂದ ಬಂದವರು ಅಥವಾ ಅವರ ಮೂಲನೆಲೆ ಯಾವುದು ಎಂಬುದರಲ್ಲಿ ಮತಭೇದವಿದೆ. ಏಕೆಂದರೆ ಆರ್ಯವರ್ಗದ ಜನರು ಆಸ್ಯ ಖಂಡದಲ್ಲಿ ಮಾತ್ರವಲ್ಲದೇ ಯೂರೋಪ ಖಂಡದ ಹಲವು ದೇಶಗಳಲ್ಲಿಯೂ ನೆಲಸಿದ್ದಾರೆ.

ದಿವಂಗತ ಲೋಕಮಾನ್ಯ ಬಾಲಗಂಗಾಧರ ತಿಲಕರವರು ಆರ್ಯಜನರ ಮೂಲನೆಲೆಯ ಕುರಿತಾಗಿ "The Arctic Home in the Vedas" ಎಂಬ ಪುಸ್ತಕವನ್ನು ಬರೆದು ಪ್ರಕಟಿಸಿದ್ದಾರೆ. ಅದರಲ್ಲಿ ಅವರು ಆರ್ಯಜನರ ಪೂರ್ವಜರು ಸಾಧಾರಣ ಎಂಟು ಸಾವಿರ ವರ್ಷಗಳಿಗಿಂತ ಮೊದಲು ಉತ್ತರ ಧ್ರುವ ಪ್ರದೇಶದಲ್ಲಿ ನೆಲಸಿದ್ದರೆಂತಲೂ. ಆಗ ಅಲ್ಲಿನ ವಾಯುಗುಣವು ಮನುಷ್ಯನ ನಿವಾಸಕ್ಕನುಕೂಲವಾಗಿದ್ದಿತೆಂತಲೂ. ಆಕಸ್ಮಿಕವಾಗಿ ಅಲ್ಲಿನ ವಾಯುಗುಣವು ಪರಿವರ್ತನಹೊಂದಿ ಹಿಮಬೀಳತೊಡಗಿತೆಂತಲೂ. ಹಿಮಪಾತದಿಂದ ಪ್ರಲಯ ಭಯಂಕರವಾದ ನೆರೆಬಂದುದರಿಂದಾಗಿ ಅವರು ಅಲ್ಲಿನ ತಮ್ಮ ಮನೆಮಾರು

ಗಳನ್ನು ತೊರೆದು ಕೆಳಗಿನ ಪ್ರದೇಶಗಳಿಗೆ ಬರಬೇಕಾಯಿತೆಂತಲೂ, ಅವರು ಭಾರತವರ್ಷವನ್ನು ಪ್ರವೇಶಿಸುವ ಮೊದಲು ಮಧ್ಯ ಆಸ್ಯ, ಪಶ್ಚಿಮ ಆಸ್ಯ ಮೊದಲಾದೆಡೆಗಳಲ್ಲಿ ನೆಲಸಿದ್ದರೆಂತಲೂ, ಅವರಲ್ಲಿ ಕೆಲವು ತಂಡಗಳು ಯೂರೋಪಿಗೆ ಹೋಗಿರಬಹುದೆಂತಲೂ, ಋಗ್ವೇದ ಮಂತ್ರಗಳ ಹಾಗೂ ಇತರ ಹಲವು ಪ್ರಮಾಣಗಳ ಆಧಾರದಿಂದ ವೈಜ್ಞಾನಿಕ ರೀತಿಯಲ್ಲಿ ಪ್ರತಿಪಾದಿಸಿದ್ದಾರೆ. ಮತ್ತು ಅವರ ಪ್ರತಿಪಾದನೆಯು ಹಲವು ಭಾರತೀಯ ವಿದ್ವಾಂಸರ ಮನ್ನಣೆಗೆ ಪಾತ್ರವಾಗಿದೆ.

ಆರ್ಯಜನರ ಪೂರ್ವಜರು ನೆಲಸಿದ್ದ ಉತ್ತರಧ್ರುವ ಪ್ರದೇಶದಲ್ಲಿ ವರ್ಷದ ೩೬೫ ದಿನಗಳಲ್ಲಿ ೬೦ ದಿನಗಳಿಂದ ೧೯೨ ದಿನಗಳಷ್ಟು ದೀರ್ಘಕಾಲದ ತನಕ ಸೂರ್ಯನು ಮುಳುಗದೇ ಕ್ಷಿತಿಜದ ಮೇಲೆಯೇ ಕಾಣಿಸುವಂಥ ಸ್ಥಳಗಳಿವೆ. ಅಲ್ಲಿ ಸೂರ್ಯನು ಪೂರ್ವದಲ್ಲಿ ಮೂಡಿ ಮೇಲಕ್ಕೇರಿ ತರುವಾಯ ಪಶ್ಚಿಮಕ್ಕಿಳಿದು ಮುಳುಗುವುದಿಲ್ಲ. ಬದಲಿಗೆ ಮನುಷ್ಯನು ಪೂರ್ವಕ್ಕೆ ಮೋರೆ ಮಾಡಿ ನಿಂತರೆ ಅವನ ಎಡಗಡೆಯಲ್ಲಿ ಅಂದರೆ ಉತ್ತರ ದಿಕ್ಕಿನಲ್ಲಿ ಮೂಡಿ ಪೂರ್ವಕ್ಕೆ ಸರಿಯುತ್ತ ದಕ್ಷಿಣಕ್ಕೆ ಹೋಗಿ ಮುಳುಗುತ್ತಾನೆ. ಲೋಕಮಾನ್ಯರ ಅಭಿಪ್ರಾಯದಲ್ಲಿ ಆರ್ಯಜನರ ಪೂರ್ವಜರು ನೂರು ದಿನಗಳಷ್ಟು ದೀರ್ಘಕಾಲದ ಹಗಲು ಮತ್ತು ಅಷ್ಟೇ ದೀರ್ಘಕಾಲದ ಇರಳು ಇರುತಿದ್ದ ಸ್ಥಳದಲ್ಲಿದ್ದರು.

ಉತ್ತರಧ್ರುವ ಪ್ರದೇಶದಲ್ಲಿನ ಬೆಳಕು ಮತ್ತು ಕತ್ತಲೆಗಳ ತುಸುವಾದರೂ ಪರಿಚಯವಾಗುವಂತೆ ಧ್ರುವವೃತ್ತದ ಮತ್ತು ಅದರ ಉತ್ತರ ದಿಕ್ಕಿನ ಇಲ್ಲವೇ ದಕ್ಷಿಣ ದಿಕ್ಕಿನ ಪ್ರದೇಶಗಳಲ್ಲಿನ ವಿಶೇಷತೆಗಳನ್ನು ಇಲ್ಲಿ ವಿವರಿಸಲಾಗುವುದು.

ವಿಷುವ ವೃತ್ತದ ಅಥವಾ ಭೂಮಧ್ಯ ರೇಖೆಯ ಉತ್ತರದ ಇಲ್ಲವೇ ದಕ್ಷಿಣದ ೬೬ ಅಂಶ ೩೩ ಕಲೆಗಳಲ್ಲಿರುವ ಅಕ್ಷಾಂಶ ರೇಖೆಯು ಧ್ರುವವೃತ್ತವೆನಿಸಿಕೊಳ್ಳುತ್ತದೆ. ಮತ್ತು ಅದರ ತರುವಾಯದ ಪ್ರದೇಶವು ಧ್ರುವಪ್ರದೇಶವೆನಿಸಿಕೊಳ್ಳುತ್ತದೆ. ಒಂದು ಧ್ರುವಪ್ರದೇಶದಲ್ಲಿ ಬೆಳಕಿರುವಾಗ ಇನ್ನೊಂದು ಧ್ರುವಪ್ರದೇಶದಲ್ಲಿ ಕತ್ತಲೆ ಇರುತ್ತದೆ. ಅಂದರೆ ಉತ್ತರಧ್ರುವ ಪ್ರದೇಶದಲ್ಲಿ ದೀರ್ಘ ದಿವಸವು ಆರಂಭವಾಗುವ ಸಮಯಕ್ಕೆ ಸರಿಯಾಗಿ ದಕ್ಷಿಣಧ್ರುವ ಪ್ರದೇಶದಲ್ಲಿ ದೀರ್ಘ ರಾತ್ರಿ ಆರಂಭವಾಗುತ್ತದೆ. ಹಾಗೆಯೇ ಉತ್ತರಧ್ರುವ ಪ್ರದೇಶದಲ್ಲಿ ದೀರ್ಘ ರಾತ್ರಿಯು ಆರಂಭವಾಗುವಾಗ ದಕ್ಷಿಣಧ್ರುವ ಪ್ರದೇಶದಲ್ಲಿ ದೀರ್ಘ ದಿವಸವು ಆರಂಭವಾಗುತ್ತದೆ.

ಭೂಮಧ್ಯ ರೇಖೆಯ ಉತ್ತರದ ೭೦ನೆಯ ಅಕ್ಷಾಂಶದಲ್ಲಿರುವ ಸ್ಥಳದಲ್ಲಿ ಪೌಷಮಾಸದ ೨೬ನೆಯ ದಿನ[1] ಅಂದರೆ ಉತ್ತರಾಯಣ ಆರಂಭವಾದ ೨೪ ದಿನಗಳ ತರುವಾಯ ಉಷಃಪ್ರಕಾಶವು ಕಾಣಿಸತೊಡಗುತ್ತದೆ. ಅಂದರೆ ನಸಿಕಾಗುತ್ತದೆ. ಆ ಮಂದಪ್ರಕಾಶವು ಹನ್ನೊಂದು ದಿನಗಳ ತನಕ ಭೂಮಿಗೆ ಸುತ್ತುಬರುತ್ತಿದ್ದು ಪ್ರತಿಯೊಂದು ಸುತ್ತಿಗೂ ಪ್ರಕಾಶವು ಹೆಚ್ಚುತ್ತ ಹೋಗುತ್ತದೆ. (ಅಂಥ ಒಂದು ಸುತ್ತೆಂದರೆ ಒಂದು ದಿನವೆಂದು ತಿಳಿಯಬೇಕು) ಹಾಗೂ ಮಾಘಮಾಸದ ಎಂಟನೆಯ ದಿನದಂದು ಮನುಷ್ಯನು ಪೂರ್ವಕ್ಕೆ ಮೋರೆಮಾಡಿ ನಿಂತರೆ ಅವನ ಎಡಗಡೆಯಲ್ಲಿ ಅಂದರೆ ಉತ್ತರ ಮತ್ತು ಪೂರ್ವಗಳ ಮಧ್ಯದಲ್ಲಿ ಸೂರ್ಯಬಿಂಬದ ಒಂದು ಚಿಕ್ಕ ಬದಿಯು ಕಾಸಿದ ಚಿನ್ನದಂತೆ ಹೊಳೆಯುತ್ತ ಕಾಣತೊಡಗಿ ಪೂರ್ವದಿಕ್ಕಿಗೆ ಚಲಿಸುತ್ತ ಬಂದು ಬಲಗಡೆಗೆ ಸಾಗಿ ಪೂರ್ವ ಮತ್ತು ದಕ್ಷಿಣ ದಿಕ್ಕುಗಳ ಮಧ್ಯಸ್ಥಳದಲ್ಲಿ ಮುಳುಗಿ ಕಾಣದಾಗುತ್ತದೆ. ಆ ದಿನ ಸೂರ್ಯಬಿಂಬದ ಬದಿಯು ಬರೇ ನಾಲ್ಕು ಗಂಟೆಗಳ ಕಾಲ ಮಾತ್ರ ಕಾಣಿಸುತ್ತದೆ. ಮರುದಿನ ಸೂರ್ಯಬಿಂಬದ ತುಸು ದೊಡ್ಡ ಬದಿಯು ಹೆಚ್ಚು ಉತ್ತರದಲ್ಲಿ ಮೇಲೆ ಬಂದು ಮೊದಲಿನ ದಿನದಂತೆಯೇ ಚಲಿಸುತ್ತ ಪೂರ್ವಕ್ಕೆ ಬಂದು ಹೆಚ್ಚು ದಕ್ಷಿಣಕ್ಕೆ ಹೋಗಿ ಮುಳುಗುತ್ತದೆ. ಈ ರೀತಿಯಲ್ಲಿ ದಿನದಿಂದ ದಿನಕ್ಕೆ ಸೂರ್ಯನ ಅಂಶವೂ ಹಗಲಿನ ಅವಧಿಯೂ ಹೆಚ್ಚುತ್ತ ಹೋಗಿ ಜ್ಯೇಷ್ಠಮಾಸದ ಐದನೆಯ ದಿನದಂದು ಹಗಲಿನ ಅವಧಿಯು ೨೪ ಗಂಟೆಗಳಿಗೆ ತಲಪುತ್ತದೆ. ಅಂದರೆ ಆ ದಿನದಿಂದ ಸೂರ್ಯನು ಮುಳುಗದೇ ಕ್ಷಿತಿಜದ ಮೇಲೆಯೇ ಇದ್ದು ಎಡದಿಂದ ಬಲಕ್ಕೆ ಸಾಗುತ್ತ ಭೂಮಿಯ ಪೂರ್ಣ ಸುತ್ತು ತೆಗೆಯುತ್ತಿರುತ್ತಾನೆ; ಹಾಗೂ ೩೨ ದಿನಗಳ ತನಕ ದಿನದಿಂದ ದಿನಕ್ಕೆ ಕೊಂಚಕೊಂಚವಾಗಿ ಮೇಲಕ್ಕೇರುತ್ತಿರುತ್ತಾನೆ. ೩೨ನೆಯ ದಿನ ಕೊಂಚ ಸ್ಥಿರನಾದಂತೆ ತೋರಿ ಮರುದಿನದಿಂದ ಮೇಲೇರಿದಂತೆಯೇ ಕೊಂಚಕೊಂಚವಾಗಿ ಕೆಳಗಿಳಿಯುತ್ತಾನೆ. ಹಾಗೆ ಸೂರ್ಯನು ಶ್ರಾವಣ ಮಾಸದ ೫ನೆಯ ದಿನದ ತನಕ ೬೩ ದಿನಗಳಷ್ಟು ಕಾಲ ಕ್ಷಿತಿಜದ ಮೇಲಕ್ಕೇ ಇದ್ದು ಎಡದಿಂದ ಬಲಕ್ಕೆ ಸಾಗುತ್ತ ಭೂಮಿಗೆ ಪ್ರದಕ್ಷಿಣೆ ಮಾಡುತ್ತಿರುತ್ತಾನೆ. ಶ್ರಾವಣ ಮಾಸದ ಆರನೆಯ ದಿನದಿಂದ ದಿನಮಾನವು ದಿನದಿಂದ ದಿನಕ್ಕೆ ಕಡಿಮೆಯಾಗುತ್ತ ಹೋಗುತ್ತದೆ. ಹಾಗೆಯೇ ಕಾರ್ತಿಕ ಮಾಸದ ೨೫ನೆಯ ದಿನ ಸೂರ್ಯನು ಸಂಪೂರ್ಣ ಮರೆಯಾಗುತ್ತಾನೆ. ತರು

---

1. ರಾಷ್ಟ್ರೀಯ ಪಂಚಾಂಗಕ್ಕೆ ಅನುಸಾರವಾಗಿ ದಿವಸಗಳನ್ನು ಹೇಳಿದೆ.

ವಾಯು ೧೧ ದಿನಗಳ ತನಕ ಸಂಧ್ಯಾಪ್ರಕಾಶವಿರುತ್ತದೆ. ಮತ್ತು ಅದು ಕೂಡ ದಿನದಿಂದ ದಿನಕ್ಕೆ ಕಡಿಮೆಯಾಗುತ್ತ ಸಾಗುತ್ತದೆ. ಮತ್ತು ಮಾರ್ಗಶಿರ ಮಾಸದ ಏಳನೆಯ ದಿನ ಪೂರ್ಣ ಕತ್ತಲೆ ಕವಿಯುತ್ತದೆ. ಹಾಗೆ ಮಾರ್ಗಶಿರ ಮಾಸದ ೭ನೆಯ ದಿನ ಆರಂಭವಾದ ದೀರ್ಘರಾತ್ರಿಯು ಪೌಷಮಾಸದ ೨೭ನೆಯ ದಿನದ ತನಕ ಇರುತ್ತದೆ. ಅಂದರೆ ೫೦ ದಿನಗಳಷ್ಟು ಅಥವಾ ಭೂಮಿಯ ೫೦ ಸುತ್ತು ಗಳಷ್ಟು ದೀರ್ಘಕಾಲದ ಇಡಿಯ ಒಂದು ರಾತ್ರಿಯು ಇರುತ್ತದೆ. ಆ ರಾತ್ರಿಯಲ್ಲಿ ಚಂದ್ರನು ಕಾಣಿಸುತ್ತಿರುತ್ತಾನೆ. ಹಾಗೂ ಬಲದಿಂದ ಎಡಕ್ಕೆ ಮೆಲ್ಲ ಮೆಲ್ಲನೇ ಒಂದೊಂದೇ ನಕ್ಷತ್ರವನ್ನು ಕ್ರಮಿಸುತ್ತ ಹೋಗುವುದು ಕಾಣಿಸುತ್ತದೆ. ೭೦ನೆಯ ಅಕ್ಷಾಂಶದಿಂದ ಉತ್ತರಕ್ಕೆ ಹೋದಂತೆ ಇಡಿ ಹಗಲಿನ ಮತ್ತು ಇಡಿ ಇರುಳಿನ ಅವಧಿಯು ಹೆಚ್ಚುತ್ತ ಹೋಗುತ್ತದೆ. ಧ್ರುವಬಿಂದು ಮತ್ತು ಅದರ ಹತ್ತಿರದ ಪ್ರದೇಶದಲ್ಲಿ ವರ್ಷದ ೩೬೫ ದಿನಗಳಲ್ಲಿ ೧೮೨ ದಿನಗಳಷ್ಟು ಹಗಲು ಮತ್ತು ೧೮೩ ದಿನಗಳಷ್ಟು ಇರುಳು ಇರುತ್ತದೆ.[1]

ಆರ್ಯಜನರ ಪೂರ್ವಜರು ಹಿಂದೆ ಹೇಳಿದಂತೆ ದೀರ್ಘ ಕಾಲಾವಧಿಯ ಕತ್ತಲೆ ಇರುವಂಥ ಮತ್ತು ಕಡಿದಾದ ಚಳಿ ಇರುವಂಥ ಹಾಗೂ ಸಸ್ಯಧಾನ್ಯಗಳು ಬೆಳೆಯಲು ಅನುಕೂಲವಿಲ್ಲದಂಥ ಉತ್ತರಧ್ರುವ ಪ್ರದೇಶದಲ್ಲಿ ನೆಲಸಿದ್ದುದರಿಂದ ಅವರು ತಮ್ಮ ಆಹಾರಕ್ಕಾಗಿ ಬೇಟೆಯಾಡಿ ಕೊಂದ ಮೃಗಗಳ ಮಾಂಸದ ಮೇಲೆಯೇ ಅವಲಂಬಿಸಿಕೊಂಡಿರಬೇಕಾಗಿತ್ತು. ಅಂದರೆ ಬೇಟೆಯಾಡಿ ಮೃಗ ವನ್ನು ಕೊಂದಲ್ಲದೇ ಅವರ ಜೀವನವು ಸಾಗುವಂತಿರಲಿಲ್ಲ. ದಕ್ಷಿಣಾಯನ ಆರಂಭವಾದ ಕೆಲವು ದಿನಗಳಲ್ಲಿಯೇ ಸೂರ್ಯನು ಮುಳುಗಿ ದೀರ್ಘರಾತ್ರಿಯು ಆರಂಭವಾಯಿತೆಂದರೆ ಮೊದಲು ಇದ್ದ ಶಾಖವು ಕೂಡ ಇಲ್ಲವಾಗಿ ಕತ್ತಲೆ ಮತ್ತು ಚಳಿಗಳಿಂದ ಅವರು ಬಹಳ ಪೀಡೆಗಳಿಗೊಳಗಾಗಬೇಕಾಗುತಿತ್ತು. ಆದುದರಿಂದ ಅವರು ಸೂರ್ಯನು ಮರಳಿ ಯಾವಾಗ ಮೂಡುವನೊ ಎಂದು ಅತ್ಯಂತ ಕಾತರ ಮತ್ತು ಉತ್ಸುಕತೆಯಿಂದ ಅವನ ಆಗಮನವನ್ನೇ ಎದುರು ನೋಡಬೇಕಾಗುತಿತ್ತು. ಕಡಿದಾದ ಕತ್ತಲೆಯಲ್ಲಿ ಹೆಚ್ಚಿನ ಕೆಲಸವಾವುದನ್ನೂ ಮಾಡಲು ಸಾಧ್ಯವಿಲ್ಲದೇ ಅವರೆಲ್ಲರೂ ಒಟ್ಟಿಗೆ ಕಲೆತು ಕತ್ತಲೆ ಮತ್ತು ಬೆಳಕು ಗಳ ಅಥವಾ ಮೃತ್ಯು ಮತ್ತು ಅಮೃತಗಳ ಕಾರಣವನ್ನು ಚಿಂತಿಸುತಿದ್ದಿರಬಹುದು. ಅರ್ಥಾತ್ ಕತ್ತಲೆಯಿಂದಾಗಿ ತಮಗೊದಗಿದ ಕಷ್ಟವನ್ನು ನಿವಾರಿಸುವ ಉಪಾಯ

1. Daylight, Twilight, Darkness and Time by Lucia Harrison.

ವನ್ನು ಯೋಚಿಸುತ್ತಿದ್ದಿರಬಹುದು. ಇಲ್ಲವೇ ಸೂರ್ಯನು ತಮ್ಮ ಮೇಲೆ ಸಿಟ್ಟುಗೊಂಡು ಕಾಣದಾಗಿರುವನೆಂದಾದರೆ ಅವನು ಮರಳಿ ಕಾಣಬರುವಂತೆ ಏನುಮಾಡಬೇಕಾದೀತೆಂದು ಯೋಚಿಸುತ್ತಿದ್ದಿರಬಹುದು. ಏನುಮಾಡಿದರೆ ಅವನು ಮರಳಿ ಮೂಡಬಹುದೆಂದು ಯೋಚಿಸುತ್ತಿದ್ದಿರಬಹುದು. ಆದರೆ ಅವರ ವಿಚಾರ ವಿಮರ್ಶೆಗಳ ಒಟ್ಟು ತಾತ್ಪರ್ಯವು ಸೂರ್ಯನು ಮರಳಿ ಮೂಡುವಂತಾಗಲು ತಾವು ಏನುಮಾಡಬೇಕೆಂಬುದಾಗಿತ್ತು. ಅದರ ಹೊರಗೆ ಅವರು ವಿಚಾರಿಸುವಂತಿರಲಿಲ್ಲ. ಏಕೆಂದರೆ ಅವರ ಮುಂದೆ ಕತ್ತಲೆಯನ್ನು ನಿವಾರಿಸುವುದು ಹೇಗೆಂಬುದೊಂದೇ ಮುಖ್ಯ ಪ್ರಶ್ನೆ ಇದ್ದಿತು. ಅದರ ಮುಂದೆ ಇತರ ವಿಷಯಗಳು ಗೌಣವಾಗಿದ್ದವು. ಆದುದರಿಂದ ಅವರು ಸೂರ್ಯನನ್ನು ಒಲಿಸಿಕೊಳ್ಳಲು ಚಿಕ್ಕ ಚಿಕ್ಕ ಸ್ತೋತ್ರಗಳನ್ನು ರಚಿಸಿ "ದೇವದೇವನೇ ನೀನು ಮರಳಿ ಮೂಡಿ ನಮ್ಮನ್ನು ಈ ಕಷ್ಟಗಳಿಂದ ರಕ್ಷಿಸು ಎಂದು ಮೊರೆ ಇಡುತ್ತಿದ್ದರು. ಅಂಥ ಮೊರೆ ಇಟ್ಟ ಮಂತ್ರಗಳು ಋಗ್ವೇದದಲ್ಲಿ ಹಲವು ಇವೆ:—

**ಯೇ ತೇ ಪಂಥಾಃ ಸವಿತಃ ಪೂರ್ವ್ಯಾಸೋಽರೇಣವಃ**
**ಸುಕೃತಾ ಅಂತರಿಕ್ಷೇ ।**
**ತೇಭಿರ್ನೋ ಅದ್ಯ ಪಥಿಭಿಃ ಸುಗೇಭೀ ರಕ್ಷಾ ಚ ನೋ**
**ಅಧಿ ಚ ಬ್ರೂಹಿ ದೇವ ॥ ೧-೩೫-೧೧ ॥**

ಅರ್ಥ:— ಹೇ ಚೇತನಕಾರಿಯಾದ ಸವಿತೃದೇವನೇ ಅಂತರಿಕ್ಷದಲ್ಲಿ ಧೂಳು ಮುಸುಕದಂತೆ ಚೆಲೋ ರೀತಿಯಲ್ಲಿ ಮಾಡಿದ ಯಾವ ಪುರಾತನ ಮಾರ್ಗಗಳಿವೆಯೋ ಆ ಸುಗಮವಾದ ಮಾರ್ಗಗಳಿಂದ ಬಂದು ಈಗ ನಮ್ಮನ್ನು ರಕ್ಷಿಸು ಮತ್ತು ಹೇ ದೇವನೇ ನಿನ್ನ ದರ್ಶನದಿಂದ ನಮ್ಮನ್ನು ಆಶೀರ್ವದಿಸು.

ಆರಂಭಿಕ ಸ್ಥಿತಿಯಲ್ಲಿ ಅವರು ತಮಗೆ ಬೆಳಕನ್ನು ಕೊಟ್ಟು ಉಪಕಾರವನ್ನು ಮಾಡುತ್ತಿದ್ದ ಸೂರ್ಯ ಮತ್ತು ಚಂದ್ರರನ್ನು ಪ್ರತ್ಯಕ್ಷ ದೇವರೆಂದು ಭಾವಿಸುತ್ತಿದ್ದರಲ್ಲದೆ ದೀರ್ಘರಾತ್ರಿಯ ಕಾಲದಲ್ಲಿ ಸತತವಾಗಿ ಕಾಣಬರುತ್ತಿದ್ದ ಮಿನುಗುವ ನಕ್ಷತ್ರಗಳಿಗೂ ದೇವತ್ವವನ್ನು ಕೊಟ್ಟಿದ್ದರು. ಮತ್ತು ನಕ್ಷತ್ರಗಳ ಕುರಿತು ನಾನಾ ಕಥೆಗಳನ್ನು ಕಟ್ಟಿದ್ದರು. ಮುಂದೆ ಆಕಾಶದಿಂದ ಎರಗಿದ ಸಿಡಿಲಿನ ಏಟಿಕ್ಕೆ ಕಾಡಿನ ಮರಗಳು ಉರಿದು ಹೋಗಿ ಕೆಂಡವಾಗಿರುವುದನ್ನು ಕಂಡಾಗ, ಹಾಗೂ ಕೆಂಡಗಳ ಮೇಲೆ ತರಗೆಲೆಯನ್ನೂ, ಕಟ್ಟಿಗೆಯನ್ನೂ ಒಟ್ಟಿದರೆ ಉರಿದು ಬೇಕಾಗುವುದನ್ನೂ, ಕೆಂಡಗಳಿಗಿರುವ ಸುಡುವ ಶಕ್ತಿಯನ್ನೂ, ಗೆಡ್ಡೆ

ಗೆಣಸುಗಳು ಬೆಂದು ಸಿಹಿಯಾಗುವುದನ್ನೂ ಕಂಡುಕೊಂಡ ಅವರು ಅಗ್ನಿಯನ್ನು ಸೂರ್ಯ-ಚಂದ್ರರಿಗಿಂತ ಮಿಗಿಲಾದ ದೇವನೆಂದೂ, ತಮ್ಮ ಮೊರೆ ಕೇಳಿ ತಮ್ಮ ಕಷ್ಟಗಳನ್ನು ನಿವಾರಿಸುವ ಸಲುವಾಗಿ ದಿವ್ಯ ಜಲಗಳಲ್ಲಿ ನೆಲಸಿದ್ದ ಅವನು ಧರೆಗಿಳಿದು ಬಂದಿದ್ದನೆಂದೂ ಭಾವಿಸಿ ಅಗ್ನಿಯನ್ನು ನಾನಾ ರೀತಿಗಳಲ್ಲಿ ಕೊಂಡಾಡುತ್ತಿದ್ದರು. ಏಕೆಂದರೆ ಸೂರ್ಯ-ಚಂದ್ರರು ಒಮ್ಮೊಮ್ಮೆ ಮರೆಯಾಗುತ್ತಿದ್ದರು. ಅಗ್ನಿಯಾದರೋ ಸದಾಕಾಲವೂ ಅವರ ರಕ್ಷಕನಂತೆ ಅವರ ಬಳಿಯಲ್ಲಿಯೇ ಇರುತ್ತಿದ್ದನು.

ಆರ್ಯರ ವಸತಿಸ್ಥಾನವು ದೀರ್ಘಕಾಲ ಕತ್ತಲೆಯಿರುವಂಥ ಹಾಗೂ ಸಹಿಸಲಸಾಧ್ಯವಾದ ಚಳಿ ಇರುವಂಥ ಉತ್ತರ ಧ್ರುವ ಪ್ರದೇಶದಲ್ಲಿದ್ದುದರಿಂದಲೇ ಅವರಲ್ಲಿ ಅಗ್ನಿಗೆ ಇತರ ದೇವತೆಗಳಿಗಿಂತ ಹೆಚ್ಚಿನ ಪ್ರಾಧಾನ್ಯತೆ ಬಂದಿತ್ತು. ಅರ್ಥಾತ್ ಅಗ್ನಿಯೇ ಅವರ ಪರದೈವವಾಗಿದ್ದ. ಹೀಗಾಗಿ ವೇದಗಳಲ್ಲಿಯೇ ಪ್ರಾಚೀನವಾದುದೆಂದು ಹೇಳಲಾಗುವ ಋಗ್ವೇದವು ಅಗ್ನಿಯೆಂಬ ಶಬ್ದದಿಂದ ಅಗ್ನಿಯ ಸ್ತುತಿಯಿಂದ ಆರಂಭವಾಗುತ್ತದೆ. ಮತ್ತು ಋಗ್ವೇದದಲ್ಲಿನ ಅರ್ಧಕ್ಕಿಂತ ಹೆಚ್ಚು ಮಂತ್ರಗಳು ಅಗ್ನಿ ಮತ್ತು ಅಗ್ನಿಯ ಇನ್ನೊಂದು ರೂಪ ಇಂದ್ರ ಅವರಿಬ್ಬರ ವರ್ಣನೆ ಮತ್ತು ಸ್ತುತಿಗಳನ್ನು ಹಾಡುತ್ತವೆ.

ಅಥರ್ವ ಋಷಿಯ ಕುಲದ ಆಂಗೀರಸರು ಕಾಡಿನಲ್ಲಿ ಸಿಡಿಲಿನ ಜಳಕ್ಕೆ ಉರಿದುಹೋದ ಮರಗಳಿಂದಾದ ಕೆಂಡದ ರೂಪದಲ್ಲಿ ಅಗ್ನಿಯನ್ನು ಮೊತ್ತ ಮೊದಲು ಕಂಡಿದ್ದರು. ಮತ್ತು ಅಗ್ನಿಯು ಮರದೊಳಗೆ ಇರಬಹುದೆಂದು ಭಾವಿಸಿ ಮರದ ಕಟ್ಟಿಗೆಗಳನ್ನು ಒಟ್ಟಿಗೆ ಹಿಡಿದು ಕಡೆದು ಅವುಗಳಿಂದ ಅಗ್ನಿಯನ್ನು ಹುಟ್ಟಿಸಬಹುದೆಂದು ಕಂಡುಹಿಡಿದಿದ್ದರು. ಆ ಕುರಿತಾದ ಹಲವು ಮಂತ್ರಗಳು ಋಗ್ವೇದದಲ್ಲಿ ಇವೆ:—

**ತ್ವಾಮಗ್ನೇಽಂಗಿರಸೋ ಗುಹಾಹಿತಮನ್ವವಿಂದಂಛ್ಛಿ**
**ಶ್ರಿಯಾಣಂ ವನೇ ವನೇ ।**
**ಸಜಾಯಸೇ ಮಥ್ಯಮಾನಃ ಸಹೋಮಹಸ್ತ್ವಾಮಾಹುಃ**
**ಸಹಸಸ್ಪುತ್ರಮಂಗಿರಃ ॥ ೫-೧೧-೬ ॥**

ಅರ್ಥ—ಹೇ ಅಗ್ನಿಯೇ ಕಾಡುಗಳಲ್ಲಿ ಆಶ್ರಯಪಡೆದು (ಬೂದಿ ಮುಸುಕಿದುದರಿಂದ) ಗುಪ್ತನಾಗಿದ್ದ ನಿನ್ನನ್ನು ಅಥವಾ ಗುಳಿಗಳಲ್ಲಿ ಇದ್ದ ನಿನ್ನನ್ನು ಅಂಗೀರಸ ಕುಲದವರು ಕಂಡುಹಿಡಿದರು. ಹೇ ಅಂಗೀರನೇ ನೀನು ಬಲಹಾಕಿ

(ಕಟ್ಟಿಗೆಗಳನ್ನು) ಕಡೆಯುವುದರಿಂದ ಹುಟ್ಟುತ್ತೀ ಆದುದರಿಂದ ನಿನ್ನನ್ನು ಬಲದ ಪುತ್ರನೆಂದೂ, ಬಲಿಷ್ಠರಲ್ಲಿ ಬಲಿಷ್ಠನೆಂದೂ ಅನ್ನುತ್ತಾರೆ.

**ಇಮಮು ತ್ಯಮಥರ್ವವದಗ್ನಿಂ ಮಥಂತಿ ವೇದಸಃ ।**
**ಯಮಂಕೂಯಂತಮಾನಯನ್ನಮೂರಂ ಶ್ಯಾವಾಭ್ಯಃ**
**॥ ೬-೧೫-೧೭ ॥**

ಅರ್ಥ—ಯಜ್ಞವಿಧಿಗಳನ್ನು ಬಲ್ಲವರು ಅಥರ್ವ ಋಷಿಯಂತೆಯೇ (ಕಟ್ಟಿಗೆಗಳನ್ನು) ಕಡೆದು ಅಗ್ನಿಯನ್ನು ಹುಟ್ಟಿಸುತ್ತಾರೆ. ಅವರು ಅಂಕುಡೊಂಕಾಗಿ ಓಡುವ ಮತ್ತು ಸದಾಕಾಲ ಎಚ್ಚೆತ್ತೇ ಇರುವ ಇವನನ್ನು ಕತ್ತಲೆಗಳಿಗೋಸ್ಕರ (=ರಾತ್ರಿಯ ಕತ್ತಲೆಯನ್ನು ನಿವಾರಿಸುವ ಸಲುವಾಗಿ) ತಂದರು. (ಉತ್ಪಾದಿಸಿದರು.)

ಹಿಂದಿನ ಎರಡು ಮಂತ್ರಗಳ ಪೈಕಿ ಮೊದಲನೆಯದರಲ್ಲಿ ಅಗ್ನಿಯನ್ನು "ಅಂಗಿರಃ" ಎಂದು ಕರೆದಿರುವುದರಿಂದ ಮತ್ತು ಎರಡನೆಯದರಲ್ಲಿ "ಅಥರ್ವನಂತೆ ಕಡೆಯುತ್ತಾರೆ" ಎಂದಿರುವುದರಿಂದ ಕಾಡುಗಳಲ್ಲಿ ಗುಪ್ತಸ್ಥಿತಿಯಲ್ಲಿದ್ದ ಕೆಂಡಗಳನ್ನು ಮೊತ್ತಮೊದಲು ಕಂಡುಹಿಡಿದವರು ಅಂಗಿರಸ ಕುಲದ ಜನರೆಂದೂ, ಅವರಿಂದಾಗಿಯೇ ಕೆಂಡಕ್ಕೆ ಮತ್ತು ತರುವಾಯ ಬೆಂಕಿಗೆ "ಅಂಗಿರಃ" ಎಂಬ ಹೆಸರು ಬಂದಿದ್ದಿತೆಂದೂ, ತರುವಾಯ ಅಂಗಿರಸ ಕುಲದಲ್ಲಿ ಹುಟ್ಟಿದ ಅಥರ್ವನೆಂಬವನು ಕಟ್ಟಿಗೆಗಳನ್ನು ಕಡೆದು ಬೆಂಕಿ ಹುಟ್ಟಿಸುವುದನ್ನು ಕಂಡುಹಿಡಿದನೆಂದೂ ಆ ಕಾರಣದಿಂದಲೇ ಬೆಂಕಿ ಕಡೆಯುವ ಸಂದರ್ಭಗಳಲ್ಲಿ ಅಥರ್ವನಂತೆ ಕಡೆಯುತ್ತಾರೆ ಇಲ್ಲವೇ ಅಥರ್ವನು ಕಡೆದನು ಎಂಬ ಉಲ್ಲೇಖಗಳು ಬರುತ್ತವೆಂದೂ ಸಿದ್ಧವಾಗುತ್ತದೆ:—

**ತ್ವಾಮಗ್ನೇ ಪುಷ್ಕರಾದಧ್ಯಥರ್ವಾ ನಿರಮಂಥತ ।**
**ಮೂರ್ಧ್ನೋ ವಿಶ್ವಸ್ಯವಾಘತಃ ॥-೧೬-೧೩ ॥**

ಅರ್ಥ—ಹೇ ಅಗ್ನಿದೇವನೇ, ಅಥರ್ವ ಋಷಿಯು ಸಕಲ ಯಾಜ್ಞಿಕರ ತಲೆಯ ಮೇಲಿಂದ ಅಂದರೆ ಎಲ್ಲ ಯಾಜ್ಞಿಕರನ್ನು ಮೀರಿಸಿದವನಾಗಿ ತಾವರೆಯ (ತಾವರೆ ಎಲೆಯ) ಮೇಲೆ ಕಡೆದು ನಿನ್ನನ್ನು ಉತ್ಪಾದಿಸಿದನು.

ಕಟ್ಟಿಗೆಗಳನ್ನು ಕಡೆದು ಬೆಂಕಿ ಹುಟ್ಟಿಸುವುದು ಅತ್ಯಂತ ಶ್ರಮದ ಕೆಲಸ ವಾಗಿದ್ದುದರಿಂದ ಒಮ್ಮೆ ಹೊತ್ತಿಸಿದ ಬೆಂಕಿಯು ನೊಂದಿಹೋಗದಂತೆ ಕಾಪಾಡು ವುದು ಅವರ ಮೊತ್ತಮೊದಲಿನ ಕರ್ತವ್ಯವಾಯಿತು. ಆದುದರಿಂದ ಅವರು ತಮ್ಮ ಮನೆಯೊಳಗೆ ಒಂದು ಗುಳಿಯನ್ನು ತೋಡಿ ಅದರಲ್ಲಿ ಕೆಂಡಗಳನ್ನು ಹಾಕಿ ಹೊತ್ತು ಹೊತ್ತಿಗೆ ಉರುವಲನ್ನು ಹಾಕುತ್ತ ಬರುವ ಕ್ರಮವನ್ನು ಆಚರಣೆ ತಂದರು. ಬರಿಯ ನೆಲದ ಮೇಲೆ ಕೆಂಡಗಳನ್ನಿಟ್ಟು ಬೆಂಕಿ ಹೊತ್ತಿಸಿದರೆ ರಾತ್ರಿಯು ಕುಳಿರ್ಗಾಳಿಗೆ ಬೆಂಕಿಯೂ ಕೆಂಡವೂ ನೊಂದಿಹೋಗುತ್ತಿದ್ದಿತು. ಆದುದರಿಂದಲೇ ಅವರು ಅಗ್ನಿಯನ್ನು ಕಾಪಾಡಲು ಕುಂಡಗಳನ್ನು ಮಾಡುತಿದ್ದರು. ಆ ರೀತಿಯಲ್ಲಿ ಬೆಂಕಿಯು ನೊಂದಿಹೋಗದಂತೆ ಆಗಾಗ್ಗೆ ಅಗ್ನಿಕುಂಡದೊಳಗೆ ಉರುವಲನ್ನು ಹಾಕುತ್ತ ಬರುವ ಕ್ರಮವು ಮುಂದೆ ವಿಧಿಪೂರ್ವಕವಾದ ಅಗ್ನಿಹೋತ್ರದ ರೂಪ ವನ್ನು ತಳೆಯಿತು. ಅಲ್ಲದೇ ಅಗ್ನಿಯೇ ಪ್ರತ್ಯಕ್ಷದೇವನೆಂಬ ಭಾವನೆಯು ಬಲಿತು ತಾವು ಮಾಡುವ ವಿಶಿಷ್ಟ ಕಾರ್ಯಗಳಿಗೆಲ್ಲ ಅವನು ಸಾಕ್ಷಿಯಾಗಿರುವಂತೆ ಅಗ್ನಿ ಯನ್ನು ಹೊತ್ತಿಸಿ ಅವನ ಮುಂದೆಯೇ ತಮ್ಮ ಕಾರ್ಯಗಳನ್ನು ನೆರವೇರಿಸ ತೊಡಗಿದರು.

ತರುವಾಯದ ಜನರು ತಾವು ವಾಸಿಸುವ ಮನೆಯೊಳಗೆ ಅಗ್ನಿಗಾಗಿಯೇ ಒಂದು ಕೋಣೆಯನ್ನು ಮೀಸಲಾಗಿಡುತಿದ್ದರು.1 ಮತ್ತು ಆ ಕೋಣೆಯಲ್ಲಿ ಮಂಡಲಾಕಾರದ ಕುಂಡವನ್ನು ಮಾಡಿ ಅದರಲ್ಲಿ ಅಗ್ನಿಯನ್ನು ಸ್ಥಾಪಿಸುತಿದ್ದರು. ಅದನ್ನು "ಗಾರ್ಹಪತ್ಯಾಗ್ನಿ" ಎನ್ನುತಿದ್ದರು. ಅಂದರೆ ಗೃಹಪತಿಯು ದಿನನಿತ್ಯವೂ ಜರಗಿಸಬೇಕಾಗಿರುವ ಅಗ್ನಿಹೋತ್ರ, ವೈಶ್ವದೇವ, ಪಾರ್ವಣ ಶ್ರಾದ್ಧ ಮೊದಲಾದವು ಗಳನ್ನು ನೆರವೇರಿಸಲು ಸ್ಥಾಪಿಸಿದ ಹಾಗೂ ಕಾಪಾಡಿಕೊಂಡು ಬರಬೇಕಾದ ಅಗ್ನಿ ಎಂದು ಅರ್ಥ. ಜನರು ಇಟ್ಟಿಗೆಯನ್ನು ನಿರ್ಮಿಸಲು ಕಲಿತ ತರುವಾಯದಿಂದ ಅಗ್ನಿಕುಂಡಗಳನ್ನು ಇಟ್ಟಿಗೆಗಳಿಂದ ನಿರ್ಮಿಸತೊಡಗಿದರು. ಇಟ್ಟಿಗೆಗಳಿಂದ ನಿರ್ಮಿಸಿದ ಕುಂಡಗಳನ್ನು ಚಿತಿ ಎನ್ನುತಿದ್ದರು.

ಸೂರ್ಯಪ್ರಕಾಶದ ಅಭಾವದಿಂದ ಕತ್ತಲೆ ಮತ್ತು ಚಳಿಗಳಿಂದ ಕಷ್ಟ ಪಡುತಿದ್ದ ಆ ಜನರು ಹೊಟ್ಟೆ ತುಂಬಿಸಲು ಹಣ್ಣುಹಂಪಲುಗಳಾಗಲೀ, ದವಸ ಧಾನ್ಯಗಳಾಗಲೀ ದೊರೆಯದೇ, ಕೈಯಲ್ಲಿ ದಂಡವನ್ನು ಹಿಡಿದವರಾಗಿ ನಕ್ಷತ್ರಗಳ ಇಲ್ಲವೇ ತಿಂಗಳ ಬೆಳಕಿಗೆ ಕಳ್ಳರಂತೆ ಹಿಂಡುಗಟ್ಟಿ ಸಂಚರಿಸುತಿದ್ದರು. ಮತ್ತು

---

1. ಶ್ರುತಿಬೋಧ; ಎರಡನೆಯ ಖಂಡ; ಉಪೋದ್ಘಾತ ಪುಟ ೧೬.

ಅಲ್ಲಲ್ಲಿ ಹೊಂಚಿಕೂತು ಕತ್ತಲೆಯಲ್ಲಿ ಅಡ್ಡಾಡುವ ಮೃಗಗಳನ್ನು ದಂಡಗಳಿಂದ ಹೊಡೆದು ಕೆಡವುತ್ತಿದ್ದರು. ಮತ್ತು ಅವನ್ನು ಹೊತ್ತುತಂದು ಅವರ ತೊಗಲನ್ನು ಸುಲಿದು ಮಾಂಸವನ್ನು ಕುಂಡದಲ್ಲಿನ ಬೆಂಕಿಯಲ್ಲಿ ಸುಟ್ಟು ತಿನ್ನುತ್ತಿದ್ದರು. ತೊಗಲನ್ನು ಉಟ್ಟುಕೊಳ್ಳಲು ಮತ್ತು ಹೊದ್ದುಕೊಳ್ಳಲು ಉಪಯೋಗಿಸುತ್ತಿದ್ದರು. ಉಟ್ಟುಕೊಳ್ಳುವ ತೊಗಲನ್ನು ಸೊಂಟಕ್ಕೆ ಸುತ್ತಿ ಹುಲ್ಲಿನ ಹಗ್ಗದಿಂದ ಬಿಗಿದು ಕಟ್ಟುತ್ತಿದ್ದರು

ಮುಂದೆ ಅವರು ಮಾಡುವ ನಿತ್ಯಕರ್ಮಗಳಿಗೆಲ್ಲ ಒಂದು ವ್ಯವಸ್ಥಿತ ರೂಪ ಬಂದಿತು. ಯಜ್ಞಸಂಸ್ಥೆಯು ಹುಟ್ಟಿತು. ವಿಧಿ–ವಿಧಾನಗಳು ಏರ್ಪಟ್ಟವು. ಕೈಯಲ್ಲಿ ದಂಡಹಿಡಿಯುವ ಮತ್ತು ತೊಗಲನ್ನು ಉಡುವ ಕಾರ್ಯಕ್ಕೆ "ಮೌಂಜೀ ಬಂಧನ"ವೆಂಬ ಹೆಸರು ಬಂದಿತು. ಅದರ ಪರಿಷ್ಕೃತ ರೂಪವೇ ಈಗಿನ ಉಪನಯನ ಸಂಸ್ಕಾರವಾಗಿರುತ್ತದೆ. ಬೇರೆ ಬೇರೆ ಯಜ್ಞಗಳಿಗೆ ಬೇರೆ ಬೇರೆ ಆಕೃತಿಯ ಕುಂಡಗಳು ನಿರ್ಮಿಸಲ್ಪಟ್ಟವು. ತಾವು ತಿನ್ನುವ ಆಹಾರವನ್ನು ತಮ್ಮ ಪರದೈವವಾದ ಅಗ್ನಿಗೆ ಅರ್ಪಿಸದೇ ತಿನ್ನಬಾರದೆಂಬ ಕಟ್ಟಳೆಯನ್ನು ಆಚರಣೆಗೆ ತಂದರು. ಹಾಗೆಯೇ ಅವರು ಕಲ್ಪಿಸಿದ ಬೇರೆ ಕೆಲವು ದೇವತೆಗಳಿಗೂ ಆಹುತಿಗಳನ್ನು ಅರ್ಪಿಸುವ ಕಟ್ಟಳೆಯು ಆಚರಣೆಗೆ ಬಂತು. ಅಂದರೆ ದೇವತೆಗಳಿಗೆ ಆಹುತಿಗಳನ್ನು ಅರ್ಪಿಸುವುದು ಪ್ರತಿಯೊಬ್ಬ ಆರ್ಯನ ಕರ್ತವ್ಯಕರ್ಮವಾಯಿತು. ಅವರು ಸ್ವಯಂ ಮಾಂಸಾಹಾರಿಗಳಾಗಿದ್ದುದರಿಂದ ದೇವತೆಗಳಿಗೆ ಕೂಡ ಮಾಂಸದ ಆಹುತಿಗಳನ್ನೇ ಕೊಡುತ್ತಿದ್ದರು. ಶ್ರಾದ್ಧದ ದಿನಗಳಲ್ಲಿ ಪಿತೃಗಳಿಗೆ ಮಾಂಸದ ಅಡಿಗೆಯನ್ನು ಬಡಿಸಿ, ಆ ಮೂಲಕ ಪಿತೃಗಳನ್ನೂ, ಶ್ರಾದ್ಧಕ್ಕೆ ಆಮಂತ್ರಿತರಾದ ಬ್ರಾಹ್ಮಣರನ್ನೂ ತೃಪ್ತಿಪಡಿಸುತ್ತಿದ್ದರು. ಆರ್ಯ ಬ್ರಾಹ್ಮಣರು ವೇದಾಂಗವಾಗಿರುವ ಕಲ್ಪಸೂತ್ರಗಳಲ್ಲಿ ವಿಧಿಸಿದಂತೆ ಆಚರಿಸಲೇಬೇಕಾಗಿತ್ತು. ಅದು ಋಷಿಯರ ಕಾಲದಿಂದ ಸಾಗಿಬಂದ ಧರ್ಮವಾಗಿತ್ತು. ಅದರ ಆಚರಣೆಯಲ್ಲಿ ಚ್ಯುತಿ ಬಂದರೆ ಚ್ಯುತಿಗೆ ಕಾರಣನಾದವನು ಪತಿತನೆನಿಸಿಕೊಳ್ಳುತ್ತಿದ್ದನು.

ಋಗ್ವೇದಿಗಳಾದ ಬ್ರಾಹ್ಮಣರು ಶಾಕಲಶಾಖೆಯವರಾಗಿದ್ದರೆ ಅವರು ಐತರೇಯ ಬ್ರಾಹ್ಮಣ ಆಶ್ವಲಾಯನ ಶ್ರೌತ ಮತ್ತು ಗೃಹ್ಯಸೂತ್ರಗಳಲ್ಲಿ ವಿಧಿಸಿರುವಂತೆ ತಮ್ಮ ನಿತ್ಯ ಮತ್ತು ನೈಮಿತ್ತಿಕ ಕರ್ಮಗಳನ್ನು ನೆರವೇರಿಸಬೇಕಾಗಿತ್ತು. ಆಶ್ವಲಾಯನ ಗೃಹ್ಯಸೂತ್ರದಲ್ಲಿ ಮೊದಲನೆಯ ಅಧ್ಯಾಯದ ಹನ್ನೊಂದನೆಯ ಖಂಡದಲ್ಲಿ ಪಶುಕಲ್ಪವಿದೆ. ಅದು ಪಾಕಯಜ್ಞಗಳಲ್ಲಿ ಪಶುಗಳನ್ನು ಆಲಂಭನ ಮಾಡುವ (=ಕೊಲ್ಲುವ) ವಿಧಿಯನ್ನು ಹೇಳುತ್ತದೆ. ತರುವಾಯ ಎರಡನೆಯ

ಅಧ್ಯಾಯದ ನಾಲ್ಕನೆಯ ಖಂಡದಲ್ಲಿ ಋತುಯಜ್ಞಗಳ ವಿಧಿಯಿದೆ. ಅದಕ್ಕನು ಸಾರವಾಗಿ ಹೇಮಂತ ಮತ್ತು ಶಿಶಿರ ಋತುಗಳಲ್ಲಿ ಕೃಷ್ಣಪಕ್ಷದ ಅಷ್ಟಮಿಯಂದು ಯಜ್ಞದಲ್ಲಿ ದೇವತೆಗಳಿಗೆ ಪಶುಗಳ ವಪೆಯನ್ನು (Omentum) ಆಹುತಿಯಾಗಿ ಅರ್ಪಿಸಬೇಕಾಗಿದೆ. ಹಾಗೆಯೇ ಪಾರ್ವಣ ಶ್ರಾದ್ಧಗಳಲ್ಲಿ ಅಂದರೆ ಅಮವಾಸ್ಯೆ ಮತ್ತು ಹುಣ್ಣಿಮೆ ಎಂಬ ಪರ್ವದಿನಗಳಲ್ಲಿ ಜರಗಿಸುವ ಪಿತೃಶ್ರಾದ್ಧಗಳಲ್ಲಿ ಪಶುವಿನ ಆಲಂಭನವನ್ನು ವಿಧಿಸಿದೆ. ಆದರಲ್ಲಿ ಪಿತೃಗಳಿಗೆ ಅರ್ಪಿಸಿ ಉಳಿದ ಮಾಂಸವನ್ನು ಅಟ್ಟು ಬ್ರಾಹ್ಮಣರಿಗೆ ಬಡಿಸಬೇಕೆಂದು ಹೇಳಿದೆ.

ಕ್ಷತ್ರಿಯ ಅರಸುಗಳು ಜರಗಿಸುತಿದ್ದ ಕಾಮ್ಯೇಷ್ಟಿಗಳಲ್ಲಿ ಮತ್ತು ನಿರೂಢ ಪಶುಬಂಧ ಮೊದಲಾದ ಯಜ್ಞಗಳಲ್ಲಿ ನೂರಾರು ಪಶುಗಳನ್ನು ಆಲಂಭನ ಮಾಡುತಿದ್ದರು ಮತ್ತು ಸಹಸ್ರ ಸಹಸ್ರ ಬ್ರಾಹಣ್ಮರಿಗೆ ಮಾಂಸದ ಅಡಿಗೆಯ ಭೋಜನಗಳು ಅಥವಾ ಸಂತರ್ಪಣೆಗಳು ಜರಗುತಿದ್ದವು. ಅಂದರೆ ಆಗಿನ ದಿನಗಳಲ್ಲಿ ಇಂದಿನಂಥ ಜಾತಿಭೇದಗಳಾಗಲೀ ಕೀಳು-ಮೇಲೆಂಬ ಭಾವನೆಯಾಗಲೀ ಇರಲಿಲ್ಲವಾದುದರಿಂದ ಆರ್ಯಜನರ ಎಲ್ಲ ಪಂಗಡಗಳಲ್ಲಿ ಮಾಂಸ ಭೋಜನವು ಸಾಮಾನ್ಯವಾಗಿದ್ದಿತು. ಅರ್ಥಾತ್ ಅಂದಿನ ಆರ್ಯಜನರ ಸಾಮಾಜಿಕ ಕಟ್ಟು ಕಟ್ಟಳೆಗಳನ್ನು ಇಂದಿನ ಯೂರೋಪೀಯರ ಸಾಮಾಜಿಕ ರೀತಿ-ನೀತಿಗಳಿಗೆ ಹೋಲಿಸಬಹುದಾಗಿದೆ. ಉಚ್ಚ ಧರ್ಮಾಧಿಕಾರಿಯಿಂದ ಮೊದಲುಗೊಂಡು ಸಾಮಾನ್ಯ ಮನುಷ್ಯನ ವರೆಗೆ ಎಲ್ಲರ ಆಹಾರ ಪಾನೀಯಗಳು ಸಮಾನವಾಗಿದ್ದವು. ಮನುಷ್ಯನ ಆಹಾರವು ಅವನ ಮೇಲು ಕೀಳುಗಳಿಗೆ ಕಾರಣವಾಗಿರಲಿಲ್ಲ. ವಿದ್ಯೆ ಮತ್ತು ಜ್ಞಾನಗಳೇ ಮನುಷ್ಯನ ಮೇಲು ಕೀಳುಗಳನ್ನು ಅಳೆಯುವ ಮಾನದಂಡ ವಾಗಿತ್ತು.

ವೇದಗಳ ಆರು ಅಂಗಗಳಲ್ಲಿ ಒಂದಾದ ಕಲ್ಪಶಾಸ್ತ್ರದಲ್ಲಿ ಅಂದರೆ ವೈದಿಕ ಯಜ್ಞಗಳ ವಿಧಿ-ವಿಧಾನಗಳನ್ನು ಹೇಳಿರುವ ಶ್ರೌತ ಮತ್ತು ಗೃಹ್ಯಸೂತ್ರಗಳಲ್ಲಿ ದ್ವಿಜರು ಮತ್ತು ರಥಕಾರರು ಆಚರಿಸಬೇಕಾಗಿರುವ ನಿತ್ಯ ಮತ್ತು ನೈಮಿತ್ತಿಕ ಯಜ್ಞಕರ್ಮಗಳು ವಿವರಿಸಲ್ಪಟ್ಟಿವೆ. ಆ ಸೂತ್ರಗ್ರಂಥಗಳು ಇಂದಿಗೂ ಉಪ ಲಬ್ಧವಿರುವುದರಿಂದ ಇಚ್ಛೆ ಇದ್ದವರು ಅವುಗಳನ್ನು ತರಿಸಿಕೊಂಡು ಓದಿ ತಿಳಿದು ಕೊಳ್ಳಬಹುದು. ದಿವಂಗತ ಲೋಕಮಾನ್ಯ ಬಾಲಗಂಗಾಧರ ತಿಲಕರವರು ಸ್ಥಾಪಿಸಿದ ವೈದಿಕ ಸಂಶೋಧನ ಮಂಡಲ ಎಂಬ ಸಂಸ್ಥೆಯು ಪೂನದಲ್ಲಿದೆ. (ಪುಣೆಯಲ್ಲಿ) ಆ ಸಂಸ್ಥೆಯಲ್ಲಿ ದುಡಿಯುತ್ತಿರುವ ವೈದಿಕ ವಿದ್ವಾಂಸರು ಬಹಳ ಪರಿಶ್ರಮದಿಂದ ಎಲ್ಲ ಶ್ರೌತಸೂತ್ರಗಳನ್ನು ಒಂದೇ ಗ್ರಂಥದಲ್ಲಿ ಸೇರಿಸಿ "ಶ್ರೌತ

ಕೋಶ" ಎಂಬ ಬೃಹದ್ ಗ್ರಂಥವನ್ನು ಮೂರು ಭಾಗಗಳಲ್ಲಿ ಪ್ರಕಟಿಸುವ ಮಹತ್ಕಾರ್ಯವನ್ನು ಕೈಗೊಂಡಿದ್ದಾರೆ; ಮತ್ತು ಅದರ ಎರಡು ಭಾಗಗಳು ಈಗಾಗಲೇ ಪ್ರಕಟವಾಗಿವೆ.[1]

ತಾತ್ಪರ್ಯವೇನೆಂದರೆ ಶ್ರೌತಸೂತ್ರಗಳ ಮತ್ತು ವೇದಗಳ ಗದ್ಯಭಾಗವಾಗಿರುವ ಬ್ರಾಹ್ಮಣ ಗ್ರಂಥಗಳ ಅಧ್ಯಯನದಿಂದ ಸಾರಸ್ವತ ಬ್ರಾಹ್ಮಣರ ಪೂರ್ವಜರಾಗಿದ್ದ ಸಕಲ ಆರ್ಯ ಋಷಿಗಳು ಮಾಂಸಾಹಾರಿಗಳಾಗಿದ್ದರೆಂದು ತಿಳಿದುಬರುತ್ತದೆ. ಹಾಗೂ ಸಾರಸ್ವತ ಬ್ರಾಹ್ಮಣರಲ್ಲಿ ಮಾಂಸಾಹಾರ ಮತ್ತು ಮತ್ಸ್ಯಾಹಾರವು ಪಾರಂಪರ್ಯವಾಗಿ ಸಾಗಿಬಂದಿದ್ದಿತೆಂದು ತಿಳಿಯಬೇಕಾಗುತ್ತದೆ. ಪ್ರಕೃತದಲ್ಲಿ ಸಾರಸ್ವತ ಬ್ರಾಹ್ಮಣರ ಇಡೀ ಸಮುದಾಯವು ಮಾಂಸಾಹಾರವನ್ನು ಸಂಪೂರ್ಣವಾಗಿ ತೊರೆದಿದೆಯಾದರೂ ಅವರಲ್ಲಿನ ಒಂದು ಚಿಕ್ಕ ಪಂಗಡವು ಇನ್ನೂ ಮತ್ಸ್ಯಾಹಾರದ ಹಳೆಯ ಪರಂಪರೆಗೆ ಅಂಟಿಕೊಂಡಿದೆ.

ಆರ್ಯಜನರ ಧಾರ್ಮಿಕ ಮತ್ತು ಸಾಮಾಜಿಕ ಸ್ಥಿತಿ-ಗತಿಗಳನ್ನು ತಿಳಿಸುವ ಅತ್ಯಂತ ಪ್ರಾಚೀನ ಗ್ರಂಥಗಳೆಂದರೆ ವೇದಗಳಾಗಿರುತ್ತವೆ. ಪುರಾಣ ಮತವಾದಿಗಳಾದ ಭಾರತೀಯ ಸಂಸ್ಕೃತ ಪಂಡಿತರು ಮತ್ತು ಧರ್ಮಪ್ರಚಾರಕರಾಗಿರುವ ಮಠಾಧಿಪತಿಗಳು ವೇದಗಳನ್ನು ಅನಾದಿಯೆಂದೂ, ಅಪೌರುಷೇಯವೆಂದೂ ಅನ್ನುತ್ತಾರೆ. ಅಂದರೆ ಅವುಗಳ ಕಾಲವನ್ನು (=ಆದಿಯನ್ನು) ಹೇಳಲಾಗುವುದಿಲ್ಲ; ಮತ್ತು ಅವುಗಳು ಯಾವನೊಬ್ಬ ಮನುಷ್ಯನಿಂದ ರಚಿಸಲ್ಪಟ್ಟವುಗಳಲ್ಲ. ಅವುಗಳು ದೇವರಿಂದಲೇ ಮನುಷ್ಯರಿಗೆ ಪ್ರಾಪ್ತವಾದವುಗಳು ಅನ್ನುತ್ತಾರೆ. ವೇದಗಳಿಗೆ ಟೀಕೆ ಮತ್ತು ಭಾಷ್ಯಗಳನ್ನು ರಚಿಸಿದ ಮುನಿಯರು ಭಾಷ್ಯಾರಂಭದಲ್ಲಿ **"ಯಸ್ಯ ನಿಶ್ವಸಿತಂ ವೇದಾ ಯೋ ವೇದಾನ್ ಜಗತೇಽಖಿಲಾನ್ ಪ್ರದದೌ ತಮಹಂ ವಂದೇ ಪರಮಾತ್ಮಾನಮವ್ಯಯಮ್"** ಎಂದಿದ್ದಾರೆ. ಅಂದರೆ "ವೇದಗಳು ಯಾರ ಉಸಿರೋ ಯಾರು ಸಕಲ ವೇದಗಳನ್ನು ಜಗತ್ತಿಗೆ ಕರುಣಿಸಿದನೋ ಅಂಥ ಅವ್ಯಯನಾದ ಪರಮಾತ್ಮನನ್ನು ವಂದಿಸುತ್ತೇನೆ" ಎಂದರ್ಥ. ಬೇರೆ ಕೆಲವರು "ಪರಮಭಕ್ತರೂ, ಪರಿಶುದ್ಧಾತ್ಮರೂ ಆಗಿದ್ದ ಕೆಲವು ಋಷಿಗಳ ಹೃದಯದಲ್ಲಿ ಪರಮಾತ್ಮನು ವೇದಮಂತ್ರಗಳನ್ನು ಪ್ರಕಟಗೊಳಿಸಿದನು" ಅನ್ನುತ್ತಾರೆ. ಇನ್ನು ಕೆಲವರು "ಪವಿತ್ರಾತ್ಮರಾದ ಋಷಿಗಳು ತಮ್ಮ ಯೋಗಬಲದಿಂದ ವೇದಮಂತ್ರಗಳನ್ನು ಕಂಡರೆಂತಲೂ, ವೇದಮಂತ್ರಗಳೊಂದಿಗೆ ಬರುವ ಹೆಸರಿನ ಋಷಿಗಳೇ ಮಂತ್ರಗಳನ್ನು ಕಂಡವರೆಂತಲೂ ವಿವರಿಸುತ್ತಾರೆ.

1. ಇಂಗ್ಲೀಷು ಭಾಷಾಂತರ ಸಹಿತವಾಗಿ ಎರಡು ಭಾಗಗಳ ಬೆಲೆ ೧೫೫ ರೂಪಾಯಿಗಳು.

ಅಂದರೆ ಅವರ ಅಭಿಪ್ರಾಯದಲ್ಲಿ ಆ ಋಷಿಗಳು ಮಂತ್ರದೃಷ್ಟಾರರೇ ಹೊರತು ನಿರ್ಮಾತೃಗಳಲ್ಲ. ನೈಯಾಯಿಕರು ಆ ಮಂತ್ರಗಳ ನಿರ್ಮಾತೃಗಳಾರೆಂದು ಜನರಿಗೆ ಮರೆತು ಹೋದುದರಿಂದ, ಅಂದರೆ ಪರಂಪರೆಯಿಂದ ಸಾಗಿ ಬರುತ್ತಿದ್ದ ಸಂಪ್ರದಾಯವು ಕಡಿದುಹೋದುದರಿಂದ ಆ ಮಂತ್ರಗಳಿಗೆ ಅಪೌರುಷೇಯತ್ವವು ಪ್ರಾಪ್ತವಾಯಿತೆಂದು ಹೇಳುತ್ತಾರೆ. ಮತ್ತು ಆ ಮಂತ್ರಗಳನ್ನು ಕಂಠಪಾಠ ಮಾಡಿ ಕಾಪಾಡಿಕೊಂಡು ಬಂದ ಋಷಿಗಳ ಹೆಸರುಗಳು ಆ ಮಂತ್ರಗಳೊಂದಿಗೆ ಸಾಗಿಬಂದಿವೆಯೆಂದು ವಿವರಿಸುತ್ತಾರೆ.

ಹೇಗಿದ್ದರೂ ಸಿಂಧೂಕಣಿವೆಯ ಅಗೆತಗಳಲ್ಲಿ ಬೆಳಕಿಗೆ ಬಂದ ಮುದ್ರೆಗಳಿಂದಾಗಿ ವೇದಮಂತ್ರಗಳ ಕುರಿತು ಪುರಾಣ ಮತವಾದಿಗಳಾದ ಪಂಡಿತರಲ್ಲಿ ಪ್ರಚಲಿತವಿರುವ ಹಾಗೂ ಆ ಮಂತ್ರಗಳ ಕುರಿತು ಪಾಶ್ಚಿಮಾತ್ಯ ವಿದ್ವಾಂಸರು ವ್ಯಕ್ತಗೊಳಿಸಿದ ಸಕಲ ಅಭಿಪ್ರಾಯಗಳನ್ನು ಸಂಪೂರ್ಣವಾಗಿ ಪರಿವರ್ತಿಸಬೇಕಾದ ಕಾಲವು ಪ್ರಾಪ್ತವಾಗಿದೆ. ಏಕೆಂದರೆ ಆ ಮುದ್ರೆಗಳ ಮೇಲೆ ಕಾಣಬರುವ ಚಿತ್ರಗಳೆಲ್ಲವೂ ಬ್ರಾಹ್ಮೀವರ್ಣಮಾಲೆಯು ನಿರ್ಮಾಣವಾಗುವ ಮೊದಲು ವೇದ ಮಂತ್ರಗಳನ್ನು ಬರೆದಿಡಲು ಮಾಡಿದ ಹಂಚಿಕೆಗಳಾಗಿರುತ್ತವೆ. ಅಂದರೆ ಅವುಗಳು ವೇದಮಂತ್ರಗಳ ಸಾಂಕೇತಿಕ ನಿರೂಪಣಗಳಾಗಿರುತ್ತವೆ. ಮತ್ತು ವೇದಗಳಲ್ಲಿ ದೊರಕುವ ಅಧಿಕಾಂಶ ಮಂತ್ರಗಳು ಬ್ರಾಹ್ಮೀವರ್ಣಮಾಲೆಯ ನಿರ್ಮಾಣದ ತರುವಾಯ ಆ ಮುದ್ರೆಗಳ ಮೇಲಿನ ಚಿತ್ರಸಂಕೇತಗಳನ್ನು ಧ್ವನಿಸಂಕೇತಗಳನ್ನಾಗಿ ಅಂದರೆ ಬರಹದ ರೂಪದಲ್ಲಿ ಪರಿವರ್ತಿಸಿದವುಗಳಾಗಿರುತ್ತವೆ. ಮತ್ತು ಆ ಮುದ್ರೆಗಳ ಮೇಲಿನ ಚಿತ್ರಗಳಿಂದಾಗಿಯೇ ವೇದಮಂತ್ರಗಳಲ್ಲಿ ಅಗ್ನಿಯನ್ನು ಮತ್ತು ಇಂದ್ರನನ್ನು ವೃಷಭ=ಹೋರಿ; ಉಕ್ಷಾ=ಎತ್ತು ಮುಂತಾಗಿಯೂ. ಅಗ್ನಿ ಮತ್ತು ಸೂರ್ಯರನ್ನು ಶ್ಯೇನ, ಪತಂಗ, ಗರುತ್ಮಾನ್ ಮುಂತಾಗಿಯೂ ಕರೆಯಲಾಗಿತ್ತೆಂದು ಹೇಳಬಹುದಾಗಿದೆ.

ಆರ್ಯ ಜನರಲ್ಲಿ ಪ್ರಾಚೀನಕಾಲದಿಂದ ಪಾರಂಪರ್ಯವಾಗಿ ಸಾಗಿಬಂದ ವೇದಮಂತ್ರಗಳು ಮತ್ತು ಅವುಗಳನ್ನು ಆಧರಿಸಿ ಹುಟ್ಟಿದ ಇತರ ವಾಙ್ಮಯವು ವೈದಿಕ ಸಾಹಿತ್ಯವೆನಿಸಿಕೊಳ್ಳುತ್ತದೆ. ಅಂದರೆ ನಾಲ್ಕು ವೇದಗಳು ಮತ್ತು ಅದರ ಆರು ಅಂಗಗಳು ವೈದಿಕ ಸಾಹಿತ್ಯವೆನಿಸಿಕೊಳ್ಳುತ್ತವೆ. ವೇದಗಳು ಋಗ್ವೇದ. ಯಜುರ್ವೇದ, ಸಾಮವೇದ ಮತ್ತು ಅಥರ್ವವೇದ ಎಂದು ಹೆಸರಾಗಿವೆ.

ಆರ್ಯ ಜನರಲ್ಲಿ ಹಲವು ಪಂಗಡಗಳಿದ್ದವು. ಮತ್ತು ಪ್ರತಿಯೊಂದು ಪಂಗಡವು ಶ್ರೌತಯಜ್ಞಗಳಲ್ಲಿ ಇಲ್ಲವೇ ಗೃಹ್ಯ ಸಂಸ್ಕಾರಗಳಲ್ಲಿ ತನ್ನದೇ ಆದ

ಒಂದು ವಿಶಿಷ್ಟ ಕ್ರಮವನ್ನು ಅನುಸರಿಸುತ್ತಿದ್ದಿತು. ಅಂದರೆ ಪ್ರತಿಯೊಂದು ಪಂಗಡವು ಒಂದು ವಿಶಿಷ್ಟ ಕಾರ್ಯದಲ್ಲಿ ಬೇರೊಂದು ಪಂಗಡವು ಬಳಸುವ ವೇದ ಮಂತ್ರಗಳಿಂದ ಭಿನ್ನವಾದ ವೇದಮಂತ್ರಗಳನ್ನು ಇಲ್ಲವೇ ಭಿನ್ನವಾದ ಪಾಠವನ್ನು ಬಳಸುತ್ತಿದ್ದಿತು. ಹೀಗಾಗಿ ಪ್ರತಿಯೊಂದು ವೇದಕ್ಕೆ ಒಂದಕ್ಕಿಂತ ಹೆಚ್ಚು ಶಾಖೆಗಳು ಹುಟ್ಟಿವೆ. ವೇದಮಂತ್ರಗಳು ಪ್ರಾಚೀನಕಾಲದಿಂದಲೂ ಆರ್ಯ ಜನರ ಯಜ್ಞಗಳಲ್ಲಿ ಮತ್ತು ಗೃಹ್ಯಸಂಸ್ಕಾರಗಳಲ್ಲಿ ಬಳಸಲ್ಪಡುತ್ತ ಬಂದಿವೆ.

ವೇದಗಳು "ಮಂತ್ರ" ಮತ್ತು "ಬ್ರಾಹ್ಮಣ" ಎಂಬುದಾಗಿ ಎರಡು ವಿಭಾಗಗಳಲ್ಲಿವೆ. ಮಂತ್ರಗಳು ಹೆಚ್ಚಿನ ಮಟ್ಟಿಗೆ ದೇವತೆಗಳ ಸ್ತೋತ್ರಗಳಾಗಿದ್ದು ಪದ್ಯರೂಪದ ಮೂಲರಚನೆಗಳಾಗಿವೆ. ಬ್ರಾಹ್ಮಣಗಳು ಯಜ್ಞಕಾಲದಲ್ಲಿ ವೇದ ಮಂತ್ರಗಳನ್ನು ಬಳಸುವ ಅನುಕ್ರಮವನ್ನು, ಮಂತ್ರಗಳ ಸಂಬಂಧವನ್ನು, ಯಜ್ಞದ ವಿವರವಾದ ಕ್ರಮವನ್ನು ಮತ್ತು ಮಂತ್ರಗಳಿಗೆ ಸಂಬಂಧಪಟ್ಟ ಕಥೆಗಳನ್ನು ವಿವರಿಸುವ ಗದ್ಯಭಾಗಗಳಾಗಿವೆ. ಆರಣ್ಯಕ ಮತ್ತು ಉಪನಿಷತ್ತುಗಳೆಂಬ ಆಧ್ಯಾತ್ಮಿಕ ವಿಚಾರಗಳು ಬ್ರಾಹ್ಮಣ ಭಾಗದಲ್ಲಿರುತ್ತವೆ. ಈಶೋಪನಿಷತ್ತು ಮಾತ್ರ ವಾಜಸನೇಯಿ ಮಾಧ್ಯಂದಿನ ಸಂಹಿತೆಯ ಕೊನೆಯದಾದ ನಾಲ್ವತ್ತನೆಯ ಅಧ್ಯಾಯವಾಗಿರುತ್ತದೆ.

ಋಗ್ವೇದವು ಈಗ ಶಾಕಲ ಮತ್ತು ಬಾಷ್ಕಲ ಎಂಬ ಎರಡು ಬಗೆಯ ಪಾಠಗಳಲ್ಲಿ ಮಾತ್ರ ದೊರೆಯುತ್ತದೆ. ಅಂದರೆ ಈಗ ಋಗ್ವೇದದ ಶಾಕಲ ಮತ್ತು ಬಾಷ್ಕಲ ಎಂಬ ಎರಡು ಶಾಖೆಗಳು ಮಾತ್ರ ಉಳಿದಿವೆ. ಶಾಕಲ ಶಾಖೆಯ ಸಂಹಿತೆಯಲ್ಲಿ ೧೦೪೭೨ ಋಚೆಗಳಿವೆ. ಬಾಷ್ಕಲ ಶಾಖೆಯ ಸಂಹಿತೆಯಲ್ಲಿ ವಾಲಖಿಲ್ಯವೆಂಬ ಹನ್ನೊಂದು ಸೂಕ್ತಗಳು ಎಂಟನೆಯ ಮಂಡಲದ ೪೮ನೆಯ ಸೂಕ್ತದ ತರುವಾಯ ಬರುತ್ತವೆ. ಮತ್ತು ಆ ಹನ್ನೊಂದು ಸೂಕ್ತಗಳಲ್ಲಿ ಒಟ್ಟು ಎಂಭತ್ತು ಋಚೆಗಳಿವೆ. ಆದುದರಿಂದ ಬಾಷ್ಕಲ ಸಂಹಿತೆಯಲ್ಲಿ ಶಾಕಲ ಸಂಹಿತೆಗಿಂತ ಎಂಭತ್ತು ಋಚೆಗಳು ಹೆಚ್ಚಾಗಿವೆ. ಇಲ್ಲದೇ ಪರಿಶಿಷ್ಟವೆಂದು ಹಲವು ಖಿಲಸೂಕ್ತಗಳೂ ಇವೆ. ಮತ್ತು ವೇದಗಳ ಮೂಲವೆಂದು ಕೆಲವರು ಅನ್ನುವ ನಿವಿದಾಧ್ಯಾಯವಿದೆ. ಶಾಕಲ ಶಾಖೆಯಲ್ಲಿ ಐತರೇಯ ಬ್ರಾಹ್ಮಣವೂ, ಬಾಷ್ಕಲ ಶಾಖೆಯಲ್ಲಿ ಕೌಷೀತಕೀ ಅಥವಾ ಸಾಂಖ್ಯಾಯನ ಬ್ರಾಹ್ಮಣವೂ ಬರುತ್ತದೆ.

ಯಜುರ್ವೇದವು ಕೃಷ್ಣ ಮತ್ತು ಶುಕ್ಲ ಎಂದು ಎರಡು ವಿಭಾಗವಾಗಿದೆ. ಮತ್ತು ಅವುಗಳ ಉತ್ಪತ್ತಿಯ ಬಗ್ಗೆ ಹಲವು ಕಥೆಗಳು ಬಳಕೆಯಲ್ಲಿವೆ. ಪ್ರಾಚೀನ

ಕಾಲದಲ್ಲಿ ಯಜುರ್ವೇದದ ೮೬ ಶಾಖೆಗಳಿದ್ದವಂತೆ. ಈಗ ಪ್ರಕೃತಕ್ಕೆ ಕೃಷ್ಣ ಯಜುರ್ವೇದದ ೧. ತೈತ್ತಿರೀಯ; ೨. ಕಠ ಅಥವಾ ಕಾಠಕ; ೩. ಮೈತ್ರಾಯಣೀ; ೪. ಕಪಿಷ್ಠಲಕಠ ಎಂಬ ನಾಲ್ಕು ಶಾಖೆಗಳ ಹಾಗೂ ಶುಕ್ಲ ಯಜುರ್ವೇದದ ವಾಜಸನೇಯಿ ಸಂಹಿತೆಯ ಮಾಧ್ಯಂದಿನ ಮತ್ತು ಕಾಣ್ವ ಎಂಬ ಎರಡು ಶಾಖೆಗಳ ಸಂಹಿತೆಗಳು ಮಾತ್ರ ದೊರೆಯುತ್ತವೆ. ಯಜುರ್ವೇದದ ಮಂತ್ರಗಳನ್ನು "ಯಜುಸ್" ಅನ್ನುತ್ತಾರೆ. ಅಕ್ಷರ, ಗಣ, ಛಂದಸ್ಸು, ಪಾದ ಮೊದಲಾದ ನಿಯಮ-ನಿರ್ಬಂಧಗಳಿಲ್ಲದ ಮಂತ್ರವು ಯಜುಸ್ ಅನಿಸಿಕೊಳ್ಳುತ್ತದೆ. ಅಂದರೆ ಅದನ್ನು ಗದ್ಯರೂಪದ ಪದ್ಯವೆನ್ನಬಹುದು. ಕೃಷ್ಣ ಮತ್ತು ಶುಕ್ಲ ಯಜುರ್ವೇದ ಗಳಲ್ಲಿನ ಯಜುಸ್ಸುಗಳು ಹೆಚ್ಚಿನ ಮಟ್ಟಿಗೆ (ಪಾಠ ಭೇದವಿದ್ದರೂ) ಒಂದೇ ಯಾಗಿರುತ್ತವಾದರೂ, ಕೃಷ್ಣ ಯಜುರ್ವೇದದ ಸಂಹಿತೆಗಳಲ್ಲಿ ಶುಕ್ಲ ಯಜುರ್ವೇದ ಸಂಹಿತೆಗಳಿಗಿಂತ ಹೆಚ್ಚು ವಿಷಯಗಳಿವೆ. ಮತ್ತು ತೈತ್ತಿರೀಯ ಸಂಹಿತೆಯಲ್ಲಿ ಯಜುಸ್ಸುಗಳೊಂದಿಗೆ ಬ್ರಾಹ್ಮಣ ಭಾಗವೂ ಮಿಶ್ರವಾಗಿದೆ. ಯಜುರ್ವೇದ ಸಂಹಿತೆಗಳಲ್ಲಿ ಯಜುಸ್ಸುಗಳು ಮಾತ್ರವಲ್ಲದೇ ಋಗ್ವೇದದ ಹಾಗೂ ಅಥರ್ವ ವೇದದ ಮಂತ್ರಗಳೂ ಇವೆ. ಯಜ್ಞಗಳೇ ಯಜುರ್ವೇದದ ವಿಷಯವಾಗಿದೆ.

ಸಾಮವೇದವು ಮಂತ್ರಗಳನ್ನು ಒಂದು ವಿಶಿಷ್ಟ ರೀತಿಯಲ್ಲಿ ಹಾಡುವ ಸಲುವಾಗಿ ಆರಿಸಿ ತೆಗೆದ ಋಗ್ವೇದ ಮಂತ್ರಗಳ ಸಮೂಹವಾಗಿರುತ್ತದೆ. ಸಾಮಾನ್ಯವಾಗಿ ಸೋಮಯಜ್ಞಗಳಲ್ಲಿ ಸಾಮಗಳು ಹಾಡಲ್ಪಡುತ್ತವೆ. ಮಂತ್ರಗಳ ಹಾಡುವಿಕೆಯನ್ನು ಅಥವಾ ರಾಗವನ್ನು "ಸಾಮ" ಎನ್ನುತ್ತಾರೆ. ಸಾಮಗಳು–೧. ರಥಂತರ; ೨. ಬೃಹತ್; ೩. ವೈರೂಪ; ೪. ವೈರಾಜ; ೫. ಶಾಕ್ವರ; ೬. ರೈವತ; ಎಂದು ಆರು ಇವೆ. ಹಾಡುವಾಗ ಬಳಸುವ ಮಂತ್ರಗಳ ಪ್ರಸ್ತಾರವು ಗೋತಮನ ಎರಡು ಬಗೆಯ "ಪರ್ಕ" ಎಂದೂ ಕಶ್ಯಪನ "ಬರ್ಹಿಷ್ಯ" ಎಂದೂ ಹೆಸರು ಗೊಂಡಿದೆ. ಬರ್ಹಿಷ್ಯವು ಎರಡು ಪರ್ಕಗಳ ನಡುವೆ ಬರುತ್ತದೆ. ಸಾಮ ಹಾಡುವ ಶಾಸ್ತ್ರವು ನಾರದೀಯ ಶಿಕ್ಷಾ, ಲೋಮಶನೀಯ ಶಿಕ್ಷಾ, ಗೌತಮೀ ಶಿಕ್ಷಾ, ಮತ್ತು ಮಾಂಡೂಕೀ ಶಿಕ್ಷಾ ಎಂಬ ಹೆಸರುಗಳಲ್ಲಿ ಇದೆ. ಅವುಗಳಲ್ಲಿ ನಾರದೀಯ ಶಿಕ್ಷೆಯು ಹೆಚ್ಚು ಪ್ರಖ್ಯಾತಿಹೊಂದಿದೆ. ಸಾಮವೇದದ ಶಾಖೆಗಳೆಷ್ಟೆಂದು ತಿಳಿದುಬಂದಿಲ್ಲವಾದರೂ, ಕೌಥುಮ, ಜೈಮಿನೀಯ ಮತ್ತು ರಾಣಾಯನೀಯ ಎಂಬ ಮೂರು ಶಾಖೆಗಳ ಉಲ್ಲೇಖವು ಹಲವು ಗ್ರಂಥಗಳಲ್ಲಿ ಕಾಣಬರುತ್ತದೆ. ಯಜ್ಞಕಾಲದಲ್ಲಿ ಸಾಮ ಹಾಡುವವನನ್ನು "ಉದ್ಗಾತೃ" ಎಂದೂ, ಅವನ ಹಾಡನ್ನು "ಉದ್ಗೀಥ" ಎಂದೂ ಅನ್ನುತ್ತಾರೆ. ಸಾಮವೇದ ಸಂಹಿತೆಯಲ್ಲಿ ಒಟ್ಟು

೧೮೩೩ ಋಚೆಗಳಿವೆ. ಆದರೆ ಅವುಗಳಲ್ಲಿ ೬೦ ಋಚೆಗಳು ದ್ವಿರುಕ್ತವಾಗಿವೆ. ಆದುದರಿಂದ ವಾಸ್ತವಿಕ ಸಂಖ್ಯೆಯು ೧೮೧೩ ಮಾತ್ರ ಆಗಿದೆ. ಅವುಗಳಲ್ಲಿ ೧೭೩೮ ಋಚೆಗಳು ಋಗ್ವೇದವವುಗಳೇ ಆಗಿದ್ದು ಕೆಲವು ಋಚೆಗಳಲ್ಲಿ ಕೊಂಚ ಪಾಠ ಭೇದವಿದೆ. ಆದುದರಿಂದ ಸಾಮವೇದದ ಸ್ವಂತದ ಋಚೆಗಳ ಸಂಖ್ಯೆಯು ೭೫ ಮಾತ್ರವಾಗಿದೆ. ಸಾಮವೇದಕ್ಕೆ ಮುಂದೆ ಹೇಳಲಾಗುವ ಹದಿನೆರಡು ಬ್ರಾಹ್ಮಣಗಳಿವೆಯೆಂದು ತಿಳಿಯಬಂದಿದೆ. ಬಹುತರವಾಗಿ ಅವುಗಳು ಸಾಮ ವೇದದ ಶಾಖೆಗಳಾಗಿರಲೂಬಹುದು:—

೧. ಪ್ರೌಢ ಅಥವಾ ತಾಂಡ್ಯ ಮಹಾಬ್ರಾಹ್ಮಣ; ೨. ಷಡ್ವಿಂಶ ಬ್ರಾಹ್ಮಣ; ೩. ಸಾಮವಿಧಾನ ಬ್ರಾಹ್ಮಣ; ೪. ಆರ್ಷೇಯ ಬ್ರಾಹ್ಮಣ; ೫. ದೇವತಾಧ್ಯಾಯ ಬ್ರಾಹ್ಮಣ; ೬. ಮಂತ್ರ ಬ್ರಾಹ್ಮಣ ಅಥವಾ ಸಂಹಿತೋಪನಿಷದ್ ಬ್ರಾಹ್ಮಣ; ೭. ಜೈಮಿನೀಯೋಪನಿಷದ್ ಬ್ರಾಹ್ಮಣ; ೮. ವಂಶಬ್ರಾಹ್ಮಣ; ೯. ಛಾಂದೋಗ್ಯ ಬ್ರಾಹ್ಮಣ; ೧೦. ತಲವಕಾರ ಬ್ರಾಹ್ಮಣ; ೧೧. ಭಾಲ್ಲವೀಯ ಬ್ರಾಹ್ಮಣ; ೧೨. ಶಾಟ್ಯಾಯನೀಯ ಬ್ರಾಹ್ಮಣ.

ಅಥರ್ವ ವೇದವು ಶೌನಕ ಮತ್ತು ಪೈಪ್ಪಲಾದ ಎಂಬ ಎರಡು ಶಾಖೆಗಳಲ್ಲಿದೆ. ಅದರಲ್ಲಿ ಒಟ್ಟು ೫೯೭೭ ಮಂತ್ರಗಳಿವೆ. ಅವುಗಳಲ್ಲಿ ಕೆಲವು ಋಗ್ವೇದದವುಗಳಾಗಿವೆ. ಮತ್ತು ತುಸು ಪಾಠಾಂತರದಿಂದ ಬಂದಿವೆ. ಅಥರ್ವ ವೇದದಲ್ಲಿ ವೈದ್ಯಕ, ಮಂತ್ರಚಿಕಿತ್ಸೆ, ವನಸ್ಪತಿಗಳ ಉಪಯೋಗ, ನಕ್ಷತ್ರಗಳ ಹೆಸರುಗಳು, ಗಣಿತ, ಮಂತ್ರವಾದ ಮೊದಲಾದ ಹಲವು ವೈಜ್ಞಾನಿಕ ವಿಷಯಗಳಿವೆ. ಅಥರ್ವ ವೇದಕ್ಕೆ ಗೋಪಥ ಎಂಬ ಬ್ರಾಹ್ಮಣವಿದೆ.

ವೇದಮಂತ್ರಗಳು ಸಂಹಿತಾ, ಪದಪಾಠ, ಕ್ರಮಪಾಠ, ಮತ್ತು ಪಂಚಸಂಧಿ ಎಂಬ ನಾಲ್ಕು ರೂಪದಲ್ಲಿ ದೊರೆಯುತ್ತವೆ. ಪಂಚಸಂಧಿಯು—೧. ಕ್ರಮ; ೨. ಉತ್ಕ್ರಮ; ೩. ವ್ಯುತ್ಕ್ರಮ; ೪. ಅಭಿಕ್ರಮ; ಮತ್ತು ೫. ಸಂಕ್ರಮ ಎಂದು ಐದು ವಿಧವಾಗಿದೆ. ಅಲ್ಲದೇ ಮಂತ್ರಗಳು ಎಂಟು ವಿಧಗಳಲ್ಲಿ ಹೇಳಲ್ಪಡುತ್ತವೆ. ಅದನ್ನು "ಅಷ್ಟವಿಕೃತಿಗಳು" ಅನ್ನುತ್ತಾರೆ. ಅವುಗಳ ಹೆಸರುಗಳು ಮುಂದಿನಂತಿವೆ:—೧. ಜಟಾ; ೨. ಮಾಲಾ; ೩. ಶಿಖಾ; ೪. ರೇಖಾ; ೫. ಧ್ವಜ; ೬. ದಂಡ; ೭. ರಥ; ೮. ಘನ. ಮಾಲಾ ಎಂಬುದರಲ್ಲಿ ಕ್ರಮಮಾಲಾ ಮತ್ತು ಪುಷ್ಪಮಾಲಾ ಎಂದೂ ರಥ ಎಂಬುದರಲ್ಲಿ "ದ್ವಿಚಕ್ರರಥ" ಮತ್ತು "ತ್ರಿಚಕ್ರರಥ" ಎಂದೂ ಉಪಭೇದಗಳಿವೆ.

ವೇದಗಳಿಗೆ ಮುಂದೆ ಹೇಳಲಾಗುವ ಆರು ಅಂಗಗಳಿವೆ:— ೧. ಶಿಕ್ಷಾ, ೨. ಕಲ್ಪ. ೩. ವ್ಯಾಕರಣ, ೪. ನಿರುಕ್ತ. ೫. ಛಂದಃ, ೬. ಜ್ಯೋತಿಷ. ಅವುಗಳ ಕುರಿತು ಪಾಣಿನೀಯ ಶಿಕ್ಷಾಶಾಸ್ತ್ರದಲ್ಲಿ ಮುಂದಿನಂತೆ ಹೇಳಿದೆ:—

**ಛಂದಃ ಪಾದೌ ತು ವೇದಸ್ಯ ಹಸ್ತೌ ಕಲ್ಪೋಽಥ ಪಠ್ಯತೇ ।**
**ಜ್ಯೋತಿಷಾಮಯನಂ ಚಕ್ಷುರ್ನಿರುಕ್ತಂ ಶ್ರೋತ್ರಮುಚ್ಯತೇ ॥**
**ಶಿಕ್ಷಾಘ್ರಾಣಂ ತು ವೇದಸ್ಯ ಮುಖಂ ವ್ಯಾಕರಣಂ ಸ್ಮೃತಮ್ ।**
**ತಸ್ಮಾತ್ ಸಾಂಗಮಧೀತ್ಯೈವ ಬ್ರಹ್ಮಲೋಕೇ ಮಹೀಯತೇ ॥**

ಶಿಕ್ಷಾ ಎಂಬ ಶಾಸ್ತ್ರವು ಮೂರು ಬಗೆಯದಾಗಿದೆ. ಮೊದಲನೆಯದು ವರ್ಣಗಳ ಉಚ್ಚಾರ, ಪದಗಳ ಉಚ್ಚಾರ, ಶಬ್ದಗಳ ಮತ್ತು ವಾಕ್ಯಗಳ ರಚನೆ ಇವುಗಳಿಗೆ ಅಂದರೆ ವ್ಯಾಕರಣಕ್ಕೆ ಸಂಬಂಧಪಟ್ಟುದಾಗಿದ್ದು ಈಗ "ಪಾಣಿನೀಯ ಶಿಕ್ಷಾ" ಎಂದು ಹೆಸರಾಗಿದೆ. ಅದು ಮಂತ್ರಗಳ ಉಚ್ಚಾರದ ಕುರಿತು ಮುಂದಿನಂತೆ ಹೇಳುತ್ತದೆ:—**ಮಂತ್ರೋ ಹೀನಃ ಸ್ವರತೋ ವರ್ಣತೋ ವಾ ಮಿಥ್ಯಾಪ್ರಯುಕ್ತೋ ನ ತಮರ್ಥಮಾಹ । ಸ ವಾಗ್ವಜ್ರೋ ಯಜಮಾನಂ ಹಿನಸ್ತಿ ಯಥೇಂದ್ರಶತ್ರುಃ ಸ್ವರತೋಽಪರಾಧಾತ್ ॥** ಅಂದರೆ "ಯಾವುದೊಂದು ಮಂತ್ರವು ಸ್ವರ ಇಲ್ಲವೇ ವರ್ಣವು ಕಡಿಮೆಯಾದುದರಿಂದಾಗಿ ಇಲ್ಲವೇ ತಪ್ಪು ಪ್ರಯೋಗ ಮಾಡುವುದರಿಂದಾಗಿ ಅದರ ಉದ್ದಿಷ್ಟ ಅರ್ಥವನ್ನು ಹೇಳುವುದಿಲ್ಲ. ಇಂದ್ರಶತ್ರು ಎಂಬ ಶಬ್ದವನ್ನು ಉಚ್ಚರಿಸುವಾಗ ಒಂದು ಸ್ವರವು ಹಿಂದುಮುಂದಾದುದರಿಂದ ಅಂದರೆ ಮಧ್ಯದಲ್ಲಿ ಉದಾತ್ತವಾಗಿರಬೇಕಾದಲ್ಲಿ ಅಂತ್ಯದಲ್ಲಿ ಉದಾತ್ತವಾದುದರಿಂದ ಇಂದ್ರನನ್ನು ಕೊಲ್ಲುವಂಥ ಮಗನ ಬದಲಿಗೆ ಇಂದ್ರನಿಂದ ಸಾಯುವಂಥ ಮಗ ಹುಟ್ಟಿದಂತೆ ಆ ಮಂತ್ರವು ವಾಗ್ವಜ್ರವಾಗಿ ಯಜಮಾನನನ್ನು ಕೊಲ್ಲುತ್ತದೆ" ಎಂದರ್ಥ.

ಎರಡನೆಯದು ವೇದಗಳ ಅಧ್ಯಯನಕ್ಕೆ ಸಂಬಂಧಪಟ್ಟಿದ್ದು, ಗುರು ಮತ್ತು ಶಿಷ್ಯರ ಸಂಬಂಧವನ್ನು ವಿವರಿಸುತ್ತದೆ. ಅದು ಶಿಷ್ಯನು ಗುರುವಿನಲ್ಲಿ ಮತ್ತು ಗುರುವು ಶಿಷ್ಯನಲ್ಲಿ ವ್ಯವಹರಿಸಬೇಕಾದ ರೀತಿಯನ್ನು, ಗುರುಕುಲದಲ್ಲಿ ಶಿಷ್ಯರು ಪಾಲಿಸಬೇಕಾದ ನಿಯಮಗಳನ್ನು ತಿಳಿಸುತ್ತದೆ. ಅಂದರೆ ಅದು "ಶಿಸ್ತು" ಎನಿಸಿಕೊಳ್ಳುತ್ತದೆ. ಅರ್ಥಾತ್ ಅದು ಶಿಷ್ಯನಲ್ಲಿ ವಿನಯ ಮತ್ತು ಶಿಸ್ತುಗಳು ಅಭ್ಯಾಸದಲ್ಲಿ ಬರುವಂತೆ ಮಾಡುವ ಶಾಸ್ತ್ರವಾಗಿದೆ.

ಮೂರನೆಯದು ಗಾಯನಕ್ಕೆ ಸಂಬಂಧಪಟ್ಟಿದ್ದು ಅದರ ವಿವರವು ಒಂದ ಸಾಮವೇದದ ವರ್ಣನೆಯಲ್ಲಿ ಬಂದಿದೆ.

**ಕಲ್ಪ:** ಎಂದರೆ ಬ್ರಾಹ್ಮಣನ ಕರ್ತವ್ಯ ಕರ್ಮವನ್ನು ವಿವರಿಸುವ ಶಾಸ್ತ್ರ. ಅರ್ಥಾತ್ ಬ್ರಾಹ್ಮಣನು ಮಾಡಬೇಕಾದ ನಿತ್ಯ ಹಾಗೂ ನೈಮಿತ್ತಿಕ ಯಜ್ಞ ಕ್ರಮವನ್ನು ವಿವರಿಸುವ ಶಾಸ್ತ್ರ. ಅದರಲ್ಲಿ ಯಜ್ಞದ ವಿಧಿ-ವಿಧಾನಗಳು. ಯಜ್ಞಕಾಲದಲ್ಲಿ ಪಾಲಿಸಬೇಕಾದ ನಿಯಮಗಳು, ಬ್ರಾಹ್ಮಣನ ಆಚರಣೆ, ಯಜ್ಞಕ್ಕೆ ಬೇಕಾಗುವ ಸಾಮಗ್ರಿ ಮತ್ತು ಸಲಕರಣೆಗಳು ಸಹಿತವಾಗಿ ಯಜ್ಞದ ಸಂಪೂರ್ಣ ವ್ಯವಸ್ಥೆಯು ಹೇಗಿರಬೇಕೆಂದು ವಿಧಿಸಿದೆ. ಮೂಲಕಲ್ಪ ಶಾಸ್ತ್ರವನ್ನು ಆಧರಿಸಿ ತರುವಾಯ ಹಲವು ಶ್ರೌತ, ಗೃಹ್ಯ ಮತ್ತು ಧರ್ಮಸೂತ್ರಗಳು ರಚಿಸಲ್ಪಟ್ಟಿವೆ. ಶ್ರೌತಸೂತ್ರಗಳು ಎಲ್ಲ ಬಗೆಯ ಯಜ್ಞಗಳ ವಿಧಾನಗಳನ್ನು ತಿಳಿಸುತ್ತವೆ. ಗೃಹ್ಯಸೂತ್ರಗಳು ಗೃಹಸ್ಥನ ನಿತ್ಯಕರ್ಮಗಳನ್ನು, ಶ್ರಾದ್ಧಾದಿಗಳನ್ನು ಮತ್ತು ಗರ್ಭಾದಾನದಿಂದ ಮೊದಲುಗೊಂಡು ಅಂತ್ಯೇಷ್ಟಿಯ ವರೆಗಿನ ಎಲ್ಲ ಸಂಸ್ಕಾರ ವಿಧಾನಗಳನ್ನು ತಿಳಿಸುತ್ತವೆ. ಸಾಮಾಜಿಕ ವ್ಯವಹಾರದ ನಿಯಮಗಳು ಧರ್ಮಸೂತ್ರಗಳಿನಿಸಿಕೊಳ್ಳುತ್ತವೆ.

ಬ್ರಾಹ್ಮಣಗಳು ಒಂದು ರೀತಿಯಲ್ಲಿ ಶ್ರೌತಸೂತ್ರಗಳ ಸಹಕಾರಿಗಳಾಗಿವೆ ಯೆನ್ನಬಹುದು. ಏಕೆಂದರೆ ಬ್ರಾಹ್ಮಣಗಳಲ್ಲಿ ಯಜ್ಞಗಳ ವಿಸ್ತೃತವಾದ ವಿವರವೂ, ಮಂತ್ರಗಳ ಪೂರ್ವಾಪರ ಅನುಕ್ರಮವೂ, ಸ್ತೋಮಗಳ ವ್ಯವಸ್ಥೆಯೂ, ಪಕ್ಷ, ಮಾಸ, ಋತು ಮತ್ತು ವರ್ಷಗಳ ನಿರ್ಣಯವೂ, ಮಂತ್ರಗಳಿಗೆ ಸಂಬಂಧಪಟ್ಟ ಕಥೆಗಳೂ ಇವೆ. ಅಲ್ಲದೇ ರಾಮಾಯಣ, ಮಹಾಭಾರತ ಹಾಗೂ ಇತರ ಪುರಾಣಗಳಲ್ಲಿನ ಅಧಿಕಾಂಶ ಕಥೆಗಳ ಮೂಲವು ಬ್ರಾಹ್ಮಣಗಳಲ್ಲಿ ಇದೆ.

ಋಗ್ವೇದದ ಶಾಕಲ ಶಾಖೆಯವರು ಅಶ್ವಲಾಯನ ಸೂತ್ರಗಳನ್ನೂ, ಬಾಷ್ಕಲ ಶಾಖೆಯವರು ಸಾಂಖ್ಯಾಯನ ಸೂತ್ರಗಳನ್ನೂ ಅನುಸರಿಸುತ್ತಾರೆ.

ಕೃಷ್ಣ ಯಜುರ್ವೇದಿಗಳು ಬೌಧಾಯನ, ಭಾರದ್ವಾಜ, ವೈಖಾನಸ, ಆಪಸ್ತಂಬ, ಕಾಠಕ, ವಾಧೂಲ, ವಾರಾಹ, ಮಾನವ ಮತ್ತು ಸತ್ಯಾಷಾಢ ಹಿರಣ್ಯಕೇಶೀ ಸೂತ್ರಗಳನ್ನು ಅನುಸರಿಸುತ್ತಿದ್ದರೆಂದೂ, ಶುಕ್ಲ ಯಜುರ್ವೇದಿಗಳು ಕಾತ್ಯಾಯನ ಶ್ರೌತಸೂತ್ರಗಳನ್ನು ಅನುಸರಿಸುತ್ತಿದ್ದರೆಂದೂ ತಿಳಿದು ಬರುತ್ತದೆ.

ಸಾಮವೇದಿಗಳು ಲಾಟ್ಯಾಯನ, ದ್ರಾಹ್ಯಾಯಣ, ಜೈಮಿನೀಯ ಮತ್ತು ಗೋಭಿಲ ಸೂತ್ರಗಳನ್ನು ಅನುಸರಿಸುತ್ತಿದ್ದರು.

ಅಥರ್ವವೇದಿಗಳು ವೈತಾನ ಮತ್ತು ಕೌಶಿಕ ಸೂತ್ರಗಳನ್ನು ಅನುಸರಿಸುತ್ತಿದ್ದರು.

**ವ್ಯಾಕರಣ** ಎಂದರೆ ಭಾಷೆಯನ್ನು ಶುದ್ಧವಾದ ಹಾಗೂ ಸರಿಯಾದ ರೀತಿಯಲ್ಲಿ ಬಳಸಲು ಮತ್ತು ತಿಳಿದುಕೊಳ್ಳಲು ಕಲಿಸುವ ಶಾಸ್ತ್ರವಾಗಿರುತ್ತದೆ. ಅರ್ಥಾತ್ ಅದರಲ್ಲಿ ಭಾಷೆಯಲ್ಲಿ ಬಳಸಲ್ಪಡುವ ಶಬ್ದಗಳ ಶುದ್ಧರೂಪಗಳನ್ನು ರಚಿಸಲು ಮತ್ತು ಆ ಶಬ್ದಗಳನ್ನು ವಾಕ್ಯರೂಪದಲ್ಲಿ ಬಳಸುವ ರೀತಿಯನ್ನು ತಿಳಿಸಲು ನಿರ್ಧರಿಸಿದ ನಿಯಮಗಳಿರುತ್ತವೆ. ಬಹಳ ಪ್ರಾಚೀನ ಕಾಲದಲ್ಲಿ ವೇದಮಂತ್ರಗಳನ್ನು ತಿಳಿದುಕೊಳ್ಳಲು ಸಹಾಯ ಮಾಡುವ ಹಲವು ವ್ಯಾಕರಣಗಳಿದ್ದವಾದರೂ ಕೆಲವು ವಿಷಯಗಳಲ್ಲಿ ಅವುಗಳು ಪರಸ್ಪರ ವಿರುದ್ಧವಾದ ನಿಯಮಗಳನ್ನು ಹೇಳುತ್ತಿದ್ದವು. ಆದುದರಿಂದ ಶಕಪೂರ್ವ ೪೫೦ ವರ್ಷಗಳ ಸುಮಾರಿಗೆ ಮಹರ್ಷಿಯೆಂದು ಕರೆಯಲ್ಪಟ್ಟ ವ್ಯಾಕರಣಾಚಾರ್ಯ ಪಾಣಿನಿ ಎಂಬ ಮಹಾಪ್ರತಿಭಾವಂತನೊಬ್ಬನು ಹಳೆಯ ವ್ಯಾಕರಣಗಳೆಲ್ಲವನ್ನು ಕಲಿತುಕೊಂಡ ತರುವಾಯ ಸಕಲ ವೈದಿಕ ಸಾಹಿತ್ಯದ ಅಧ್ಯಯನವನ್ನು ಮಾಡಿ ಹಾಗೂ ಅವನ ಕಾಲದಲ್ಲಿ ಭಾರತವರ್ಷದ ನಾನಾ ಭಾಗಗಳಲ್ಲಿ ಬಳಕೆಯಲ್ಲಿದ್ದ ವೇದ ಭಾಷೆಯನ್ನು ಕಿವಿಯಾರೆ ಕೇಳಿ "ಅಷ್ಟಾಧ್ಯಾಯಿ" ಎಂಬ ಹೆಸರಿನ ಮಹೋನ್ನತವಾದ ಹಾಗೂ ಸರ್ವಸಮ್ಮತವಾದ ಒಂದು ವ್ಯಾಕರಣ ಗ್ರಂಥವನ್ನು ರಚಿಸಿದನು. ಆ ಗ್ರಂಥವಲ್ಲಿ ಎಂಟು ಅಧ್ಯಾಯಗಳಿದ್ದು ಪ್ರತಿಯೊಂದು ಅಧ್ಯಾಯಕ್ಕೆ ನಾಲ್ಕು ಪಾದಗಳಿವೆ. ಮತ್ತು ಒಟ್ಟು ೩೯೮೧ ಸೂತ್ರಗಳು ಅಥವಾ ನಿಯಮಗಳಿವೆ. ಆಚಾರ್ಯ ಪಾಣಿನಿಯ ತರುವಾಯದಿಂದ ವೇದಗಳ ಅಧ್ಯಯನವನ್ನು ಮಾಡಬೇಕೆಂದು ಬಯಸುವವರು ಅಷ್ಟಾಧ್ಯಾಯಿಯನ್ನು ಬಹಳ ಆಸ್ಥೆಯಿಂದ ಕಲಿಯುತ್ತ ಬಂದಿದ್ದಾರೆ. ಆದುದರಿಂದ ಈಗ ಪಾಣಿನಿಯ ವ್ಯಾಕರಣವನ್ನೇ ವೇದಗಳ ಅಂಗವನ್ನಾಗಿ ಪರಿಗಣಿಸುತ್ತಾರೆ,

**ನಿರುಕ್ತ**—ಅಂದರೆ ಜಗತ್ತಿನಲ್ಲಿಯೇ ಮೊದಲ ಭಾಷಾ ವಿಜ್ಞಾನಿಯೆಂದು ಗಣಿಸಲ್ಪಡುವ ಆಚಾರ್ಯ ಯಾಸ್ಕನೆಂಬ ವ್ಯಾಕರಣ ಪಂಡಿತನು "ನಿಘಂಟು" ಎಂಬ ವೈದಿಕ ಶಬ್ದಕೋಶದೊಳಗಿನ ಶಬ್ದಗಳನ್ನು ಶಾಸ್ತ್ರೀಯ ರೀತಿಯಿಂದ ವಿಮರ್ಶಿಸಿ ರಚಿಸಿದ ವ್ಯಾಖ್ಯೆಯಾಗಿದೆ. ಅದರಲ್ಲಿ ಅವನು ವೇದಮಂತ್ರಗಳಲ್ಲಿ ಬಳಸಲ್ಪಟ್ಟಿರುವ ಶಬ್ದಗಳ ವ್ಯುತ್ಪತ್ತಿಯನ್ನೂ, ವ್ಯುತ್ಪತ್ತಿಗೂ, ಸಂದರ್ಭಕ್ಕೂ ಅನುಸಾರವಾಗಿ ಆಯಾ ಶಬ್ದವು ಸೂಚಿಸುವ ಅರ್ಥಗಳನ್ನೂ ವಿವರಿಸಿದ್ದಾನೆ. ಆಚಾರ್ಯ ಯಾಸ್ಕನು ಆಚಾರ್ಯ ಪಾಣಿನಿಗಿಂತ ಎರಡು ಮೂರು ಶತಮಾನಗಳಿಗೆ ಮೊದಲಿನವನಾಗಿದ್ದಾನೆ.

**ಛಂದಸ್** ಎಂಬುದರ ಮುಖ್ಯ ಅರ್ಥವು--ಅಕ್ಷರಗಳ, ಗಣಗಳ ಮತ್ತು ಚರಣಗಳ ಎಣಿಕೆಗೆ ಅಥವಾ ನಿಯಮಕ್ಕೆ ಅನುಸಾರವಾಗಿ ರಚಿಸಿದ ವಾಕ್ಯ ಸಮೂಹ ಅಥವಾ ಪದ್ಯವೆಂದೂ, ಅದರ ಹೆಸರೆಂದೂ ಇದೆ. ಪದ್ಯದಲ್ಲಿ ಅಕ್ಷರಗಳು ಲಘು ಮತ್ತು ಗುರು ಎಂಬ ಭೇದದಿಂದ ಮತ್ತು ಅಕ್ಷರಗಳ ಸ್ಥಾನ ಭೇದದಿಂದ ಗಣಗಳು ನಿರ್ಧರಿಸಲ್ಪಟ್ಟಿರುತ್ತವೆ. ಮತ್ತು ಯಾವುದೊಂದು ಪದ್ಯದಲ್ಲಿ ಇಂತಿಷ್ಟೇ ಚರಣಗಳೂ, ಒಂದು ಚರಣದಲ್ಲಿ ಇಂತಿಷ್ಟೇ ಗಣಗಳು ಮತ್ತು ಅಕ್ಷರಗಳಿರಬೇಕೆಂದೂ, ಇಂಥಿಂಥ ಸ್ಥಾನದಲ್ಲಿ ಇಂಥಿಂಥ ಗಣಗಳಿರ ಬೇಕೆಂದೂ ನಿರ್ಧರಿಸಲ್ಪಟ್ಟಿದೆ. ಮತ್ತು ಅವುಗಳ ಭೇದಗಳಿಗೆ ಅನುಸಾರವಾಗಿ ಹೆಸರುಗಳೂ ನಿರ್ಧರಿಸಲ್ಪಟ್ಟಿವೆ. ಇದೆಲ್ಲವನ್ನೂ ತಿಳಿಸಿಕೊಡುವ ಶಾಸ್ತ್ರವು "ಛಂದಶ್ಶಾಸ್ತ್ರ" ಎಂಬುದಾಗಿ ಹೆಸರುಗೊಂಡಿದೆ. ಛಂದಶ್ಶಾಸ್ತ್ರವನ್ನು ರಚಿಸಿದ ಋಷಿಯ ಹೆಸರು "ಪಿಂಗಲನಾಗ" ಎಂದಿದೆ.

**ಜ್ಯೋತಿಷ್ಯ**—ಎಂದರೆ ಭೂಗೋಳದ, ನಕ್ಷತ್ರಗಳ ಮತ್ತು ಗ್ರಹಗಳ ಚಲನೆಯನ್ನು, ಅವುಗಳು ಒಂದು ಸ್ಥಾನದಿಂದ ಚಲಿಸಿ ಬೇರೊಂದು ಸ್ಥಾನಕ್ಕೆ ಚಲಿಸಲು ತಗಲುವ ಸಮಯವನ್ನು ಮತ್ತು ಅವುಗಳು ಇರುವ ಸ್ಥಾನವನ್ನು ನಿರ್ಧರಿಸಿ ಹೇಳುವ ಶಾಸ್ತ್ರವಾಗಿರುತ್ತದೆ. ಆದರೆ ವೇದಗಳ ಅಂಗವಾಗಿರುವ ಜ್ಯೋತಿಷ್ಯವು ಸಾಮಾನ್ಯ ಜ್ಯೋತಿಷ್ಯಗಳಿಂದ ಕೊಂಚ ಭಿನ್ನವಾಗಿದೆ, ಎಂದರೆ ಅದರಲ್ಲಿ ಸೂರ್ಯ, ಚಂದ್ರ ಮತ್ತು ನಕ್ಷತ್ರಗಳ ಹೊರತು ಇತರ ಗ್ರಹಗಳ ವಿಚಾರವು ಬಂದಿಲ್ಲ. ಅದು ವೈದಿಕ ಯಜ್ಞಗಳನ್ನು ಆರಂಭಿಸುವ ಮತ್ತು ಕೊನೆಗೊಳಿಸುವ ಕಾಲವನ್ನು ಮತ್ತು ಅಮಾವಾಸ್ಯೆ ಹಾಗೂ ಹುಣ್ಣಿಮೆ ಗಳನ್ನು ಕಂಡುಕೊಳ್ಳುವ ಉದ್ದೇಶದಿಂದ ರಚಿಸಲ್ಪಟ್ಟಿದ್ದುದರಿಂದ ಅದರಲ್ಲಿ ದಿನ, ಋತು, ಅಯನ, ಮಾಸ ಮತ್ತು ಸಂವತ್ಸರಗಳ ವಿಚಾರ ಮಾತ್ರ ಇದೆ. ವೇದಾಂಗ ಜ್ಯೋತಿಷ್ಯವನ್ನು ರಚಿಸಿದ ಋಷಿಯ ಹೆಸರು ಲಗಧನೆಂದಿದೆ. ಮತ್ತು ವೇದಾಂಗ ಜ್ಯೋತಿಷ್ಯದ ರಚನಾಕಾಲವು ಶಕಪೂರ್ವ ೨೫೦೦ ವರ್ಷ ಗಳಾಗಿವೆ.

ಹಿಂದೆ ಹೇಳಿದ ಅಂಗಗಳು ಮಾತ್ರವಲ್ಲದೆ ವೇದಗಳ ಪ್ರತಿಯೊಂದು ಶಾಖೆಗೂ ಮಂತ್ರಗಳ ಉಚ್ಚಾರಕ್ರಮ, ಸ್ವರಭೇದ ಮುಂತಾದವುಗಳನ್ನು ವಿವರಿಸಿ ಹೇಳುವ ಪ್ರಾತಿಶಾಖ್ಯವೆಂಬ ಗ್ರಂಥವಿದೆ. ಪ್ರತಿಯೊಂದು ವೇದಸಂಹಿತೆಗೂ ಮಂತ್ರಗಳ ಅನುಕ್ರಮಣಿ ಇದೆ, ಶಾಖೆಗಳ ವಿವರವಿರುವ ಚರಣವ್ಯೂಹವೆಂಬ ಗ್ರಂಥವಿದೆ. ವೇದಮಂತ್ರಗಳ, ದೇವತೆಗಳ ಮತ್ತು ಋಷಿಗಳ ವಿವರವನ್ನೂ,

ಮಂತ್ರಗಳಿಗೆ ಸಂಬಂಧಪಟ್ಟ ಕಥೆಗಳನ್ನೂ ವಿವರಿಸುವ ಬೃಹದ್ದೇವತಾ ಎಂಬ ಗ್ರಂಥವಿದೆ. ಇವುಗಳೆಲ್ಲವೂ ವೈದಿಕ ಸಾಹಿತ್ಯದಲ್ಲಿ ಸೇರುತ್ತವೆ.

ವೇದಗಳ ಉಪಾಂಗಗಳೆಂದು ಹೇಳಲಾಗುವ ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಮೀಮಾಂಸ ಮತ್ತು ವೇದಾಂತ (=ಬ್ರಹ್ಮಸೂತ್ರ) ಗಳೆಂಬ ಆರು ಶಾಸ್ತ್ರಗಳು ಅಥವಾ ದರ್ಶನಗಳು ವೈದಿಕ ಸಾಹಿತ್ಯದಲ್ಲಿ ಸೇರುವುದಿಲ್ಲ. ಹಾಗೆಯೇ ಮಹಾಭಾರತ, ರಾಮಾಯಣ ಮತ್ತು ಪುರಾಣಗಳು ವೈದಿಕ ಸಾಹಿತ್ಯದಲ್ಲಿ ಸೇರುವುದಿಲ್ಲ. ವೈದಿಕ ಸಾಹಿತ್ಯವೆಂದರೆ ವೇದಗಳಿಗೆ ಸಂಬಂಧಪಟ್ಟ ಸಾಹಿತ್ಯ ಮಾತ್ರವಾಗಿರುತ್ತದೆ.

ರಾಜನೈತಿಕ ವಿಚಾರಗಳಿಂದ ಪ್ರೇರಿತರಾಗಿದ್ದ ಕೆಲವು ಬ್ರಿಟಿಷ್ ವಿದ್ವಾಂಸರ ಅಭಿಪ್ರಾಯದಲ್ಲಿ ಆರ್ಯಜನರು ಶಕಪೂರ್ವ ೧೬೦೦ ವರ್ಷಗಳ ಸುಮಾರಿಗೆ ಭಾರತವರ್ಷವನ್ನು ಪ್ರವೇಶಿಸಿದ್ದರೆಂದೂ, ಅವರು ಭಾರತವರ್ಷದಲ್ಲಿ ನೆಲಸಿದ ತರುವಾಯವೇ ಅಂದರೆ ಸಾಧಾರಣ ಶಕಪೂರ್ವ ೧೩೦೦ ವರ್ಷಗಳ ಸುಮಾರಿನಿಂದ ಋಗ್ವೇದದ ಮಂತ್ರಗಳು ರಚಿಸಲ್ಪಡತೊಡಗಿದವೆಂದೂ ಇದೆ. ಕೆಲವು ಬ್ರಿಟಿಷ್ ವಿದ್ವಾಂಸರು ಋಗ್ವೇದದ ಮಂತ್ರಗಳು ಆ ಕಾಲಕ್ಕಿಂತ ಬಹಳ ಪ್ರಾಚೀನವಾಗಿವೆಯೆಂದು ಹೇಳುತ್ತಾರಾದರೂ ರಾಜನೀತಿಜ್ಞರಾದ ವಿದ್ವಾಂಸರು ಅವರ ವಾದವನ್ನು ಒಪ್ಪುವುದಿಲ್ಲ. ಆದುದರಿಂದ ಅವರು ಚರಿತ್ರೆ ಪುಸ್ತಕಗಳಲ್ಲಿ ಮೊದಲಿನ ಅಭಿಪ್ರಾಯವನ್ನೇ ಸೇರಿಸುತ್ತಾರೆ.

ಜರ್ಮನ್ ವಿದ್ವಾಂಸ ಡಾಕ್ಟರ್ ಹರ್ಮನ್ ಜಾಕೋಬಿ ಎಂಬವರು ಮತ್ತು ದಿವಂಗತ ಲೋಕಮಾನ್ಯ ಬಾಲಗಂಗಾಧರ ತಿಲಕರವರು ಶಕ ೧೮೧೫ರಲ್ಲಿ ಬೇರೆಬೇರೆಯಾಗಿ ಮತ್ತು ಬೇರೆಬೇರೆ ಸಂದರ್ಭಗಳಲ್ಲಿ ಋಗ್ವೇದ ಮಂತ್ರಗಳ ಪ್ರಾಚೀನತೆಯ ಕುರಿತು ಋಗ್ವೇದದೊಳಗಿನ ಮಂತ್ರಗಳನ್ನು ಆಧರಿಸಿ ಎರಡು ಲೇಖನಗಳನ್ನು ಪ್ರಕಟಿಸಿದ್ದರು ಮತ್ತು ಋಗ್ವೇದ ಮಂತ್ರಗಳಲ್ಲಿ ಕೆಲವು ಏಷ್ಟು ಕಡಿಮೆ ಎಂದರೂ ಶಕಪೂರ್ವ ೪೬೦೦ ವರ್ಷಗಳಷ್ಟು ಪ್ರಾಚೀನವಾಗಿವೆಯೆಂದು ಪ್ರತಿಪಾದಿಸಿದ್ದರು. ಆದರೆ ಬ್ರಿಟಿಷ್ ವಿದ್ವಾಂಸ ಏ. ಏ. ಮೆಕ್‌ಡೊನೆಲ್ ಮೊದಲಾದವರು ಜಾಕೋಬಿಯವರು ವೇದಮಂತ್ರಗಳಿಗೆ ಮಾಡಿದ ಅರ್ಥವು ಮೂಲದಲ್ಲಿಯೇ ತಪ್ಪಾಗಿರುವುದರಿಂದ ಅವರ ವಾದದಲ್ಲಿ ಹುರುಳಿಲ್ಲವೆಂದಿದ್ದರು. ಪರಂತು ಜಾಕೋಬಿಯವರ ವಾದವನ್ನು ಸಮರ್ಥಿಸುವಂಥ ಹಾಗೂ ಅತ್ಯಂತ ಸ್ಪಷ್ಟವಾದ ಒಂದು ಉಲ್ಲೇಖವು ತೈತ್ತಿರೀಯ ಬ್ರಾಹ್ಮಣದಲ್ಲಿಯೂ, ಒಂದು

ಮಂತ್ರವು ಋಗ್ವೇದದಲ್ಲಿಯೂ ಇದ್ದುದನ್ನು ಆ ಕಾಲದ ಯಾವನೊಬ್ಬ ವಿದ್ವಾಂಸನೂ ಕಂಡಿರಲಿಲ್ಲ.[1]

ಹೇಗಿದ್ದರೂ ಸಿಂಧೂ ಕಣಿವೆಯ ಅಗೆತಗಳಲ್ಲಿ ಬೆಳಕಿಗೆ ಬಂದ ಪಟ್ಟಣಗಳಲ್ಲಿ ಆರ್ಯಜನರ ವೈದಿಕ ಸಂಸ್ಕೃತಿಗೆ ಸಂಬಂಧಿಸಿರುವ ನೂರಾರು ಕುರುಹುಗಳು ದೊರಕಿವೆ. ದುರಾಗ್ರಹಿಗಳಾಗಿದ್ದ ಬ್ರಿಟಿಷ್ ವಿದ್ವಾಂಸರು ಆ ಕುರುಹುಗಳನ್ನು ಮರೆಮಾಚಿ, ಸಿಂಧೂ ಸಂಸ್ಕೃತಿಯು ಆರ್ಯರದಲ್ಲವೆಂದು ಸಾಧಿಸಲು ಬಹಳ ಹೆಣಗಾಡಿದ್ದಾರೆ. ಆದರೆ ಅಲ್ಲಿ ಕಂಡುಬಂದ ಯಜ್ಞಚಿತಿಗಳು ಮತ್ತು ಅಲ್ಲಿ ದೊರಕಿದ ಹಾಲುಗಲ್ಲಿನ ಮುದ್ರೆಗಳ ಮೇಲಿರುವ ಸ್ವಸ್ತಿಕದ ಚಿಹ್ನೆಗಳು ಮತ್ತು ಅಗ್ನಿಯ ಚಿತ್ರ ಸಂಕೇತಗಳು ಸಿಂಧೂ ಸಂಸ್ಕೃತಿಯು ಆರ್ಯರದೇ ಆಗಿತ್ತೆಂಬುದನ್ನು ಸಂದೇಹಕ್ಕೆ ಎಡೆಯಿಲ್ಲದಂತೆ ಸಿದ್ಧಪಡಿಸುತ್ತದೆ. ಅಂದರೆ ಕೆಲವು ಮುದ್ರೆಗಳ ಮೇಲಿನ ಚಿತ್ರಗಳು ಋಗ್ವೇದ ಮಂತ್ರಗಳ ಸಾಂಕೇತಿಕ ನಿರೂಪಣೆಗಳಾಗಿವೆ. ಆದುದರಿಂದ ಭಾರತವರ್ಷದೊಳಗೆ ಆರ್ಯರ ಆಗಮನ ಕಾಲವು ಎಷ್ಟು ಕಡಿಮೆಯೆಂದರೂ ಶಕಪೂರ್ವ ೩೦೦೦ ವರ್ಷಗಳೆಂದು ತಾನಾಗಿ ಸಿದ್ಧವಾಗುತ್ತದೆ.

ಪಂಜಾಬ, ಸಿಂಧ, ಮತ್ತು ಗುಜರಾತ ಅಥವಾ ಸೌರಾಷ್ಟ್ರಗಳಲ್ಲಿ ನಡೆಸಿದ ಅಗೆತಗಳ ಮೂಲಕ ಶಕಪೂರ್ವ ೪೦೦೦ ವರ್ಷಗಳ ಸುಮಾರಿಗೆ ಭಾರತವರ್ಷವನ್ನು ಪ್ರವೇಶಿಸಿದ ಆರ್ಯಜನರು ಪಂಜಾಬದಲ್ಲಿ ನೆಲಸಿದ್ದರೆಂದೂ, ತರುವಾಯ ಅವರು ಕ್ರಮೇಣ ಸಿಂಧು ನದದ ತೀರವಾಗಿ ದಕ್ಷಿಣಕ್ಕೆ ಮುಂದುವರಿದು ಕಡಲಕರೆಯ ವರೆಗೂ, ಕಡಲಕರೆಯಾಗಿ ಪೂರ್ವಕ್ಕೆ ಮುಂದುವರಿದು ಸೌರಾಷ್ಟ್ರದೊಳಗೂ ಬಂದು ನೆಲಸಿದ್ದರೆಂದು ತಿಳಿದುಬರುತ್ತದೆ. ಕೆಲವು ಪಂಗಡಗಳು ಆನರ್ತದಲ್ಲಿ ಅಂದರೆ ಉತ್ತರ ಗುಜರಾತದಲ್ಲಿಯೂ ನೆಲಸಿದ್ದವು.

ಭಾರತವರ್ಷದೊಳಗೆ ಬಂದು ನೆಲಸಿದ ಭರತ ಪಂಗಡದ ಆರ್ಯರಿಗೂ, ಭಾರತವರ್ಷದ ಹೊರಗೆ ಪಶ್ಚಿಮ ಆಸ್ಯದಲ್ಲಿ ಮತ್ತು ಮಧ್ಯ ಆಸ್ಯದಲ್ಲಿ ನೆಲಸಿದ, ಪಹ್ಲವ, ಸುಮೇರ, ಅರ್ಕ, ಅಸುರ, ಯವನ, ಕಾಂಬೋಜ, ಕುಶಾಣ, ಶಕ, ಬಾಹ್ಲೀಕ ಮೊದಲಾದ ಇನ್ನೂ ಹಲವು ಆರ್ಯಪಂಗಡಗಳ ಜನರಿಗೂ ನಿತ್ಯ ಸಂಪರ್ಕವಿದ್ದಿತು. ಅವರೆಲ್ಲರ ಧರ್ಮವು ಒಂದೇಯಾಗಿದ್ದಿತು. ಅವರೆಲ್ಲರೂ ಭಾರತವರ್ಷದೊಳಗೆ ಬರಹೋಗುವುದಿತ್ತು; ಹಾಗೆಯೇ ಭರತರು ಕೂಡ

---

1. ಇದನ್ನು ಬ್ರಾಹ್ಮೀ ಲಿಪಿ ಮತ್ತು ಸಿಂಧೂ ಸಂಸ್ಕೃತಿ ಎಂಬ ಪುಸ್ತಕದಲ್ಲಿ ಓದಬಹುದು.

ಭಾರತವರ್ಷದ ಹೊರಗಿನ ದೇಶಗಳಿಗೆ ಹೋಗಿಬರುವುದಿತ್ತು. ಅಫಘಾನ ವಾದರೋ ಬಹಳ ಇತ್ತೀಚಿನ ವರೆಗೆ ಭಾರತವರ್ಷದೊಂದಿಗೆ ಕೂಡಿದ್ದಿತು. ಆದರೆ ಬ್ರಿಟಿಷ್ ವಿದ್ವಾಂಸರು ಭಾರತೀಯರಿಗಾಗಿ ತಯಾರಿಸಿದ ಚರಿತ್ರೆಯ ಪುಸ್ತಕಗಳಲ್ಲಿ ಭಾರತೀಯರಿಗೆ ಹೊರಗಿನ ದೇಶಗಳ ಪರಿಚಯವೇ ಇರಲಿಲ್ಲ ವೆಂಬಂತೆಯೂ, ಶಕ ಮತ್ತು ಪಹ್ಲವರು ಹಾಗೂ ಪಾರಸೀಕರು ಭಾರತೀಯ ರಿಂದ ಸಂಪೂರ್ಣ ಭಿನ್ನರೆಂಬಂತೆಯೂ, ಹಿಂದೆ ಹೇಳಿದ ಹಲವು ಆರ್ಯಪಂಗಡ ಗಳ ಜನರು ಶಕಾರಂಭದ ಹಲವು ಶತಮಾನಗಳ ಮೊದಲೇ ಭಾರತವರ್ಷದೊಳಗೆ ನೆಲಸಿದ್ದರೂ, ಅವರು ಶಕಾರಂಭದ ತರುವಾಯವೇ ಭಾರತವರ್ಷವನ್ನು ಪ್ರವೇಶಿಸಿದರೆಂದೂ ಬರೆದಿದ್ದಾರೆ. ಆದರೆ ಅದು ಸರಿಯಲ್ಲವೆಂಬುದಕ್ಕೆ ಇಲ್ಲಿ ಎರಡೇ ಎರಡು ಉದಾಹರಣೆಗಳು ಕೊಡಲಾಗುವವು.

ಬ್ರಿಟಿಷ್ ವಿದ್ವಾಂಸರ ಅಭಿಪ್ರಾಯದಂತೆ ಶಕವರ್ಗದ ಜನರು ಶಕಾರಂಭ ದಲ್ಲಿಯೇ ಭಾರತವರ್ಷವನ್ನು ಪ್ರವೇಶಿಸಿದರು. ಆದರೆ ಶಕದ ಎಂಟುನೂರು ವರ್ಷಗಳಿಗಿಂತ ಮೊದಲಿನಿಂದಲೂ ಶಕವರ್ಗದ ಜನರು ಭಾರತವರ್ಷದಲ್ಲಿ ನೆಲಸಿದ್ದರೆಂಬುದು ವಂಗಧ ಹಾಗೂ ನೇಪಾಲದ ತಪ್ಪಲಲ್ಲಿ ನೆಲಸಿದ್ದ ಶಕವರ್ಗದ ಲಿಚ್ಛವಿ ಮೊದಲಾದ ಪಂಗಡದ ಜನರಿಂದಾಗಿ ಸಿದ್ಧವಾಗುತ್ತದೆ. ಅಹಿಂಸಾ ಧರ್ಮವನ್ನು ಪ್ರಚಾರಮಾಡಿದ ಭಗವಾನ್ ಬುದ್ಧನು ಸ್ವಯಂ ಶಕವರ್ಗದವ ನಾಗಿದ್ದನು. ಶಾಕ್ಯಮುನಿ ಮತ್ತು ಅರ್ಕಬಂಧು ಎಂಬ ಅವನ ಹೆಸರುಗಳು ಬುದ್ಧದೇವನು ಸೂರ್ಯಾರಾಧಕನಾದ ಶಕಮನುಷ್ಯನಾಗಿದ್ದನೆಂದು ಸ್ಪಷ್ಟವಾಗಿ ಸೂಚಿಸುತ್ತದೆ. ಎರಡನೆಯದಾಗಿ ಯವನ ರಾಜಕುಮಾರ ಅಲೆಕ್ಸಾಂಡರನು ವಿಜೇತನಾಗಿ ಭಾರತವರ್ಷದೊಳಗೆ ಬಂದಿದ್ದನೆಂದು ಬ್ರಿಟಿಷ್ ವಿದ್ವಾಂಸರು ನಮಗೆ ಹೇಳುತ್ತಾರೆ. ಆದರೆ ಪ್ರೊ. ಹರಿಶ್ಚಂದ್ರ ಸೇಠ್, ಎಮ್.ಎ.. ಪಿಎಚ್.ಡಿ. ಎಂಬ ವಿದ್ವಾಂಸರು ಬರೆದ ಚಂದ್ರಗುಪ್ತ ಮೌರ್ಯ ಮತ್ತು ಭಾರತದಲ್ಲಿ ಅಲೆಕ್ಸಾಂಡರನ ಪರಾಜಯ ಎಂಬ ಪುಸ್ತಕದಲ್ಲಿ ಅವರು ಅಲೆಕ್ಸಾಂಡರನು ಭಾರತವರ್ಷದೊಳಗೆ ಬರುವ ಮೊದಲೇ ಗಾಂಧಾರ ರಾಜಕುಮಾರ ಚಂದ್ರ ಗುಪ್ತನು ಯವನ ರಾಜಕುಮಾರ ಅಲೆಕ್ಸಾಂಡರನ ಮೈತ್ರಿಯನ್ನು ಸಂಪಾದಿಸಿದ್ದ ನೆಂದು ಸಿದ್ಧಪಡಿಸಿದ್ದಾರೆ. ಅದರೊಂದಿಗೆ ಚಂದ್ರಗುಪ್ತನು ಮಗಧದ ಮೇಲೆ ದಂಡೆತ್ತಿಹೋಗುವಾಗ ಅವನ ಸೈನ್ಯದಲ್ಲಿ ಶಕ, ಯವನ, ಕಿರಾತ, ಕಾಂಬೋಜ, ಪಾರಸೀಕ, ಬಾಹ್ಲೀಕ ಮೊದಲಾದ ಪಂಗಡಗಳ ಸೈನಿಕರಿದ್ದರೆಂಬ ಮುದ್ರಾರಾಕ್ಷಸ ನಾಟಕದ ಎರಡನೆಯ ಅಂಕದಲ್ಲಿರುವ ಉಲ್ಲೇಖವನ್ನೂ, ಮುದ್ರಾಮಂಜೂಷ

ವೆಂಬ ಗ್ರಂಥದಲ್ಲಿನ ಇತರ ವಿವರಗಳನ್ನೂ ಜೊತೆಗೊಳಿಸಿ ವಿಮರ್ಶಿಸಿದರೆ ಯವನ ರಾಜಕುಮಾರ ಅಲೆಕ್ಸಾಂಡರನು ಚಾಣಕ್ಯ ವಿಷ್ಣುಶರ್ಮನ ರಾಜತಂತ್ರದ ಜಾಲಕ್ಕೆ ಸಿಲುಕಿ ಚಂದ್ರಗುಪ್ತನಿಗೆ ಯುದ್ಧದಲ್ಲಿ ಸಹಾಯ ಮಾಡುವ ಸಲು ವಾಗಿಯೇ ಭಾರತವರ್ಷದೊಳಗೆ ಬಂದಿದ್ದನೆಂದು ಸಿದ್ಧವಾಗುತ್ತದೆ. ಆದುದರಿಂದ ಅವನು ಚಂದ್ರಗುಪ್ತನಿಗೆ ಮಾಡಿದ ಸಹಾಯದ ಪ್ರತಿಫಲವಾಗಿ ಸಿಂಧೂನದದ ಪಶ್ಚಿಮದಲ್ಲಿನ ಕೆಲವು ಪ್ರದೇಶಗಳನ್ನು ಪಡೆದಿದ್ದನೆಂದು ಹೇಳಬೇಕಾಗುತ್ತದೆ. ಅಲೆಕ್ಸಾಂಡರನು ಸತ್ತ ತರುವಾಯ ಚಂದ್ರಗುಪ್ತನು ಆ ಪ್ರದೇಶಗಳನ್ನು ಕಸಿದು ಕೊಂಡ ವಿಷಯವು ಇತಿಹಾಸ ಗ್ರಂಥಗಳಲ್ಲಿ ದೊರೆಯುತ್ತದೆ.

## ೨

## ಸಾರಸ್ವತರು ಮತ್ತು ಸರಸ್ವತೀ ನದಿ

"ಸಾರಸ್ವತ" ಎಂಬ ಹೆಸರಿಗೆ ಸರಸ್ವತೀ ಎಂಬ ನದಿಯೇ ಮೂಲವಾಗಿದೆ ಯೆಂಬುದರಲ್ಲಿ ಮತಭೇದವಿಲ್ಲವಾದರೂ ಸರಸ್ವತೀ ನದಿಯು ಯಾವುದು ಮತ್ತು ಅದು ಎಲ್ಲಿತ್ತು ಎಂಬುದರಲ್ಲಿ ಮಾತ್ರ ವಿದ್ವಾಂಸರಲ್ಲಿ ಮತಭೇದವಿದೆ. ಏಕೆಂದರೆ ಆ ನದಿಯು ಇಂದು ಅಸ್ತಿತ್ವದಲ್ಲಿ ಇಲ್ಲವಾಗಿದೆ. ಪುರಾಣಗಳಾದರೋ ಸರಸ್ವತೀ ನದಿಯ ಸಂಬಂಧದಲ್ಲಿ ಪರಸ್ಪರ ವಿರುದ್ಧವಾದ ಅಭಿಪ್ರಾಯಗಳಿಂದ ತುಂಬಿವೆ. ಅವುಗಳಿಗನುಸಾರವಾಗಿ ಸರಸ್ವತೀ ನದಿಯು ಹಿಮಾಲಯದ ಪ್ಲಕ್ಷಪ್ರಸ್ರವಣ ಎಂಬಲ್ಲಿಂದ ಹೊರಟು ಪಂಜಾಬದಲ್ಲಿಳಿದು ಹರಿಯುತ್ತ ಮುಂದುವರಿದು ಪತಿಯಾಳದ (ಪಾಟಿಯಾಲಾ) ಮರುಭೂಮಿಯಲ್ಲಿ ಲುಪ್ತ ವಾಗುತ್ತದೆ. ಮತ್ತು ಹಾಗೆ ಲುಪ್ತವಾದ ಸ್ಥಾನವು ಸರಸ್ವತೀ ವಿನಶನವೆನಿಸಿ ಕೊಳ್ಳುತ್ತದೆ. ಆದರೆ ಆ ವಿವರಗಳಿಗೊಪ್ಪುವ ಸರಸ್ವತೀ ನದಿಯು ಈಗ ಇಲ್ಲ. ಆದುದರಿಂದ ಇತಿಹಾಸಕಾರರು, ಭಾರತವರ್ಷದೊಳಗಿನ ಹಲವು ನದಿಗಳು ಚಾರಿತ್ರಿಕಕಾಲದಲ್ಲಿ ತಮ್ಮ ಪ್ರವಾಹದ ದಿಕ್ಕನ್ನು ಬದಲಾಯಿಸಿವೆಯೆಂದೂ, ಕೆಲವು ನದಿಗಳು ಇಲ್ಲವಾಗಿವೆಯೆಂದೂ ಅಂದಿದ್ದಾರೆ. ಭಾರತೀಯ ಇತಿಹಾಸ ವನ್ನು ಬರೆದ ಬ್ರಿಟಿಷ್ ವಿದ್ವಾಂಸ ವಿನ್ಸೆಂಟ್ ಏ. ಸ್ಮಿಥ್ ಅವರು "ಚಾರಿತ್ರಿಕ ಕಾಲದಲ್ಲೊಮ್ಮೆ ಸತಲಜ ನದಿಯು (= ಶುತುದ್ರಿ) ಸರಸ್ವತಿಯೊಂದಿಗೆ ಕೂಡಿ

ಬೆಳೆದು ಭಾವಲಪುರದ ಹಾದಿಯಾಗಿ ಹರಿದು ಸಿಂಧುನದವನ್ನು ಕೂಡಿತ್ತು"[1] ಅಂದಿದ್ದಾರೆ.

ಪರಂತು ಮಹಾಭಾರತದ ಶಲ್ಯಪರ್ವದಲ್ಲಿ ಒಮ್ಮೆ (೩೬–೭೭) ಸರಸ್ವತೀ ನದಿಯು ಸೌರಾಷ್ಟ್ರದಲ್ಲಿ ಪ್ರಭಾಸಕ್ಷೇತ್ರದ ಬಳಿಯಲ್ಲಿ ಸಮುದ್ರವನ್ನು ಕೂಡುತ್ತದೆಂದೂ ಮತ್ತೊಮ್ಮೆ (೫೬–೧೧) ಸರಸ್ವತೀ ನದಿಯು ಪ್ಲಕ್ಷಪ್ರಸ್ರವಣದಲ್ಲಿ ಹರಿಯುತ್ತದೆಂದೂ ಹೇಳಿದೆ. ಈ ವರ್ಣನೆಯಿಂದಾಗಿ ಅಂದರೆ ಪ್ಲಕ್ಷಪ್ರಸ್ರವಣದಿಂದ ಹೊರಟು ಪತಿಯಾಳದ ಮರುಭೂಮಿಯಲ್ಲಿ ಲುಪ್ತವಾದ ಸರಸ್ವತಿಯು ಪ್ರಭಾಸಕ್ಷೇತ್ರದಲ್ಲಿ ಸಮುದ್ರವನ್ನು ಕೂಡುವುದು ಹೇಗೆ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಕಿಂತು ಕೆಲವು ಪುರಾಣಗಳು ಆ ಪ್ರಶ್ನೆಯನ್ನು ಹೆಚ್ಚು ಪ್ರಯಾಸವಿಲ್ಲದೇ ಬಗೆಹರಿಸುತ್ತವೆ. ಅವುಗಳಿಗನುಸಾರವಾಗಿ ಹಿಮಾಲಯದಿಂದ ಹೊರಟ ಸರಸ್ವತಿಯು ರಾಜಸ್ಥಾನದ ಮರುಭೂಮಿಯಲ್ಲಿ ಲುಪ್ತವಾಗುತ್ತದೆ. ಮತ್ತು ಹಾಗೆ ಲುಪ್ತವಾದ ಸರಸ್ವತೀ ನದಿಯು ಆಬೂಬೆಟ್ಟದಿಂದ ಹೊರಬಂದು ಹರಿಯುತ್ತ ಮುಂದುವರಿದು ಕಚ್ಛದ ಮರುಭೂಮಿಯಲ್ಲಿ ಲುಪ್ತವಾಗುತ್ತದೆ. ಹಾಗೂ ಮರಳಿ ಸೌರಾಷ್ಟ್ರದಲ್ಲಿ ಗಿರ್ ಕಾಡಿನಿಂದ ಹೊರಬಿದ್ದು ಹರಿಯುತ್ತ ಪ್ರಭಾಸಕ್ಷೇತ್ರದಲ್ಲಿ ಸಮುದ್ರವನ್ನು ಕೂಡುತ್ತದೆ.[2]

ಹಿಂದಿನ ವರ್ಣನೆಯಿಂದ ಸರಸ್ವತೀ ನದಿಯು ಮೂರು ಬೇರೆ ಬೇರೆ ಪ್ರದೇಶಗಳಲ್ಲಿ ಹರಿಯುತ್ತಿದ್ದಿತೆಂದು ಸಿದ್ಧವಾಗುತ್ತದೆ. ಅಂದರೆ ಭಾರತವರ್ಷದಲ್ಲಿ ಸರಸ್ವತೀ ಎಂಬ ಹೆಸರಿನ ಮೂರು ನದಿಗಳಿದ್ದವೆಂದು ಸಿದ್ಧವಾಗುತ್ತದೆ. ಆದರೆ ಪುರಾಣಕಾರರು ಆ ನದಿಗಳ ಹುಟ್ಟಿಗಾಗಿ ಕೊಟ್ಟ ಕಾರಣಗಳು ಮಾತ್ರ

---

1. It is however, a reasonable conjecture that within the period of history the Sutlej united with the Sarasvati and Ghaggar to from the great river which once flowed into the Indus through Bahawalpur and that then Brahmavarta was a Doab. The Oxford History of India, page 14.

2. In the Puranic literature we have a description of river Saraswati given in a way which shows that one and the same river which had its rise from the Himalaya Mountains, got lost in the desert of Rajastan and appeared from Mount Abu and once again desappeared in the desert of Kutch reappeared in the jungle of Gir in Saurastra and met the western ocean near Prabhasa. Immortal India, Vol. IV, page 13, Vidya Bhavan.

ಸಮಂಜಸವಾದವುಗಳಲ್ಲವೆಂದು ಮುಂದಿನ ವಿವರಗಳಿಂದ ತಿಳಿಯಬಹುದು. ವಾಸ್ತವವಾಗಿ ಸರಸ್ವತೀ ನದಿಯು. ಮೂಲದಲ್ಲಿ ಭಾರತವರ್ಷದೊಳಗಿನ ನದಿಯಾಗಿರದೇ ಆರ್ಯಜನರ ಮೂಲಸ್ಥಾನವಾಗಿದ್ದ ಉತ್ತರಧ್ರುವ ಪ್ರದೇಶದಲ್ಲಿನ ನದಿಯಾಗಿದ್ದಿತು. ಆರ್ಯಜನರು ಉತ್ತರಧ್ರುವ ಪ್ರದೇಶವನ್ನು ತೊರೆದು ಕೆಳಗಿನ ಪ್ರದೇಶಗಳಿಗೆ ಬಂದ ತರುವಾಯ ಅವರು ಎಲ್ಲೆಲ್ಲಿ ನೆಲಸಿದ್ದರೋ ಅಲ್ಲಿನ ನದಿಗಳಿಗೆ ತಮ್ಮ ಮೂಲನೆಲೆಯಲ್ಲಿ ಹರಿಯುತ್ತಿದ್ದ ನದಿಗಳ ಹೆಸರುಗಳನ್ನಿಡುತ್ತಿದ್ದರೆಂಬುದಕ್ಕೆ ಪ್ರಮಾಣಗಳಿವೆ. ಆದುದರಿಂದ ಸರಸ್ವತೀ ಮೊದಲಾದ ನದಿಗಳ ಕುರಿತು ವೈದಿಕ ಸಾಹಿತ್ಯದಲ್ಲಿ ಏನು ಹೇಳಿದೆಯೆಂದು ಪರಿಶೀಲಿಸುವುದು ಉಚಿತವಾಗಿದೆ. ಋಗ್ವೇದದಲ್ಲಿನ ಬೇರೆಬೇರೆ ಸೂಕ್ತಗಳಲ್ಲಿ ಒಟ್ಟು ಇಪ್ಪತ್ತಾರು ನದಿಗಳ ಹೆಸರುಗಳು ದೊರಕುತ್ತವೆ ಮತ್ತು ಅವುಗಳು ಮುಂದಿನಂತಿವೆ:—

**೧. ಅನಿತಭಾ, ೨. ಅಸಿಕ್ನೀ, ೩. ಆಪಯಾ, ೪. ಆರ್ಜೀಕೀಯಾ, ೫. ಕುಭಾ, ೬. ಕ್ರುಮು, ೭. ಗಂಗಾ, ೮. ಗೋಮತಿ, ೯. ತೃಷ್ಟಾಮಾ, ೧೦. ದೃಷದ್ವತೀ, ೧೧. ಪರುಷ್ಣೀ, ೧೨. ಪುರೀಷಿಣೀ, ೧೩. ಮರುದ್‌ವೃಧಾ, ೧೪. ಮೇಹತ್ನು, ೧೫. ಯಮುನಾ ೧೬. ರಸಾ, ೧೭. ವಿತಸ್ತಾ, ೧೮. ವಿಪಾಶಾ, ೧೯. ಶುತುದ್ರೀ ೨೦. ಶ್ವೇತ್ಯಾ, ೨೧. ಸರಯೂ, ೨೨. ಸರಸ್ವತೀ, ೨೩. ಸಿಂಧು ೨೪. ಸುವಾಸ್ತು, ೨೫. ಸುಷೋಮಾ, ೨೬. ಸುಸರ್ತು.**

ಮೂಲದಲ್ಲಿ ಇವುಗಳು ಪಾರ್ಥಿವ (=ಭೂಮಿಯ) ನದಿಗಳಾಗಿರದೆ. ಆಕಾಶದಲ್ಲಿ ಭೂಮಿಗೆ ಸುತ್ತುಬರುವ ಉಷಃಪ್ರಕಾಶದ ಮತ್ತು ಸಂಧ್ಯಾಪ್ರಕಾಶದ ಪ್ರವಾಹಗಳಾಗಿದ್ದವೆಂದು ಋಗ್ವೇದದಲ್ಲಿ ಆ ನದಿಗಳಿಗಾಗಿ ಬಳಸಿದ ಉಪಮಾನಗಳ ಅಥವಾ ವಿಶೇಷಣಗಳ ಮೇಲಿಂದ ಸಿದ್ಧವಾಗುತ್ತದೆ. ಋಗ್ವೇದದಲ್ಲಿ ಇಂದ್ರನನ್ನು "ವೃತ್ರಘ್ನ=ವೃತ್ರನನ್ನು ಕೊಲ್ಲುವವನು" ಅಂದರೆ ಕತ್ತಲೆಯನ್ನು ನಾಶಗೊಳಿಸುವವನು ಎಂದು ಕರೆದಂತೆಯೇ ಸರಸ್ವತಿಯನ್ನು ಕೂಡ "ವೃತ್ರಘ್ನೀ" ಅಂದರೆ ವೃತ್ರನನ್ನು ನಾಶಗೊಳಿಸುವವಳು ಎಂದು ಕರೆದಿದೆ ಮತ್ತು ತನ್ನ ಪ್ರಕಾಶದಿಂದ ಭೂಮಿಯನ್ನೂ, ಅಂತರಿಕ್ಷವನ್ನೂ ಬೆಳಗುವವಳು ಎಂದು ಕರೆದಿದೆ. ಋಗ್ವೇದದಲ್ಲಿ ವೃತ್ರನು ದಿವ್ಯಜಲಗಳನ್ನು (=ಪ್ರಕಾಶದ ಪ್ರವಾಹವನ್ನು) ತಡೆದು ಹಿಡಿಯುತ್ತಾನೆಂದೂ, ಇಂದ್ರನು ತನ್ನ ವಜ್ರದಿಂದ ವೃತ್ರನನ್ನು ಕೊಂದು ಆ ದಿವ್ಯ ಜಲಗಳನ್ನು ಪ್ರವಹಿಸುವಂತೆ ಮಾಡುತ್ತಾನೆಂದೂ ವರ್ಣಿಸಿದೆ:

**ಇಂದ್ರೋ ವೃತ್ರಸ್ಯ ದೋಧತಃಸಾನುಂ ವಜ್ರೇಣ ಹೀಳಿತಃ ।**
**ಅಭಿಕ್ರಮ್ಯಾವಜಿಘ್ನತೇಽಪಃ ಸರ್ಮಾಯ**
**ಚೋದಯನ್ನರ್ಚನ್ನನು ಸ್ವರಾಜ್ಯಮ್ ॥ ೧-೮೦-೫ ॥**

ವೃತ್ರ ಶಬ್ದವು ಏಕವಚನದಲ್ಲಿರುವಾಗ ಪುಲ್ಲಿಂಗರೂಪದಲ್ಲಿ ಬಳಸಲ್ಪಟ್ಟರೂ ಅದು ಬಹುವಚನದಲ್ಲಿ ನಪುಂಸಕ ಲಿಂಗದಲ್ಲಿರುತ್ತದೆ. ಮತ್ತು ಅದರೊಂದಿಗೆ ತೊಂಭತ್ತೊಂಬತ್ತು ಎಂಬ ಸಂಖ್ಯೆಯೂ ಬರುತ್ತದೆ:—

**ಇಂದ್ರೋ ದಧೀಚೋ ಅಸ್ಥಭಿರ್ವೃತ್ರಾಣ್ಯಪ್ರತಿಷ್ಕುತಃ ।**
**ಜಘಾನ ನವತೀರ್ನವ ॥ ೧-೮೪-೧೩ ॥**

ಅರ್ಥ—ಯಾರೊಬ್ಬರಿಂದ ಎದುರಿಸಲಾಗದಂಥ ಅಪ್ರತಿಮ ವೀರನಾದ ಇಂದ್ರನು ದಧೀಚಿಯ ಎಲುಬುಗಳಿಂದ ತೊಂಭತ್ತೊಂಬತ್ತು ವೃತ್ರಗಳನ್ನು ಕೊಂದನು. ಅಂದರೆ ತುಪ್ಪ ಸುರಿದುದರಿಂದ ಜ್ವಾಜಲ್ಯಮಾನವಾಗಿ ಉರಿಯು ತಿದ್ದ ಅಗ್ನಿಯು ಧ್ರುವಪ್ರದೇಶದಲ್ಲಿನ ತೊಂಭತ್ತೊಂಬತ್ತು ಸುತ್ತುಗಳಷ್ಟು (=ದಿನಗಳಷ್ಟು) ದೀರ್ಘಕಾಲದ ಕತ್ತಲೆಯನ್ನು ನಾಶಗೊಳಿಸಿದನು ಎಂದು ಅರ್ಥಮಾಡಿದರೆ ತಪ್ಪಾಗಲಾರದು.

ಧ್ರುವಪ್ರದೇಶದಲ್ಲಿನ ಭೌಗೋಲಿಕ ಪರಿಸ್ಥಿತಿಯನ್ನು ಅನುಲಕ್ಷಿಸಿ ಋಗ್ವೇದ ದಲ್ಲಿನ ಮಂತ್ರಗಳ ಅರ್ಥವನ್ನು ಮಾಡುವುದಾದರೆ ಋಗ್ವೇದದಲ್ಲಿ ಉಕ್ತನಾಗಿ ರುವ ಇಂದ್ರನೆಂದರೆ ಕತ್ತಲೆಯನ್ನು ನಿವಾರಿಸುವ ಸಲುವಾಗಿ ತುಪ್ಪ, ಘೃತ ಮೊದಲಾದವುಗಳನ್ನು ಎರೆದು ಜ್ವಾಜಲ್ಯಮಾನವಾಗಿ ಉರಿಸುವ ಅಗ್ನಿಯೆಂದು ಹೇಳಬೇಕಾಗುವುದು. ಏಕೆಂದರೆ ಇಂದ್ರನು ವೃತ್ರನನ್ನು ಕೊಲ್ಲಲು ಬಳಸುವ ಅಸ್ತ್ರವು ದಧೀಚಿಯ ಎಲುಬಿನಿಂದ ನಿರ್ಮಿಸಿದ ವಜ್ರವೆಂದು ಋಗ್ವೇದದ ಇತರ ಸೂಕ್ತಗಳಲ್ಲಿ ಹೇಳಿದೆ. ದಧೀಚಿಯ ಮೂಲರೂಪವು "ದಧ್ಯಜ್" ಎಂದಿರುತ್ತದೆ. ಅದು "ದಧಿನ್=ಮೊಸರು" ಎಂಬುದರ ವೈದಿಕರೂಪವೇ ಹೊರತು ಬೇರೇನೂ ಆಗಿರಲು ಸಾಧ್ಯವಿಲ್ಲ. ಆದುದರಿಂದ ದಧೀಚಿಯ ಎಲುಬು ಎಂದರೆ ಬೆಣ್ಣೆ ಯೆಂದೂ ಅದರಿಂದ ನಿರ್ಮಿಸಿದ ವಜ್ರವೆಂದರೆ ತುಪ್ಪವೆಂದೂ ಇಟ್ಟುಕೊಂಡರೆ ಋಗ್ವೇದದಲ್ಲಿನ ಹಲವು ಮಂತ್ರಗಳ ಅರ್ಥವು ಬಹಳ ತಿಳಿಯಾಗುವುದು. ಇದು ಬರಿಯ ಊಹೆಯಲ್ಲ. ಐತರೇಯ ಬ್ರಾಹ್ಮಣದಲ್ಲಿ "ಇಂದ್ರನು ಘೃತವೆಂಬ ವಜ್ರದಿಂದಲೇ ವೃತ್ರನನ್ನು ಕೊಂದನು" ಎಂದು ಹೇಳಿದೆ: **"ಘೃತೇನ ಹಿ ವಜ್ರೇಣೇಂದ್ರೋ ವೃತ್ರಮಹನ್** ॥ ೨-೩-೨೩ ॥ ಆದುದರಿಂದ ವೃತ್ರಘ್ನ ಎಂಬುದರ ಅರ್ಥವನ್ನು "ಕತ್ತಲೆಯನ್ನು ನಾಶಗೊಳಿಸುವವನು"

ಹಾಗೂ ಇಂದ್ರನೆಂದರೆ "ಕತ್ತಲೆಯನ್ನು ನಿವಾರಿಸುವ ಸಲುವಾಗಿ ತುಪ್ಪ ಸುರಿದು ಉರಿಸುವ ಬೆಂಕಿಯೆಂದೂ" ಇಟ್ಟುಕೊಂಡರೆ ತಪ್ಪಾಗದು. ಆ ಕಾಲದಲ್ಲಿ ಎಣ್ಣೆಯನ್ನು ಕಂಡುಕೊಂಡಿರಲಿಲ್ಲವೆಂದು ತಿಳಿಯಬೇಕು. ಆದುದರಿಂದ ಸರಸ್ವತಿಯನ್ನು ವೃತ್ರಘ್ನೀ ಎಂದು ಕರೆದುದರ ಕಾರಣವು ಸರಸ್ವತಿಯು ಕತ್ತಲೆಯನ್ನು ನಿವಾರಿಸುವ ಪ್ರಕಾಶದ ಪ್ರವಾಹವಾಗಿದ್ದುದೇ ಆಗಿತ್ತೆಂದು ಸಿದ್ಧವಾಗುತ್ತದೆ. ಅಂದರೆ ಸರಸ್ವತಿಯು ಮೂಲವಲ್ಲಿ ದಿವ್ಯ ನದಿಯಾಗಿದ್ದಿತೇ ಹೊರತು ಭೂಮಿಯ ಮೇಲಿನ ನದಿಯಾಗಿರಲಿಲ್ಲ. ಇದನ್ನು ಋಗ್ವೇದದಲ್ಲಿನ ಮಂತ್ರಗಳು ಸಮರ್ಥಿಸುತ್ತವೆ:—

**ಉತಸ್ಯಾ ನಃ ಸರಸ್ವತೀ ಘೋರಾ ಹಿರಣ್ಯವರ್ತನಿಃ ।**
**ವೃತ್ರಘ್ನೀ ವಷ್ಟಿ ಸುಷ್ಟುತಿಮ್ ॥ ೬.೬೧.೭ ॥**

ಅರ್ಥ:— ಉಗ್ರಳೂ ಚಿನ್ನದಂತೆ ಹೊಳೆಯುವ ಹಾದಿಯುಳ್ಳವಳೂ, ವೃತ್ರನನ್ನು ಕೊಲ್ಲುವವಳೂ ಆಗಿರುವ ದೇವಿ ಸರಸ್ವತಿಯು ನಮ್ಮ ಚೆಲೋ ಸ್ತುತಿಗಳನ್ನು ಬಯಸುತ್ತಾಳೆ.

**ಆ ಪಪ್ರುಷೀ ಪಾರ್ಥಿವಾನ್ಯುರು ರಜೋ ಅಂತರಿಕ್ಷಮ್ ।**
**ಸರಸ್ವತೀ ನಿದಸ್ಪಾತು ॥ ೬.೬೧.೧೧ ॥**

ಅರ್ಥ:— ತನ್ನ ಕಾಂತಿಯಿಂದ ಭೂತಳವನ್ನೂ, ಅಂತರಿಕ್ಷವನ್ನೂ ತುಂಬಿಸಿ ಬಿಡುವಂಥ ಸರಸ್ವತೀ ದೇವಿಯು ನಮ್ಮನ್ನು ಲೋಕನಿಂದೆಯಿಂದ ಕಾಪಾಡಲಿ.

ಹಿಂದಿನ ಮಂತ್ರಗಳಿಂದಲೂ ಸರಸ್ವತೀ ನದಿಯ ಇತರ ಸ್ತುತಿಗಳಿಂದಲೂ ಸರಸ್ವತಿಯು ದಿವ್ಯನದಿಯಾಗಿದ್ದಿತೆಂದು ಸಿದ್ಧವಾಗುತ್ತದೆ. ಆರ್ಯ ಜನರು ತಮ್ಮ ಮೂಲನೆಲೆಯಾಗಿದ್ದ ಉತ್ತರಧ್ರುವ ಪ್ರದೇಶವನ್ನು ತೊರೆದು ಬಂದು ಕೆಳಗಿನ ಪ್ರದೇಶಗಳಲ್ಲಿ ನೆಲಸಿದ ತರುವಾಯ ಅಲ್ಲಿ ಪ್ರವಹಿಸುತ್ತಿದ್ದ ನದಿಗಳಿಗೆ ದಿವ್ಯನದಿಗಳ ಹೆಸರುಗಳನ್ನು ಕೊಟ್ಟಿದ್ದರು. ಮತ್ತು ಅವರು ಭಾರತವರ್ಷವನ್ನು ಪ್ರವೇಶಿಸುವ ಮೊದಲು ಅವರ ಕಟ್ಟಕಡೆಯ ನೆಲೆಯು ಅಫಘಾನ ಪ್ರದೇಶವಾಗಿದ್ದಿತು. ಆದುದರಿಂದ ಋಗ್ವೇದದಲ್ಲಿ ಉಕ್ತವಾಗಿರುವ ಸರಯೂ, ಸರಸ್ವತೀ ಮತ್ತು ಕುಭಾ ಎಂಬ ನದಿಗಳು ಅಫಘಾನದಲ್ಲಿಯೂ, ಕ್ರುಮು, ಗೋಮತಿ ಮೊದಲಾದ ನದಿಗಳು ವಾಯವ್ಯ ಗಡಿನಾಡಿನಲ್ಲಿಯೂ ಇರುವುವಾಗಿವೆ. ಆದರೆ ಸರಯೂ ಮತ್ತು ಸರಸ್ವತೀ ನದಿಗಳು ಅಫಘಾನದಲ್ಲಿರುವ ವಿಷಯವನ್ನು ಬ್ರಿಟಿಷ್ ವಿದ್ವಾಂಸರು ಮರೆಮಾಜಿದುದರಿಂದ ಆಧುನಿಕ ವಿದ್ವಾಂಸರಿಗೆ ಅದರ ಸುಳಿವು ಹತ್ತಿರಲಿಲ್ಲ.

ಪಾರಸದ ಚಕ್ರವರ್ತಿ ಮೊದಲನೆಯ ದಾರಯವುಶ್ (Darius I ಶಕ ಪೂರ್ವ ೬೦೯-೫೬೩) ಎಂಬವನು ಬರೆಸಿದ ಬಹಿಸ್ತುನ್ ಮತ್ತು ಇತರ ಶಾಸನಗಳಲ್ಲಿ "ಹರಯೂ = ಸರಯೂ" ಮತ್ತು "ಹರಕ್ವಿತಿ = ಸರಸ್ವತಿ" ಎಂಬ ನದಿಗಳು ಪಶ್ಚಿಮ ಅಫಘಾನದಲ್ಲಿದ್ದ ಉಲ್ಲೇಖಗಳಿವೆ.[1] ಹೆರಾತ್ ಎಂಬ ಪಟ್ಟಣವು ಹರಯೂ ನದಿಯ ದಡದಲ್ಲಿದೆ. ಈಗ ಅಫಘಾನದಲ್ಲಿ ಸರಯೂ ನದಿಯ ಹೆಸರು "ಹರಿರುದ್" ಎಂದೂ ಸರಸ್ವತಿಯ ಹೆಸರು "ಅರಗಂಧಾಬ್" ಎಂದೂ ಕುಭಾ ನದಿಯ ಹೆಸರು "ಕಾಬುಲ್ ಎಂದೂ ಗೋಮತಿಯ ಹೆಸರು "ಗೋಮಲ್" ಎಂದೂ ಮಾರ್ಪಟ್ಟಿದೆ.

ಆರ್ಯಜನರು ಭಾರತವರ್ಷವನ್ನು ಪ್ರವೇಶಿಸಿ ಅಲ್ಲಿ ನೆಲಸಿದ ತರುವಾಯ ಅಲ್ಲಿನ ನದಿಗಳಿಗೂ ವೈದಿಕ ಹೆಸರುಗಳನ್ನು ಕೊಟ್ಟಿದ್ದರೆಂಬುದರಲ್ಲಿ ಸಂದೇಹವಿಲ್ಲ. ಆದರೆ ಋಗ್ವೇದದಲ್ಲಿ ಉಕ್ತವಾಗಿರುವ ಹೆಸರುಗಳ ಎಲ್ಲ ನದಿಗಳು ಭಾರತವರ್ಷದಲ್ಲಿ ಇದ್ದವೆನ್ನಲು ಸಾಧ್ಯವಿಲ್ಲವಾಗಿದೆ. ಏಕೆಂದರೆ ಆ ಎಲ್ಲ ಹೆಸರುಗಳ ನದಿಗಳನ್ನು ಇಂದಿನ ತನಕ ಕಂಡುಹಿಡಿದಿಲ್ಲ. ಮಹಾಭಾರತದ ಶಲ್ಯಪರ್ವದ ೩೮ನೆಯ ಅಧ್ಯಾಯದಲ್ಲಿ ನಾಗವತ್ಮ್ರವೆಂಬ ಪುಣ್ಯಕ್ಷೇತ್ರವು ಸರಸ್ವತೀ ನದಿಯ ದಕ್ಷಿಣ ತೀರದಿಂದ ತುಸುವೇ ದೂರದಲ್ಲಿದೆಯೆಂಬಂತೆ ವರ್ಣನೆ ಇದೆ. ಆದರೆ ಆ ಸ್ಥಳವು ಎಲ್ಲಿತ್ತೆಂಬುದನ್ನು ನಿರ್ಧರಿಸಲು ಸಾಧ್ಯವಾಗಿಲ್ಲ.

ಹೇಗಿದ್ದರೂ ಸಾರಸ್ವತ ಬ್ರಾಹ್ಮಣರ ಹೆಸರಿಗೆ ಕಾರಣವಾದ ದಿವ್ಯನದಿಯ ಹೆಸರನ್ನು ಪಡೆದಿದ್ದ ಸರಸ್ವತಿಯು. ಆರ್ಯಜನರು ಭಾರತವರ್ಷವನ್ನು ಪ್ರವೇಶಿಸುವ ಮೊದಲು ನೆಲಸಿದ್ದ ಅಫಗಾನದಲ್ಲಿನ ನದಿಯೇ ಅನ್ನಬೇಕಾಗಿದೆ. ಏಕೆಂದರೆ ಶುಕ್ಲಯಜುರ್ವೇದದ ವಾಜಸನೇಯಿ ಸಂಹಿತೆಯಲ್ಲಿ ಉಲ್ಲೇಖಿಸಲಾದ ಸರಸ್ವತೀ ನದಿಯ ವರ್ಣನೆಯು ಅಫಗಾನದಲ್ಲಿನ ನದಿಯೊಂದಿಗೆ ಮಾತ್ರ ಸರಿಯಾಗಿ ಹೊಂದಿಕೊಳ್ಳುತ್ತದೆ. ಅಲ್ಲದೆ ಆಶ್ವಲಾಯನ ಶ್ರೌತಸೂತ್ರದಲ್ಲಿ ಕೂಡ ಸರಸ್ವತೀ

---

1. It is interesting to note the original old Iranian forms of these names as used in the Behistun and other inscriptions of the Achaemenian emperor Darius I 521-481 B.C. as these names correspond closely to Sanscrit names. Thus Achaemenes (father of Teispes) = Hakhamani, Darius = Darayavau ( = San-Dharayad-vasu) Cyrus = Kuru, Xerexes = Kshayash, Arachosia = Haraquati = San-Sarasvati Vedic name of a river in S. W. Afghanistan. Chandragupta Maurya and His Times by Radha Kumud Mukerjee, M. A.

ನದಿಯು ಪೂರ್ವದಿಂದ ಪಶ್ಚಿಮಕ್ಕೆ ಹರಿದು ಕೊನೆಗೊಳ್ಳುತ್ತದೆಂದು ವರ್ಣಿಸಿದೆ. ವಾಜಸನೇಯಿ ಸಂಹಿತೆಯಲ್ಲಿ ಮುಂದಿನ ವರ್ಣನೆ ಇದೆ:—

**ಪಂಚನದ್ಯಃ ಸರಸ್ವತೀಮಪಿ ಯಂತಿ ಸಸ್ರೋತಸಃ ।**
**ಸರಸ್ವತೀ ತು ಪಂಚಧಾ ಸೋ ದೇಶೇಽಭವತ್ಸರಿತ್ ॥೩೪-೧೧॥**

ಅರ್ಥ:— ಪ್ರವಾಹಗಳಿಂದ ಕೂಡಿದ ಐದು ನದಿಗಳು ಹೋಗಿ ಸರಸ್ವತಿಯನ್ನು ಕೂಡುತ್ತವೆ. ಹೀಗಾಗಿ ಆ ಸರಸ್ವತೀ ನದಿಯು ದೇಶದಲ್ಲಿ ಐದು ಪಟ್ಟಾಗಿ ಬೆಳೆದಿದೆ.

ಹಿಂದಿನ ವರ್ಣನೆಯಿಂದ ಬೇರೆ ಐದು ನದಿಗಳು ಬಂದು ಸರಸ್ವತಿಯನ್ನು ಕೂಡುತ್ತಿದ್ದವೆಂದು ಸ್ಪಷ್ಟವಾಗುತ್ತದೆ. ಆ ಪ್ರಕಾರವಾಗಿ ಉತ್ತರ ದಿಕ್ಕಿನಿಂದ ದಕ್ಷಿಣಕ್ಕೆ ಹರಿದುಬಂದು ಪೂರ್ವದಿಂದ ಪಶ್ಚಿಮಕ್ಕೆ ಹರಿಯುವ ನದಿಯನ್ನು ಕೂಡುವುದನ್ನು ಅಫಗಾನದಲ್ಲಿನ ಭೂಪಟದಲ್ಲಿ ಕಾಣಬಹುದು.[1] ಸರ್ದಾರ್ ಕೆ. ಎಮ್. ಪಣಿಕ್ಕರ್ ಅವರು ಕೂಡ ತಾನು ಬರೆದ ಭಾರತವರ್ಷದ ಚರಿತ್ರೆಯ ಪುಸ್ತಕದಲ್ಲಿ ಕೊಟ್ಟಿರುವ ಭೂಪಟದಲ್ಲಿ ಸರಸ್ವತೀ ನದಿಯನ್ನು ಅಫಗಾನದಲ್ಲಿಯೇ ತೋರಿಸಿದ್ದಾರೆ.[2]

ಋಗ್ವೇದದಲ್ಲಿ ಸರಸ್ವತೀ ನದಿಯನ್ನು ದೇವಿಯನ್ನಾಗಿ ಕಲ್ಪಿಸಿ ಯಜ್ಞ ಕಾಲದಲ್ಲಿ ಅವಳನ್ನು ಸ್ತುತಿಸುತ್ತ ಆಹ್ವಾನಿಸುವ ಹಲವು ಋಚೆಗಳಿವೆ. ಮೂರು ಇಡೀ ಸೂಕ್ತಗಳು (ಮಂಡಲ ೬-೬೧. ಮಂ. ೭-೯೫ ಮತ್ತು ೯೬) ಅವಳಿಗಾಗಿಯೇ ಉಪಯೋಗಿಸಲ್ಪಟ್ಟಿವೆ. ಆಪ್ರೀ ಸೂಕ್ತಗಳಲ್ಲಿ ಸರಸ್ವತೀ ದೇವಿಯು ಇತರ ದೇವಿಗಳೊಂದಿಗೆ ಆಹ್ವಾನಿಸಲ್ಪಟ್ಟಿದ್ದಾಳೆ. ಮತ್ತು ವಿಶ್ವದೇವ ಸೂಕ್ತಗಳಲ್ಲಿಯೂ ಸರಸ್ವತೀ ದೇವಿಯು ಬರುತ್ತಾಳೆ. ಆದುದರಿಂದ ಸರಸ್ವತಿಯು ಬಹಳ ಪ್ರಾಚೀನಕಾಲದಲ್ಲಿಯೇ ದೇವೀಪದವನ್ನು ಪಡೆದು ಆರ್ಯಜನರ ಆರಾಧನೆಗೆ ಪಾತ್ರಳಾಗಿದ್ದಳೆಂದು ಮತ್ತು ಅವಳ ಆರಾಧಕರನ್ನು ಸಾರಸ್ವತರೆನ್ನುತ್ತಿದ್ದರೆಂದು ಋಗ್ವೇದದಲ್ಲಿನ ಮಂತ್ರದಿಂದ ಸ್ಪಷ್ಟವಾಗುತ್ತದೆ. ಮುಂದಿನ ಮಂತ್ರದಲ್ಲಿ ಸರಸ್ವತೀದೇವಿ ಮತ್ತು ಅವಳ ಆರಾಧಕರಾದ ಸಾರಸ್ವತರ ಉಲ್ಲೇಖವಿದೆ.

---

1. School Atlas page 49 Mudran Kalamandir, 10, Sheshadri Road, Madras.

2. A Survey of Indian History, page 72.

**ಆ ಭಾರತೀ ಭಾರತೀಭಿಃ ಸಜೋಷಾ ಇಳಾದೇವೈ**
**ರ್ಮನುಷ್ಯೇಭಿರಗ್ನಿಃ ।**
**ಸರಸ್ವತೀ ಸಾರಸ್ವತೇಭಿರರ್ವಾಕ್ ತಿಸ್ರೋದೇವೀ**
**ರ್ಬರ್ಹಿರೇದಂ ಸದಂತು ॥ ೭-೨-೮ ॥**

ಅರ್ಥ:— ಭಾರತಿ ಎಂಬ ಸೋದರಿಯರೊಂದಿಗೆ ಭಾರತೀದೇವಿಯೂ, ದೇವತೆಗಳೊಂದಿಗೆ ಇಳಾದೇವಿಯೂ, ಮನುಷ್ಯರೊಂದಿಗೆ ಅಗ್ನಿದೇವನೂ, ಸಾರಸ್ವತರೆಂಬ ಭಕ್ತಜನರೊಂದಿಗೆ ಸರಸ್ವತೀದೇವಿಯೂ ಈ ಯಜ್ಞಶಾಲೆಯೊಳಗೆ ಬಂದು ಅವರಿಗಾಗಿ ಹಾಸಿದ ದರ್ಭಾಸನದ ಮೇಲೆ ಆಸೀನರಾಗಲಿ.

ಈ ಮಂತ್ರದಲ್ಲಿ ಮಾತ್ರವಲ್ಲದೇ ಬೇರೆ ಹಲವು ಮಂತ್ರಗಳಲ್ಲಿ ಕೂಡ ಸರಸ್ವತೀ ಮೊದಲಾದ ದೇವ-ದೇವಿಯರನ್ನು ಸ್ತುತಿಪೂರ್ವಕವಾಗಿ ಕರೆದು ಕುಶಾಸನದ ಮೇಲೆ ಕುಳಿತುಕೊಳ್ಳಿರಿ ಎಂದು ಪ್ರಾರ್ಥಿಸಿದುದಿದೆ. ಆದುದರಿಂದ ಯಜ್ಞಕಾಲದಲ್ಲಿ ಹಾಗೆ ಆಹ್ವಾನಿಸಲ್ಪಡುವ ಪ್ರತಿಯೊಂದು ದೇವತೆಯ ಪ್ರತಿಮಾ ಸಂಕೇತವನ್ನು ಅಥವಾ ಚಿತ್ರವನ್ನು ನಿರ್ಮಿಸಿ ಅದನ್ನು ಯಜ್ಞಶಾಲೆಯೊಳಗೆ ತಂದು ಅದರ ಸಲುವಾಗಿ ಹಾಸಿದ ದರ್ಭೆಗಳ ಮೇಲೆ ಇಡುತಿದ್ದರೆಂದು ತಿಳಿಯಬೇಕಾಗಿದೆ. ಹಾಗಲ್ಲದಿದ್ದರೆ "ಕುಳಿತುಕೊಳ್ಳಲಿ ಇಲ್ಲವೇ ಕುಳಿತುಕೊಳ್ಳಿರಿ" ಎಂದು ಹೇಳಿದುದಕ್ಕೆ ಬೆಲೆಯೇ ಇಲ್ಲವಾಗುತ್ತದೆ, ಪ್ರಾಚೀನಕಾಲದ ಆರ್ಯರು ಯಜ್ಞಕಾಲದಲ್ಲಿ ವೈದಿಕ ದೇವತೆಗಳ ಪ್ರತಿನಿಧಿಗಳ ರೂಪದಲ್ಲಿ ಅಂಥ ಪ್ರತಿಮಾ ಸಂಕೇತಗಳನ್ನು ಬಳಸುತಿದ್ದರೆಂಬುದಕ್ಕೆ ಸಿಂಧೂಕಣಿವೆಯ ಅಗೆತಗಳಲ್ಲಿ ಬೆಳಕಿಗೆ ಬಂದ ಹಾಲುಗಲ್ಲಿನ ಮುದ್ರೆಗಳೇ ಪ್ರತ್ಯಕ್ಷ ಪ್ರಮಾಣಗಳಾಗಿರುತ್ತವೆ, ಆ ಮುದ್ರೆಗಳ ಮೇಲೆ ದೇವಿಗಳ ಹಾಗೂ ಅಗ್ನಿಯ ಕುರಿತಾದ ನಾನಾ ಚಿತ್ರ ಸಂಕೇತಗಳಿವೆ. ಅಗ್ನಿಯ ಸಾಂಕೇತಿಕ ಚಿತ್ರವಿರುವ ಒಂದು ಮುದ್ರೆಯ ಮೇಲೆ ಏಳುಮಂದಿ ಮನುಷ್ಯರ ಚಿತ್ರಗಳಿವೆ. ಹಿಂದಿನ ಮಂತ್ರದಲ್ಲಿ "ಅಗ್ನಿಯನ್ನು ಮನುಷ್ಯರೊಂದಿಗೆ ಬಂದು ಕುಳಿತುಕೊಳ್ಳಲಿ" ಎಂದು ಹೇಳಿದುದು ಆ ಮುದ್ರೆಗೆ ಸರಿಯಾಗಿ ಅನ್ವಯಿಸುತ್ತದೆ. ಏಕೆಂದರೆ ಋಗ್ವೇದದಲ್ಲಿ ಅಗ್ನಿಯನ್ನು "ಏಳು ಮನುಷ್ಯರೊಂದಿಗೆ ಉಳ್ಳವನು" ಎಂದು ಸ್ಪಷ್ಟವಾಗಿ ಹೇಳಿದ ಮಂತ್ರಗಳಿವೆ:— **ಯೋಽಗ್ನಿಃ ಸಪ್ತಮಾನುಷಃ ॥ ೮-೩೯-೮ ॥** ಹಾಗೆಯೇ ಇಂದ್ರನನ್ನು ಐವರು ಮನುಷ್ಯರಲ್ಲಿ ಇರುವವನು ಎಂದು ಹೇಳಿದ ಮಂತ್ರವೂ ಇದೆ:— **ಜನೇಷು ಪಂಚಸು ॥ ೩-೩೭-೯ ॥** ಇಂದ್ರನೆಂದರೆ ಅಗ್ನಿಯೇ ಎಂದು

ಹಿಂದೆ ವಿವರಿಸಿದೆ. ಅದಕ್ಕನುಸಾರವಾಗಿ ಸಿಂಧೂ ಕಣಿವೆಯಲ್ಲಿ ದೊರೆಕಿದ ಮುದ್ರೆಯ ಮೇಲೆ ಅಗ್ನಿಯ ಸಾಂಕೇತಿಕ ಚಿತ್ರದೊಂದಿಗೆ ಐವರು ಮನುಷ್ಯರ ಚಿತ್ರಗಳಿವೆ. ಆದುದರಿಂದ ಯಾವುದೊಂದು ದೇವತೆಯನ್ನು ಆಹ್ವಾನಿಸಿದೊಡನೆ ಆ ದೇವತೆಗೆ ಸಂಬಂಧಪಟ್ಟವರು. ಆ ದೇವತೆಯ ಚಿತ್ರವಿರುವ ಮುದ್ರೆಯನ್ನು ಯಜ್ಞಶಾಲೆಯೊಳಗೆ ತಂದು ಹಾಸಿದ ದರ್ಭೆಗಳ ಮೇಲೆ ಇಡುತಿದ್ದರೆಂದು ಸಿದ್ಧವಾಗುತ್ತದೆ.

ಸಾರಸ್ವತ ಎಂಬ ಹೆಸರು ಸರಸ್ವತೀ ದೇವಿಯ ಆರಾಧಕರಿಗೆ ಮಾತ್ರವಲ್ಲದೆ ಸರಸ್ವತೀ ನದೀತೀರದಲ್ಲಿ ಜರಗಿಸಲಾಗುತಿದ್ದ ಒಂದು ಯಜ್ಞಕ್ಕೂ, ಆ ಯಜ್ಞವನ್ನು ಜರಗಿಸುವವರಿಗೂ ಬರುತಿದ್ದಿತೆಂದು ವೈದಿಕ ಸಾಹಿತ್ಯದಿಂದ ತಿಳಿದು ಬರುತ್ತದೆ. ಋಷಿಗಳು ಸರಸ್ವತಿ (ಪ್ರದೇಶದಲ್ಲಿ) ಯಲ್ಲಿ ಯಜ್ಞಮಾಡಿದ್ದರೆಂದು ಐತರೇಯ ಬ್ರಾಹ್ಮಣವು ಹೇಳುತ್ತದೆ:— **ಋಷಯೋ ವೈ ಸರಸ್ವತ್ಯಾಂ ಸತ್ರಮಾಸತ ॥ ೨-೧೯ ॥** ಆಶ್ವಲಾಯನ ಶ್ರೌತಸೂತ್ರವಲ್ಲಿ "ಸಾರಸ್ವತ" ಯಜ್ಞದ ವಿವರವಿದೆ. ಮತ್ತು ಆ ಯಜ್ಞಮಾಡುವವರನ್ನು ಅದರಲ್ಲಿ ಸಾರಸ್ವತರೆಂದು ಕರೆದಿದೆ. ಆ ಅಂಶವು ಮುಂದಿನಂತಿದೆ:—

**ಅಥ ಸಾರಸ್ವತಾ ನಿಸರಸ್ವತ್ಯಾಃ ಪಶ್ಚಿಮ ಉದಕಾಂತೇ ದೀಕ್ಷೇರಂಸ್ತೇ ತತ್ರೈವ ದೀಕ್ಷೋಪಸದಃ ಕೃತ್ವಾ ಪ್ರಾಯಣೀಯಂ ಚ ಸರಸ್ವತೀಂ ದಕ್ಷಿಣೇನತೀರೇಣ ಶಮ್ಯಾಪ್ರಾಸೇ ಶಮ್ಯಾಪ್ರಾಸೇಽಹರಹರ್ಯಜಮಾನಾ ಅನುವ್ರಜೇಯುಃ ಸಂಹಾರ್ಯ ಉಲೂಖಲಬುಧ್ನೋಯೂಪಶ್ಚಕ್ರೀವಂತಿಸದೋಹವಿರ್ಧಾನಾನ್ಯಾಗ್ನೀಧ್ರೀಯಂ ಪತ್ನೀಶಾಲಂ ಚ ದಕ್ಷಿಣಪುರಸ್ತಾದಾಹವನೀಯಸ್ಯಾವಸ್ಥಾಯ ಬ್ರಹ್ಮಾ ಶಮ್ಯಾಂ ಪ್ರಹರೇತ್ ಸಾಯತ್ರ ನಿಪತೇತ್ತದ್ಗಾರ್ಹಪತ್ಯಸ್ಯಾಯತನಂ ತತೋಽಧಿವಿಹಾರೋ ವಿಷಮೇಚೇನ್ನಿಪತೇದುದ್ಧೃತ್ಯ ಸಮೇ ವಿಹರೇಯುರಪ್ಸು ಚೇದ್ವಾರುಣಂ ಪುರೋಡಾಶಂ ನಿರ್ವಪೇಯುಃ ॥ ೧೨-೬ ॥**

ಅದರ ಅರ್ಥವನ್ನು ಸಂಕ್ಷೇಪವಾಗಿ ಮುಂದಿನಂತೆ ಹೇಳಬಹುದು:— ಸಾರಸ್ವತರು ಅಂದರೆ ಸಾರಸ್ವತ ಯಜ್ಞವನ್ನು ಮಾಡುವವರು ಸರಸ್ವತಿಯ ಕೆಳಗಡೆ ಪಶ್ಚಿಮಕ್ಕೆ ಹರಿಯುವ ನೀರಿನ ಕೊನೆಯಲ್ಲಿ (ಅಂದರೆ ಸರಸ್ವತೀ ನದಿಯು

ಬೇರೊಂದು ನದಿಯನ್ನು ಕೂಡಿ ಕೊನೆಗೊಳ್ಳುವಲ್ಲಿ) ಅರ್ಥಾತ್ ಸಂಗಮಸ್ಥಾನ ದಲ್ಲಿ ಯಜ್ಞದಲ್ಲಿ ದೀಕ್ಷಿತರಾಗಬೇಕು ಮತ್ತು ಅವರು ಅಲ್ಲಿಯೇ ದೀಕ್ಷಾ ಹೋಮವನ್ನು ಮಾಡಿ ಆರಂಭಿಕ ಆಹುತಿಗಳನ್ನು ಕೊಡಬೇಕು. ತರುವಾಯ ಸರಸ್ವತೀ ನದಿಯ ದಕ್ಷಿಣ ತೀರದಲ್ಲಿ ಆ ಪವನೀಯಾಗ್ನಿಯ ಬಲಗಡೆಯಲ್ಲಿ ಪೂರ್ವಾಭಿಮುಖನಾಗಿ ನಿಂತು ಬ್ರಹ್ಮನು ಅಂದರೆ ಮುಖ್ಯ ಪುರೋಹಿತನು ತನ್ನ ದಂಡದಿಂದ ಮರದ ಒಂದು ಚಿಣ್ಣೆಯನ್ನು ಹೊಡೆದು ಎಸೆಯಬೇಕು. ಮತ್ತು ಯಜಮಾನರೆಲ್ಲರು ಅಂದರೆ ಯಜ್ಞದ ದೀಕ್ಷೆಯನ್ನು ಪಡೆದವರೆಲ್ಲರೂ ಆ ಚಿಣ್ಣೆಯನ್ನು ಹಿಂಬಾಲಿಸಿ ಹೋಗಬೇಕು. ಹೋಗುವಾಗ ಯಜ್ಞಕ್ಕೆ ಆವಶ್ಯಕವಿರುವ ಹವಿಸ್ಸಿನ ಮತ್ತು ಇತರ ಆವಶ್ಯಕ ಸಾಮಗ್ರಿಗಳನ್ನೂ, ಹೆಂಗಸರ ನಿವಾಸಕ್ಕಾಗಿ ಡೇರೆಯ ಸಲಕರಣೆಗಳನ್ನೂ ಗಾಡಿಗಳಲ್ಲಿ ಹೇರಿ ಒಯ್ಯಬೇಕು. ಹಾಗೂ ಹೆಂಗಸರನ್ನು ಗಾಡಿಯಲ್ಲಿ ಕೂಡ್ರಿಸಬೇಕು. ಹಾಗೂ ಹೊತ್ತುಕೊಂಡು ಹೋಗಲು ಅನುಕೂಲವಾಗುವಂತೆ ಒರಳಲ್ಲಿ ನೆಟ್ಟ ಯೂಪಸ್ತಂಭವನ್ನೂ ಒಯ್ಯಬೇಕು. ಚಿಣ್ಣೆಯು ಎಲ್ಲಿ ಬೀಳುವುದೋ ಅಲ್ಲಿ ಗಾರ್ಹಪತ್ಯಾಗ್ನಿಯ ಕುಂಡವನ್ನು ಮಾಡಬೇಕು. ಚಿಣ್ಣೆಯು ವಿಷಮಸ್ಥಳದಲ್ಲಿ ಬಿದ್ದಿದ್ದರೆ ಅದನ್ನು ಎತ್ತಿತಂದು ಸಮಸ್ಥಳದಲ್ಲಿಡಬೇಕು. ನೀರಿನಲ್ಲಿ ಬಿದ್ದುದಾದರೆ ವರುಣನಿಗೆ ಪುರೋಡಾಶವನ್ನು ಅರ್ಪಿಸಬೇಕು. ಮತ್ತು ಆದಿನ ಅಲ್ಲಿ ತಂಗಿ ವಿಶ್ರಮಿಸಬೇಕು. ಮರುದಿನ ಯಥಾವಿಧಿ ಹೋಮಾದಿಗಳನ್ನು ನೆರವೇರಿಸಿದ ತರುವಾಯ ಮೊದಲಿ ನಂತೆಯೇ ಚಿಣ್ಣೆಯನ್ನು ದಂಡದಿಂದ ಎಸೆಯಬೇಕು. ಮತ್ತು ಅದನ್ನು ಹಿಂಬಾಲಿಸಿ ಹೋಗಬೇಕು. ಹಾಗೆ ಪ್ರತಿದಿನವೂ ಮಾಡುತ್ತ ಮುಂದುವರಿಯ ಬೇಕು. ಅದುವೇ ಸಾರಸ್ವತ ಯಜ್ಞವಾಗಿರುತ್ತದೆ ಮತ್ತು ಅದನ್ನು ಜರಗಿಸು ವವರು ಸಾರಸ್ವತರಾಗಿರುತ್ತಾರೆ.

ಕಾತ್ಯಾಯನ ಶ್ರೌತಸೂತ್ರದಲ್ಲಿ ಸಾರಸ್ವತ ಯಜ್ಞವನ್ನು **ಯಾತ್ಸತ್ರಾಣಿ ಸಾರಸ್ವತಾನಿ ॥ ೨೪-೫-೨೫ ॥** ಅಂದರೆ ಹೋಗುತ್ತ ಹೋಗುತ್ತ ಮಾಡ ಲಾಗುವ ಯಜ್ಞಗಳೇ ಸಾರಸ್ವತಗಳು ಎಂದು ಹೇಳಿದೆ. ಆದರೆ ಅದರಲ್ಲಿ **ಶುಕ್ಲಪಕ್ಷ ಸಪ್ತಮ್ಯಾಂ ದೀಕ್ಷಾ ಸರಸ್ವತೀ ವಿನಶನೇ ॥ ೨೪-೬-೩೦ ॥** ಅಂದರೆ "ಶುಕ್ಲಪಕ್ಷದ ಸಪ್ತಮಿಯಂದು ಸರಸ್ವತಿಯು ಲುಪ್ತವಾದ ಸ್ಥಳದಲ್ಲಿ ದೀಕ್ಷೆ" ಎಂದು ಹೇಳಿರುವುದರಿಂದ ಆ ಸೂತ್ರಗ್ರಂಥವು ಬಹಳ ಅರ್ವಾಚೀನ ವಾದುದೆಂದೂ, ಸೂತ್ರಕಾರನಿಗೆ ಪ್ರಾಚೀನ ಸರಸ್ವತಿಯ ಪರಿಚಯವಿರಲಿಲ್ಲ ವೆಂದೂ ಸಿದ್ಧವಾಗುತ್ತದೆ.

ಹಿಂದಿನ ವಿವರಗಳಿಂದ ಸರಸ್ವತೀನದಿ, ಅವಳ ದೇವೀರೂಪ, ಹಾಗೂ ಆ ನದಿಯ ತೀರದಲ್ಲಿ ಜರಗಿಸಲಾಗುತ್ತಿದ್ದ ಯಜ್ಞಗಳು "ಸಾರಸ್ವತ" ಎಂಬ ಶಬ್ದದ ಹುಟ್ಟಿಗೆ ಮೂಲವಾಗಿದ್ದವೆಂದು ಸಿದ್ಧವಾಗುತ್ತದೆ. ಅಲ್ಲದೇ ಸರಸ್ವತೀ ನದಿಯು ಪೂರ್ವದಿಂದ ಪಶ್ಚಿಮಕ್ಕೆ ಹರಿದು ಬೇರೊಂದು ನದಿಯನ್ನು ಕೂಡಿ ಕೊನೆಗೊಳ್ಳುತ್ತಿದ್ದಿತೆಂದೂ, ಬೇರೆ ಐದು ನದಿಗಳು ಬಂದು ಸರಸ್ವತಿಯನ್ನು ಕೂಡುತ್ತಿದ್ದವೆಂದೂ, ಅಂಥ ನದಿಯು ಅಫಗಾನ ದೇಶದಲ್ಲಿನ ನದಿಯೇ ಎಂದೂ ಸಿದ್ಧವಾಗುತ್ತದೆ. ಸಾಮಾನ್ಯವಾಗಿ ಆರ್ಯಜನರು ಜರಗಿಸುತ್ತಿದ್ದ ಯಜ್ಞಗಳಲ್ಲಿ ಅವರಲ್ಲಿನ ಎಲ್ಲ ವರ್ಗಗಳ ಜನರಿಗೂ ಕೆಲಸವಿರುತ್ತಿದ್ದುದರಿಂದ ಅವುಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ರಥಕಾರ ಮೊದಲಾದವರು ಭಾಗವಹಿಸುತ್ತಿದ್ದರು. ಆದುದರಿಂದ ಸಾರಸ್ವತ ಯಜ್ಞದಲ್ಲಿ ಕೂಡ ಅವರ ಎಲ್ಲ ವರ್ಗಗಳ ಜನರು ಭಾಗವಹಿಸುತ್ತಿದ್ದರೆಂಬುದನ್ನು ಸ್ಮರಣದಲ್ಲಿಟ್ಟುಕೊಂಡು, ಹಿಂದೆ ಹೇಳಿರುವ ಸಾರಸ್ವತ ಯಜ್ಞದ ವಿವರಗಳನ್ನು ವಿಮರ್ಶಿಸಿದರೆ ನಿಷ್ಪನ್ನವಾಗುವ ವಿಷಯಗಳಾವುವೆಂದರೆ ಮೊದಲನೆಯದಾಗಿ ಸಾರಸ್ವತ ಯಜ್ಞದ ಉದ್ದೇಶವು, ಜನರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಾಮೂಹಿಕವಾಗಿ ವಲಸೆ ಹೋಗುವುದಾಗಿರುತ್ತದೆಂಬುದಾಗಿದೆ. ಏಕೆಂದರೆ ಸ್ತ್ರೀಯರ ನಿವಾಸಕ್ಕಾಗಿ ಬೇರೆಯ ಸಾಮಾನನ್ನು ಗಾಡಿಯಲ್ಲಿ ಹೇರಬೇಕೆಂಬುದರ ಅರ್ಥವು ಯಜ್ಞದಲ್ಲಿ ಭಾಗವಹಿಸುವವರ ಹೆಂಡರು ಮಕ್ಕಳು ಕೂಡ ಯಜಮಾನರೊಂದಿಗೆ ಹೊರಡುತ್ತಿದ್ದರೆಂದಾಗಿರುತ್ತದೆ. ಎರಡನೆಯದಾಗಿ ಅಫಗಾನಿಸ್ಥಾನದಲ್ಲಿನ ಸರಸ್ವತಿಯ ದಕ್ಷಿಣ ತೀರದಲ್ಲಿ ಪೂರ್ವಕ್ಕೆ ಮೋರೆಮಾಡಿ ನಿಂತು ಚಿಕ್ಕೆಯನ್ನೆಸೆಯುತ್ತ ಹಿಂಬಾಲಿಸಿದರೆ ಕೊನೆಗೆ ಭಾರತವರ್ಷವನ್ನು ಪ್ರವೇಶಿಸಬೇಕಾಗುತ್ತಿತ್ತು. ಆದುದರಿಂದ ಸಾರಸ್ವತ ಯಜ್ಞದ ಉದ್ದೇಶವು ಭಾರತವರ್ಷವನ್ನು ಪ್ರವೇಶಿಸುವುದೇ ಆಗಿತ್ತೆಂಬುದಾಗಿದೆ. ಅರ್ಥಾತ್ ಅಫಗಾನಿಸ್ಥಾನದಲ್ಲಿ ನೆಲಸಿದ್ದ ಸಾರಸ್ವತ ಬ್ರಾಹ್ಮಣರು ಸರಸ್ವತೀನದಿಯ ತೀರದಲ್ಲಿ ಯಜ್ಞಗಳನ್ನು ಜರಗಿಸುತ್ತ ದಿನಕ್ಕೊಂದು ಮಜಲಿನಂತೆ ಮುಂದುವರಿಯುತ್ತ ಕೊನೆಗೆ ಭಾರತವರ್ಷವನ್ನು ಪ್ರವೇಶಿಸಿದ ತರುವಾಯ ವಾಯುವ್ಯ ಗಡಿನಾಡಿನಲ್ಲಿಯೂ, ಪಂಜಾಬದಲ್ಲಿಯೂ ನೆಲಸಿದ್ದರೆಂದು ನಿಷ್ಪನ್ನವಾಗುತ್ತದೆ.

ಹಿಂದೆ ಹೇಳಿದಂತೆ ಪಂಜಾಬದಲ್ಲಿ ನೆಲಸಿದ್ದ ಸಾರಸ್ವತ ಬ್ರಾಹ್ಮಣರು ಅಲ್ಲಿ ಪ್ರವಹಿಸುತ್ತಿದ್ದ ಯಾವುದೋ ಒಂದು ನದಿಗೆ ಸರಸ್ವತೀ ಎಂಬ ಹೆಸರನ್ನು ಕೊಟ್ಟಿದ್ದರೆಂಬುದರಲ್ಲಿ ಸಂದೇಹವಿಲ್ಲ. ಸರಸ್ವತಿಯ ಒಂದು ಹೆಸರು "ಪ್ಲಕ್ಷ ಪ್ರಸ್ರವಣಾ" ಅಂದರೆ "ಅತ್ತಿಮರದಿಂದ ಸ್ರವಿಸಿದವಳು" ಎಂದಿರುವುದರಿಂದ

ಅತ್ತಿಮರಗಳು ಸಮೃದ್ಧವಾಗಿದ್ದ ಪ್ರದೇಶದಿಂದ ಹರಿದುಬಂದ ನದಿಗೆ ಅವರು ಸರಸ್ವತೀ ಎಂಬ ಹೆಸರನ್ನು ಇಟ್ಟಿರಬಹುದು, (ಸರಸ್ವತೀ ಮತ್ತು ದೃಷದ್ವತೀ ಎಂಬ ದೇವನದಿಗಳ ನಡುವಣ ಪ್ರದೇಶವು ಬ್ರಹ್ಮಾವರ್ತ ಎಂಬುದಾಗಿ ಮನು ಸ್ಮೃತಿಯಲ್ಲಿದೆ, ಆದರೆ ಇಂದು ಆ ನದಿಗಳು ಇಲ್ಲ.) ಮುಂದೆ ಪಂಜಾಬದಲ್ಲಿ ನೆಲಸಿದ್ದ ಸಾರಸ್ವತ ಬ್ರಾಹ್ಮಣರು ಸಿಂಧುನದದ ಪೂರ್ವತೀರವಾಗಿ ದಕ್ಷಿಣಕ್ಕೆ ಮುಂದುವರಿಯತೊಡಗಿದರು. ಮತ್ತು ಸಮುದ್ರತೀರದ ವರೆಗೆ ತಲಪಿದರು. ಆ ತರುವಾಯ ಅಲ್ಲಿಂದ ಪೂರ್ವಕ್ಕೆ ಮುಂದುವರಿದು ಪ್ರಾಚೀನ ಗುರ್ಜರ ದೇಶಕ್ಕೆ ತಲಪಿ ಅಲ್ಲಿ ನೆಲಸಿದರು ಹಾಗೂ ಹಿಂದೆ ವಿವರಿಸಿದ ಆಬೂ ಬೆಟ್ಟದಿಂದ ಹರಿಯುತಿದ್ದ ನದಿಗೆ ಸರಸ್ವತೀ ಎಂಬ ಹೆಸರನ್ನಿಟ್ಟಿದ್ದರು. ತರುವಾಯದ ಕಾಲದಲ್ಲಿ ಅಣಹಿಲವಾಡ ಎಂಬ ಹೆಸರಿನ ಪಟ್ಟಣವು ಅದೇ ಸರಸ್ವತೀ ನದಿಯ ತೀರದಲ್ಲಿ ಸ್ಥಾಪಿಸಲ್ಪಟ್ಟಿತ್ತು. ಮುಂದೆ ಸಾರಸ್ವತ ಬ್ರಾಹ್ಮಣರು ಉತ್ತರ ಗುಜರಾತ ದಿಂದ ಮುಂದುವರಿದು ಗುಜರಾತದ ದಕ್ಷಿಣದಲ್ಲಿ ಸೌರಾಷ್ಟ್ರಕ್ಕೆ ಅಂದರೆ ಈಗಿನ ಕಾಥಿಯಾವಾಡಕ್ಕೆ ಹೋಗಿ ನೆಲಸಿದರು. ಮತ್ತು ಅಲ್ಲಿ ಗಿರ್ ಕಾಡಿನಿಂದ ಹೊರಟು ಪ್ರಭಾಸಕ್ಷೇತ್ರದ ಬಳಿಯಲ್ಲಿ ಸಮುದ್ರವನ್ನು ಕೂಡುವ ನದಿಗೂ ಸರಸ್ವತೀ ಎಂಬ ಹೆಸರನ್ನು ಕೊಟ್ಟರು. ಇದುವೇ ಭಾರತವರ್ಷದಲ್ಲಿನ ಸರಸ್ವತೀ ಎಂಬ ಹೆಸರಿನ ಮೂರು ನದಿಗಳ ಇತಿಹಾಸವಾಗಿದೆಯೆಂದರೆ ತಪ್ಪಾಗದು. ಸರಸ್ವತೀ ನದಿಗಳ ಕುರಿತಾದ ಹೆಚ್ಚಿನ ವಿವರಗಳನ್ನು ತಿಳಿಯಬಯಸುವವರು ಭಾರತೀಯ ವಿದ್ಯಾ ಭವನದವರು ಪ್ರಕಟಿಸಿರುವ "Immortal India" Vol. IV ಮತ್ತು "Glory that was Gurjara-Desa" ಎಂಬ ಪುಸ್ತಕಗಳನ್ನು ಓದಬಹುದು.[1]

---

1. About A. D. 641 when Hieun-Tsang visited Gurjara its capital was Bhillamala. It's southern baundary touched the river Sarasvati in modern Gujarat and its' northern limit was beyond Jodhpur, page 7.
In this confused state of affairs, Mularaja of the Chaulukya dynasty captured southern most part of Gurjaradesa, now in Mehsana, Sabarakantha and Banaskantha districts of modern Gujarat and established himself at Anahilvada on the banks of the river Sarasvati. His principality in the beginning not very large was known as Sarasvata-mandala and not Gurjara-desa p. 9.
To the south of the river Sarasvati, Anarta and Khetaka-mandala had lost their distinct geographical entity since A. D. 815 p. 11.
Glory that was Gurjara-Desa.

ಭಾರತವರ್ಷವನ್ನು ಪ್ರವೇಶಿಸಿದ ಆರ್ಯಜನರು ಅಥವಾ ಸಾರಸ್ವತ ಬ್ರಾಹ್ಮಣರ ಪೂರ್ವಜರು ಯಜ್ಞಧರ್ಮಿಯರಾಗಿದ್ದುದರಿಂದ ಪ್ರತಿದಿನವೂ ಅಗ್ನಿಹೋತ್ರವನ್ನು ಮತ್ತು ವೈಶ್ವದೇವ ಯಜ್ಞವನ್ನು ಮಾಡಲೇಬೇಕಾಗಿತ್ತು. ಮತ್ತು ದರ್ಶಪೂರ್ಣಮಾಸೇಷ್ಟಿ ಹಾಗೂ ಪಾರ್ವಣ ಶ್ರಾದ್ಧಗಳನ್ನೂ ಮಾಡಲೇ ಬೇಕಾಗಿತ್ತು. ಆದುದರಿಂದ ಆರ್ಯಜನರೆಲ್ಲರೂ ಆ ನಿತ್ಯಕರ್ಮಗಳನ್ನು ಅರಿತಿರುತ್ತಿದ್ದರು, ಆದರೆ ನೈಮಿತ್ತಿಕ ಹಾಗೂ ಕಾಮ್ಯ-ಇಷ್ಟಿಗಳನ್ನು ಜರಗಿಸಲು ಹೆಚ್ಚು ಮಂದಿ ಅಧ್ವರ್ಯುಗಳ ಆವಶ್ಯಕತೆ ಇರುತ್ತಿತ್ತು. ಪ್ರಾಚೀನ ಕಾಲದಲ್ಲಿ ಬರೇ ಏಳುಮಂದಿ ಪುರೋಹಿತರಿರುತ್ತಿದ್ದರು. ಮುಂದೆ ಯಜ್ಞಸಂಸ್ಥೆಯು ವ್ಯವಸ್ಥಿತವಾಗಿ ಬೆಳೆದ ತರುವಾಯದಿಂದ ಯಜ್ಞಗಳಲ್ಲಿ ಹದಿನಾರು ಮಂದಿ ಪುರೋಹಿತರು ಬೇಕಾಗುತ್ತಿದ್ದರು. ಅವರಲ್ಲಿ ೧. ಬ್ರಹ್ಮಾ=ಬ್ರಹ್ಮನ್, ೨. ಹೋತಾ=ಹೋತೃ, ೩. ಅಧ್ವರ್ಯು, ೪. ಉದ್ಗಾತಾ=ಉದ್ಗಾತೃ, ಎಂಬ ನಾಲ್ವರು ಮುಖ್ಯ ಪುರೋಹಿತರಾಗಿರುತ್ತಿದ್ದರು. ಮತ್ತು ಆ ನಾಲ್ವರಲ್ಲಿ ಬ್ರಹ್ಮಾ ಎಂಬವನು ಇತರರೆಲ್ಲರ ಮುಖ್ಯನಾಗಿದ್ದು ಯಜ್ಞದ ಸಂಚಾಲಕನಾಗಿರು ತ್ತಿದ್ದ. ಅಂದರೆ ಇತರರೆಲ್ಲರು ಅವನ ನಿರ್ದೇಶನದಂತೆ ಕಾರ್ಯಗಳನ್ನು ನಿರ್ವಹಿಸ ಬೇಕಾಗಿತ್ತು. ಮುಂದೆ ಆ "ಬ್ರಹ್ಮನ್" ಎಂಬ ಶಬ್ದಮೂಲದಿಂದ ಪುರೋಹಿತ ವರ್ಗವು "ಬ್ರಾಹ್ಮಣ" ಎಂದು ಕರೆಯಲ್ಪಡತೊಡಗಿತು. ಅಂದರೆ ಯಜ್ಞಗಳೇ ಬ್ರಾಹ್ಮಣವರ್ಗದ ಮೂಲವಾಗಿದ್ದವು.

ಯಜ್ಞಗಳಲ್ಲಿ ಮುಖ್ಯ ಪುರೋಹಿತರಾಗಿ ಕಾರ್ಯವೆಸಗುವ ನಾಲ್ವರಲ್ಲಿ ಪ್ರತಿಯೊಬ್ಬನಿಗೂ ಮೂವರು ಮೂವರು ಸಹಾಯಕರಿರುತ್ತಿದ್ದರು. ಅಂದರೆ ಬ್ರಹ್ಮಾ ಎಂಬವನಿಗೆ ೧. ಬ್ರಾಹ್ಮಣಾಚ್ಛಂಸಿ, ೨. ಅಗ್ನೀಧ್ರ, ೩. ಪೋತೃ ಎಂಬ ಮೂವರು. ಹೋತೃ ಎಂಬವನಿಗೆ ೧. ಮೈತ್ರಾವರುಣ, ೨, ಅಚ್ಛಾವಾಕ, ೩. ಗ್ರಾವಸ್ತುತ ಎಂಬ ಮೂವರು, ಅಧ್ವರ್ಯುವಿಗೆ ೧. ಪ್ರತಿಪ್ರಸ್ಥಾತೃ, ೨. ನೇಷ್ಟೃ, ೩. ಉನ್ನೇತೃ ಎಂಬ ಮೂವರು ಮತ್ತು ಉದ್ಗಾತೃವಿಗೆ ೧. ಪ್ರಸ್ತೋತೃ, ೨. ಪ್ರತಿಹರ್ತೃ. ೩. ಸುಬ್ರಹ್ಮಣ್ಯ ಎಂಬ ಮೂವರು ಹೀಗೆ ಹನ್ನೆರಡು ಮಂದಿ ಸಹಾಯಕ ಪುರೋಹಿತರಿರುತ್ತಿದ್ದರು. ಅವರೆಲ್ಲರೂ ವೇದವೇದಾಂಗ ಪಾರಂಗತರಾಗಿದ್ದು ಯಜ್ಞಕಾರ್ಯಗಳಲ್ಲಿ ನುರಿತವ ರಾಗಿರುತ್ತಿದ್ದುದರಿಂದ ಆರ್ಯಜನರ ಸಮುದಾಯದಲ್ಲಿ ಅವರಿಗೆ ಬಹಳ ಗೌರವವಿದ್ದಿತು.

ಯಜ್ಞಪ್ರಕ್ರಿಯೆಯನ್ನು ವಿಕಸಿತಗೊಳಿಸಿದ ಬ್ರಾಹ್ಮಣ ಪಂಗಡವು ಮೊತ

ಮೊದಲು ಸರಸ್ವತೀ ನದಿಯ ತೀರದಲ್ಲಿ ರೂಪುಗೊಂಡುದರಿಂದ ಭಾರತವರ್ಷದೊಳಗಿನ ಬ್ರಾಹ್ಮಣ ಪಂಗಡಗಳ ಪ್ರಾದೇಶಿಕ ಹೆಸರುಗಳಲ್ಲಿ "ಸಾರಸ್ವತ" ಎಂಬ ಹೆಸರೇ ಸರ್ವಪ್ರಾಚೀನವಾಗಿರುತ್ತದೆ. ಭಾರತವರ್ಷದ ಹೊರಗಿನ ಪ್ರದೇಶಗಳಲ್ಲಿ ನೆಲಸಿದ ಆರ್ಯರಲ್ಲಿ "ಕುರುಪಾಂಚಾಲ" ಎಂಬ ಹೆಸರಿನ ಬ್ರಾಹ್ಮಣ ಪಂಗಡವೂ ಇದ್ದಿತೆಂದು ಶತಪಥ ಬ್ರಾಹ್ಮಣದಿಂದ ತಿಳಿದುಬರುತ್ತದೆ. ಆದರೆ ಭಾರತ ವರ್ಷದಲ್ಲಿ ಕುರುಪಾಂಚಾಲವೆಂಬ ಹೆಸರಿನ ಬ್ರಾಹ್ಮಣ ಪಂಗಡವಿದ್ದಿತೆಂಬುವರ ಪ್ರಮಾಣಗಳು ದೊರೆಯುವುದಿಲ್ಲ. ಮುಂದೆ ಪಶ್ಚಿಮ ಭಾರತದಲ್ಲಿ ನೆಲಸಿದ್ದ ಸಾರಸ್ವತ ಬ್ರಾಹ್ಮಣರ ಪಂಗಡಗಳು ಪೂರ್ವ ಭಾರತದಲ್ಲಿ ಹರಡುತ್ತಹೋದಂತೆ ಆ ಪಂಗಡಗಳಿಗೆ ಅವುಗಳು ನೆಲಸಿದ ಪ್ರದೇಶಗಳ ಹೆಸರುಗಳು ಬಂದವು. ಅಂದರೆ ಮೊದಲು ಒಂದೇ ಆಗಿದ್ದ ಸಾರಸ್ವತ ಬ್ರಾಹ್ಮಣ ಸಮುದಾಯವು ಮುಂದೆ ಕಾಶ್ಮೀರೀ, ಕನೋಜೀ, ಸರಯೂಪಾರೀಣ. ಮೈಥಿಲ. ಉತ್ಕಲ, ಗೌಡ. ಗುರ್ಜರ, ಮಹಾರಾಷ್ಟ್ರ. ಕೊಂಕಣ. ನಾಗರ ಮುಂತಾದ ಪಂಗಡಗಳಾಗಿ ಹಂಚಿ ಹೋಯಿತು. ಕಾಲಕ್ರಮೇಣ ತಮ್ಮ ಮೂಲವನ್ನು ಮರೆತ ಆ ಪಂಗಡಗಳು ಅಂದರೆ ಒಂದು ಪ್ರದೇಶದಲ್ಲಿನ ಪಂಗಡವು ಬೇರೊಂದು ಪ್ರದೇಶದಲ್ಲಿನ ಪಂಗಡಕ್ಕಿಂತ ಶ್ರೇಷ್ಠವಾದುದೆಂದು ವಾದಿಸತೊಡಗಿದುದರ ಪರಿಣಾಮದಿಂದಾಗಿ ಆ ಪಂಗಡಗಳು ಬೇರೆ ಬೇರೆ ಜಾತಿಗಳೆಂದು ಗಣಿಸಲ್ಪಟ್ಟವು.

ಸಾರಾಂಶವೇನೆಂದರೆ ಆ ಎಲ್ಲ ಪಂಗಡಗಳ ಜನರು ಮೂಲದಲ್ಲಿ ಸಾರಸ್ವತರೇ ಆಗಿದ್ದು, ಆ ಸಾರಸ್ವತರ ಹಾಗೂ ಸಾರಸ್ವತ ಶಬ್ದಕ್ಕೆ ಕಾರಣವಾದ ಸರಸ್ವತೀ ದೇವಿಯ ಮತ್ತು ಸರಸ್ವತೀ ನದಿಯ ಕುರಿತಾದ ಉಲ್ಲೇಖಗಳು ಋಗ್ವೇದದಿಂದ ಮೊದಲುಗೊಂಡು ಸಕಲ ವೈದಿಕ ಸಾಹಿತ್ಯದಲ್ಲಿ ದೊರೆಯುತ್ತವೆ. ಆದರೆ ಸಾರಸ್ವತ ಬ್ರಾಹ್ಮಣರ ವಾಸ್ತವಿಕ ಮೂಲವನ್ನು ಕಂಡುಹಿಡಿಯಲಾಗದ ತರುವಾಯದ ಜನರು ಸರಸ್ವತೀ ನದಿಯ ಪುತ್ರನಾಗಿದ್ದ ಸಾರಸ್ವತನೆಂಬ ಋಷಿಯು ಸರಸ್ವತೀ ನದಿಯ ತೀರದಲ್ಲಿ ವಾಸಿಸುತ್ತಿದ್ದನೆಂತಲೂ, ಒಮ್ಮೆ ಹದಿನೆರಡು ವರ್ಷಗಳ ತನಕ ಮಳೆ ಬರದೆ ಆಹಾರ ಧಾನ್ಯಗಳು ಬೆಳೆಯಲಿಲ್ಲ ವೆಂತಲೂ. ಸರಸ್ವತೀ ಪ್ರದೇಶದಲ್ಲಿ ನೆಲಸಿದ್ದ ಬ್ರಾಹ್ಮಣರೆಲ್ಲರೂ ಆಹಾರವನ್ನು ಹುಡುಕುತ್ತ ನಾನಾ ದಿಕ್ಕುಗಳಿಗೆ ಚದರಿದರೆಂತಲೂ, ಕೊನೆಗೆ ಸಾರಸ್ವತನು ಕೂಡ ಹೊರಡಲುದ್ಯುಕ್ತನಾಗಲು ಸರಸ್ವತಿಯು ಪ್ರತ್ಯಕ್ಷಳಾಗಿ ಮಗನೇ ನೀನಿಲ್ಲಿಂದ ಹೋಗಬೇಡ. ನಾನು ನಿನ್ನ ಆಹಾರಕ್ಕ ಒಳ್ಳೊಳ್ಳೆಯ ಮೀನುಗಳನ್ನು ಕೊಡುವೆನು. ನೀನು ಅವುಗಳಿಂದ ದೇವತೆಗಳನ್ನೂ, ಪಿತೃಗಳನ್ನೂ ತರ್ಪಿಸಿ, ನೀನೂ ತಿಂದು

ಪ್ರಾಣಧಾರಣೆ ಮಾಡು ಎಂದು ಬೋಧಿಸಿದಳೆಂತಲೂ ಕಥೆ ಕಟ್ಟಿ ಮಹಾಭಾರತವಲ್ಲಿಯೂ, ಇತರ ಪುರಾಣಗಳಲ್ಲಿಯೂ ಸೇರಿಸಿದ್ದಾರೆ.[1]

ಅವರೆ "ಭಟ್ಟ ಗೋಪೀನಾಥ ದೀಕ್ಷಿತ" ಎಂಬ ಅರ್ವಾಚೀನ ಪಂಡಿತರೊಬ್ಬರು ತಾವು ರಚಿಸಿದ "ಸಂಸ್ಕಾರ ರತ್ನಮಾಲಾ" ಎಂಬ ಗ್ರಂಥದಲ್ಲಿ ಸಾರಸ್ವತ ಋಷಿಯ ಕುರಿತು ಮಹಾಭಾರತದಲ್ಲಿನ ಕಥೆಯಿಂದ ಕೊಂಚ ಭಿನ್ನವಾದ ಕಥೆಯನ್ನು ಹೇಳಿದ್ದಾರೆ. ಅಂದರೆ ಆ ಕಥೆಯಲ್ಲಿ ಸಾರಸ್ವತ ಋಷಿಯು ಮೀನು ತಿಂದ ಕಥೆಯಿಲ್ಲ. ಬದಲಿಗೆ ಬರದಿಂದ ಪೀಡಿತರಾದ ಇತರ ಋಷಿಗಳು ತೃಪ್ತನಾಗಿರುವ ಸಾರಸ್ವತನನ್ನು ಕಂಡು ನಮಗೂ ತಿನ್ನಲು ಶಾಕವನ್ನು ಅಂದರೆ ತರಕಾರಿಯನ್ನು ಕೊಡು ಎಂಬುದಾಗಿ ಬೇಡಲು, ಸಾರಸ್ವತನು ಅವರಿಗೆಲ್ಲ ಶಾಕಾಹಾರವನ್ನು ಕೊಡುವಂತೆ ಪಾರ್ವತೀ ದೇವಿಯನ್ನು ಪ್ರಾರ್ಥಿಸಿದನು. ಅವನ ಪ್ರಾರ್ಥನೆಯಿಂದ ಪ್ರೀತಳಾದ ಪಾರ್ವತಿಯು ಪ್ರತ್ಯಕ್ಷಳಾಗಿ ಮಗನೇ ಅವರಿಗೆ ತರಕಾರಿಯು ಸಾಕಾಗುವಂತಿದ್ದರೆ ತರಕಾರಿಯನ್ನೇ ಕೊಡುವೆನೆಂದು ನುಡಿದಳು. ಹೀಗಾಗಿ ಪಾರ್ವತಿಗೆ ಶಾಕಂಭರಿ ಎಂಬ ಹೆಸರು ಬಂದಿತು ಎಂದು ಹೇಳಿದ್ದಾರೆ. ಕಥೆಯಲ್ಲಿ ಈ ಭೇದವಿದೆಯಾದರೂ, ಇತರ ಎಲ್ಲ ಋಷಿಗಳು ಸಾರಸ್ವತನಿಂದ ವೇದಗಳನ್ನು ಕಲಿತರೆಂಬುದರಲ್ಲಿ ಮತೈಕ್ಯವಿದೆ. ಆದರೆ ಒಬ್ಬ ಸಾತಸ್ವತನಿಂದಾಗಿ ಸಾರಸ್ವತ ಬ್ರಾಹ್ಮಣ ಸಮುದಾಯವು ಅಂದರೆ ಹಲವು ಗೋತ್ರಗಳು ಹುಟ್ಟುವುದು ಸಾಧ್ಯವೇ ಎಂಬುದನ್ನು ಯಾರೊಬ್ಬನೂ ವಿಚಾರಿಸಲಿಲ್ಲ.

## ೩ ।

## ದಕ್ಷಿಣ ಭಾರತದಲ್ಲಿ ಸಾರಸ್ವತರು

ಸಾರಸ್ವತ ಬ್ರಾಹ್ಮಣರು ದಕ್ಷಿಣ ಭಾರತವನ್ನು ಯಾವ ವರ್ಷದ, ಯಾವ ಮಾಸದ, ಯಾವ ತಿಥಿಯಂದು ಪ್ರವೇಶಿಸಿದರೆಂದು ನಿಖರವಾಗಿ ಹೇಳಲಿಕ್ಕಾಗದಿದ್ದರೂ, ಬುದ್ಧದೇವನ ಜನ್ಮಕ್ಕಿಂತ ಬಹುಕಾಲ ಮೊದಲೇ ಅವರು ಬಂದು ದಕ್ಷಿಣ ಭಾರತದಲ್ಲಿ ನೆಲಸಿದ್ದರೆಂದು ಧೈರ್ಯದಿಂದ ಹೇಳಬಹುದು.

---

1. ಮಹಾಭಾರತ ಶಲ್ಯಪರ್ವ, ಅಧ್ಯಾಯ ೫೧.

ಅದನ್ನು ಸಿದ್ಧಪಡಿಸಲು ಲಿಖಿತ ಇಲ್ಲವೇ ಪ್ರತ್ಯಕ್ಷ ಪ್ರಮಾಣಗಳು ದೊರೆಯುವು ದಿಲ್ಲವೆಂದೊಡನೆ ಆ ಅಭಿಪ್ರಾಯವು ತಪ್ಪೆಂದಾಗಲೀ, ಸುಳ್ಳೆಂದಾಗಲೀ ಅನ್ನ ಲಾಗದು. ಕೆಲವು ಸಂದರ್ಭಗಳಲ್ಲಿ ಅನುಮಾನವನ್ನು ಅಥವಾ ಪರೋಕ್ಷ ವಿಷಯುಗಳನ್ನು ಪ್ರಮಾಣವನ್ನಾಗಿ ಸ್ವೀಕರಿಸಬೇಕಾಗುತ್ತದೆ. ಅಂಥ ಪರೋಕ್ಷ ಪ್ರಮಾಣಗಳು ವಿಪುಲವಾಗಿ ದೊರೆಯುತ್ತಿರುವುದರಿಂದ ಸಾರಸ್ವತ ಬ್ರಾಹ್ಮಣರು ದಕ್ಷಿಣ ಭಾರತದಲ್ಲಿ ಭಗವಾನ್ ಬುದ್ಧನ ಜನ್ಮಕಾಲಕ್ಕಿಂತ ಬಹಳ ಹಿಂದಿನಿಂದಲೇ ಇದ್ದರೆಂದು ಹೇಳಬಹುದಾಗಿದೆ.

ಪಾಶ್ಚಿಮಾತ್ಯ ವಿದ್ವಾಂಸರು ಮತ್ತು ಅವರ ಅನುಕರಣ ಮಾಡುವ ಭಾರತೀಯ ವಿದ್ವಾಂಸರು ಹಿಂದುಗಳ ಪುರಾಣಗಳು ಬಹಳ ಅರ್ವಾಚೀನವಾದವು ಗಳೆಂದು ತಿಳಿದು ಅವುಗಳಲ್ಲಿನ ವಿಷಯುಗಳನ್ನು ಐತಿಹಾಸಿಕ ಸತ್ಯವೆಂದು ಒಪ್ಪುವುದಿಲ್ಲ. ಆದುದರಿಂದ ತ್ರೇತಾಯುಗದಲ್ಲಿ ಆರ್ಯ ಋಷಿಗಳು ದಂಡಕಾ ರಣ್ಯವನ್ನು ಪ್ರವೇಶಿಸಿ ತಮ್ಮ ಆಶ್ರಮುಗಳನ್ನು ಸ್ಥಾಪಿಸಿದ್ದರೆಂದು ರಾಮಾಯಣ ದಲ್ಲಿ ವರ್ಣಿಸಿರುವುದನ್ನು ಇತಿಹಾಸವೆಂದು ಸ್ವೀಕರಿಸುವುದಿಲ್ಲ. ಆದರೆ ಬುದ್ಧ ದೇವನು ಐತಿಹಾಸಿಕ ವ್ಯಕ್ತಿಯಾಗಿರುವುದರಿಂದ ಅವನ ಕಾಲದಲ್ಲಿ ಮತ್ತು ಅವನ ತರುವಾಯದ ಕಾಲದಲ್ಲಿ ರಚಿಸಲ್ಪಟ್ಟ ಬೌದ್ಧಸಾಹಿತ್ಯದಲ್ಲಿನ ವಿಷಯುಗಳನ್ನು ಪ್ರಮಾಣವೆಂದು ಸ್ವೀಕರಿಸುತ್ತಾರೆ.

ಬೌದ್ಧಮತದವರ ಸುತ್ತ-ನಿಪಾತದಲ್ಲಿ[1] ಬಾವರಿಯೆಂಬ ವಿದ್ವಾಂಸ ಬ್ರಾಹ್ಮಣ ನೊಬ್ಬನು ಕೋಸಲ ದೇಶದಿಂದ ಬಂದು ದಕ್ಷಿಣಾಪಥದಲ್ಲಿನ ಅಶ್ಮಕ ರಾಜ್ಯ ದೊಳಗೆ ಗೋದಾವರೀ ನದಿಯ ತೀರದಲ್ಲಿನ ಒಂದು ಹಳ್ಳಿಯಲ್ಲಿ ಆಶ್ರಮ ಸ್ಥಾಪಿಸಿ ನೆಲಸಿದ್ದನೆಂದೂ, ಬುದ್ಧದೇವನ ಕೀರ್ತಿಯನ್ನು ಕೇಳಿದ ಆಚಾರ್ಯ ಬಾವರಿಯ ಶಿಷ್ಯರು ಬುದ್ಧನನ್ನು ಕಾಣುವ ಸಲುವಾಗಿ ಪೈಠಣ, ಮಾಹಿಷ್ಮತಿ ಮತ್ತು ಉಜ್ಜಯಿನಿಯ ಹಾದಿಯಾಗಿ ಉತ್ತರ ಭಾರತಕ್ಕೆ ಹೋಗಿದ್ದರೆಂತಲೂ,

---

1. The Sutta-nipata of Buddhist canon records that a teacher Bavari left Kosala and settled in a village on the Godavari in the Asmaka country in Dakshinapatha. His pupils are said to have gone north to meet the Buddha and their route lay through Palittnna in the Mulka country, Mahishmati on the Narmada and Ujjain. Bavari is said to have been learned in the Vedas and performed Vedic sacrifices. A History of South India page 69 by Sri K. A. Nilakanta Sastri, M. A.

ಆಚಾರ್ಯ ಬಾವರಿಯು ವೇದವೇದಾಂಗ ಪಾರಂಗತನಾಗಿದ್ದು ವೈದಿಕ ಯಜ್ಞಗಳನ್ನು ಜರಗಿಸುತಿದ್ದನೆಂದೂ ಹೇಳಿದೆ. ಬುದ್ಧದೇವನ ಜನ್ಮವು ಶಕಪೂರ್ವ ೬೪೫ನೆಯ ವರ್ಷದಲ್ಲಾಗಿತ್ತೆಂದೂ, ಮಹಾನಿರ್ವಾಣವು ಶಕ ೫೬೫ರಲ್ಲೆಂದೂ ನಿರ್ಧರಿಸಿದ್ದಾರೆ. ದಕ್ಷಿಣಭಾರತಕ್ಕೆ ಬಂದವರಲ್ಲಿ ಬಾವರಿಯೇ ಮೊದಲಿಗನೆನ್ನಲು ಬರುವುದಿಲ್ಲ. ಅವನಿಗಿಂತ ಮೊದಲು ಬೇರೆಯವರೂ ಬಂದಿರಬಹುದು,

ಹಾಗೆಯೇ ಶ್ರೌತ, ಗೃಹ್ಯ ಮತ್ತು ಧರ್ಮಸೂತ್ರಗಳ ಕರ್ತನಾಗಿದ್ದ ಆಚಾರ್ಯ ಆಪಸ್ತಂಬನು[1] ಕೂಡ ಗೋದಾವರೀ ನದಿಯ ತೀರದಲ್ಲಿ ನೆಲಸಿದ್ದನೆಂದು ತಿಳಿದುಬರುತ್ತದೆ. ಪಾಶ್ಚಿಮಾತ್ಯ ವಿದ್ವಾಂಸರು ಆಪಸ್ತಂಬನ ಕಾಲವನ್ನು ಶಕಪೂರ್ವ ೪೦೦ ಎಂದು ನಿರ್ಧರಿಸಿದ್ದಾರೆ,

ಶಕಪೂರ್ವ ೩೩೪ರಲ್ಲಿ ಮೌರ್ಯ ಚಕ್ರವರ್ತಿ ಅಶೋಕನು ತನ್ನ ಸಾಮ್ರಾಜ್ಯದೊಳಗೆ ಸೇರಿದ ದಕ್ಷಿಣ ಭಾರತದ ಹಲವು ಸ್ಥಳಗಳಲ್ಲಿ ಸ್ಥಾಪಿಸಿದ ಧರ್ಮಲೇಖಗಳಲ್ಲಿ ಅಂದರೆ ೫ನೆಯ ಶಿಲಾಲೇಖದಲ್ಲಿ **"ರಷ್ಟಿಕಾ ಪೆತೇಣಿಕಾನಂ ಯೇವಾಪಿ ಅಂಞೇ ಅಪರಾಂತಾ"** ಎಂತಲೂ, ೧೩ನೆಯ ಶಿಲಾಲೇಖದಲ್ಲಿ **"ಭೋಜಪಿತಿನಿಕ್ಯೇಸು"** ಎಂತಲೂ ಉಲ್ಲೇಖಗಳಿವೆ, ಅಂದರೆ ರಾಷ್ಟ್ರೀಕ, ಪ್ರತಿಷ್ಠಾನಿಕ, ಅಪರಾಂತಕ ಮತ್ತು ಭೋಜ ಎಂಬ ರಾಜವಂಶಗಳ ಹೆಸರುಗಳಿವೆ. ಆ ರಾಜವಂಶಗಳು ಉತ್ತರ ಭಾರತೀಯರಿಂದ ಸ್ಥಾಪಿತವಾದವುಗಳಾಗಿದ್ದು ಅವರ ಭಾಷೆಯು ಪ್ರಾಕೃತವಾಗಿತ್ತು. ಆ ರಾಜವಂಶಗಳು ಅಶೋಕನ ಕಾಲದಲ್ಲಿಯೇ ಸ್ಥಾಪಿಸಲ್ಪಟ್ಟಿರದೇ ಮೊದಲಿನಿಂದಲೂ ಇದ್ದವುಗಳಾಗಿವೆ. ರಾಷ್ಟ್ರೀಕ ಮತ್ತು ಭೋಜ ವಂಶಗಳು ಮುಂದೆ ಮಹಾರಾಷ್ಟ್ರೀಕ ಮತ್ತು ಮಹಾಭೋಜಗಳಾಗಿ ಮಾರ್ಪಟ್ಟವು ಎಂಬುದಾಗಿ ಇತಿಹಾಸದಿಂದ[2] ತಿಳಿದು ಬರುತ್ತದೆ. ರಾಜವಂಶಗಳಿದ್ದಲ್ಲಿ ಅವರ ಧಾರ್ಮಿಕ ಕಾರ್ಯಗಳನ್ನು ನೆರವೇರಿಸಲು ಬ್ರಾಹ್ಮಣರು ಇದ್ದೇ ಇರುತ್ತಾರೆಂದು ಬೇರೆಯಾಗಿ ಹೇಳಬೇಕಾಗಿಲ್ಲ. ಆ ರಾಜವಂಶಗಳು ತಮ್ಮ ರಾಜ್ಯಗಳಲ್ಲಿ ಬ್ರಹ್ಮಪುರಿ (=ಅಗ್ರಹಾರ) ಗಳನ್ನು ನಿರ್ಮಿಸಿ ಅಲ್ಲಿ ವೇದಾಧ್ಯಯನದ ಏರ್ಪಾಡುಗಳನ್ನು ಮಾಡುತಿದ್ದುದರಿಂದ, ಅವರು

---

1. Apastamba, the author of a complete set of Srauta, Grihya and Dharma Sutras that has luckily preserved in its entirety must have flourised somewhere about B. C. 300 in the Godavary valley. A History of South India p. 341 by Sri K. A. N. Sastri, M. A.

2. An Early History of the Deccan by Sri R. G. Bhandarkar, M. A.

ದಕ್ಷಿಣ ಭಾರತಕ್ಕೆ ಬಂದುದರ ಒಂದು ಉದ್ದೇಶವು ವೈದಿಕ ಧರ್ಮದ ಪ್ರಚಾರ ಮಾಡುವುದಾಗಿತ್ತೆಂದು ಹೇಳಬಹುದು.

ಅಶೋಕ ಚಕ್ರವರ್ತಿಯು ತನ್ನ ಧರ್ಮಲೇಖಗಳನ್ನು ದಕ್ಷಿಣ ಭಾರತದಲ್ಲಿ ಸ್ಥಾಪಿಸುವ ಮೊದಲೇ ಅವನ ಲೇಖಗಳಲ್ಲಿ ಬಳಸಲಾದ ಬ್ರಾಹ್ಮೀಲಿಪಿ ಮತ್ತು ಪ್ರಾಕೃತ ಭಾಷೆಗಳು ದಕ್ಷಿಣ ಭಾರತದಲ್ಲಿ ಬಳಕೆಯಲ್ಲಿದ್ದವೆಂದು ಒಪ್ಪಬೇಕಾಗುತ್ತದೆ. ಹಾಗಿರದಿದ್ದರೆ ಅಶೋಕನು ತನ್ನ ಲೇಖಗಳನ್ನು ದಕ್ಷಿಣ ಭಾರತದ ಪ್ರಾದೇಶಿಕ ಭಾಷೆಗಳಲ್ಲಿ ಕೆತ್ತಿಸುತ್ತಿದ್ದನೆಂಬುದರಲ್ಲಿ ಸಂದೇಹವಿಲ್ಲ. ಅಷ್ಟುಮಾತ್ರವಲ್ಲದೇ ದಕ್ಷಿಣ ಭಾರತದಲ್ಲಿ ಕಂಡುಬರುವ ಅವನ ಲೇಖಗಳಲ್ಲಿ ಕೆಲವು ಬ್ರಾಹ್ಮೀ ವರ್ಣಗಳು ಉತ್ತರ ಭಾರತದ ವರ್ಣಗಳಿಂದ ತುಸು ಭಿನ್ನರೂಪ ತಳೆದಿರುವುದರಿಂದ ಮತ್ತು ಅಂಥ ರೂಪಾಂತರಗಳಾಗಲು ಹೆಚ್ಚು ಕಾಲ ತಗಲುವುದರಿಂದ ಅಶೋಕನು ಆ ಲೇಖಗಳನ್ನು ಕೆತ್ತಿಸುವ ಬಹುಕಾಲ ಮೊದಲಿನಿಂದಲೇ ದಕ್ಷಿಣ ಭಾರತದಲ್ಲಿ ಬ್ರಾಹ್ಮೀಲಿಪಿಯು ಬಳಕೆಯಲ್ಲಿತ್ತೆಂದು ಮತ್ತು ಆ ಲೇಖಗಳಲ್ಲಿ ಬಳಸಿದ ಪ್ರಾಕೃತ ಭಾಷೆಯನ್ನು ತಿಳಿದುಕೊಳ್ಳಬಲ್ಲ ಜನರು ದಕ್ಷಿಣ ಭಾರತದಲ್ಲಿದ್ದರೆಂದು ಒಪ್ಪಬೇಕಾಗುತ್ತದೆ. ಆದರೆ ಪ್ರಾಚೀನಕಾಲದಲ್ಲಿ ಲಿಪಿಯ ಮೇಲೆ ಮತ್ತು ಅಧ್ಯಾಪನದ ಮೇಲೆ ಬ್ರಾಹ್ಮಣರ ಏಕಾಧಿಕಾರವಿದ್ದುದರಿಂದ ಮತ್ತು ಆ ಕಾಲದ ಭಾರತವರ್ಷದಲ್ಲಿ ಸಾರಸ್ವತ ಬ್ರಾಹ್ಮಣರ ಒಂದು ಪಂಗಡ ಹೊರತು ಇತರ ಪಂಗಡಗಳಿರುವುದು ಅಸಂಭವವಾದುದರಿಂದ ಉತ್ತರ ಭಾರತದಿಂದ ಬಂದು ದಕ್ಷಿಣ ಭಾರತದಲ್ಲಿ ನೆಲಸಿದ್ದ ಬ್ರಾಹ್ಮಣರು ಸಾರಸ್ವತರೇ ಆಗಿದ್ದರೆಂದು ಹೇಳಬೇಕಾಗುತ್ತದೆ.

ಪರಂತು ಸಾರಸ್ವತ ಬ್ರಾಹ್ಮಣರ ಪಂಗಡಗಳು ಒಂದೇ ಕಾಲದಲ್ಲಾಗಲೀ ಒಂದೇ ಪ್ರದೇಶದಿಂದಾಗಲೀ ದಕ್ಷಿಣ ಭಾರತಕ್ಕೆ ಬಂದಿದ್ದರೆಂದು ಹೇಳುವುದು ಸರಿಯಾಗಲಾರದು. ಕೆಲವರು ಸೌರಾಷ್ಟ್ರದಿಂದ ನೇರಾಗಿ ಹಡಗುಗಳ ಮೂಲಕ ಬಂದು ಗೋವ ದ್ವೀಪದಲ್ಲಿಳಿದಿರಬಹುದು ಮತ್ತು ಅದಕ್ಕೆ ರೇವತೀದ್ವೀಪವೆಂದೂ ಅದರಲ್ಲಿನ ಒಂದು ಊರಿಗೆ ಕುಶಸ್ಥಲೀ ಎಂದೂ ಹೆಸರನ್ನು ಕೊಟ್ಟಿರಬಹುದು. ಹಾಗೂ ಅಲ್ಲಿನ ಒಂದು ಬೆಟ್ಟಕ್ಕೆ ಗೋಮಂತ ಎಂಬ ಹೆಸರನ್ನೂ ಕೊಟ್ಟಿರಬಹುದು. ಕೆಲವರು ಪಂಜಾಬದಿಂದ ಮುಂದುವರಿದು ಬಂದವರು ಆನರ್ತದೇಶದಲ್ಲಿ (=ಉತ್ತರ ಗುಜರಾತದಲ್ಲಿ) ನೆಲಸಿದ್ದು ಆ ಬಳಿಕ ಲಾಟ, ಖೇಟಕ ಮೊದಲಾದ ದೇಶಗಳನ್ನು ದಾಟಿ ಕರ್ಣಾಟಕಕ್ಕೆ ಬಂದವರು ಗೋವದವರೊಂದಿಗೆ ಕೂಡಿಕೊಂಡಿರಬಹುದು. ಏಕೆಂದರೆ ಕುಶಸ್ಥಲೀ ಎಂಬ ಹೆಸರು ಪ್ರಾಚೀನ ಕಾಲದಲ್ಲಿ ಸೌರಾಷ್ಟ್ರದಲ್ಲಿನ ದ್ವಾರಕಾಪುರಿಯ ಹಾಗೂ ಆನರ್ತದೇಶದ ರಾಜ

ಧಾನಿಯ ಹೆಸರಾಗಿತ್ತು. ಹಾಗೆಯೇ ರೈವತ ಎಂಬ ಹೆಸರು ದ್ವಾರಕೆಯ ಸಮೀಪದಲ್ಲಿನ ಒಂದು ಬೆಟ್ಟದ ಹಾಗೂ ಆನರ್ತದೇಶದಲ್ಲಿನ ಒಂದು ಬೆಟ್ಟದ ಹೆಸರಾಗಿತ್ತು. ಈಗ ಗುಜರಾತದಲ್ಲಿ ಆ ಬೆಟ್ಟವನ್ನು ಗಿರಿನಾರ್ ಎಂಬ ಹೆಸರಿನಿಂದ ಕರೆಯುತ್ತಾರೆ. ಹಾಗೆಯೇ ದ್ವಾರಕೆಯ ಬಳಿಯಲ್ಲಿನ ಒಂದು ಬೆಟ್ಟದ ಹೆಸರು ಗೋಮಂತ ಎಂದಿತ್ತು. ರೇವತೀ ಎಂಬ ಶಬ್ದವೇ ರೈವತ ಎಂಬ ಶಬ್ದದ ಮೂಲವಾಗಿರುತ್ತದೆ. ಮತ್ತು ಬಲರಾಮನ ಪತ್ನಿಯ ಹೆಸರು ರೇವತೀ ಎಂದಿರುತ್ತದೆ. ಅಂದರೆ ಕುಶಸ್ಥಲೀ ಮತ್ತು ರೇವತೀ ಎಂಬ ಹೆಸರುಗಳು ಸೌರಾಷ್ಟ್ರದೊಂದಿಗೆ ಮತ್ತು ಆನರ್ತದೇಶದೊಂದಿಗೆ ಗೋವದ ಸಂಬಂಧವನ್ನು ಸೂಚಿಸುತ್ತವೆ. ಗೋಮಂತ ಶಬ್ದದಿಂದಾಗಿ ಸಾರಸ್ವತ ಬ್ರಾಹ್ಮಣರು ಸೌರಾಷ್ಟ್ರದಿಂದ ಬಂದವರೆಂಬುದು ದೃಢವಾಗುತ್ತದಾದರೂ. ಪಲ್ಲವ ಅರಸರ ಆಸ್ಥಾನದಲ್ಲಿದ್ದ ಮಹಾಕವಿ ದಂಡಿಯ ಹಿರಿಯರು ಆನರ್ತದೇಶದಿಂದ ಬಂದು ಗಂಗವಾಡಿಯಲ್ಲಿ ನೆಲಸಿದ್ದರೆಂಬ ವಿಷಯವು ಆನರ್ತದಿಂದಲೂ ಸಾರಸ್ವತ ಬ್ರಾಹ್ಮಣರು ಬಂದಿದ್ದರೆಂಬುದನ್ನು ದೃಢಪಡಿಸುತ್ತದೆ,

ಪ್ರಮಾಣಗಳ ಅಭಾವದಿಂದಾಗಿ ಮತ್ತು ಸಂಶೋಧನೆಗಳಲ್ಲಿನ ಕೊರತೆಯಿಂದಾಗಿ ಭಾರತವರ್ಷದ ಇತಿಹಾಸದಲ್ಲಿ ಹಲವು ದೊಡ್ಡ ದೊಡ್ಡ ತಪ್ಪುಗಳು ಉಳಿದುಕೊಂಡಿವೆ. ಉದಾಹರಣೆಗಾಗಿ ಹೇಳುವುದಾದರೆ ಭಾರತವರ್ಷದಲ್ಲಿ ತಮ್ಮ ಪಂಗಡದ ಹೆಸರಿನಿಂದ ವರ್ಷಗಳ ಗಣನೆಯನ್ನು ಬಳಕೆಗೆ ಬರುವಂತೆ ಮಾಡಿದ "ಶಕ" ಜನರು ಶಕಾರಂಭದಲ್ಲಿಯೇ ಭಾರತವರ್ಷದೊಳಗೆ ಬಂದಿದ್ದರು ಎಂಬ ಬಹಳ ದೊಡ್ಡ ತಪ್ಪು ಇತಿಹಾಸದಲ್ಲಿ ಉಳಿದುಕೊಂಡಿದೆ. ಆದರೆ ಭಗವಾನ್ ಬುದ್ಧನು ಜನ್ಮತಳೆದ ಕಪಿಲವಸ್ತುವಿನ ರಾಜವಂಶೀಯರು ಹಾಗೂ ನೇಪಾಳದ ತಪ್ಪಲಿನಲ್ಲಿ ನೆಲಸಿದ್ದ ಲಿಚ್ಛವಿಜನರು ಶಕವರ್ಗದವರೆಂಬುದನ್ನು ಯಾವನೊಬ್ಬ ಇತಿಹಾಸ ಲೇಖಕನೂ ಇಂದಿನ ತನಕ ಗಣನೆಗೆ ತೆಗೆದುಕೊಂಡಿಲ್ಲ, ಬುದ್ಧದೇವನ ಹೆಸರುಗಳಲ್ಲಿ "ಶಾಕ್ಯಮುನಿ" ಮತ್ತು "ಅರ್ಕಬಂಧು" ಎಂಬ ಹೆಸರುಗಳು ಬುದ್ಧದೇವನು ಸೂರ್ಯಪೂಜಕರಾದ ಶಕವರ್ಗದವನೆಂದು ಸ್ಪಷ್ಟವಾಗಿ ಸೂಚಿಸುತ್ತಿದ್ದರೂ ಬ್ರಿಟಿಷ್ ವಿದ್ವಾಂಸ ಹಾಗೂ ಇತಿಹಾಸಕಾರ ವಿನ್ಸೆಂಟ್ ಸ್ಮಿತ್ ಅವರು ಬುದ್ಧದೇವನು ಮಂಗೋಲ ವರ್ಗದವನೆಂದು ಹೇಳಿದ್ದಾರೆ.[1] ಲಿಚ್ಛವಿ ಮೊದಲಾದ ಜನರು ಶಕವರ್ಗದ ಜನರಲ್ಲಿ ಮಗ

1. I think it highly probable that Gautama Buddha, the sage of sakyas and the founder of Historical Buddhism was a Mangolian by birth. page 47. The Oxford History of India.

(=ಮಕ) ಶಾಖೆಯುವರಾಗಿದ್ದುದರಿಂದ ಪ್ರಾಚೀನಕಾಲದಲ್ಲಿ ಕೀಕಟವೆಂದು ಕರೆಯಲ್ಪಡುತಿದ್ದ ದೇಶವು "ಮಗ" ಜನರ ನಿವಾಸಸ್ಥಾನ ಎಂಬ ಅರ್ಥದಲ್ಲಿ "ಮಗಧ"ವೆಂದಾಯಿತು. ಹಾಗೆಯೇ ಪಶ್ಚಿಮಭಾರತದ ಪಂಜಾಬದಲ್ಲಿ ಹಾಗೂ ಗಡಿನಾಡು ಪ್ರದೇಶದಲ್ಲಿ ಕೂಡ ಆಚಾರ್ಯ ಪಾಣಿನಿಯ ಕಾಲಕ್ಕಿಂತ ಮೊದಲೇ ಶಕಜನರು ನೆಲಸಿದ್ದರೆಂಬುದಕ್ಕೆ ಪ್ರಮಾಣವಾಗಿ, ಆಚಾರ್ಯ ಪಾಣಿನಿಯ ವ್ಯಾಕರಣದಲ್ಲಿ-ಶಕಜನರಿಂದಾಗಿ ಬಳಕೆಗೆ ಬಂದಂಥ ಹಲವು ಗ್ರಾಮಗಳ ಹಾಗೂ ಪಟ್ಟಣಗಳ ಹೆಸರುಗಳು ದೊರೆಯುತ್ತವೆ. ಅಂದರೆ ಗ್ರಾಮಗಳ ಇಲ್ಲವೇ ಪಟ್ಟಣಗಳ ಹೆಸರುಗಳು ಕಂಥ ಇಲ್ಲವೇ ಕಂಥಾ ಶಬ್ದದಿಂದ ಕೊನೆಗೊಳ್ಳುವುದು ಶಕಜನರಲ್ಲಿನ ವೈಶಿಷ್ಟ್ಯವಾಗಿತ್ತು. ಹಾಗೆ ಕಂಥ ಶಬ್ದದಿಂದ ಕೊನೆಗೊಳ್ಳುವ ಶಬ್ದಗಳಿಗಾಗಿ ಹೇಳಿದನಿಯಮಗಳು ಪಾಣಿನಿಯವ್ಯಾಕರಣದಲ್ಲಿವೆ:—॥ **ಸಂಜ್ಞಾಯಾಂ ಕಂಥೋಶೀನರೇಷು ॥ ೨-೪-೨೦ ॥**[2] ಈ ಸೂತ್ರದ ಪ್ರಕಾರ ಉಶೀನರ ದೇಶದಲ್ಲಿ "ಕಂಥ"ದಿಂದ ಕೊನೆಗೊಳ್ಳುವ ನಾಮಪದಗಳು ನಪುಂಸಕಲಿಂಗದಲ್ಲಿರುತ್ತವೆ. ಉದಾ:—ಸೌಶಮಿ ಕಂಥಮ್; ಆಹ್ವರ ಕಂಥಮ್ ಇತ್ಯಾದಿ ಆದರೆ "ದಾಕ್ಷೀಕಂಥಾ" ಮುಂತಾದ ಸ್ತ್ರೀಲಿಂಗ ನಾಮಗಳೂ ಇವೆ. ಇವುಗಳು ಬಹುತರವಾಗಿ ನದೀತಟದ ಪ್ರದೇಶಗಳಾಗಿರಬಹುದು. ಏಕೆಂದರೆ ಗುಜರಾತದಲ್ಲಿ–ನದೀತಟದ ಪಟ್ಟಣ ಇಲ್ಲವೇ ಪ್ರದೇಶವು "ಕಂಠ" ಶಬ್ದದಿಂದ ಕೊನೆಗೊಂಡಿದೆ. ಉದಾ:—ಬಾನಸಕಂಠ, ಸಾಬರಕಂಠ, ಮಹೀಕಂಠ ಇತ್ಯಾದಿ. ಹಾಗೆಯೇ ಭಾರತವರ್ಷದ ಹೊರಗೆ ಶಕಜನರು ನೆಲಸಿದ್ದ "ಶಾಕದ್ವೀಪ" ಅಥವಾ ಮಧ್ಯಆಸ್ಯದಲ್ಲಿ ಶಕಜನರ ಕುರುಹಾಗಿ ಯಾರಕಂದ, ಸಮರಕಂದ, ತಾಶಕಂದ ಮೊದಲಾದ ಹಲವು ಸ್ಥಳನಾಮಗಳು ಇಂದಿಗೂ ಉಳಿದಿವೆ. ತಾತ್ಪರ್ಯವೇನೆಂದರೆ ಶಕಪೂರ್ವ ೮೦೦ ವರ್ಷಗಳಿಗಿಂತ ಮೊದಲೇ ಶಕಜನರು ಪೂರ್ವಭಾರತದ ಮಗಧ. ನೇಪಾಲ, ಟಿಬೇಟ್ ಮೊದಲಾದೆಡೆಗಳಲ್ಲಿ ನೆಲಸಿದ್ದಂತೆಯೇ ಪಶ್ಚಿಮ ಭಾರತದ ಪ್ರಾಚೀನ ಗುರ್ಜರ, ಸಿಂಧ, ಪಂಜಾಬ, ಗಡಿನಾಡು, ಅಫಗಾನಿಸ್ಥಾನ ಮತ್ತು ಶಕಸ್ಥಾನಗಳಲ್ಲಿ ನೆಲಸಿದ್ದರೆಂಬುವುದರಲ್ಲಿ ಸಂದೇಹವಿಲ್ಲ.

ಭಾರತವರ್ಷದ ಹೊರಗೆ ಭಾರತದ ಗಡಿಯೊಂದಿಗೆ ಹೊಂದಿಕೊಂಡು ಪಶ್ಚಿಮಕ್ಕೆ ಹರಡಿರುವ ಆಸ್ಯಾಖಂಡದ ಭೂಭಾಗದಲ್ಲಿ ನೆಲಸಿದ್ದ ಪಾರದ, ಪಹ್ಲವ,

2. ಕಂಥಾಯೂಷ್ಮಕ್ ॥ ೪-೨-೧೦೨ ॥ ವರ್ಣಾವುಕ್ ॥ ೪-೨-೧೦೩ ॥ ಆದಿಶ್ಚಿಹಣಾದೀನಾಮ್ ॥ ೮-೨-೧೨೫ ॥ ವರ್ಣು ಅಂದರೆ ಗಡಿನಾಡಿನ ಬನ್ನು. ಕಂಥಾಚ ॥ ೮-೨-೧೨೪ ॥

ಸುಮೇರ, ಅಸುರ, ಕಾಂಬೋಜ, ಬಾಹ್ಲೀಕ, ಶಕ, ಕುಶಾಣ, ಯವನ ಮೊದಲಾದ ನೂರಾರು ಪಂಗಡಗಳ ಜನರು ಆರ್ಯವಂಶೀಯರಾಗಿದ್ದರು. ಮತ್ತು ಚಾರಿತ್ರಿಕ ಕಾಲದವರೆಗೂ ಅವರೆಲ್ಲರು ವೈದಿಕ ಧರ್ಮಾನುಯಾಯಿಗಳಾಗಿದ್ದು ಸಂಸ್ಕೃತಕ್ಕೆ ಸಮೀಪವಾದ ಭಾಷೆಗಳನ್ನಾಡುತ್ತಿದ್ದರು. ಭಾರತೀಯರಿಗೂ ಅವರಿಗೂ ನಿತ್ಯ ಸಂಪರ್ಕವಿದ್ದಿತು. ಚಾರಿತ್ರಿಕ ಕಾಲದಲ್ಲಿ ಚಂದ್ರಗುಪ್ತನ ರಾಜ್ಯವು ಬಾಹ್ಲೀಕ ಪ್ರದೇಶದವರೆಗೆ ವಿಸ್ತರಿಸಿತ್ತು. ಮತ್ತು ಮುಸಲ್ಮಾನರು ಪ್ರಬಲರಾಗುವ ತನಕ ಅಫಗಾನಿಸ್ಥಾನವನ್ನು ಭಾರತೀಯ ಅರಸರೇ ಆಳುತ್ತಿದ್ದರು. ಭಾರತೀಯರಲ್ಲಿ ಬ್ರಾಹ್ಮಣ ಪಂಗಡವಿದ್ದಂತೆಯೇ ಪಾರದ, ಪಹ್ಲವ ಮತ್ತು ಶಕಜನರಲ್ಲಿ ಕೂಡಾ ಬ್ರಾಹ್ಮಣರಿದ್ದರು. ಹಾಗೂ ಅವರಲ್ಲಿ ಋಷಿಗಳ ಗೋತ್ರಗಳಿದ್ದುವು. ಪಾರದ (=ಪಾರಸೀಕರು) ಪಹ್ಲವರು ಮತ್ತು ಭರತರು (=ಭಾರತೀಯರು) ಅಗ್ನಿ ಪೂಜಕರಾಗಿದ್ದರು. ಶಕ ಮತ್ತು ಯವನರು ಸೂರ್ಯಪೂಜಕರಾಗಿದ್ದರು, ಶಕ ಜನರಲ್ಲಿ ಶಕ, ಮಕ (=ಮಗ) ಮತ್ತು ಕರ್ಕ[1] ಎಂಬ ಮೂರು ಶಾಖೆಗಳಿದ್ದುವು. ಅವರಲ್ಲಿನ ಶಾಕದ್ವೀಪೀ ಮತ್ತು ಮಗ ಎಂಬ ಎರಡು ಬ್ರಾಹ್ಮಣ ಜಾತಿಗಳು ಇಂದಿಗೂ ಉತ್ತರಭಾರತದಲ್ಲಿವೆ. ಪ್ರಖ್ಯಾತಜ್ಯೋತಿಷಿಯಾಗಿದ್ದ ಆಚಾರ್ಯ ವರಾಹಮಿಹಿರನು ಶಕಬ್ರಾಹ್ಮಣನಾಗಿದ್ದ. ಭಾರತವರ್ಷದಲ್ಲಿ ಸಾಗಿದ್ದ ಅಹಿಂಸಾ ಧರ್ಮದ ಪ್ರಚಾರದಿಂದ ಜನರಲ್ಲಿ ಭಕ್ಷ್ಯಾಭಕ್ಷ್ಯಗಳ ವಿಮರ್ಶೆಯು ಆರಂಭವಾಗಿ ಮಡಿವಂತಿಕೆಯು ಹಾಗೂ ಜಾತಿ ಭೇದಗಳು ಬಲಗೊಳ್ಳುವ ತನಕ-ಭಾರತೀಯ ರೊಳಗೂ-ಪಶ್ಚಿಮ ಏಷ್ಯಾದ ಜನರೊಳಗೂ-ಎಲ್ಲ ಬಗೆಯ ಕೊಳ್ಳು-ಕೊಡುವ ವ್ಯವಹಾರವು ನಡೆಯುತ್ತಿತ್ತು. ಭಾರತೀಯರು ಯಾವ ಬಗೆಯ ಅಡ್ಡಿ ತಡೆಗಳಿಲ್ಲದೇ-ಪರದೇಶಗಳ ಸಂಚಾರವನ್ನು ಕೈಗೊಳ್ಳುತ್ತಿದ್ದರು. ಹೀಗಿದ್ದರೂ ಬ್ರಿಟಿಷರು ಬರೆದ ಭಾರತೀಯ ಇತಿಹಾಸ ಪುಸ್ತಕಗಳಲ್ಲಿ-ಭಾರತೀಯರಿಗೆ ಪರ ದೇಶಗಳ ಸಂಪರ್ಕವೇ ಇರಲಿಲ್ಲವೆಂಬಂತೆ ವರ್ಣಿಸಲಾಗಿದೆ.

---

1. One of the oldest references to the Sakas or Scythions is to be found in the inscriptions of Darius I (600 B. C.) Three different branches of the Sakas are mentiond there. The Saka and Maka are included in the Perspolis inscriptions, as countries that were conquered by Darius. The Nakshi-Rustam inscriptions refer to the three branches of Sakas as his vassals. Herodotus refers to the Sakas in these words –"The Sacae or Scyths clad in trousers, had on their heads tall stiff caps rising to a point—Ancient India. page 329. by Sri V. D. Mahajan M. A.

ಪ್ರಾಚೀನ ಕಾಲದಲ್ಲಿ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರಲ್ಲಿ ಹೆಚ್ಚಿನ ಜಾತಿ-ಭೇದವಿರಲಿಲ್ಲ. ಅವರು ಸಾಮಾನ್ಯವಾಗಿ ಒಂದೇ ಜಾತಿಯವರಂತೆ ವ್ಯವಹರಿಸುತ್ತಿದ್ದರು. ಅಂದರೆ ಅವರಲ್ಲಿ ಅಂತರ್ಜಾತೀಯ ವಿವಾಹಗಳೂ. ಭೋಜನ ಸಮಾರಂಭಗಳೂ ಜರಗುತ್ತಿದ್ದುವು.[1] ಬ್ರಾಹ್ಮಣರು ಇಚ್ಛಿಸಿದಾಗ ಕ್ಷತ್ರಿಯರು, ವೈಶ್ಯರೂ ಆಗಿ ಮಾರ್ಪಡುತ್ತಿದ್ದರು. ಹೀಗಾಗಿ ಭಾರತವರ್ಷದಲ್ಲಿ ಹಲವು ರಾಜವಂಶಗಳ ಸ್ಥಾಪಕರು ಬ್ರಾಹ್ಮಣರಾಗಿದ್ದರು. ಅಂದರೆ ಉತ್ತರ ಭಾರತದ ಅಫಗಾನಿಸ್ಥಾನ, ಕಾಶ್ಮೀರ, ಪಂಜಾಬ, ಸಿಂಧ. ಗುರ್ಜರ. ಕನೋಜ, ಮಗಧ ಮೊದಲಾದ ರಾಜ್ಯಗಳನ್ನು ಬಹಳ ಕಾಲದ ತನಕ ಬ್ರಾಹ್ಮಣ ಅರಸರೇ ಆಳುತ್ತಿದ್ದರು. ಹಾಗೆಯೇ ದಕ್ಷಿಣ ಭಾರತದಲ್ಲಿ ಆಳಿದ ಆಂಧ್ರದ ಸಾತವಾಹನರು. ಕಾಂಚಿಯ ಪಲ್ಲವರು ಗಂಗವಾಡಿಯ ಗಂಗರು. ಕೊಂಕಣದ ಕದಂಬರು ಮತ್ತು ಬೇರೆ ಹಲವರು ಮೂಲದಲ್ಲಿ ಬ್ರಾಹ್ಮಣರಾಗಿದ್ದರು.

ದಕ್ಷಿಣ ಮೈಸೂರಿಗೆ ಸೇರಿದ ಗಂಗಪಾಡಿ ಅಥವಾ ಗಂಗವಾಡಿಯಲ್ಲಿ ಮೊದಲು ಕುವಲಾಲ (=ಕೋಲಾರ)ವನ್ನೂ. ಶಕದ ಎರಡನೆಯ ಶತಮಾನದಿಂದ ತಲವನ (=ತಲಕಾಡ)ವನ್ನೂ ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ ಗಂಗವಂಶದ ಮೂಲಪುರುಷನಾರೆಂದು ಈ ತನಕ ನಿರ್ಧರಿಸಲಾಗಿಲ್ಲ. ಆ ವಂಶದವರ ಕುರಿತು ಪರಸ್ಪರ ವಿರುದ್ಧವಾದ ಹಲವು ಕಥೆಗಳು ಪ್ರಚಲಿತವಿರುವುದರಿಂದ ಅವರು ವಾಸ್ತವಿಕ ಮೂಲವನ್ನು ಕಂಡುಹಿಡಿಯಲು ಸಾಧ್ಯವಾಗಿಲ್ಲ. ಹೇಗಿದ್ದರೂ ಈಗ ಉಪಲಬ್ಧವಿರುವ ಗಂಗ ಅರಸರ ಶಾಸನಗಳ ಪ್ರಕಾರ ಅವರು ಕಾಣ್ವಾಯನ ಗೋತ್ರದ ಬ್ರಾಹ್ಮಣರಾಗಿದ್ದರೆಂದು ತಿಳಿದು ಬರುತ್ತದೆ.[2] ಮತ್ತು ಅವರ ಆಳ್ವಿಕೆಯು ಹಿರಿಯ ಮಾಧವ ಅಥಾವಾ ಕೊಂಕಣಿ (=ಕೊಂಗಣಿ)ವರ್ಮನಿಂದ ಆರಂಭವಾಗಿ ಅವನ ತಮ್ಮನಾದ ಕಿರಿಯಮಾಧವ ಅಥವಾ ದಡಿಗ[3]

---

1. Dring the Gupta times, the best elements in society, that is to say the Brahmanas Kshatriyas and Vaisyas, were in a sense, one community. They were tought by the same teachers, and were connected by intermarriages in the anuloma way though pratiloma marriage were not uncommon. Glory that was Gurjara Desa— by Sri K. M. Munshi page 64.
2. Konganivarman belonged to the Gahnaveyakula, the family of the Gangas and the Kanvayana gotra. A History of South India by Sri K. A. Nilakanta Shastri.
3. Mysore Gazetteer Vol. II P. II page 589.

ಎಂಬವನಿಂದ ಮುಂದುವರಿಯುತ್ತದೆ. ಗಂಗಕುಲದಮಾಧವನು ಒಂದು ಬೌದ್ಧ ವಿಹಾರಕ್ಕೆ ಭೂಮಿಯನ್ನು ದಾನಮಾಡಿ ಬರೆಸಿದ ತಾಮ್ರಶಾಸನದಲ್ಲಿ **"ಇತಿ ಯಸ್ಮಿನ್ ಗಾಂಗೇಯ. ರಾಜ್ಯೇ ತಸ್ಮಿನ್ ಮಾಧವ ಶರ್ಮಣಃ ಶಾಸನಬುದ್ಧ ಸತ್ವಾಯ ದತ್ತಮಾಚಂದ್ರಾರ್ಕತಾರಾಂಬರಂ"**[1] ಎಂದು ತನ್ನನ್ನು "ಮಾಧವ ಶರ್ಮಾ" ಎಂದು ಕೆತ್ತಿಸಿರುವುದು-ಗಂಗಕುಲದವರು ಬ್ರಾಹ್ಮಣರಾಗಿದ್ದರೆಂದು ಸಿದ್ಧಪಡಿಸುತ್ತದೆ.

ತಮಿಳಿನಲ್ಲಿ ಕೊಂಗುನಾಡು ಎಂದು ಕರೆಯಲ್ಪಡುತ್ತಿದ್ದ ರಾಜ್ಯವು ಸೇಲಮ್ ಮತ್ತು ಕೊಯಮುತ್ತೂರು ಜಿಲ್ಲೆಗಳನ್ನು ಒಳಗೊಂಡಿತ್ತು ಮತ್ತು ಗಂಗವಾಡಿಯನ್ನು ಹತ್ತಿಕೊಂಡಿತ್ತು. ಆದುದರಿಂದ ಗಂಗವಂಶದವರು ಮೊದಲು ಕೊಂಗನಾಡನ್ನು ಆಳುತ್ತಿದ್ದು ತಮಿಳು ಜನರು ಗಂಗರನ್ನೇ "ಕೊಂಗ"ರೆನ್ನುತ್ತಿದ್ದಿರಬಹುದೋ ಎಂಬ ಅನುಮಾನ ಬರುತ್ತದೆ. ಏಕೆಂದರೆ ಗಂಗವಂಶದ ಮೊದಲನೆಯ ಅರಸನ ಹೆಸರು ಕೊಂಕಣಿ ವರ್ಮನೆಂದಿರುವುದು ಮತ್ತು ಕೊಂಗನಾಡಿನಲ್ಲಿ ಕೊಂಕಣಪುರ ಮತ್ತು ಕೊಂಕಣಪಳ್ಳಿ ಎಂಬ ಎರಡು ಸ್ಥಳನಾಮಗಳಿರುವುದು ಹಾಗೆ ಅನುಮಾನಬರಲು ಕಾರಣವಾಗಿದೆ. ಕೊಂಗಣಪುರವು ಈಗಿನ ಸೇಲಮ್ ಜಿಲ್ಲೆಯಲ್ಲಿದೆ. ಡಾಕ್ಟರ್ ಎ. ಸಿ. ಬರ್ನೇಲ್ ಅವರು ತಾನು ಪ್ರಕಟಿಸಿದ "The Elements of South Indian Palaeography"ಎಂಬ ಪುಸ್ತಕದಲ್ಲಿ ಕೊಟ್ಟಿರುವ ಕೊಂಗನಾಡಿನ ಭೂಪಟದಲ್ಲಿ ಕೊಂಗಣಪುರ ಮತ್ತು ಕೊಂಕಣಪಳ್ಳಿ ಎಂಬ ಎರಡು ಸ್ಥಳಗಳನ್ನು ಅಂಕಿಸಿದ್ದಾರೆ. ಗಂಗರಾಜ್ಯದ ಪಶ್ಚಿಮಗಡಿಯು ಸಮುದ್ರವಾಗಿತ್ತೆಂದು[2] ಹೇಳಿರುವುದರಿಂದ ಮತ್ತು ಕೊಂಗುಜನರು ಪಶ್ಚಿಮ ಕರಾವಳಿಯ ತುಳುನಾಡನ್ನು ಆಕ್ರಮಿಸಿದ್ದರೆಂದು[3] ತಿಳಿದು ಬರುವುದರಿಂದ-ಕೊಂಗರಿಂದಾಗಿ- ಅಂದರೆ ಗಂಗರಿಂದಾಗಿಯೇ ದಕ್ಷಿಣಭಾರತದ ಪಶ್ಚಿಮಕರಾವಳಿಗೆ "ಕೊಂಕಣ"ವೆಂಬ ಹೆಸರು ಬಂದಿತ್ತೆನ್ನಬಹುದಾಗಿದೆ.

1. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ 114.
2. Mysore Gazetteer Vol II P. II page. 591.
3. Their home is said to have been in the Kongu country-roughly the modern districts of Salem and Coimbatore-and they overran the Tulu country on the west coast in the early centuries of the Christion era. A History of South India. by Sri K. A. Nilakanta Shastri M. A, page. 85.

ಕಾಂಚಿಯಲ್ಲಿ ಆಳಿದ ಪಲ್ಲವರು ಮೊದಲು ಕೊಂಕಣದಲ್ಲಿದ್ದರು.[1] ತರುವಾಯ ಅವರು ಪೂರ್ವಕ್ಕೆ ರಾಜ್ಯವನ್ನು ವಿಸ್ತರಿಸುತ್ತ ಪೂರ್ವ ಕರಾವಳಿಗೆ ತಲಪಿ ಕಾಂಚಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿದ್ದರು. ಅವರು ಭಾರದ್ವಾಜ ಗೋತ್ರದ ಬ್ರಾಹ್ಮಣರಾಗಿದ್ದರು ಮತ್ತು ಅವರ ಮಾತೃಭಾಷೆಯು ಪ್ರಾಕೃತವಾಗಿತ್ತು.[2] ಪಲ್ಲವರಾಜ ಶಿವಸ್ಕಂದವರ್ಮನ ಒಂದು ಶಾಸನದಲ್ಲಿನ ಬರವಣಿಗೆಯು ಮುಂದಿನಂತೆ ಆರಂಭವಾಗುತ್ತದೆ:-**"ಕಾಂಚೀಪುರಾತೋ ಯುವಮಹಾರಾಜೋ ಭಾರದಾಯಸಗೋತ್ತೋ ಪಲವಾನಂ ಸಿವಖಂದವಮ್ಮೋ"**[3] ಹೀರಹಡಗಳ್ಳಿಯಲ್ಲಿ ದೊರಕಿದ ಹಾಗೂ ಪಲ್ಲವ ಅರಸು ಶಿವಸ್ಕಂದವರ್ಮನು ಬರೆಸಿದ ಬೇರೊಂದು ತಾಮ್ರಶಾಸನದಲ್ಲಿನ ಬರವಣಿಗೆಯು ಮುಂದೆ ಕೊಟ್ಟಿರುವಂತೆ ಆರಂಭವಾಗಿದೆ–**"ಸಿದ್ಧಮ್ । ಕಾಂಚೀಪುರಾ ಅಗ್ನಿಟ್ಠೋಮ ವಾಜಪೇಯಸ್ಸಮೇಧಯಾಜಿ ಧಮ್ಮಮಹಾರಾಜಾಧಿರಾಜೋ ಭಾರದ್ದಾಯೋ ಪಲ್ಲವಾಣ ಸಿವಖಂದವಮ್ಮೋ"**

ಕೆಲವು ಬ್ರಿಟಿಷ್ ವಿದ್ವಾಂಸರು ಪಹ್ಲವರನ್ನು ವಿದೇಶಿಯರೆಂದು ಇಲ್ಲವೇ ಪಾರಸೀಕರೆಂದು ಹೇಳಿದ್ದಾರೆ. ಆದರೆ ಅದು ಸರಿಯೆನ್ನಲಾಗುವುದಿಲ್ಲ. ಏಕೆಂದರೆ ಪಾರಸೀಕರು ಮತ್ತು ಪಹ್ಲವರು ಒಂದೇ ಪಂಗಡದವರು ಅಥವಾ ಗೋತ್ರದವರಲ್ಲ. ಪಾರಸೀಕರು, ಪಹ್ಲವರು, ಕುಶಾಣರು, ಶಕರು, ಕಾಂಬೋಜರು ಮೊದಲಾದವರು. ಭರತರಂತೆಯೇ ಆರ್ಯವರ್ಗಕ್ಕೆ ಸೇರಿದವರು. ಆದುದರಿಂದ ಅವರು ಒಬ್ಬರಿಗೊಬ್ಬರು ಪರಕೀಯರೆಂದಾಗಲೀ ವಿದೇಶಿಯರೆಂದಾಗಲೀ ಅನ್ನುವುದು ಸರಿಯಾಗದು. ಹಾಗೆಯೇ ಭರತಪಂಗಡದ ಜನರು ಭಾರತವರ್ಷವನ್ನು ಪ್ರವೇಶಿಸುವ ಕಾಲದಲ್ಲಿ ಇಲ್ಲವೇ ತರುವಾಯದ ಕಾಲದಲ್ಲಿ ಪಹ್ಲವರು ಕೂಡ ಭಾರತವರ್ಷವನ್ನು

---

1. The Pallavas were immigrants from the North; or properly speaking from Konkan and Anarta. They came into South India through Kuntala or Vanavasa. Ancient India, by Sri V. D. Mahajan M. A. page 566·
2. Pallava history opens with three copper- plate grants, all in Prakrit and all dating from the time of Skandavarman the earliest when he was Yuvaraja the others after he had become king. He belonged to the Bhardvaja gotra, performed the Agnishtama, Vajapeya and Asvamedha sacrifices. A History of South India, by Sri K. A. Nilakanta Sastri M. A. page. 101.
3. ಭಾರತೀಯ ಪ್ರಾಚೀನ ಲಿಪಿಮಾಲಾ ಲಿಪಿ ಪತ್ರ ೧೩.

ಪ್ರವೇಶಿಸಿ ಅಲ್ಲಿ ನೆಲಸಿರಬಹುದು. ಅವರು ಕೂಡ ಮೂಲದಲ್ಲಿ ಭರತವರ್ಗದ ಜನಾಂಗದವರೇ ಎಂದಾದ ಮೇಲೆ ಅವರನ್ನು ಮಾತ್ರ ವಿದೇಶಿಯರೆನ್ನುವುದು ಹೇಗೆ? ಹಾಗೆ ಹೇಳುವುದಾದರೆ "ಭಾರತವರ್ಷ" ಎಂಬ ಹೆಸರಿಗೆಕಾರಣರಾದ ಭರತ ವಂಗಡದವರನ್ನು ಕೂಡ ಪರಕೀಯರು ಅಥವಾ ವಿದೇಶಿಯರು ಎನ್ನಬೇಕಾದೀತು.

ಮಹಾಭಾರತದ ಶಾಂತಿಪರ್ವದಲ್ಲಿ ಪಹ್ಲವರ ಉಲ್ಲೇಖವಿದೆ:—**"ಯವನಾಃಕಿರಾತಾ ಗಂಧಾರಾಶ್ಚೀನಾಶ್ಯಬರಬರ್ಬರಾಃ। ಶಕಾಸ್ತುಷಾರಾಃ ಕಂಕಾಶ್ಚ ಪಹ್ಲವಾಶ್ಚಾಂಧ್ರಮದ್ರಕಾಃ॥ ೬೪-೧೩ ॥** ಈ ಶ್ಲೋಕದ ಮೇಲಿಂದ ಮಹಾಭಾರತಕಾಲದ ಜನರಿಗೆ ಪಹ್ಲವರ ಪರಿಚಯ ವಿದ್ದಿತೆಂದು ಹೇಗೂ ಸಿದ್ಧವಾಗುತ್ತದೆ, ಆದರೆ ಆ ಶ್ಲೋಕದಲ್ಲಿ ಬಂದಿರುವ "ತುಷಾರಾ"ಃ= ಮಧ್ಯದೇಶನಿವಾಸಿಗಳ ಒಂದು ಪಂಗಡ; ಕಂಕಾಃ =ಕಂಕರು ಪಹ್ಲವಾಃ =ಪಲ್ಲವರು; ಅಂಧ್ರಾಃ = ಆಂಧ್ರರು ಎಂಬ ಶಬ್ದಗಳ ಅನುಕ್ರಮವು ಒಂದು ಹೊಸಊಹನೆಗೆ ಅವಕಾಶವನ್ನೀಯುತ್ತದೆ. ಅಂದರೆ ಪಹ್ಲವ ಶಬ್ದವು ಆಂಧ್ರಶಬ್ದದ ಜೊತೆಯಲ್ಲಿರುವುದರಿಂದ ಅದು ಕಾಂಚಿಯ ಪಲ್ಲವರನ್ನೇ ಸೂಚಿಸುತ್ತಿರಬಹುದು—ಎಂಬದಾಗಿದೆ.; ಹಾಗೆಯೇ ಕಂಕಾಃ ಎಂಬ ಶಬ್ದವು ಗಂಗವಾಡಿಯ ಗಂಗರನ್ನು ಇಲ್ಲವೇ ಕೊಂಗ ನಾಡಿನ ಕೊಂಗರನ್ನು ಸೂಚಿಸುತ್ತಿರಬಹುದೆಂಬುದಾಗಿದೆ. ಗಂಗವಂಶದವರು ಮೂಲದಲ್ಲಿ ಕಾಣ್ವಾಯನ ಗೋತ್ರದ ಬ್ರಾಹ್ಮಣರಾಗಿದ್ದರೆಂದು ಹಿಂದೆ ವಿವರಿಸಿದೆ. ಅವರೊಂದಿಗೆ ಅಜ್ಞಾತವಾಸದ ಕಾಲದಲ್ಲಿ ಧರ್ಮರಾಜನಾದ ಯುಧಿಷ್ಠಿರನು ಬ್ರಾಹ್ಮಣ ವೇಶವನ್ನು ಧರಿಸಿದ್ದಾಗ ಇಟ್ಟುಕೊಂಡ ಹೆಸರು ಕೂಡ "ಕಂಕ"ಆಗಿತ್ತೆಂಬುದನ್ನು ಇಲ್ಲಿ ಸ್ಮರಿಸಬೇಕು.

ಪ್ರಖ್ಯಾತ ಇತಿಹಾಸಕಾರರಿದ್ದ ವಿನ್ಸೆಂಟ್ ಸ್ಮಿತ್ ಅವರು ಮತ್ತು ಬೇರೆ ಕೆಲವು ತಮಿಳು ವಿದ್ವಾಂಸರು ಪಲ್ಲವರು ತಮಿಳುಮೂಲದವರು ಎಂಬ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ। ಮತ್ತು ಅವರ ಸಂಬಂಧವನ್ನು ಸಿಂಹಳದ ನಾಗ

1. The Pallavas constitute one of the mysteries of Indian history. The conjecture that they were Pahlavas, that is to say Parthians or Persians from the North-West, was suggeted solely by a superficial verbal similarity and may summarily dismissed as baseless. Everything known about them indicates that they were a peninsular race, tribe or clan, probably either identical or closely connected with the Kurumbas, an originally pastoral people, who play a prominent part in early Tamil tradition. The Oxford History of India. page 205.

ವಂಶದ ಅರಸರೊಂದಿಗೆ ಕೂಡಿಸಿದ್ದಾರೆ. ಆದರೆ ಪಹ್ಲವರು ಭಾರದ್ವಾಜಗೊತ್ರದ ಬ್ರಾಹ್ಮಣರಾಗಿದ್ದು ಅವರ ತಾಯಿನುಡಿಯು ಪ್ರಾಕೃತವಾಗಿತ್ತೆಂಬ ವಸ್ತುಸ್ಥಿತಿಯು ಅವರ ಆ ಅಭಿಪ್ರಾಯವನ್ನು ಅಲ್ಲಗಳೆಯುತ್ತದೆ. ಅಲ್ಲದೇ ಸಿಂಹಳದರಾಜ ವಂಶವು ಕೂಡ ಮೂಲದಲ್ಲಿ ಆರ್ಯವರ್ಗದ್ದಾಗಿತ್ತೆಂದು ತಿಳಿದು ಬರುತ್ತದೆ. ಅಂದರೆ ನಾಗಾರಾಧನೆಯು ಕೊಂಕಣದಲ್ಲಿ ನೆಲಸಿದ್ದ ಬ್ರಾಹ್ಮಣರಿಂದಾಗಿಯೇ ದಕ್ಷಿಣಭಾರತದಲ್ಲಿ ಬಳಕೆಗೆ ಬಂದಿದ್ದುದರಿಂದ ದಾಕ್ಷಿಣಾತ್ಯ ಮೂಲದ ಯಾವ ಪಂಗಡವನ್ನೂ ನಾಗಕುಲದವರೆನ್ನುವುದು ಸರಿಯಾಗದು. ಮೂಲಶಬ್ದವು "ಪಹ್ಲವ"ವಾಗಿರುತ್ತದೆಯೇ ಹೊರತು ಪಲ್ಲವ ಎಂಬುದಲ್ಲ. ಆದುದರಿಂದ ಸಂಸ್ಕೃತದಲ್ಲಿ ಪಲ್ಲವ ಅಂದರೆ ಚಿಗುರು ಎಂದಿರುವುದರಿಂದ—ಅದರ ಅರ್ಥವು ತಮಿಳಿನಲ್ಲಿ ತೊಂಡೈ ಆಗುತ್ತದೆಂದು—ಹೇಳುವುದಾಗಲೀ. "ಪಲ್ಲವಮಂಡಲ"ವೆಂದರೆ ತೊಂಡೈ ಇಲ್ಲವೇ ತೊಂಡೈನಾಡು ಎನ್ನುವುದಾಗಲೀ ಸರಿಯಾಗಲಾರದು.

ವಾಸ್ತವವಾಗಿ ಹೇಳುವುದಾದರೆ ಪಹ್ಲವರು ಬಹಳ ಪ್ರಾಚೀನಕಾಲದಲ್ಲಿಯೇ ಉತ್ತರ ಭಾರತದಲ್ಲಿ ನೆಲಸಿದ್ದ—ಬ್ರಾಹ್ಮಣರಾಗಿದ್ದರೆಂತಲೂ, ತರುವಾಯ ಅವರು ದಕ್ಷಿಣಭಾರತಕ್ಕೆ ಬಂದು ಕೊಂಕಣದಲ್ಲಿ ನೆಲಸಿದ್ದರೆಂತಲೂ, ಅಲ್ಲಿ ಅವರು ಕ್ಷಾತ್ರಧರ್ಮವನ್ನು ಕೈಗೊಂಡು ಸೈನ್ಯವನ್ನು ಸಂಗ್ರಹಿಸಿ ರಾಜ್ಯವನ್ನಾಳತೊಡಗಿದ್ದರೆಂತಲೂ. ಹೇಳಬಹುದು. ಕೊಂಕಣದ ರಾಜ್ಯವು ದೃಢವಾದ ತರುವಾಯ ಅವರು ಪೂರ್ವದಿಕ್ಕಿಗೆ ಮುಂದು ವರಿದು ಪೂರ್ವಕರಾವಳಿಯನ್ನು ತಲಪಿ ತಮಿಳು ನಾಡಿನ ಸ್ವಲ್ಪ ಭಾಗವನ್ನು ವಶಪಡಿಸಿಕೊಂಡು ಕಾಂಚೀಪುರವನ್ನು ತಮ್ಮ ಸಾಮ್ರಾಜ್ಯದ ರಾಜಧಾನಿಯನ್ನಾಗಿ ಮಾಡಿ ಆಳತೊಡಗಿದರೆನ್ನಬಹುದು. ಆ ತರುವಾಯ ಪಲ್ಲವ ವಂಶದ ಕೆಲವರು ಸೈನ್ಯದೊಂದಿಗೆ ಹಡಗುಗಳನ್ನು ಹತ್ತಿ ಸಮುದ್ರ ಮಾರ್ಗವಾಗಿ ಮುಂದುವರಿದು ಸುಮಾತ್ರ, ಜಾವ, ಬಲಿ ಮೊದಲಾದ ದ್ವೀಪಗಳನ್ನು ಜಯಿಸಿ ಅಲ್ಲಿ ತಮ್ಮ ಆಳ್ವಿಕೆಯನ್ನು ಸ್ಥಾಪಿಸಿದರು ಮತ್ತು ವೈದಿಕ ಧರ್ಮವನ್ನು ಪ್ರಚಾರಕ್ಕೆ ತಂದರು. ಅದರ ಕುರುಹುಗಳು ಅಲ್ಲಿ ಇಂದಿಗೂ ಉಳಿದು ಕೊಂಡಿವೆ.

ಕೊಂಕಣದ ಬನವಾಸಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಕೊಂಕಣವನ್ನು ಆಳಿದ ಕದಂಬ ಮಯೂರ ಶರ್ಮನು, ಕೊಂಕಣದಲ್ಲಿ ನೆಲಸಿದ್ದ ಕದಂಬ ಕುಲದ ಬ್ರಾಹ್ಮಣರ ಕುಟುಂಬಕ್ಕೆ ಸೇರಿದವನಾಗಿದ್ದ. ಕದಂಬರ ತಾಯಿ ನುಡಿಯು ಪ್ರಾಕೃತವಾಗಿತ್ತು. ಯಾಜ್ಞಿಕರೂ, ವೇದವೇದಾಂಪಾರಂಗತರೂ ಅಗರ್ಭಶ್ರೀಮಂತರೂ, ಆಗಿದ್ದ ಬ್ರಾಹ್ಮಣರ ಮನೆಯಲ್ಲಿ ಜನ್ಮತಳೆದ ಮಯೂ

ರನು, ವೇದಾಧ್ಯಯನಕ್ಕಾಗಿ ಕಾಂಚೀಪುರಕ್ಕೆ ಹೋಗಿದ್ದನು. ಮತ್ತು ಅಲ್ಲಿ ಪಲ್ಲವರು ಸ್ಥಾಪಿಸಿದ್ದ ಬ್ರಹ್ಮಪುರಿಗಳಲ್ಲಿ ಬ್ರಾಹ್ಮಣರು ನಡಿಸುತ್ತಿದ್ದ ಘಟಿಕಾಸ್ಥಾನದಲ್ಲಿ ವಿದ್ಯಾರ್ಥಿಯಾಗಿ ಸೇರಿದ್ದನು ಹಾಗೂ ಅಲ್ಲಿ ಅಶ್ವಾರೋಹೀ ಕಾವಲುಗಾರನೊಡನೆ ಉಂಟಾದ ಜಗಳದಿಂದ ಕೆರಳಿದ ಮಯೂರನು ಕಾಡನ್ನು ಸೇರಿ ಸೈನ್ಯವನ್ನು ಕಟ್ಟಿದನೆಂದೂ. ಮತ್ತು ಆ ಸೈನ್ಯದ ನೆರವಿನಿಂದ ಪಲ್ಲವರಿಗೆ ಸೇರಿದ ಒಂದೊಂದೇ ಹಳ್ಳಿಗಳನ್ನು ವಶಪಡಿಸಿಕೊಳ್ಳುತ್ತಾ ತನ್ನ ರಾಜ್ಯವನ್ನು ಕಟ್ಟಿದನೆಂದೂ ಕಥೆಯಿದೆ.

ಆ ಕಥೆಯು— ಮಯೂರ ಶರ್ಮನಿಂದ ಐದನೆಯ ತಲೆಮಾರಿನವನಾದ ಅಥವಾ ಮಯೂರ ಶರ್ಮನ ಮೊಮ್ಮಗನ ಮೊಮ್ಮಗನಾದ ಶಾಂತಿವರ್ಮನೆಂಬ ಅರಸನು ಬರೆಸಿದ ತಾಳಗುಂದದ ಸ್ತಂಭಶಾಸನವನ್ನು ಆಧರಿಸಿ ರಚಿಸಲ್ಪಟ್ಟಿದೆಯೆನ್ನಬಹುದು. ಆದರೆ ಆ ಶಾಸನದಲ್ಲಿನ-ಕೆಲವು ಶಬ್ದಗಳ ಹಾಗೂ ಪ್ರಯೋಗಗಳ ಅರ್ಥಮಾಡುವಲ್ಲಿ ವಿದ್ವಾಂಸರೊಳಗೆ ತುಂಬಾ ಮತಭೇದವಿದೆ. ಅಂದರೆ ಆ ಶಾಸನದಲ್ಲಿ ಬಂದಿರುವ "ತತ್ರ, ಪಲ್ಲವಾಶ್ವಸಂಸ್ಥೇನ ಕಲಹೇನ ತೀವ್ರೇಣರೋಷಿತ:" ಎಂಬುದನ್ನು 'ಪಲ್ಲವರ ಕುದುರೆಲಾಯದ ಕಾವಲುಗಾರನೊಂದಿಗುಂಟಾದ ಕಲಹದಿಂದ ತೀವ್ರವಾಗಿ ಸಿಟ್ಟಾದ' ಎಂಬುದಾಗಿ ಹಿಂದಿನ ವಿದ್ವಾಂಸರು ಅರ್ಥೈಸಿದುದು. ಸರಿಯಲ್ಲವೆಂದು ಶ್ರೀಮಾನ್ ಮಂಜೇಶ್ವರ ಗೋವಿಂದಪೈಗಳ ಅಭಿಪ್ರಾಯವಾಗಿತ್ತು. ಅಂದರೆ ಶ್ರೀಮಾನ್ ಪೈಯವರ ಅಭಿಪ್ರಾಯದಲ್ಲಿ 'ಅಶ್ವಸಂಸ್ಥೆ' ಅಂದರೆ ಅಶ್ವಮೇಧವೇ ಹೊರತು "ಅಶ್ವಶಾಲೆ — ಕುದುರೆಲಾಯ" ಅಲ್ಲ ಆದುದರಿಂದ — "ಪಲ್ಲವ ಅರಸನು ಜರಗಿಸಿದ ಅಶ್ವಮೇಧದಲ್ಲಿ ಭಾಗವಹಿಸಿದ ಮಯೂರ ಶರ್ಮನಿಗೂ – ಪಲ್ಲವ ಅರಸನಿಗೂ ಆದ ವಾಗ್ವಾದದಿಂದ ಸಿಟ್ಟುಗೊಂಡ" ಎಂಬ ಅರ್ಥವೇ ಸರಿಯಾದುದೆಂದು ಹೇಳಬಹುದು. ಅರ್ಥಾತ್, ಅಶ್ವಮೇಧಕಾಲದಲ್ಲಿ ಪಲ್ಲವ ಅರಸನಿಗೂ. ಯಜ್ಞದಲ್ಲಿ ಭಾಗವಹಿಸಿದ ಮಯೂರ ಶರ್ಮನಿಗೂ ವಾಗ್ವಾದ ಉಂಟಾಗಿ ಅರಸನಿಂದ ಅವಮಾನಿತನಾದ ಮಯೂರ ಶರ್ಮನು ಕೆರಳಿದನೆಂದು ಹೇಳಬಹುದು. ಅಲ್ಲದೇ ಪಲ್ಲವರು ಮೂಲದಲ್ಲಿ ಕೊಂಕಣದವರಾಗಿದ್ದುದರಿಂದ ಕದಂಬರ ಪರಿಚಯದವರು ಇಲ್ಲವೇ ಸಂಬಂಧಿಕರೂ ಆಗಿದ್ದಿರಬಹುದು. ಅಲ್ಲದೇ ಆ ಶಾಸನದಲ್ಲಿ ಬಂದಿರುವ "ಯಃ ಪ್ರಯೂಯ **ಪಲ್ಲವೇಂದ್ರಪುರೀಂ ಗುರುಣಾಸಮಂ ವೀರಶರ್ಮಣಾ। ಅಧಿಜಿಗಾಂಸುಃ ಪ್ರವಚನಂ ನಿಖಿಲಘಟಿಕಾಂ ವಿವೇಶಾಶುತರ್ಕುಕಃ ॥** ಎಂಬ ಶ್ಲೋಕದಲ್ಲಿ—ಮಯೂರ ಶರ್ಮನು ತನ್ನ ಗುರುವಾದ ವೀರ ಶರ್ಮನ

ಸಂಗಡವೇ ಎಲ್ಲ ಘಟಿಕಸ್ಥಾನಗಳನ್ನು ಪ್ರವೇಶಸಿದ್ದ ಎಂದು ಹೇಳಿರುವುದು— ತಂಬಾ ಗೊಂದಲಕ್ಕೀಡುಮಾಡುತ್ತದೆ.

ತಾಳಗುಂದದ ಶಾಸನದಲ್ಲಿ **"ಏವಮಾಗತೇ ಕದಂಬ ಕುಲೇ ಶ್ರೀಮಾನ್ ಬಭೂವ ದ್ವಿಜೋತ್ತಮಃ । ನಾಮತೋ ಮಯೂರ ಶರ್ಮೇತಿ ಶ್ರುತಶೀಲ ಶೌಚ್ಯಾದ್ಯಲಂಕೃತಃ ॥** ಅಂದರೆ ಈ ಪ್ರಕಾರವಾಗಿ ಸಾಗಿಬಂದ ಕದಂಬಕುಲದಲ್ಲಿ ಶ್ರುತಶೀಲನೂ, ಶೌಚ್ಯಾದಿಗಳಿಂದ ಅಲಂಕೃತನೂ, ಹೆಸರಿನಿಂದ ಮಯೂರ ಶರ್ಮನೂ, ಆಗಿದ್ದ ದ್ವಿಜೋತ್ತಮನು ಹುಟ್ಟಿದನು ಎಂದು ಹೇಳಿರುವುದರಿಂದ—ಕದಂಬಕುಲವು ಮೊದಲಿನಿಂದಲೂ ಇದ್ದಿತೆಂದು ಸಿದ್ಧವಾಗುತ್ತದೆ. ಮತ್ತು ಆ ಶಾಸನದಲ್ಲಿ ಉಲ್ಲೇಖಿಸಿರುವ ಪ್ರಕಾರ ಕದಂಬ ಕುಲದ ಬ್ರಾಹ್ಮಣರು ನಿತ್ಯನೈಮಿತ್ತಿಕಾಚಾರ ನಿಪ್ಣರಾಗಿದ್ದರೆಂದೂ, ಪ್ರಣವ ಪೂರ್ವಷಡ್ವಿಧ ಅಧ್ಯಯನನಿರತರಾಗಿದ್ದರೆಂದೂ. ವಿಧಿಗನುಸಾರವಾಗಿ ಅಗ್ನ್ಯಾಧಾನವನ್ನುಮಾಡಿ ಯಜ್ಞಯಾಗಗಳನ್ನು ಜರಗಿಸುವವರೂ. ಸೋಮಪಾಯಿಗಳೂ ಆಗಿದ್ದರೆಂದು ತಿಳಿದುಬರುವುದಲ್ಲದೇ **"ಅಕೃತ ಚಾತುರ್ಮಾಸ್ಯಹೋಮೇಷ್ಟಿ ಪಶುಪಾರ್ವಣ ಶ್ರಾದ್ಧ ಸೌಷ್ಟಿಕಮ್। ಅಥಿತಿಸಂಶ್ರಿತಾವಸಥ ಸವನತ್ರಯಾವಂಧ್ಯ ನೈತ್ಯಕಮ್ ॥** ಎಂದು ಹೇಳಿರುವುದರಿಂದ—ಚಾತುರ್ಮಾಸ್ಯಹೋಮ ಮತ್ತು ಇತರ ಇಷ್ಟಿಗಳನ್ನು ಸಮೃದ್ಧವಾಗಿ ಮಾಡುತ್ತಿದ್ದರೆಂತಲೂ, ನಿತ್ಯವೂ ಅತಿಥಿಗಳನ್ನು ಅಂದರೆ ಬ್ರಾಹ್ಮಣರನ್ನು ಪ್ರತ್ಯಕ್ಷತಃ ಆದರಿಸಿ ಸತ್ಕರಿಸುತ್ತಿದ್ದರೆಂತಲೂ, ಅಮಾವಾಸ್ಯೆ ಮತ್ತು ಹುಣ್ಣಿಮೆ ದಿನಗಳಲ್ಲಿ ಜರಗಿಸುವ ಪರ್ವಶ್ರಾದ್ಧಗಳಲ್ಲಿ ಪಶುಕಲ್ಪದಲ್ಲಿ ವಿಧಿಸಿರುವಂತೆ ಪಶುವಿನ ಮಾಂಸವನ್ನು ಪಿತೃಗಳಿಗೂ—ಅತಿಥಿಗಳಾದ ಬ್ರಾಹ್ಮಣರಿಗೂ ಬಡಿಸುತ್ತಿದ್ದರೆಂದೂ ತಿಳಿದು ಬರುತ್ತದೆ. ಅಂದರೆ ಕದಂಬ ವಂಶದ ಬ್ರಾಹ್ಮಣರು ಮಾಂಸಾಹಾರಿಗಳಾಗಿದ್ದರೆಂದು ಸಿದ್ಧವಾಗುತ್ತದೆ.

ಉತ್ತರಭಾರತದಿಂದ ಬಂದು ದಕ್ಷಿಣಭಾರತದಲ್ಲಿ ನೆಲಸಿದ್ದ ಬ್ರಾಹ್ಮಣರಲ್ಲಿ ಸ್ಪಷ್ಟವಾದ ಮೂರು ಪಂಗಡಗಳಿದ್ದುವು. ೧. ಸಾರಸ್ವತರು. ೨. ಕಾಶ್ಮೀರ ಮೂಲದವರಾಗಿದ್ದು ಸೌರಾಷ್ಟ್ರದಲ್ಲಿ ನೆಲಸಿ—ಲಾಕುಲೀಶಪಾಶುಪತ ಪಂಥವನ್ನು ಸ್ವೀಕರಿಸಿದ ಕಾಳಾಮುಖರು. ೩. ಕಾಶ್ಮೀರದಿಂದ ಹೋಗಿ ಉತ್ತರ ಪ್ರದೇಶದ ಅಹಿಚ್ಛತ್ರದಲ್ಲಿ ನೆಲಸಿದ ಬಹುಕಾಲ ತರುವಾಯ ಅಲ್ಲಿಂದ ದಕ್ಷಿಣ ಭಾರತಕ್ಕೆ ಬಂದ ಸಹವಾಸಿಗಳು, ಆ ಮೂರು ಪಂಗಡದ ಜನರೂ ಶೈವಮತಾನುಯಾಯಿಗಳಾಗಿದ್ದು ಶಿವನೊಂದಿಗೆ ಶಕ್ತಿಯನ್ನೂ ಪೂಜಿಸುತ್ತಿದ್ದರು. ಸಾರಸ್ವತ

ಬ್ರಾಹ್ಮಣರು ಶಿವನೊಂದಿಗೆ ನಾಗನನ್ನೂ ಪೂಜಿಸುತ್ತಿದ್ದರು. ಕಾಳಾಮುಖರಲ್ಲಿ ಹೆಚ್ಚಿನವರು ಶಿವನ ಉಗ್ರರೂಪವಾಗಿರುವ ಭೈರವನನ್ನು ಪೂಜಿಸುತಿದ್ದರು.

ಕಾಳಾಮುಖ ಬ್ರಾಹ್ಮಣರು ಯಾವಕಾಲದಲ್ಲಿ ದಕ್ಷಿಣಭಾರತಕ್ಕೆ ಬಂದರೆಂದು ನಿಖರವಾಗಿ ಹೇಳಲಾಗುವುದಿಲ್ಲ. ಆದರೂ ಅವರು ಶಕದ ನಾಲ್ಕನೇಯ ಶತಮಾನಕ್ಕಿಂತ ಮೊದಲು ಬಂದಿರಲಾರರೆಂದು ಹೇಳಬಹುದು. ಏಕೆಂದರೆ ಸೌರಾಷ್ಟ್ರದಲ್ಲಿ ಪಾಶುಪತ ಪಂಥವು ಪ್ರಾಚೀನ ಕಾಲದಿಂದ ಇದ್ದಿತಾದರೂ ಅದನ್ನು ಉತ್ತರಭಾರತದ ಎಲ್ಲಾ ಪ್ರಾಂತ್ಯಗಳಲ್ಲಿ ಪ್ರಚಾರ ಮಾಡಿದ ಲಕುಲೀಶನು ಶಕದ ಎರಡನೇಯ ಶತಮಾನದಲ್ಲಿ ಅವತರಿಸಿದ್ದನು. ನರ್ಮದಾನದಿಯ ತೀರದಲ್ಲಿನ ಭೃಗುಕಚ್ಛದ ಸಮೀಪದಲ್ಲಿರುವ ಕಾಯಾವರೋಹಣ (= ಈಗಿನ ಕಾರವಣ) ಕ್ಷೇತ್ರದಲ್ಲಿ ಶಿವನು, ಸುಡಲಿಕ್ಕೆಂದು ತಂದಿಟ್ಟ ಬ್ರಹ್ಮಚಾರಿಯ ಶವದಲ್ಲಿ ಹೊಕ್ಕುದರಿಂದ ಜೀವಿತನಾಗಿ ಎದ್ದ ಬ್ರಹ್ಮಚಾರಿಯೇ ಸಾಕ್ಷಾತ್ ಶಿವನೆಂದೂ. ಲಕುಲೀಶನೆಂದೂ ಕರೆಯಲ್ಪಟ್ಟನೆಂದು ಕಥೆಯಿದೆ.[1] ಆದುದರಿಂದ—ಕಾಶ್ಮೀರೀ ಕಾಳಾಮುಖ ಬ್ರಾಹ್ಮಣರು ಲಾಕುಲೀಶ ಪಾಶುಪತ ಪಂಥವನ್ನು ಸ್ವೀಕರಿಸಿದ ತರುವಾಯವೇ ದಕ್ಷಿಣಭಾರತಕ್ಕೆ ಬಂದಿದ್ದರೆನ್ನಬೇಕಾಗುತ್ತದೆ. ಮತ್ತು ಕರ್ಣಾಟ, ಆಂಧ್ರ, ತಮಿಳುನಾಡು, ತುಳುನಾಡು ಮೊದಲಾದೆಡೆಗಳಲ್ಲಿ ನೆಲಸಿದ್ದರೆನ್ನಬೇಕಾಗುತ್ತದೆ.

ಹಿಂದಿನ ಕರ್ಣಾಟ ರಾಜ್ಯದ ಅರಸರು ಕಾಶ್ಮೀರದ ಕಾಳಾಮುಖ ಶೈವ ಪಂಥದ ಬ್ರಾಹ್ಮಣರನ್ನು ಬಹಳವಾಗಿ ಗೌರವಿಸುತಿದ್ದರೆಂದು ಪ್ರಾಚೀನ ಶಾಸನಗಳಿಂದ ತಿಳಿದುಬರುತ್ತದೆ. ಶಕ ೧೦೧೮ ರಲ್ಲಿ ಬರೆದ ಶಿಕಾರಿಪುರ ತಾಲೂಕಿನ ೧೦೪ ನೇಯ ಶಾಸನದಲ್ಲಿ ಮುಂದಿನ ಬರೆವಣಿಗೆ ಇದೆ:—**“ವರಕಾಳಾಮುಖ ಚಕ್ರವರ್ತಿ ಮುನಿ ದಿವ್ಯಜ್ಞಾನಿ ಕಾಶ್ಮೀರದೇವರ ಸಂತಾನದೊಳಾ ತ್ರಿಳೋಚನ ಮುನೀಂದ್ರಂಗೆ”.** ಕಾಳಾಮುಖರು ಘನವಿದ್ವಾಂಸರೂ ಶೈವಾಗಮನಿಷ್ಣಾತರೂ, ಸದಾಚಾರನಿರತರೂ ಆಗಿರುತಿದ್ದರು. ಅವರಲ್ಲಿ ವಿದ್ವಾಂಸರಾಗಿರುತಿದ್ದ ಬ್ರಹ್ಮಚಾರಿಗಳು ದೇವಾಲಯಗಳಲ್ಲಿ ನೆಲಸಿ ದೇವತಾರ್ಚನೆಯೊಂದಿಗೆ ಧರ್ಮಪ್ರಸಾರವನ್ನೂ, ವಿದ್ಯಾಪ್ರಸಾರವನ್ನೂ, ಮಾಡುತಿದ್ದರು. ಅವರು

---

1. Lakulisha born in the second century of the Saka era at Kayavarohana near Broach on the Narmada was the last of the Pasupata teachers. He was considered an incarnation of Siva himself. Another parallel tradition connects Prabhasa with Pasupata cult as a very important and ancient branch of Siva worship. That the temple of Somanatha was the all India centre of the Pasupata cult; during historical times is indisputable. Somanatha the Shrine Eternal; by K. M. Munshi, page 16.

ವಾಸಮಾಡುತಿದ್ದ ದೇವಾಲಯುಗಳನ್ನು ಸ್ಥಾನವೆಂದೂ, ದೇವಾಲಯುಗಳಲ್ಲಿ ನೆಲಸಿರುತಿದ್ದ ಬ್ರಹ್ಮಚಾರಿಗಳನ್ನು ಸ್ಥಾನಪತಿ ಇಲ್ಲವೇ ಸ್ಥಾನಿಕರೆಂದೂ ಅನ್ನುತಿದ್ದರು.[1] ಅವರು ಆಯಾ ದೇವಾಲಯುಗಳಲ್ಲಿನ ದೇವತೆಗಳಿಗೆ ನಿವೇದಿಸಿದ ಅನ್ನವನ್ನುಂಡು ಜೀವಿಸುತಿದ್ದರು. ಆಗ ದೇವಾಲಯುಗಳೇ ವಿದ್ಯಾಲಯುಗಳೂ ಆಗಿರುತಿದ್ದುದರಿಂದ ಆ ಬ್ರಹ್ಮಚಾರಿಗಳು ಪೂಜಾದಿ ನಿತ್ಯಕರ್ಮಗಳಿಂದ ನಿವೃತ್ತರಾದ ತರುವಾಯು ಬಿಡು ಸಮಯುದಲ್ಲಿ ವಿದ್ಯಾರ್ಥಿಗಳಿಗೆ ಪಾಠಗಳನ್ನು ಹೇಳಿಕೊಡುತಿದ್ದರು. ದೇವಾಲಯುಗಳಲ್ಲಿ ವಾಸವಾಗಿದ್ದು ವಿದ್ಯಾದಾನ ಮಾಡುತಿದ್ದ ಕಾಳಾಮುಖ ಬ್ರಹ್ಮಚಾರಿಗಳನ್ನು ಬಹುವಚನದಲ್ಲಿ "ಗುರುವ"(ಸಂಸ್ಕೃತ) ಅನ್ನುತಿದ್ದರು. ಕಾಲಕ್ರಮೇಣ ಆ "ಗುರುವ = ಗುರುಗಳು" ಎಂಬ ಶಬ್ದವು ಕನ್ನಡವಲ್ಲಿ ಗೊರವ ಎಂಬ ರೂಪತಾಳಿತು ಮತ್ತು ತನ್ನ ಮೂಲದ ಅರ್ಥವನ್ನು ಕಳೆದುಕೊಂಡಿತು.

ಗುರುವರ ವಿದ್ವತ್ತನ್ನು, ಅವರ ಕಟ್ಟು ನಿಟ್ಟಾದ ಆಚರಣೆ ಮತ್ತು ಶಿಸ್ತುಗಳನ್ನು ಹಾಗೂ ಧರ್ಮ ಮತ್ತು ವಿದ್ಯೆಗಳ ಪ್ರಚಾರದಲ್ಲಿ ಅವರಿಗಿರುವ ಆಸಕ್ತಿಗಳನ್ನು ಕಂಡು ಮೆಚ್ಚಿದ ಕರ್ಣಾಟದ ಅರಸರು ಗೊರವರ ದೇವಾಲಯುಗಳ ಹಾಗೂ ಆ ದೇವಾಲಯುಗಳಲ್ಲಿ ಕಲಿಯುವ ವಿದಾರ್ಥಿಗಳ–ಅನ್ನ ಬಟ್ಟೆಗಳ ವೆಚ್ಚವು ಸುಸೂತ್ರವಾಗಿ ಸಾಗುವಂತೆ ಭೂಮಿ ಮೊದಲಾದುವುಗಳನ್ನು ದಾನಮಾಡಿ ಬರೆಸಿದ ಹಲವು ಶಾಸನಗಳಿವೆ. ಕರ್ಣಾಟದಲ್ಲಿದ್ದ ಹೆಚ್ಚಿನ ದೇವಾಲಯುಗಳನ್ನು ಕಟ್ಟಿಸಿದವರು. ಗೊರವರೇ ಎಂಬುದು ಕೂಡ ಕೆಲವು ಶಾಸನಗಳಿಂದ ತಿಳಿದುಬರುತ್ತದೆ.[2]

ಪಾಶುಪತರಾದ ಆ ಕಾಳಾಮುಖರು ಶೈವರಲ್ಲಿ ಕಡು ಶೈವರಾಗಿದ್ದರು. ಅವರು ತಮ್ಮ ಆರಾಧ್ಯದೇವನಾದ ಶಿವನ ಸಂಬಂಧದಲ್ಲಿ ಯಾರೊಬ್ಬನಾದರೂ ಲಘುವಾದ ಮಾತುಗಳನ್ನಾಡುವುದನ್ನು ಎಷ್ಟುಮಾತ್ರಕ್ಕೂ ಸಹಿಸುತ್ತಿರಲಿಲ್ಲ. ಅವರ ಆರಾಧ್ಯದೇವನಾಗಿದ್ದ ಶಿವನು ಭೋಗಿಶಿವನಾಗಿರದೇ ವಿರಾಗಿಶಿವನಾಗಿದ್ದ ಶಿವನಂತಾಗುವುದು, ಇಲ್ಲವೇ ಶಿವೈಕ್ಯನಾಗುವುದು ಅವರ ಜೀವನದ ಗುರಿಯಾಗಿದ್ದಿತು. ಕಾಳಾಮುಖರಲ್ಲಿ ಸಂನ್ಯಾಸ ಸ್ವೀಕರಿಸಿದ ಕೆಲವರು, ಭಿಕ್ಷಾವೃತ್ತಿಯಿಂದ ಜೀವಿಸುತ್ತಿದ್ದರು. ಅವರು ಭಸ್ಮಧಾರಿಗಳಾಗಿದ್ದು, ತಲೆಯಲ್ಲಿ, ಕೊರಳಲ್ಲಿ ಮತ್ತು ಕೈಯ ಗಂಟುಗಳಲ್ಲಿ ರುದ್ರಾಕ್ಷಿಯ ಮಾಲೆಗಳನ್ನು ಧರಿಸುತ್ತಿದ್ದರು. ಮಣ್ಣಿನ ಕಪಾಲಗಳಲ್ಲಿ ಅಂದರೆ ಒಡೆದ ಮಣ್ಣಿನ ಮಡಕೆಯ ಓಡುಗಳಲ್ಲಿ ಭಿಕ್ಷೆಯನ್ನು ಪಡೆಯುತಿದ್ದರು. ಹೀಗಾಗಿ ಕೆಲವರು ಅವರನ್ನು ಕಪಾಲಿಗಳು

1. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ ೧೪೦.
2. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ 138-39.

ಎಂದುದೂ ಇದೆ. ಶೈವಮತವನ್ನು ಖಂಡಿಸುತ್ತಿದ್ದ ವೈಷ್ಣವಮತಾನುಯಾಯಿಗಳು ಕಾಪಾಲಿಗಳಾದ ಕಾಳಾಮುಖ ಸಂನ್ಯಾಸಿಗಳ ಹಾಗೂ ವಾಮಮಾರ್ಗಿಗಳಾಗಿದ್ದ ಕಾಪಾಲಿಕರ ನಡುವಣ ಭೇದವನ್ನು ತಿಳಿಯಲಾರದೇ–ಕಾಳಾಮುಖರನ್ನೇ ಕಾಪಾಲಿಕರೆಂದೂ, ಭೈರವೋಪಾಸಕರೆಂದೂ, ಶಕ್ತಿಪೂಜಕರಾದ ವಾಮಮಾರ್ಗಿಗಳೆಂದೂ, ಪುಂಡಕುಡಿಕರೆಂದೂ ವರ್ಣಿಸಿದ್ದಾರೆ. ವೈಷ್ಣವಮತಾನುಯಾಯಿಗಳು ಕಾಳಾಮುಖರ ಕುರಿತಾಗಿ ಮಾಡಿದ ಅಂಥ ತಪ್ಪು ವರ್ಣನೆಯನ್ನು ಸತ್ಯವೆಂದು ನಂಬಿದ ಆಧುನಿಕ ವಿದ್ವಾಂಸರೂ ಇದ್ದಾರೆ. ಉದಾಹರಣೆಗಾಗಿ ಶ್ರೀಮಾನ್ ಕೆ. ಎ. ನೀಲಕಂಠಶಾಸ್ತ್ರೀ ಎಂ. ಎ. ಅವರು ತಾನು ಬರೆದ ದಕ್ಷಿಣಭಾರತದ ಇತಿಹಾಸ ಎಂಬ ಪುಸ್ತಕದ ಪುಟ ೪೨೩ ರಲ್ಲಿ ಕೊಟ್ಟ ವಿವರವನ್ನು—ಇಲ್ಲಿ ಕೊಡಬಹುದು:—
"Smearing the body with ashes from a burning ghat eating food in a skull and keeping a pot of wine, were some of the common practices of the Kalamukhas and some of these sects, if not all, were addicted to the worship of female principle, which often degenerated into licentious orgies.

ಕರ್ಣಾಟರಾಜ್ಯದಲ್ಲಿ ದೊರೆಯುವ ಶಾಸನಗಳಲ್ಲಿ ಕರ್ಣಾಟದ ದೊರೆಗಳು ಕಾಳಾಮುಖರ ಕುರಿತಾಗಿ ಬಳಸಿದ ಗೌರವಯುಕ್ತವಾದ ಮಾತುಗಳು—ಶ್ರೀ ನೀಲಕಂಠ ಶಾಸ್ತ್ರಿಗಳು ತನ್ನ ಪುಸ್ತಕದಲ್ಲಿ ಕೊಟ್ಟಿರುವ ವಿವರಗಳನ್ನು ನಿರಾಧಾರವಾದವುಗಳೆಂದು ಮತ್ತು ಸಂಪೂರ್ಣ ತಪ್ಪೆಂದು ಸಿದ್ಧಪಡಿಸುತ್ತವೆ. ಶಕ ೧೦೬೫ರಲ್ಲಿ ಬರೆಯಲಾದ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ೯೯ನೆಯ ಶಾಸನದಲ್ಲಿ ಮುಂದಿನ ಬರವಣಿಗೆ ಇದೆ:—**"ಕಾಳಾಮುಖರೋಳ್—ಸಾರಸ್ವತ ಮಹೋದಯ ಶ್ರೀಮತ್ ಸೋಮೇಶ್ವರ ಪಂಡಿತ ದೇವರಂ—ಸಾರಸ್ವತ ಮಹೋದಯನ ಕಿಂಕರಂ ಈ ಶಿವಧರ್ಮಶಾಸನಮಂ ಅಭಿನವಮಾಗಿರೆ ಮಲ್ಲಿಕಾರ್ಜುನಾರ್ಯಂ ಬರೆದಂ"** ಇದರಲ್ಲಿ ಕಾಳಾಮುಖ ವರ್ಗದ ಸೋಮೇಶ್ವರ ಪಂಡಿತನನ್ನು "ದೇವರು" ಎಂದೂ "ಸಾರಸ್ವತ ಮಹೋದಯ" ಎಂದರೆ ಘನವಿದ್ವಾಂಸನೆಂದೂ ಉಲ್ಲೇಖಿಸಿದೆ. ಆ ಸೋಮೇಶ್ವರ ಪಂಡಿತನ ಹೆಸರಿನಲ್ಲಿ ಇನ್ನೂ ಹಲವು ಶಾಸನಗಳಿವೆ. ತ್ರಿಲೋಚನ ಪಂಡಿತನ ಕುರಿತಾದ ಶಾಸನವು ಹಿಂದೆ ಬಂದಿದೆ.[1] ಕಾಳಾಮುಖರು, ಶ್ರೀ ನೀಲಕಂಠ

1. ಅವರ ಕುರಿತಾದ ಹೆಚ್ಚಿನ ವಿವರವನ್ನು "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಎಂಬ ಗ್ರಂಥದಲ್ಲಿ ಓದಬಹುದು.

ಶಾಸ್ತ್ರಿಯವರು ವರ್ಣಿಸಿದಂಥ ಹೊಲಸು ಜನರಾಗಿದ್ದುದಾದರೆ ಕರ್ಣಾಟದ ರಾಜರು ಆ ಕಾಳಾಮುಖರನ್ನು ಎಷ್ಟು ಮಾತ್ರಕ್ಕೂ ಗೌರವಿಸುತ್ತಿರಲಿಲ್ಲ. ಕಾಳಾ ಮುಖರ ಮಹೋನ್ನತವಾದ ಆಚರಣೆ, ವಿದ್ವತ್ತು, ಅವರ ಕಾರ್ಯಕ್ರಮ, ಮೊದಲಾದವುಗಳ ಪಕ್ಷಪಾತರಹಿತವಾದ ವರ್ಣನೆಯು ಇತ್ತೀಚೆಗೆ–ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಮೂಲಕ ಪ್ರಕಟಿಸಲ್ಪಟ್ಟ ಹಾಗೂ ಡಾಕ್ಟರ್ ಚಿದಾನಂದ ಮೂರ್ತಿ ಎಮ್. ಎ. ಪಿಎಚ್. ಡಿ. ಅವರಿಂದ ಬರೆಯಲ್ಪಟ್ಟ "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಎಂಬ ಗ್ರಂಥದಲ್ಲಿ ದೊರೆಯುತ್ತದೆ. ಅಂದರೆ ಆ ಗ್ರಂಥವು ಕಾಳಾಮುಖರ ಕುರಿತು ಶ್ರೀ ನೀಲಕಂಠ ಶಾಸ್ತ್ರಿಗಳ ವರ್ಣನೆಗೆ ಸರಿ ವಿರುದ್ಧವಾದ ಒಂದು ಚಿತ್ರವನ್ನು ನಮ್ಮ ಮುಂದಿರಿಸುತ್ತದೆ.

ಕಾಳಾಮುಖ ಬ್ರಹ್ಮಚಾರಿಗಳು ಧರ್ಮನಿಷ್ಠರೂ, ಸದಾಚಾರಿಗಳೂ. ಸಂಯಮಿಗಳೂ ಆಗಿರುತ್ತಿದ್ದರು. ಅವರು ಸ್ತ್ರೀಯರನ್ನು ಎಂದಿಗೂ ಕಾಮುಕ ಭಾವನೆಯಿಂದ ನೋಡುತ್ತಿರಲಿಲ್ಲ. ಬ್ರಹ್ಮಚರ್ಯದ ಪಾಲನೆಗೆ ಹಾನಿಕರವಾದ ಮೀನು, ಮಾಂಸ, ನೀರುಳ್ಳಿ, ಬೆಳ್ಳುಳ್ಳಿ, ಬಪ್ಪಂಗಾಯಿ ಮೊದಲಾದವುಗಳನ್ನು ಎಷ್ಟು ಮಾತ್ರಕ್ಕೂ ಸೇವಿಸುತಿರಲಿಲ್ಲ. ಸಂಪೂರ್ಣ ಶಾಕಾಹಾರಿಗಳಾಗಿದ್ದು ಕಠಿಣವಾದ ವ್ರತೋಪವಾಸಗಳನ್ನಾಚರಿಸುತ್ತಿದ್ದರು. ಹೀಗಾಗಿ ಕೆಲವರು ಅವರನ್ನು ನೈಷ್ಠಿಕ ಬ್ರಹ್ಮಚಾರಿಗಳೆಂದುದುಂಟು. ಸಾರಸ್ವತ ಬ್ರಾಹ್ಮಣರು ಅಂಥ ಬ್ರಹ್ಮಚಾರಿಗಳನ್ನು "ಶಿವರಾಗಿ" ಎನ್ನುತಿದ್ದರು ಕೊಂಕಣಿಯಲ್ಲಿ "ಶಿವರಾಗಿ" ಎಂಬುದರ ಅರ್ಥವು "ಶಿವನ ಏಕಾಂತಿಕ ಭಕ್ತ" ಎಂದು ಮಾತ್ರವಲ್ಲದೇ ಮೀನು. ನೀರುಳ್ಳಿ, ಬೆಳ್ಳುಳ್ಳಿ, ಬಸಳೆ, ಬಪ್ಪಂಗಾಯಿ, ಬದನೆ, ಮೊದಲಾದವುಗಳನ್ನು ತಿನ್ನದವನು ಅಥವಾ ಶಾಕಾಹಾರಿ ಎಂದು ಕೂಡ ಇದೆ.

ಹಿಂದೆ ದಕ್ಷಿಣ ಭಾರತದಲ್ಲಿನ ಎಲ್ಲ ಅರಸರು ಶೈವಮತಾನುಯಾಯಿಗಳಾಗಿದ್ದುದರಿಂದ ಅವರು ಶೈವಮತ ಪ್ರತಿಪಾದಕರಾಗಿದ್ದ ಕಾಳಾಮುಖರನ್ನು ಮತ್ತು ಸಾರಸ್ವತ ಬ್ರಾಹ್ಮಣರನ್ನು ಬಹಳವಾಗಿ ಗೌರವಿಸುತಿದ್ದರು. ಆಗಿನ ಅರಸರು ಬೌದ್ಧರನ್ನು ಮತ್ತು ಜೈನರನ್ನು ಕೂಡ ಮರ್ಯಾದೆಯಿಂದ ಕಾಣುತಿದ್ದರಾದರೂ ಆ ಮತಗಳು ರಾಜಾಶ್ರಯವನ್ನು ಪಡೆದಿರಲಿಲ್ಲ. ಅಂದರೆ ಅರಸರ ಆಸ್ಥಾನಗಳಲ್ಲಿ ಅಧಿಕಾರ ಸ್ಥಾನಗಳನ್ನು ಪಡೆದಿರಲಿಲ್ಲ. ಶಕದ ಹನ್ನೊಂದನೆಯ ಶತಮಾನದಲ್ಲಿ ಶ್ರೀ ಮದ್ರಾಮಾನುಜಾಚಾರ್ಯರು ವಿಶಿಷ್ಟಾದ್ವೈತ ಸಿದ್ಧಾಂತದೊಂದಿಗೆ ಶ್ರೀ ವೈಷ್ಣವ ಮತವನ್ನು ಪ್ರಚಾರಮಾಡತೊಡಗಿದಾದರೂ, ಆ ಮತವು ತಮಿಳು ನಾಡಿನಲ್ಲಾಗಲೀ. ಆಂಧ್ರದಲ್ಲಾಗಲೀ, ಒಡನೆಯೇ ಅರಸುಗಳಿಂದ ಮಾನ್ಯತೆಯನ್ನು

ಪಡೆದಿರಲಿಲ್ಲ. ಪ್ರತಿಯಾಗಿ ಶ್ರೀ ವೈಷ್ಣವರು ಅರಸರ ವಿರೋಧವನ್ನೇ ಎದುರಾಯಿಸಬೇಕಾಯಿತು. ಏಕೆಂದರೆ ಶ್ರೀ ರಾಮಾನುಜಾಚಾರ್ಯರು ಹಾಗೂ ಅವರ ಅನುಯಾಯಿಗಳು ಶೈವ ಮತವನ್ನು ತೀಕ್ಷ್ಣ ರೀತಿಯಿಂದ ಖಂಡಿಸುತ್ತಿದ್ದರಲ್ಲದೇ ಶೈವರಲ್ಲಿ ಕಡು ಶೈವರಾಗಿದ್ದ ಕಾಳಾಮುಖರನ್ನು ಕಟುವಾಗಿ ಟೀಕಿಸುತ್ತಿದ್ದರು. ಹೀಗಾಗಿ ಶೈವ ಮತಾನುಯಾಯಿಗಳು ಕೂಡ ವೈಷ್ಣವರ ಪ್ರಚಾರವನ್ನು ಅಷ್ಟೇ ತೀವ್ರವಾಗಿ ವಿರೋಧಿಸುತ್ತಿದ್ದರು.

ಶ್ರೀ ವೈಷ್ಣವರು ಬರೆದ ಗ್ರಂಥಗಳಲ್ಲಿ ಶ್ರೀ ರಾಮಾನುಜಾಚಾರ್ಯರ ವಿರೋಧಿಗಳು ಅವರನ್ನು ತುಂಬಾ ಹಿಂಸೆಗೊಳಪಡಿಸಿದ್ದರೆಂದು ವರ್ಣಿಸಿದ್ದರೂ ಅವುಗಳಲ್ಲಿ ಸತ್ಯಾಂಶವು ಬಹಳ ಕಡಿಮೆಯೆನ್ನಬಹುದು. ವಾಸ್ತವವಾಗಿ ಶ್ರೀ ರಾಮಾನುಜಾಚಾರ್ಯರು ಶೈವಮತವನ್ನು ಅತ್ಯಂತ ತೀಕ್ಷ್ಣವಾಗಿ ಖಂಡಿಸುತ್ತಿದ್ದುದರಿಂದ ಶೈವ ಮತಾನುಯಾಯಿಗಳಾಗಿದ್ದ ಚೋಳರಾಜ ವಂಶೀಯರೂ, ಅಧಿಕಾಂಶ ಪ್ರಜೆಗಳೂ ತುಂಬಾ ಕ್ರುದ್ಧರಾಗಿದ್ದರು. ಅದರಿಂದ ಪ್ರಾಣಕ್ಕೆ ಅಪಾಯವಿರಬಹುದೆಂದು ಎಣಿಸಿದ ಶ್ರೀ ರಾಮಾನುಜಾಚಾರ್ಯರು ತನ್ನ ಕೆಲವಂದಿ ಅನುಯಾಯಿಗಳೊಂದಿಗೆ ಚೋಳ ರಾಜ್ಯದಿಂದ ತಲೆಮರಸಿ ಪಲಾಯನ ಮಾಡಿದರು ಮತ್ತು ಮೈಸೂರು ರಾಜ್ಯದಲ್ಲಿ ಆಶ್ರಯ ಪಡೆದು ಬಹಳ ವರ್ಷಗಳ ತನಕ ಅಲ್ಲಿಯೇ ನೆಲಸಿದರು. ಶ್ರೀ ಕೆ. ಎ. ನೀಲಕಂಠ ಶಾಸ್ತ್ರಿ ಎಂ. ಎ. ಅವರು ಆ ವಿಷಯವನ್ನು ಬೇರೊಂದು ರೀತಿಯಲ್ಲಿ ಹೇಳಿದ್ದಾರೆ.[1]

ಶ್ರೀ ವೈಷ್ಣವರು ಮಾಡುತ್ತಿದ್ದ ಶೈವಮತದ ಖಂಡನೆ, ಶಿವನಿಂದೆ ಹಾಗೂ ಕಾಳಾಮುಖರ ಕುರಿತಾದ ವೈಯಕ್ತಿಕ–ನಿಂದೆ–ಇವುಗಳೇ ವೀರಶೈವ ಮತದ ಸ್ಥಾಪನೆಗೆ ಕಾರಣಗಳಾದವೆಂದರೆ ತಪ್ಪಾಗದು. ಮತ್ತು ಕೆಲವು ಸಾರಸ್ವತ ಬ್ರಾಹ್ಮಣರಲ್ಲಿ ಕಾಳಾಮುಖ ಬ್ರಾಹ್ಮಣರಿಂದಲೇ ವೀರಶೈವ ಮತವು ಸ್ಥಾಪಿಸಲ್ಪಟ್ಟಿದ್ದಿತೆಂಬ ಐತಿಹ್ಯವು ಬಲವಾಗಿ ಬೇರು ಬಿಟ್ಟಿದೆ. ಅಂದರೆ ಮೊತ್ತಮೊದಲು ಆಂಧ್ರ ಮತ್ತು ತಮಿಳುನಾಡುಗಳಲ್ಲಿನ ಕೆಲವು ಕಾಳಾಮುಖ ಬ್ರಹ್ಮಚಾರಿಗಳು ಒಟ್ಟುಗೂಡಿ ಶ್ರೀ ವೈಷ್ಣವರು ಮಾಡುತ್ತಿದ್ದ ಶಿವನಿಂದೆಯನ್ನು ಪ್ರತಿರೋಧಿಸುವ

---

1. The bholas were ardent Saivas, and evidently did not view the growing influence of Ramanuja with favour. We may not trust the legends of the persecution to which Ramanuja and his followers were subjected, in all their details, but the fact remains that he had to withdraw into Mysore about 1098 and could not return to Srirangam till 1122. A History of South India, page 430.

ಉದ್ದೇಶದಿಂದ ಶಿವನಲ್ಲಿ ಅಚಲವಾದ ಭಕ್ತಿಯುಳ್ಳ ಹಲವು ಹಿಂದೂ ಯುವಕರನ್ನು ಸಂಘಟಿಸಿದರು ಮತ್ತು ಆ ಸಂಘದ ಮೂಲಕ ವೈಷ್ಣವ ಮತವನ್ನೂ ವೈಷ್ಣವರನ್ನೂ ಖಂಡಿಸುವಂತೆ ಮಾಡಿದರು. ಹಾಗೂ ಆ ಕಾಳಾಮುಖರು ಸಂಘಟಿಸಿದ ಶೈವರ ಹೊಸ ಪಂಗಡವು ಮುಂದೆ ವೀರಶೈವ ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಪಡೆಯಿತು. ಆ ವೀರಶೈವ ಮತವು ವ್ಯವಸ್ಥಿತವಾಗಿ ರೂಪುಗೊಂಡ ತರುವಾಯ ಕೆಲವು ಗೊರವರ ಕುಟುಂಬಗಳ ಹೊರತಾಗಿ ಉಳಿದ ಸಕಲ ಕಾಳಾಮುಖರು ವೀರಶೈವರಲ್ಲಿ ಸೇರಿದರು. ಮತ್ತು ಅವರದಾಗಿದ್ದ ಹಲವು ದೇವಾಲಯಗಳು ಹಾಗೂ ಮಠಗಳು ವೀರಶೈವರ ವಶವಾದವು. ಹಾಗಾದುದರಿಂದಲೇ ಇಂದು ಗೊರವರ ಹೊರತಾಗಿ ಕಾಶ್ಮೀರ ಮೂಲದ ಒಬ್ಬನೇ ಒಬ್ಬ ಕಾಳಾಮುಖ ಬ್ರಾಹ್ಮಣನಾದರೂ ದಕ್ಷಿಣ ಭಾರತದಲ್ಲಿ ಕಾಣಬರುವುದಿಲ್ಲವೆಂಬುದೇ ಸಾರಸ್ವತ ಬ್ರಾಹ್ಮಣರ ಕೆಲವು ಪ್ರಾಚೀನ ಮನೆತನಗಳಲ್ಲಿ ಹಿಂದಿನಿಂದ ಸಾಗಿಬಂದ ಐತಿಹ್ಯವಾಗಿರುತ್ತದೆ.

ಅದು ಬರಿಯ ಐತಿಹ್ಯವಾಗಿರದೇ ವಾಸ್ತವಿಕ ಸತ್ಯವಾಗಿದೆಯೆಂಬುದಕ್ಕೆ ಕೆಲವು ಪ್ರಮಾಣಗಳೂ ಇವೆ. ಮೊದಲನೆಯದಾಗಿ ವೀರಶೈವರಲ್ಲಿ ಕಾಳಾಮುಖರ ಮನೆತನಗಳಿದ್ದವು ಮತ್ತು ಈಗಲೂ ಇರಬಹುದು. ಎರಡನೆಯದಾಗಿ, ಹಿಂದೆ ಕಾಳಾಮುಖರದಾಗಿದ್ದವೆಂದು ಶಾಸನಗಳಿಂದ ತಿಳಿದುಬರುವ ಹಲವು ದೇವಾಲಯಗಳು ಮತ್ತು ಮಠಗಳು ಇಂದು ವೀರಶೈವರ ವಶದಲ್ಲಿವೆ. ಮೂರನೆಯದಾಗಿ ಉತ್ತರ ಭಾರತದ ಹಿಮಾಲಯದಲ್ಲಿ ಕಾಶ್ಮೀರೀ ಬ್ರಾಹ್ಮಣರ ಮನೆತನಗಳದ್ದಾಗಿದ್ದ "ಕೇದಾರನಾಥ" "ಗುಪ್ತಕಾಶೀ" ಮತ್ತು "ಉಖೀಮಠ" ಎಂಬ ಮೂರು ಪುಣ್ಯ ಕ್ಷೇತ್ರಗಳೂ, ಕಾಶಿಯಲ್ಲೀಗ ಜಂಗಮವಾಡೀ ಎಂದು ಕರೆಯಲ್ಪಡುವ ಹಾಗೂ ಕಾಶ್ಮೀರೀ ಬ್ರಾಹ್ಮಣರದಾಗಿದ್ದ ಹವೇಲಿಯೂ ಇಂದು ವೀರಶೈವರ ವಶದಲ್ಲಿವೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಉದ್ಯಾವರ ಶಂಭುಕಲ್ಲು ಭೈರವನ ಗುಡಿಯ ಬಳಿಯಲ್ಲಿರುವ ಶಕದ ಐದನೆಯ ಶತಮಾನದ ಎರಡು ಶಿಲಾ ಶಾಸನಗಳಲ್ಲಿ ಗೊರವರ ಉಲ್ಲೇಖವಿರುವುದರಿಂದಲೂ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೂರಾರು ಶಿವಾಲಯಗಳು, ನೂರಾರು ಶಕ್ತ್ಯಾಲಯಗಳು, ಹಲವು ಭೈರವಾಲಯಗಳು ಹಾಗೂ ನೂರಾರು ಇತರ ದೇವಾಲಯಗಳು ಇರುವುದರಿಂದಲೂ ಆ ದೇವಾಲಯಗಳಲ್ಲಿ ಅರ್ಚಕರಾಗಿದ್ದ ಗೊರವರ ಸಾವಿರಾರು ಕುಟುಂಬಗಳು ಕೂಡ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇರಲೇಬೇಕೆಂದು ಹೇಳಬೇಕಾಗುತ್ತದೆ. ಏಕೆಂದರೆ ಶಕದ ಹದಿನಾಲ್ಕನೆಯ ಶತಮಾನಕ್ಕಿಂತ ಮೊದಲು ಇಡೀ ದಕ್ಷಿಣ ಭಾರತದಲ್ಲಿದ್ದ ಸಕಲ

ದೇವಾಲಯಗಳಲ್ಲಿಯೂ ಕಾಳಾಮುಖ ಬ್ರಾಹ್ಮಣ ವರ್ಗದ ಗೊರವರೇ ಅರ್ಚಕರಾಗಿದ್ದರೆಂದು ತಿಳಿದುಬರುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮೊದಲಿದ್ದ ದೇವಾಲಯಗಳಲ್ಲಿ ಹೆಚ್ಚಿನವುಗಳಲ್ಲಿ "ಗೊರವ" ಎಂಬ ಸೊಲ್ಲೇ ಎಲ್ಲಿಯೂ ಕೇಳಬರುವುದಿಲ್ಲ. ಹಾಗಾದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗೊರವರ ಕುಟುಂಬಗಳು ಇರಲಿಲ್ಲವೇ? ಇದ್ದುವಾದರೆ ಎಲ್ಲಿಗೆ ಹೋದವು.?

ಆ ಪ್ರಶ್ನೆಗಳಿಗೆ ಉತ್ತರವಾಗಿ—ಗೊರವರ ಕುಟುಂಬಗಳು ಮೊದಲೂ ಇದ್ದವು ಮತ್ತು ಇಂದೂ ಇವೆಯೆಂದು ಹೇಳುವುದೇ ಸಮರ್ಪಕವಾಗಿದೆ. ಅಂದರೆ ದೇವಾಲಯಗಳಲ್ಲಿ ವಾಸವಾಗಿದ್ದು ದೇವರ ಅರ್ಚನೆ ಮಾಡುವುದರೊಂದಿಗೆ ಧರ್ಮಪ್ರಸಾರವನ್ನು ಮತ್ತು ವಿದ್ಯಾಪ್ರಸಾರವನ್ನು ಮಾಡುತಿದ್ದ ಕಾಳಾಮುಖ ಬ್ರಹ್ಮಚಾರಿಗಳನ್ನು "ಸ್ಥಾನಿಕ"ರೆನ್ನುತಿದ್ದರೆಂದು ಹಿಂದೆ ಹೇಳಿದೆ. ಆದುದರಿಂದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ದೇವಾಲಯಗಳಲ್ಲಿ ಅರ್ಚಕರಾಗಿದ್ದವರನ್ನು ಅಲ್ಲಿನ ಜನರು "ಗೊರವರು" ಅನ್ನುವ ಬದಲಿಗೆ "ಸ್ಥಾನಿಕರು" ಅನ್ನುತಿದ್ದರೆಂದು ತಿಳಿಯಬೇಕಾಗಿದೆ. ಏಕೆಂದರೆ "ಸ್ಥಾನಿಕ" ಎಂಬ ಶಬ್ದವು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಹಳ ಹಿಂದಿನಿಂದ ಬಳಕೆಯಲ್ಲಿದೆ. ಅರ್ಥಾತ್ ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಸಕಲ ದೇವಾಲಯಗಳಲ್ಲಿ ಹಿಂದಿನ ಕಾಲದಿಂದಲೂ ಯಾರು ಅರ್ಚಕರಾಗಿದ್ದರೋ ಮತ್ತು ಅಧಿಕಾಂಶ ದೇವಾಲಯಗಳ ಮೇಲಿನ ಸಂಪೂರ್ಣ ಅಧಿಕಾರವು ಯಾರಿಗೆ ಸೇರಿದ್ದಿತೋ, ಮತ್ತು ಇಂದಿಗೂ ಹಲವು ದೇವಾಲಯಗಳ ಹಾಗೂ ಭೂಮಿಗಳ ಮೇಲಣ ಅಧಿಕಾರವು ಯಾರಿಗೆ ಸೇರಿದೆಯೋ ಅಂಥ ಸ್ಥಾನಿಕ ಬ್ರಾಹ್ಮಣರೇ ಹಿಂದಿನ ಕಾಳಾಮುಖ ಬ್ರಾಹ್ಮಣ ಗೊರವರ ಸಂತತಿಯವರೆಂದು ಹೇಳಿದರೆ ತಪ್ಪಾಗಲಾರದು.

ಗೋವದಲ್ಲಿ ಸಾರಸ್ವತ ಬ್ರಾಹ್ಮಣರಿಗೆ ಸೇರಿದ ಸಾವಿರಾರು ದೇವಾಲಯಗಳಲ್ಲಿ ಗೊರವರೇ ಅರ್ಚಕರಾಗಿದ್ದರು. ಮತ್ತು ಈಗಲೂ ಒಂದೆರಡು ದೇವಾಲಯಗಳಲ್ಲಿ ಗೊರವರು ಅರ್ಚಕರಾಗಿದ್ದಾರಲ್ಲದೇ ಇತರ ದೇವಾಲಯಗಳಲ್ಲಿಯೂ ಅವರೇ ಕೆಲಸಗಾರರಾಗಿದ್ದಾರೆ. ಕರ್ಣಾಟ ರಾಜ್ಯದಲ್ಲಿ ನೆಲಸಿದ್ದ ಗೊರವರು ತಮ್ಮ ತಾಯಿನುಡಿಯಾಗಿದ್ದ ಪ್ರಾಕೃತವನ್ನು ಮರೆತು ಈಗ ಕನ್ನಡ ನುಡಿಯುತ್ತಾರೆ. ಗೋವದ ಗೊರವರು ಕೊಂಕಣಿ ನುಡಿಯುತ್ತಾರೆ. ಮತ್ತು ತುಳು ನಾಡಿನಲ್ಲಿ ಕುಂಬಳೆಯಿಂದ ಕಲ್ಯಾಣಪುರದ ವರೆಗೆ ನೆಲಸಿದ ಸ್ಥಾನಿಕ ಬ್ರಾಹ್ಮಣರು ತುಳು ನುಡಿಯುತ್ತಾರೆ. ಕಲ್ಯಾಣಪುರದಿಂದ ಉತ್ತರಕ್ಕೆ ಕೋಟ, ಕೋಟೇಶ್ವರ ಮೊದಲಾದೆಡೆಗಳಲ್ಲಿ ನೆಲಸಿರುವವರು ಕನ್ನಡ ನುಡಿಯುತ್ತಾರೆ.

ದಿವಂಗತ ರಾವ್ ಬಹಾದುರ್ ಶ್ರೀಪಾದ ಸುಬ್ರಾಯ ತಾಲಮಕೀ ಬಿ. ಎ. ಎಲ್. ಎಲ್‌ಬಿ. ಅವರು ಬರೆದ "Sarasvat Families" ಎಂಬ ಪುಸ್ತಕದಲ್ಲಿ ಕಾಶ್ಮೀರ ಮೂಲದ ಸಹವಾಸಿ ಬ್ರಾಹ್ಮಣರ ವಿಷಯವು ಚರ್ಚಿಸಲ್ಪಟ್ಟಿದೆ. ಅವರ ಅಭಿಪ್ರಾಯದಲ್ಲಿ ಉತ್ತರಭಾರತದ ಅಹಿಚ್ಛತ್ರ ಎಂಬಲ್ಲಿಂದ ಅಂದರೆ ಈಗಿನ ಅಲಹಾಬಾದ ಜಿಲ್ಲೆಗೆ ಸೇರಿದ ರಾಮನಗರ ಎಂಬಲ್ಲಿಂದ ಬಂದು ಕರ್ಣಾಟ ರಾಜ್ಯದಲ್ಲಿ ನೆಲಸಿದ್ದ ಸಹವಾಸಿ ಬ್ರಾಹ್ಮಣರು ತಮ್ಮ ಪೂರ್ವಜರ ಶೈವಮತವನ್ನು ತೊರೆದು ವೈಷ್ಣವ ಮತವನ್ನು ಸ್ವೀಕರಿಸಿ ಕರ್ಣಾಟ ದೇಶಸ್ಥ ಬ್ರಾಹ್ಮಣರೆನಿಸಿಕೊಂಡರೆಂದಿದೆ. ಅವರು ಮಹಾರಾಷ್ಟ್ರದಲ್ಲಿಯೂ ಇದ್ದಾರೆ. ಆದುದರಿಂದ ಅವರಲ್ಲಿ ಕನ್ನಡ ಮತ್ತು ಮರಾಠಿ ಎರಡು ಭಾಷೆಗಳು ಬಳಸಲ್ಪಡುತ್ತವೆ.

ಉತ್ತರ ಭಾರತದಿಂದ ಬಂದು ದಕ್ಷಿಣ ಭಾರತದಲ್ಲಿ ನೆಲಸಿದ್ದ ಸಕಲ ಸಾರಸ್ವತ ಬ್ರಾಹ್ಮಣರ ಕುಲದೇವತೆಗಳು ಗೋವದಲ್ಲಿ ಮಾತ್ರ ಇವೆ. ಆದುದರಿಂದ ಸಾರಸ್ವತ ಬ್ರಾಹ್ಮಣರು ಮೊತ್ತಮೊದಲು ಬಂದು ಗೋವದಲ್ಲಿ ನೆಲಸಿದ್ದರೆಂದು ಹೇಳಬೇಕಾಗುತ್ತದೆ. ತರುವಾಯ ಬಂದವರು ಕೂಡ ಗೋವವನ್ನೇ ತಮ್ಮ ಕೇಂದ್ರವನ್ನಾಗಿ ಆರಿಸಿರಬಹುದು. ಹೀಗಾಗಿ ಗೋವ ಮೂಲದ ಸಾರಸ್ವತ ಬ್ರಾಹ್ಮಣರು ಯಾವ ಪ್ರದೇಶದಲ್ಲಿಯೇ ಇರಲಿ ಒಂದಲ್ಲ ಒಂದು ದಿನ ಗೋವಕ್ಕೆ ಹೋಗಿ ತಮ್ಮ ಕುಲದೇವರ ದರ್ಶನವನ್ನು ಪಡೆಯಬೇಕೆಂಬ ಹಂಬಲವುಳ್ಳವರಾಗಿರುತ್ತಾರೆ.

ಶಿವ, ಶಕ್ತಿ ಮತ್ತು ನಾಗ ಇವುಗಳು ಸಾರಸ್ವತ ಬ್ರಾಹ್ಮಣರ ಮೂಲ ಕುಲದೇವತೆಗಳಾಗಿವೆ. ಮತ್ತು ಸಾರಸ್ವತ ಬ್ರಾಹ್ಮಣರಲ್ಲಿನ ಅಧಿಕಾಂಶ ಜನರು ಮಂಗೇಶ ಮತ್ತು ಶಾಂತಾದುರ್ಗಾ ಎಂಬ ದೇವತೆಗಳ ಭಜಕರಾಗಿದ್ದಾರೆ. "ಮಂಗೇಶ" ಎಂದರೆ ಸಾಮಾನ್ಯವಾಗಿ ಒಬ್ಬನೇ ದೇವ ಎಂಬುದು ಹೆಚ್ಚಿನವರ ಭಾವನೆಯಾಗಿದೆ. ಆದರೆ ವಾಸ್ತವವಾಗಿ ಮಂಗೇಶ ಎಂಬ ದೇವನು ಶಿವಲಿಂಗ ಮತ್ತು ನಾಗ ಎಂಬ ಎರಡು ದೇವತೆಗಳ ಸಂಯೋಗದಿಂದ ರೂಪುಗೊಂಡ ದೇವನಾಗಿದ್ದಾನೆ. ಆದುದರಿಂದ "ಮಂಗೇಶ" ಎಂಬ ಹೆಸರು "ಮಹಾನಾಗೇಶ" ಎಂಬ ಮೂಲರೂಪದ ರೂಪಾಂತರವಾಗಿರಬಹುದಾಗಿದೆ. ಅಂದರೆ ಮಹಾಶೇಷನ ಹೆಡೆಯ ಆಶ್ರಯದಲ್ಲಿ ಶಿವಲಿಂಗವಿರುವುದರಿಂದಲೇ "ಮಂಗೇಶ"[1] ಎಂಬ ಹೆಸರು ಹುಟ್ಟಿದೆಯೆಂಬುದರಲ್ಲಿ ಏನೂ ಸಂದೇಹವಿಲ್ಲ.

---

1. ಮಂಗೇಶದೇವರಿಗೆ ಬ್ರಹ್ಮಲಿಂಗೇಶ್ವರ ಎಂಬ ಹೆಸರು ಕೂಡ ಇದೆ.

ಗೋವವು ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಅರಸರ ಆಳ್ವಿಕೆಗೆ ಒಳಪಟ್ಟುದರಿಂದ ಅಲ್ಲಿ ಬೇರೆ ಬೇರೆ ಅರಸರು ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ದೇವತೆಗಳ ಆರಾಧನೆಯನ್ನು ಬಳಕೆಗೆ ತಂದಿದ್ದರು. ಹೀಗಾಗಿ ಗೋವದಲ್ಲಿ ಶಿವ, ಶಕ್ತಿ, ವಿಷ್ಣು, ಸೂರ್ಯ, ಗಣಪತಿ, ಬ್ರಹ್ಮ, ಸರಸ್ವತೀ, ಮಹಾಲಕ್ಷ್ಮೀ, ಭೈರವ, ವೀರಭದ್ರ, ಬೇತಾಳ, ಸಪ್ತಮಾತೃಕೆಯರು, ಮೊದಲಾದ ದೇವತೆಗಳ ನಾನಾ ರೂಪಗಳು, ಮತ್ತು ಹೆಸರುಗಳು ಬಳಕೆಯಲ್ಲಿವೆ. ಗೋವದ ಮಂಗೇಶ ದೇವಾಲಯದಲ್ಲಿ ದೇವತಾ ಪಂಚಾಯತನ ಅಂದರೆ—ಶಿವ, ಶಕ್ತಿ, ವಿಷ್ಣು, ಸೂರ್ಯ, ಮತ್ತು ಗಣಪತಿ ಎಂಬ ಐದು ದೇವತೆಗಳಿವೆ. ಮಂಗೇಶ ದೇವರ ಗರ್ಭಗುಡಿಯ ಎದುರಿನಲ್ಲಿ ನಂದಿಯ ಮಂಟಪವಿದೆ. ಮತ್ತು ಆ ಮಂಟಪದ ಬಾಗಿಲಿನ ಬಲಗಡೆಯಲ್ಲಿ ಗಣಪತಿಯ ಮತ್ತು ಎಡಗಡೆಯಲ್ಲಿ ಭಗವತಿಯ ವಿಗ್ರಹಗಳಿವೆ. ಗರ್ಭಗುಡಿಯ ಸುತ್ತಿನಲ್ಲಿ ಲಕ್ಷ್ಮೀನಾರಾಯಣನ ಮತ್ತು ಸೂರ್ಯನಾರಾಯಣನ ಗುಡಿಗಳಿವೆ. ಆದುದರಿಂದ ಗೋವದ ಸಾರಸ್ವತ ಬ್ರಾಹ್ಮಣರಲ್ಲಿ ಶೈವ, ಶಾಕ್ತ, ವೈಷ್ಣವ, ಸೌರ ಮತ್ತು ಗಾಣಪತ್ಯ ಎಂಬ ಪಂಚ ಮತಗಳಿಗೆ ಮಾನ್ಯತೆ ಇತ್ತೆಂದು ಇಲ್ಲವೇ ಸಾರಸ್ವತ ಬ್ರಾಹ್ಮಣರ ಸಮುದಾಯ ದಲ್ಲಿ ಆ ಪಂಚಮತದ ಅನುಯಾಯಿಗಳು ಒಳಗೂಡಿದ್ದರೆಂದು ಹೇಳಬೇಕಾಗು ತ್ತದೆ.

ಹೀಗಾಗಿ ಗೋವದಲ್ಲಿ ಪ್ರತಿಯೊಂದು ದೇವತೆಯ ಬೇರೆ ಬೇರೆ ಹೆಸರಿನ ಹಲವು ದೇವಾಲಯಗಳಿವೆ. ಅಂದರೆ ಗೋವದಲ್ಲಿ ಶಿವನು—ಸೋಮನಾಥ, ಚಂದ್ರನಾಥ, ಭೂತನಾಥ, ಗೋಪನಾಥ, ಮಲ್ಲಿನಾಥ, ರಾಮನಾಥ, ರವಳನಾಥ, ಸಪ್ತನಾಥ, ಸಿದ್ಧನಾಥ, ಮಹಾದೇವ, ಈಶ್ವರ, ಕಾಂತೇಶ್ವರ, ಗವಗೇಶ್ವರ, ಚಂದ್ರೇಶ್ವರ, ಬಂಕೇಶ್ವರ, ಸಪ್ತಕೋಟೇಶ್ವರ, ಭೈರವ, ಮಾರ್ತಾಂಡಭೈರವ, ಮಲ್ಲಾರಿ ಮುಂತಾದ ಹಲವು ಹೆಸರುಗಳನ್ನು ಪಡೆದಿದ್ದಾನೆ. ಶಕ್ತಿಯು—ಅಂಬಿಕಾ, ಅಷ್ಟದುರ್ಗಾ, ಕಾಮಾಕ್ಷೀ, ಚಾಮುಂಡಾ, ಚಾಂದೇಶ್ವರೀ, ದುರ್ಗಾ, ಭವಾನಿ, ಪಾರ್ವತಿ, ಮಾಯಾ, ಮಹಾಮಾಯಾ, ಶಾಂತಾದುರ್ಗಾ, ಶಾಂತೇರಿ, ಮಹಿಷಾಸುರಮರ್ದಿನಿ, ಭಗವತಿ, ಸತೀ, ಮುಂತಾದ ಹಲವು ಹೆಸರುಗಳನ್ನು ಪಡೆದಿದ್ದಾಳೆ. ಲಕ್ಷ್ಮಿಯು—ಗಜಲಕ್ಷ್ಮೀ, ಮಹಾಲಕ್ಷ್ಮೀ, ಮ್ಹಾಲಕುಮ್, ಮ್ಹಾಳಸೀ ಎಂಬ ಹೆಸರುಗಳನ್ನು ಪಡೆದಿದ್ದಾಳೆ. ಮತ್ತು ಮ್ಹಾಳಸೀ ಶಬ್ದವು ಮ್ಹಾಳಸಾ (=ಮಹಾಲಸಾ) ಎಂದಾಗಿ ಶಕ್ತಿಯೆಂದು ಎಣಿಸಲ್ಪಟ್ಟಿದ್ದಾಳೆ. ವಿಷ್ಣುವು–ನಾರಾಯಣ, ಲಕ್ಷ್ಮೀನಾರಾಯಣ, ನರಸಿಂಹ, ದಾಮೋದರ, ದೇವಕೀ

ಕೃಷ್ಣ ಮೊದಲಾದ ಹೆಸರುಗಳನ್ನು ಪಡೆದಿದ್ದಾನೆ. ಗಣಪತಿಯು—ಗಣೇಶ, ವಿನಾಯಕ ಮತ್ತು ವಿಘ್ನೇಶ್ವರನಾಗಿದ್ದಾನೆ. ಸೂರ್ಯನ ಒಂದು ಪ್ರತಿಮೆಯು ಮಂಗೇಶ ದೇವಾಲಯದಲ್ಲಿಯೂ, ಮತ್ತೊಂದು ಕುಡಣೆಂ ಎಂಬ ಗ್ರಾಮದಲ್ಲಿಯೂ ಇದೆ. ಕುಡಣೆಂ ಗ್ರಾಮದಲ್ಲಿರುವ ಸೂರ್ಯನ ಪ್ರತಿಮೆಯು ಶಕದ ಏಳನೆಯ ಶತಮಾನದಾಗಿದ್ದು ಅದರ ರಚನೆಯು ಶಕಜನರ ಶಿಲ್ಪ ಪದ್ಧತಿಯನ್ನು ಅನುಸರಿಸಿದೆ. ಬ್ರಹ್ಮನ ಪ್ರತಿಮೆಯು ಪರ್ಸೇ ಗ್ರಾಮದಲ್ಲಿದೆ. ಇವುಗಳಲ್ಲದೇ ಬೇತಾಳ, ಬಟುಕೇಶ್ವರ, ಕ್ಷೇತ್ರಪಾಲ ಮುಂತಾದ ಹೆಸರುಗಳಿರುವ ಇನ್ನೂ ಹಲವು ಪರಿವಾರ ದೇವತೆಗಳಿವೆ.

ಶಕದ ೫೦೨ರಿಂದ ೬೭೨ರ ವರೆಗೆ ಗೋವವು ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿತ್ತು. ಕಾರ್ತಿಕೇಯನು ಅಥವಾ ಷಣ್ಮುಖನು ಚಾಲುಕ್ಯರ ರಕ್ಷಕ ದೇವನಾಗಿದ್ದನು. ಹೀಗಾಗಿ ಅವರು ಸಪ್ತಮಾತೃಕೆಯರನ್ನು ಆರಾಧಿಸುತಿದ್ದರು. ಆದುದರಿಂದ ಅವರು ಗೋವದಲ್ಲಿ ಕಾರ್ತಿಕೇಯನೊಂದಿಗೆ ಸಪ್ತಮಾತೃಕೆಯರ, ಆರಾಧನೆಯನ್ನೂ. ಗಣಪತಿ, ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ದೇವಾಲಯಗಳನ್ನೂ ಕಟ್ಟಿಸಿದ್ದರೆಂದು ತಿಳಿದುಬರುತ್ತದೆ. ಮುಂದೆ ಕದಂಬರಾಜ ಶಿವಚಿತ್ತನು ಸಪ್ತಕೋಟೀಶ್ವರನ ದೇವಾಲಯವನ್ನು ಕಟ್ಟಿಸಿದನೆಂದೂ ಅವನ ರಾಣಿ ಕಮಲಾದೇವಿಯು, ಕಮಲಾನಾರಾಯಣನ ಮತ್ತು ಮಹಾಲಕ್ಷ್ಮಿಯ ದೇವಾಲಯುಗಳನ್ನು ಕಟ್ಟಿಸಿದಳೆಂದೂ ತಿಳಿದುಬರುತ್ತದೆ. ಗೋವವನ್ನು ಆಳುತಿದ್ದ ಶಿಲಾಹಾರ ಅರಸರು ಕೂಡ ಮಹಾಲಕ್ಷ್ಮಿಯ ಹಾಗೂ ಬೇರೆ ಹಲವು ದೇವಾಲಯುಗಳನ್ನು ಕಟ್ಟಿಸಿದ್ದರೆಂದು ತಿಳಿದುಬರುತ್ತದೆ.[1] ಸಪ್ತಮಾತೃಕೆಯರೆಂದರೆ—೧. ಬ್ರಾಹ್ಮೀ; ೨. ಮಾಹೇಶ್ವರೀ; ೩. ಕೌಮಾರೀ; ೪. ವೈಷ್ಣವೀ; ೫. ವಾರಾಹೀ; ೬. ಮಾಹೇಂದ್ರೀ (=ಇಂದ್ರಾಣಿ) ೭. ಚಾಮುಂಡಾ ಎಂಬ ಏಳು ದೇವಿಯರಾಗಿದ್ದಾರೆ.

ದಕ್ಷಿಣ ಭಾರತದಲ್ಲಿ ನೆಲಸಿರುವ ಗೋವಮೂಲದ ಸಾರಸ್ವತ ಬ್ರಾಹ್ಮಣರನ್ನು "ಗೌಡ ಸಾರಸ್ವತ" ಎಂಬ ಅಭಿಧಾನದಿಂದ ಕರೆಯುವುದು ಎಷ್ಟು ಮಾತ್ರಕ್ಕೂ ಸರಿಯಾದುದಲ್ಲ. ಏಕೆಂದರೆ ಮೂಲದಲ್ಲಿ ಸಾರಸ್ವತರಾಗಿದ್ದ ಬ್ರಾಹ್ಮಣರೇ ಪಂಜಾಬದಿಂದ ಹೊರಟು ಬೇರೆ ಬೇರೆ ದೇಶಗಳಲ್ಲಿ ನೆಲಸಿದುದರಿಂದ ಆಯಾ ದೇಶಗಳ ಹೆಸರಿನಿಂದ ಕರೆಯಲ್ಪಟ್ಟಿದ್ದರು. ಅಂದರೆ, ಕಾಶ್ಮೀರೀ. ಕಾನ್ಯಕುಬ್ಜ, ಸರಯೂಪಾರೀಣ, ಮೈಥಿಲ, ಉತ್ಕಲ, ಗೌಡ, ಗುರ್ಜರ, ಮಹಾ

1. Ancient Shrines of Goa. Government Publication.

ರಾಷ್ಟ್ರ, ಕೊಂಕಣ ಮೊದಲಾದ ಹೆಸರುಗಳು ಆಯಾ ಪ್ರದೇಶಗಳ ಮೇಲಿಂದ ಬಂದವುಗಳೇ ಹೊರತು ಬೇರೆ ಬೇರೆ ಜಾತಿಗಳೆಂಬ ಕಾರಣದಿಂದಲ್ಲ. ಅಲ್ಲದೇ ಗೋವಮೂಲದ ಸಾರಸ್ವತ ಬ್ರಾಹ್ಮಣರ ಸಮೂಹದಲ್ಲಿ ಹಿಂದೆ ಹೇಳಿದ ಎಲ್ಲ ಪ್ರಾದೇಶಿಕ ಪಂಗಡಗಳೂ ಸೇರಿ ಒಂದಾಗಿರುವಾಗ ಆ ಹಲವು ಪಂಗಡಗಳಲ್ಲಿ ಒಂದಾದ "ಗೌಡ" ಎಂಬುದನ್ನು ಮಾತ್ರ "ಸಾರಸ್ವತ" ಶಬ್ದದೊಂದಿಗೆ ಕೂಡಿಸಿ "ಗೌಡ ಸಾರಸ್ವತ" ಎನ್ನುವುದು ಸರ್ವಥಾ ಸರಿಯಲ್ಲ ಮತ್ತು ಅದಕ್ಕೆ ಅರ್ಥವೂ ಇಲ್ಲ.

ಬ್ರಾಹ್ಮಣರಲ್ಲಿ--ಸಾರಸ್ವತ, ಕಾನ್ಯಕುಬ್ಜ, ಮೈಥಿಲ ಮತ್ತು ಗೌಡ ಎಂಬ ಐದು ವಿಧಗಳನ್ನು "ಪಂಚಗೌಡ ಎಂದೂ, ಗುರ್ಜರ, ಮಹಾರಾಷ್ಟ್ರ, ಕರ್ಣಾಟ, ಆಂಧ್ರ ಮತ್ತು ದ್ರಾವಿಡ ಎಂಬ ಐದು ವಿಧಗಳನ್ನು "ಪಂಚದ್ರಾವಿಡ" ಎಂದೂ ವರ್ಗೀಕರಿಸಲಾಗಿದೆ. ಅದರ ಆಧಾರದಿಂದ ಸಾರಸ್ವತ ಬ್ರಾಹ್ಮಣರು ಗೌಡ ವರ್ಗಕ್ಕೆ ಸೇರಿದವರು ಆದುದರಿಂದ 'ಗೌಡಸಾರಸ್ವತ' ಎನ್ನುವುದು ಸರಿಯಾದು ದೆಂದು ವಾದಿಸುವುದಾದರೆ ಆ ವರ್ಗೀಕರಣವು ಮೂಲದಲ್ಲಿಯೇ ಸರಿಯಾದು ದಲ್ಲವೆನ್ನಬೇಕಾಗಿದೆ. ಏಕೆಂದರೆ ಗೌಡ ಎಂಬ ಶಬ್ದವಾಗಲೀ ದ್ರಾವಿಡ ಎಂಬ ಶಬ್ದವಾಗಲಿ ಯಾವುದೊಂದು ಜನಾಂಗದ ಹೆಸರಾಗಿರದೇ—ಪ್ರಾದೇಶಿಕ ಪಂಗಡ ಗಳ ಹೆಸರಾಗಿದೆ. ಅಲ್ಲದೇ ಆ ವರ್ಗೀಕರಣವಾಗುವ ಮೊದಲೇ ಉತ್ತರ ಭಾರತದಲ್ಲಿ ಬೇರೆ ಹಲವು ಹೆಸರಿನ ಪಂಗಡಗಳು ತಲೆಯೆತ್ತಿದ್ದವು. ಅಂದರೆ ನಾಗರ, ಔದೀಚ್ಯ, ಸರಯೂಪಾರೀಣ, ಕಾಶ್ಮೀರಿ, ಬಂಗಾಲದ ಕುಲೀನ, ಶಾಕ ದ್ವೀಪೀಯ, ವಂಗ ಮೊದಲಾದ ಪಂಗಡಗಳು ಆ ವರ್ಗೀಕರಣವು ಬಳಕೆಗೆ ಬರುವ ಮೊದಲೇ ಇದ್ದವು. ಗುರ್ಜರ ಮತ್ತು ಮಹಾರಾಷ್ಟ್ರೀಯರನ್ನು ಪಂಚದ್ರಾವಿಡರಲ್ಲಿ ಸೇರಿಸುವುದೂ ಸರಿಯಲ್ಲ. ಅರ್ಥಾತ್ ಗೌಡ ಎಂಬ ಶಬ್ದವು ಒಂದು ಪಂಗಡದ ಹೆಸರಾಗಿರುವಂತೆಯೇ ದ್ರಾವಿಡ ಎಂಬುದು ಕೂಡ ಒಂದು ಪಂಗಡದ ಹೆಸರಾಗಿದ್ದು ತಮಿಳರನ್ನು ಮಾತ್ರ ಸೂಚಿಸುತ್ತದೆಂದು—ಅದರೊಂದಿಗೆ ಬರುವ ಕರ್ಣಾಟ ಮತ್ತು ಆಂಧ್ರ ಅಥವಾ ತ್ರೈಲಿಂಗ ಎಂಬ ಶಬ್ದಗಳು ಸಿದ್ಧ ಪಡಿಸುತ್ತವೆ.

ಬ್ರಿಟಿಷ್ ಪಾದ್ರಿ ಡಾಕ್ಟರ್ ರಾಬರ್ಟ್ ಕಾಲ್ಡವೆಲ್ಲರು ದ್ರಾವಿಡ ಭಾಷೆಗಳ ವ್ಯಾಕರಣವನ್ನು ರಚಿಸಿ ಪ್ರಕಟಗೊಳಿಸಿದ ತರುವಾಯದಿಂದ, ಪರದೇಶೀಯ ವಿದ್ವಾಂಸರು ದಕ್ಷಿಣ ಭಾರತದ ಮೂಲನಿವಾಸಿಗಳನ್ನು "ದ್ರಾವಿಡ" ಎಂದು ಕರೆಯತೊಡಗಿದ್ದಾರೆ. ಅವರನ್ನನುಸರಿಸಿ ಭಾರತೀಯ ವಿದ್ವಾಂಸರು ಕೂಡ

ದಾಕ್ಷಿಣಾತ್ಯ ಜನರನ್ನು ದ್ರಾವಿಡ ಅನ್ನುತಿದ್ದಾರೆ. ಆದರೆ ಆ ಪ್ರಯೋಗವು ಸರ್ವವಿಧದಿಂದಲೂ ತಪ್ಪಾದುದೆಂದು ಮುಂದಿನ ವಿವರಣೆಯಿಂದ ತಿಳಿದು ಕೊಳ್ಳಬಹುದು. "ದ್ರಾವಿಡ" ಇಲ್ಲವೇ "ದ್ರವಿಡ" ಎಂಬ ಶಬ್ದವು ಮೂಲದಲ್ಲಿ ಯಾವ ಭಾಷೆಯದೆಂದು ಅಥವಾ ಮೊತ್ತ ಮೊದಲು ಅದು ಯಾವ ಅರ್ಥದಲ್ಲಿ ಬಳಸಲ್ಪಟ್ಟಿದ್ದಿತೆಂಬುದನ್ನು ನಿರ್ಧರಿಸುವುದು ತುಂಬಾ ಕಠಿನ ಕೆಲಸವಾಗಿದ್ದರೂ, ಸಂಸ್ಕೃತ ಸಾಹಿತ್ಯದಲ್ಲಿ ದ್ರವಿಡ ಶಬ್ದವು ಪ್ರಾಚೀನ ಕಾಲದಿಂದಲೂ ತಮಿಳರಿಗಾಗಿಯೇ ಬಳಸಲ್ಪಟ್ಟಿದೆ. ಅಂದರೆ ಕರ್ಣಾಟ, ಆಂಧ್ರ, ಸತ್ಯಪುತ್ರ, ಕೇರಳಪುತ್ರ ಮೊದಲಾದ ಪಂಗಡಗಳು "ದ್ರವಿಡ" ಶಬ್ದದ ಅರ್ಥದಲ್ಲಿ ಅಡಕವಾಗಿಲ್ಲ. ಅಥವಾ ಒಳಗೂಡುವುದಿಲ್ಲ. ಮತ್ತು ದ್ರವಿಡ ಎಂಬ ಶಬ್ದವೇ ದ್ರಮಿಡ, ದ್ರಮಿಳ, ದಮಿಳ ಮುಂತಾಗಿ ರೂಪಾಂತರ ಹೊಂದುತ್ತ ತಮಿಳವಾಗಿ ಮಾರ್ಪಟ್ಟಿದ್ದಿತೆಂದು ಸಕಲ ವಿದ್ವಾಂಸರೂ ಒಪ್ಪುತ್ತಾರೆ. ಹಾಗಿರುವಾಗ "ದ್ರಾವಿಡ" ಎಂಬ ಶಬ್ದದ ಅಳವಿನೊಳಗೆ-ಇತರ ದಾಕ್ಷಿಣಾತ್ಯ ಪಂಗಡಗಳು ಸೇರುವುದಾದರೂ ಹೇಗೆಂದು ಅರ್ಥವಾಗುವುದಿಲ್ಲ. ಅರ್ಥಾತ್ ದ್ರಾವಿಡರೆಂದರೆ ತಮಿಳರೇ ಹೊರತು ಇತರ ದಾಕ್ಷಿಣಾತ್ಯರಲ್ಲ.

ಪಾದ್ರಿ ಕಾಲ್ಡುವೆಲ್ಲರು ದ್ರಾವಿಡ ಎಂಬ ಶಬ್ದವನ್ನು ದಾಕ್ಷಿಣಾತ್ಯ ಮೂಲದ, ಕನ್ನಡ, ಮಲೆಯಾಳ, ತುಳು, ತೆಲುಗು, ತಮಿಳು, ಬಡಗ, ಕೊಡಗು ಮೊದಲಾದ ಹದಿನೆಂಟು ಭಾಷೆಗಳನ್ನಾಡುವ ಜನರಿಗಾಗಿ-ಒಂದೇ ಜನಾಂಗವೆಂಬ ಅರ್ಥದಲ್ಲಿ ಬಳಸಿದ್ದಾರೆ. ಮತ್ತು ತಮಿಳು ಭಾಷೆಯು ಇತರ ಭಾಷೆಗಳಿಗಿಂತ ಪ್ರಾಚೀನವಾದುದೆಂದು ಸಾಧಿಸಲು ಹೆಣಗಾಡಿದ್ದಾರೆ. ಏಕೆಂದರೆ ತಮಿಳು ಇತರ ಭಾಷೆಗಳಿಗಿಂತ ಪ್ರಾಚೀನವಾದುದೆಂದು ಸಿದ್ಧವಾದರೆ-ಇತರ ಪಂಗಡಗಳು ಮತ್ತು ಅವುಗಳ ಜನರು ನುಡಿಯುವ ಭಾಷೆಗಳು ತಮಿಳರಿಂದ ಹುಟ್ಟಿದವುಗಳೆಂದು ಹೇಳಿದಂತಾಗುತ್ತದೆ. ಆದರೆ ವಸ್ತುಸ್ಥಿತಿಯು ಪಾದ್ರಿಕಾಲ್ಡುವೆಲ್ಲರ ಹಾಗೂ ತರುವಾಯದ ಬ್ರಿಟಿಷ್ ವಿದ್ವಾಂಸರ ಕಲ್ಪನೆಗಳಿಗೆ ವಿರುದ್ಧವಾಗಿದೆ. ಅಂದರೆ ಕನ್ನಡ ಭಾಷೆಯಲ್ಲಿ ತಮಿಳಿನಲ್ಲಿ ಇಲ್ಲದ ಹಲವು ಮೂಲ ಶಬ್ದಗಳಿರುವುದು ಮಾತ್ರವಲ್ಲದೇ ತಮಿಳಿನಲ್ಲಿರುವ ಹಲವು ಶಬ್ದಗಳ ಪ್ರಾಚೀನ ಹಾಗೂ ಶುದ್ಧ ರೂಪಗಳು ಇವೆ ಆದುದರಿಂದ ತಮಿಳಿಗಿಂತಲೂ, ಕನ್ನಡವು ಪ್ರಾಚೀನವಾದುದೆಂದು ಒಪ್ಪಬೇಕಾಗುತ್ತದೆ.[1] ಆದರೆ ಕನ್ನಡದಲ್ಲಿ ಇಲ್ಲದ ಹಲವು ಶಬ್ದಗಳು

---

1. ದ್ರಾವಿಡ ಭಾಷಾ ವಿಜ್ಞಾನ–ಪುಟ ೧೧೧ ಮತ್ತು ೧೧೨.

ತಮಿಳಿನಲ್ಲಿವೆಯಾದುದರಿಂದ–ಅವೆರಡು ಭಾಷೆಗಳಿಗಿಂತ ಪ್ರಾಚೀನವಾದ ಒಂದು ಭಾಷೆ ಇದ್ದಿತೆಂದು ಒಪ್ಪಲೇ ಬೇಕಾಗುತ್ತದೆ. ಮತ್ತು ಆ ಭಾಷೆಯೇ ದಾಕ್ಷಿಣಾತ್ಯರಾಡುವ ಎಲ್ಲ ಭಾಷೆಗಳ ಮೂಲವಾಗಿದ್ದಿತೆನ್ನಬೇಕಾಗುತ್ತದೆ. ಆದುದರಿಂದ ಆ ಮೂಲ ಭಾಷೆಯು ಯಾವುದೆಂದು ಕಂಡು ಹಿಡಿಯುವ ತನಕ-ದಕ್ಷಿಣ ಭಾರತದ ಮೂಲನಿವಾಸಿಗಳನ್ನು ದಾಕ್ಷಿಣಾತ್ಯರೆಂದು ಕರೆಯುವುದು ಉಚಿತವಾಗಿದೆಯೇ ಹೊರತು ದ್ರಾವಿಡರೆಂದಲ್ಲ.

ಹೀಗಾಗಿ ಪಂಜಾಬದಿಂದ ಬಂದು ಗೋವದಲ್ಲಿ ನೆಲಸಿದುದರಿಂದ ಗೋವ ದವರಾಗಿರುವ ಬ್ರಾಹ್ಮಣರನ್ನು "ಸಾರಸ್ವತ ಬ್ರಾಹ್ಮಣ"ರೆಂದು ಕರೆಯುವುದೇ ಸರಿಯಾದುದೂ ಯಥಾರ್ಥವಾದುವೂ ಆಗಿರುತ್ತದೆ. ಕೆಲವು ಅನ್ಯವರ್ಗದ ಜನರು ಸಾರಸ್ವತರ ಎರಡು ಪಂಗಡಗಳಲ್ಲಿ ಒಂದನ್ನು ಕೊಂಕಣಿಗಳು ಇಲ್ಲವೇ ಗೌಡ ಸಾರಸ್ವತರೆಂದೂ, ಇನ್ನೊಂದು ಪಂಗಡದವರನ್ನು ಶೆಣೈಗಳು ಇಲ್ಲವೇ ಸಾರಸ್ವತರೆಂದೂ ಕರೆಯುವುದಿದೆ. ಆದರೆ ಅವರಿಗೆ ಕೊಂಕಣಿ ನುಡಿಯುವ ಜನರಲ್ಲಿ ಬ್ರಾಹ್ಮಣರಾರು ಬ್ರಾಹ್ಮಣೇತರರಾರು ಎಂಬುದು ಕೂಡ ಗೊತ್ತಿರುವು ದಿಲ್ಲ. ಹೀಗಾಗಿ ಗೌಡಸಾರಸ್ವತರೆಂದರೆ ಎಲ್ಲರೂ ಮೀನು ತಿನ್ನುವವರೇ ಎಂದು ಅವರ ಭಾವನೆಯಾಗಿದೆ. ಆದರೆ ಅವರ ಆ ಭಾವನೆಯು ನಿರಾಧಾರವಾದು ದೆಂದು ಹೇಳಲೇಬೇಕಾಗಿದೆ. ಏಕೆಂದರೆ ಆ ಜನರು ಗೌಡಸಾರಸ್ವತರೆಂದು ಅಥವಾ ಕೊಂಕಣಿಗಳು ಅನ್ನುವ ಜಾತಿಯಲ್ಲಿ ವೈದಿಕರು ಮತ್ತು ಗೃಹಸ್ಥರು ಎಂಬ ಎರಡು ವಿಭಾಗಗಳಿವೆ. ವೈದಿಕರೆಂದರೆ, ವೇದಾಧ್ಯಯನ ಮಾಡಿದ ಹಾಗೂ ಕರ್ಮಕಾಂಡವನ್ನು ಕಲಿತು ವೈದಿಕವೃತ್ತಿಯನ್ನು ಮಾಡುವ, ಅಥವಾ ಪುರೋಹಿತರಾಗುವ, ಭಟ್ಟರು, ಆಚಾರ್ಯರು, ತಂತ್ರಿಗಳು, ಅವಧಾನಿಗಳು, ಪುರಾಣಿಕರು, ಜೋಯಿಸರು ಮೊದಲಾದವರು ಮೀನು ತಿನ್ನುವುದು ಹಾಗಿರಲಿ, ನೀರುಳ್ಳಿ, ಬೆಳ್ಳುಳ್ಳಿ, ಬಸಳೆ, ಬಪ್ಪಂಗಾಯಿ, ಅಲಾಬು, ಮೊದಲಾದವುಗಳನ್ನು ಕೂಡ ತಿನ್ನುವುದಿಲ್ಲ. ಗೃಹಸ್ಥರೆಂದರೆ ವೈದಿಕ ವೃತ್ತಿಯನ್ನು ತೊರೆದು ವ್ಯಾಪಾರ-ಉದ್ಯಮ ಮಾಡಿಕೊಂಡಿರುವವರು: ಅವರಲ್ಲಿ ಕೂಡ ಅಧಿಕಾಂಶ ಜನರು ನೀರುಳ್ಳಿ, ಬೆಳ್ಳುಳ್ಳಿಗಳನ್ನು ತಿಂದರೂ ಮೀನನ್ನು ತಿನ್ನುವುದಿಲ್ಲ. ಪರಂತು ಅವರಲ್ಲಿ ಮೀನನ್ನು ತಿನ್ನಬಾರದೆಂಬ ನಿಷೇಧ-ನಿರ್ಬಂಧಗಳಿಲ್ಲ. ಅಲ್ಲದೇ ಅವರಲ್ಲಿನ ಬಹಳ ಮಂದಿ ಯುವಕರು ಉಚ್ಚ ಶಿಕ್ಷಣ ಪಡೆಯುವ ಸಲುವಾಗಿ ಪರದೇಶ ಗಳಿಗೆ ಹೋಗುತ್ತಲೇ ಇರುತ್ತಾರಾದುದರಿಂದ ಮೀನು ತಿನ್ನಬಾರದೆಂಬ ನಿರ್ಬಂಧ ವನ್ನು ಹೇರಲು ಸಾಧ್ಯವಿಲ್ಲ.

ಅಲ್ಲದೆ ಅನ್ಯವರ್ಗದವರು ಎಣಿಸಿಕೊಂಡಿರುವಂತೆ ಗೌಡಸಾರಸ್ವತರು ಮತ್ತು ಚಿತ್ರಾಪುರ ಸಾರಸ್ವತರು ಎಂಬ ಎರಡು ಪಂಗಡಗಳು ಭಿನ್ನಜಾತಿಯವರಲ್ಲವೇ ಅಲ್ಲ. ಗೋವದ ಸಾರಸ್ವತ ಬ್ರಾಹ್ಮಣ ಸಮುದಾಯದಲ್ಲಿ ಅಥವಾ" "ಶೆಣಾಇ" ಉಪನಾಮದ ಸಮುದಾಯದಲ್ಲಿ ಉಂಟಾದ ಒಂದು ಸ್ವಾರ್ಥ ಮೂಲವಾದ ಕಲಹದಿಂದಾಗಿ ಸಾರಸ್ವತ ಬ್ರಾಹ್ಮಣ ಸಮುದಾಯವು ಎರಡು ತಂಡಗಳಾಗಿ ಒಡೆಯಿತು. ದೇವತಾವಿನಿಯೋಗಕ್ಕೆಂದು ಹಿರಿಯರು ಮೀಸಲಾಗಿಟ್ಟ ಒಂದು ದೊಡ್ಡ ಆಸ್ತಿಯಲ್ಲಿ ದ್ವಾರಕಾನಾಥ ಮತ್ತು ಭಾನಪ್ಪಯ್ಯ (=ಭಾನು) ಎಂಬ ಇಬ್ಬರು ದಾಯಾದಿಗಳಿಗೆ ಸಮಾನವಾದ ಅಧಿಕಾರವಿತ್ತು. ಅವರಲ್ಲಿ ದ್ವಾರಕಾನಾಥ ಎಂಬವನಿಗೆ ಇಡಿಯ ಆಸ್ತಿಯನ್ನು ತಾನೊಬ್ಬನೇ ಕಬಳಿಸಬೇಕೆಂಬ ದುರಾಶೆಯು ಹುಟ್ಟಿತು.

ಆದರೆ ಆ ಆಸ್ತಿಯನ್ನು ಕಬಳಿಸಲು ಭಾನಪ್ಪಯ್ಯನ ಜಾತಿತೆಗೆಯುವುದೊಂದಲ್ಲದೇ ಬೇರೆ ಯಾವ ಉಪಾಯವೂ ಇರಲಿಲ್ಲ. ಆದುದರಿಂದ ದ್ವಾರಕಾನಾಥನು–ಭಾನಪ್ಪಯನನ್ನು ಜಾತಿಯಿಂದ ಬಹಿಷ್ಕೃತನನ್ನಾಗಿ ಮಾಡುವ'ಉದ್ದೇಶದಿಂದ ಭಾನಪ್ಪಯ್ಯನು ಶೂದ್ರಹೆಂಗಸು ಮಾಡಿದ ಅಡಿಗೆಯನ್ನು ಉಣ್ಣುತ್ತಾನೆಂಬ ಸುದ್ದಿಯನ್ನು ಹರಡಿದನು. ಮತ್ತು ಕೆಲವು ಜನರನ್ನು ಪುಸಲಾಯಿಸಿ ಅವರ ಮೂಲಕ-ಭಾನಪ್ಪಯ್ಯನ ಮೇಲೆ ಜಾತಿ ಬಹಿಷ್ಕಾರದ ರಾಯಸವನ್ನು ಹೊರಡಿಸುವಂತೆ ಪ್ರಾರ್ಥಿಸಿಕೊಂಡು-ತಮ್ಮ ವರ್ಗದ ಧರ್ಮಗುರುಗಳಾಗಿದ್ದ ಕೈವಲ್ಯ (=ಕವಳೆ) ಮಠದ ಸ್ವಾಮಿಗಳ ಸನ್ನಿಧಿಯಲ್ಲಿ ಬಿನ್ನವತ್ತಳೆಯನ್ನು ಸಲ್ಲಿಸಿದನು ಶ್ರೀ ಸ್ವಾಮಿಗಳು ಪದ್ಧತಿಗನುಸಾರವಾಗಿ ಆ ಊರಿನ ಪ್ರಮುಖ ಗೃಹಸ್ಥರನ್ನು ಕರೆದು ದೂರನ್ನು ವಿಚಾರಣೆಮಾಡಿದಾಗ-ದ್ವಾರಕಾನಾಥನ ದೂರು ನಿರಾಧಾರವಾದುದೆಂದು ಗೊತ್ತಾಗಿ-ಭಾನಪ್ಪಯ್ಯನು ನಿರ್ದೋಷಿಯೆಂದು ತೀರ್ಮಾನವಿತ್ತರು. ಆದರೆ ಆ ಮೊದಲೇ ಇಬ್ಬರ ಪಕ್ಷದಲ್ಲಿಯೂ ಜನರು ಕೂಡಿಕೊಂಡಿದ್ದರು ಮತ್ತು ಪರಸ್ಪರರನ್ನು ನಿಂದಿಸತೊಡಗಿದ್ದರು. ದ್ವಾರಕಾನಾಥನ ಪಕ್ಷದಲ್ಲಿ ಜನರು ಅಧಿಕ ಸಂಖ್ಯೆಯಲ್ಲಿ ಕೂಡಿದ್ದರು. ಏಕೆಂದರೆ ಅವನು ಭಾನಪ್ಪಯ್ಯನಿಗಿಂತ ಧನಿಕನಾಗಿದ್ದುದಲ್ಲದೇ-ಅವನು ಸಂಬಂಧಮಾಡಿದ ಮನೆತನದವರು ಕೂಡ ಬಹಳ ಶ್ರೀಮಂತರಾಗಿದ್ದರು. ಹೀಗಾಗಿ ಎರಡೂ ಪಕ್ಷದ ಜನರು ಕವಳೆಯಿಂದ ಹಿಂದಿರುಗಿದೊಡನೆಯೇ-ಸಭೆಸೇರಿ-ಭಾನಪ್ಪಯ್ಯನನ್ನೂ, ಅವನ ಪಕ್ಷಕ್ಕೆ ಸೇರಿದ ಐದು ಗೋತ್ರಗಳ ಕೆಲವು ಮನೆಗಳ ಜನರನ್ನೂ, ಸ್ವಾಮಿಗಳ ಮಾತನ್ನು ಮೀರಿಯಾದರೂ ಜಾತಿಯಿಂದ ಹೊರಗೆ ಹಾಕುವ ನಿರ್ಣಯ

ವನ್ನು ಕೈಗೊಂಡರು. ಮತ್ತು ದ್ವಾರಕಾನಾಥನ ಪಕ್ಷದವರು ಭಾನಪ್ಪಯ್ಯನ ಪಕ್ಷದವರೊಂದಿಗೆ ಯಾವ ಬಗೆಯ ಸಂಪರ್ಕವನ್ನಾಗಲೀ, ಸಂಬಂಧವನ್ನಾಗಲೀ ಇಟ್ಟುಕೊಳ್ಳಕೂಡದೆಂದು ನಿರ್ಧರಿಸಿದರು.

ಭಾನಪ್ಪಯ್ಯನ ತಂಡದಲ್ಲಿ–೧. ಕೌಂಡಿನ್ಯ. ೨. ಕೌಶಿಕ. ೩. ಭಾರದ್ವಾಜ. ೪. ಅತ್ರಿ ಮತ್ತು ೫. ಕುತ್ಸ ಎಂಬ ಗೋತ್ರಕ್ಕೆ ಸೇರಿದ ಕೆಲವೇ ಕುಟುಂಬಗಳಿದ್ದವು. ಹೀಗಾಗಿ ದ್ವಾರಕಾನಾಥನ ದೊಡ್ಡ ತಂಡದವರು-ಭಾನಪ್ಪಯ್ಯನ ಸಣ್ಣ ತಂಡದ ಐದು ಗೋತ್ರಗಳ ಜನರನ್ನು "ಶೆಣಾಇಪಂಚೆ" ಅಂದರೆ ಶೆಣಾಇ ಉಪನಾಮದ ಐವರು ಎಂದು ಕರೆಯುತ್ತಿದ್ದರು. ಬಹಳ ಕಾಲದ ತರುವಾಯ ಮೊದಲಿನ ಐದು ಗೋತ್ರದವರೊಂದಿಗೆ ವತ್ಸಗೋತ್ರದ ಕೆಲವು ಕುಟುಂಬಗಳು ಸೇರಿದುದ ರಿಂದ ಆ ಸಣ್ಣ ತಂಡದಲ್ಲೀಗ ಆರು ಗೋತ್ರಗಳ ಜನರಿದ್ದಾರೆ. ಹಿಂದೆ ಹೇಳಿ ದಂತೆ ಸಾರಸ್ವತ ಬ್ರಾಹ್ಮಣ ಸಮಾಜವು ಎರಡು ತಂಡಗಳಾಗಿ ಒಡೆದ ತರುವಾಯ ದಿಂದ ದ್ವಾರಕಾನಾಥನ ತಂಡದವರನ್ನು ದೊರಕೊ ಎಂತಲೂ, ಭಾನಪ್ಪಯ್ಯನ ತಂಡದ ಜನರನ್ನು ಭಾನಪ್ಪು ಎಂತಲೂ-ಒಂದು ತಂಡದವನು ಇನ್ನೊಂದು ತಂಡ ದವನನ್ನಾಗಲೀ, ತಮ್ಮ ತಮ್ಮನ್ನೇ ಆಗಲೀ ಕರೆದು ಕೊಳ್ಳುವುದು ವಾಡಿಕೆ ಯಾಗಿದೆ.[1]

ಹಿಂದಿನ ಕಾಲದ ಬ್ರಾಹ್ಮಣರು ಅತ್ಯಂತ ಕ್ಷುಲ್ಲಕವಾದ ಕಾರಣಕ್ಕಾಗಿಯೂ ತಮ್ಮ ಜನರನ್ನು ಜಾತಿಯಿಂದ ದೂರವಿರಿಸುತ್ತಿದ್ದರು. ಇಲ್ಲವೇ ಜಾತಿಯಿಂದ ಹೊರದಬ್ಬುತ್ತಿದ್ದರು. ಮತ್ತು ಹಾಗೆ ಮಾಡಲು ಅವರು ಕೆಲವು ನಿಯಮ ಗಳನ್ನು ಮಾಡಿ ಸ್ಮೃತಿಗ್ರಂಥಗಳಲ್ಲಿ ಸೇರಿಸಿದ್ದರು. ಸಾರ್ವಜನಿಕ ದೇವಾಲಯ ಗಳಲ್ಲಿ ವೇತನ ಪಡೆದು ಅರ್ಚಕನಾಗಬಾರದು: ಶಿವಲಿಂಗಕ್ಕೆ ನಿವೇದಿಸಿದ ಅನ್ನವನ್ನು ಉಣ್ಣಬಾರದು. ಗ್ರಾಮದಲ್ಲಿನ ಎಲ್ಲ ಜನರ ಪೌರೋಹಿತ್ಯವನ್ನು ನಡಿಸಬಾರದು; ಶೂದ್ರರ ಪುರೋಹಿತನಾಗಿ ಅವರಿಂದ ದಕ್ಷಿಣೆ ಪಡೆಯಬಾರದು ಇತ್ಯಾದಿ: ಅಂಥ ನಿಯಮಗಳಿಂದಾಗಿಯೇ ಗೋವದ ಬ್ರಾಹ್ಮಣರಲ್ಲಿ ಕಿರವಂತ, ಪಾಧ್ಯೇ ಮೊದಲಾದ ಉಪಜಾತಿಗಳು ಹುಟ್ಟಿದವು. ದೇವಾಲಯಗಳಲ್ಲಿ ಅರ್ಚಕರಾಗಿದ್ದು ನೈವೇದ್ಯದ ಅನ್ನವನ್ನುಣ್ಣುವ ಗುರವರು ಪತಿತರೆನಿಸಿಕೊಂಡರು.

ಗೋವದಲ್ಲಿ ಸಾರಸ್ವತ ಬ್ರಾಹ್ಮಣರಿಗೆ ಸೇರಿದ ಸಾವಿರಾರು ದೇವಾಲಯ ಗಳಲ್ಲಿ ಮೊದಲು ಕಾಳಾಮುಖ ಗುರವರೇ ಅರ್ಚಕರಾಗಿದ್ದರು. ಮತ್ತು

1. ಇದು ಅಂದಿನಿಂದ ಸಾಗಿಬಂದ ಐತಿಹ್ಯವಾಗಿದೆ.

ದೇವಾಲಯುಗಳಲ್ಲಿನ ದೇವತೆಗಳಿಗೆ ಪೂಜೆಮಾಡುವ ಅಧಿಕಾರವು ಸಂಪೂರ್ಣವಾಗಿ ಅವರಿಗೆ ಸೇರಿತ್ತು. ಪೋರ್ತುಗೀಸರ ಹಾವಳಿಯುಲ್ಲಿ ಸಾರಸ್ವತರಿಗೆ ಸೇರಿದ ನೂರಾರು ದೇವಾಲಯುಗಳು ನಾಶಹೊಂದಿದವು. ತರುವಾಯು ಕಟ್ಟಿಸಿದ ದೇವಾಲಯುಗಳಲ್ಲಿ ಗುಂರವರ ಬದಲಿಗೆ ಕರಾಡ ಬ್ರಾಹ್ಮಣರು ಅರ್ಚಕರಾಗಿ ಸೇರಿಕೊಂಡರು. ಹೀಗಿದ್ದರೂ ಗೋವದಲ್ಲಿನ ಶಾಂತೇರಿ ಮತ್ತು ಮ್ಹಾಳಸಾ ದೇವಿಗಳ ಆಲಯುಗಳಲ್ಲಿ ಇಂದಿಗೂ ದೇವಿಗಳ ನಿರ್ಮಾಲ್ಯವನ್ನು ಕಳೆದು ಅಭಿಷೇಕ ಮಾಡಿದ ತರುವಾಯು ದೇವಿಗಳನ್ನು ಅಲಂಕರಿಸಿ ಮೊದಲಿನ ಆರತಿಯನ್ನು ಬೆಳಗುವ ಅಧಿಕಾರವು ಗುರವರಿಗೆ ಸೇರಿದೆ.

ದಕ್ಷಿಣ ಭಾರತದಲ್ಲಿ ನೆಲಸಿರುವ ಗೋವ ಮೂಲದ ಸಾರಸ್ವತ ಬ್ರಾಹ್ಮಣರಲ್ಲಿ ಇಪ್ಪತ್ತೆರಡಂ ಗೋತ್ರಗಳ ಜನರಿದ್ದಾರೆಂದು ಹೇಳುತ್ತಾರೆ. ಆದರೆ ಈ ತನಕ ಹದಿನೆಂಟು ಗೋತ್ರಗಳು ಮಾತ್ರ ತಿಳಿದುಬಂದಿವೆ. ಅವುಗಳು ಅವುಗಳ ಪ್ರವರಗಳ ಸಹಿತವಾಗಿ ಕೊಡಲಾಗುವವು. ಪ್ರವರ ಎಂಬುದರ ಅರ್ಥವು "ಶ್ರೇಷ್ಠನಾದವನು" ಎಂದಿರುತ್ತದೆ. ಅಂದರೆ ಯಾವುದೊಂದು ಗೋತ್ರದಲ್ಲಿ ಹುಟ್ಟಿ ತನ್ನ ವಿದ್ಯೆ, ಆಚರಣೆ ಮತ್ತು ಅಸಾಮಾನ್ಯ ಜ್ಞಾನಗಳ ಬಲದಿಂದ ಮೊದಲಿನವರಿಗಿಂತ ಶ್ರೇಷ್ಠನೆನಿಸಿಕೊಂಡು ತನ್ನ ಸ್ವಂತ ಹೆಸರಿನ ಗೋತ್ರವನ್ನು ಸ್ಥಾಪಿಸಿದವನು ಎಂದರ್ಥವಾಗುತ್ತದೆ. ಗೋತ್ರ ಎಂಬುದರ ಅರ್ಥವು ಗುಂಪು ಅಥವಾ ಪಂಗಡವೆಂದಿರುತ್ತದೆ. ಆದುದರಿಂದ—ಗೋತ್ರ ಮತ್ತು ಪ್ರವರಗಳು ಮೂಲದಲ್ಲಿ ಒಂದೇಯಾಗಿರುವುದರಿಂದ-ಅವುಗಳಲ್ಲಿ ವಿವಾಹ ಸಂಬಂಧವು ಜರಗುವುದಿಲ್ಲ.

**"ಅತ್ರಿ, ಕಶ್ಯಪ, ಗೌತಮ, ಜಮದಗ್ನಿ, ಭರದ್ವಾಜ, ವಸಿಷ್ಠ ಮತ್ತು ವಿಶ್ವಾಮಿತ್ರ"** ಎಂಬ ಸಪ್ತಋಷಿಗಳು ಮತ್ತು **"ಅಗಸ್ತ್ಯ"** ಕೂಡಿ ಎಂಟು ಮಂದಿಗಳು ಗೋತ್ರ ಪ್ರವರ್ತಕರಾದ ಮೂಲ ಋಷಿಗಳೆಂತಲೂ. ಅವರ ಸಂತತಿಯೇ ಗೋತ್ರವೆಂತಲೂ ಆ ಗೋತ್ರಗಳಲ್ಲಿ ನಾಲ್ವತ್ತೊಂಭತ್ತು ಪ್ರವರಗಳಾಗಿ ತರುವಾಯು ಸಾವಿರ ಸಾವಿರ ಗೋತ್ರಗಳಾದುವೆಂತಲೂ ಪ್ರತೀತಿ ಇದೆ:–

**ಗೋತ್ರಾಣಾಂ ತು ಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ ।**
**ಊನಪಂಚಾಶದೇವೈಷಾಂ ಪ್ರವರಾ ಋಷಿದರ್ಶನಾತ್ ॥**
**ವಿಶ್ವಾಮಿತ್ರೋ ಜಮದಗ್ನಿರ್ಭರದ್ವಾಜೋಽಥ ಗೌತಮಃ ।**
**ಅತ್ರಿರ್ವಸಿಷ್ಠಃ ಕಶ್ಯಪ ಇತ್ಯೇತೇ ಸಪ್ತಋಷಯಃ ॥**

**ತೇಷಾಂ ಸಪ್ತರ್ಷೀಣಾಮಗಸ್ತ್ಯಾಷ್ಟಮಾನಾಂ ಯದಪತ್ಯಂ ತದ್ಗೋತ್ರಮಿತ್ಯುಚ್ಯತೇ ।**

ಸಾರಸ್ವತ ಬ್ರಾಹ್ಮಣರಲ್ಲಿರುವ ಗೋತ್ರಗಳು ಮುಂದಿನಂತಿವೆ:—

೧. ಅತ್ರಿ—ಆತ್ರೇಯ, ಆರ್ಚನಾನಸ, ಶ್ಯಾವಾಶ್ವ. (ಮೂರು ಪ್ರವರಗಳು)

೨. ಆಂಗೀರಸ—ಆಂಗೀರಸ, ಬಾರ್ಹಸ್ಪತ್ಯ, ಮೌದ್ಗಲ.

೩. ಕಶ್ಯಪ—ಕಾಶ್ಯಪ, ಅವತ್ಸಾರ, ನೈಧ್ರುವ.

೪. ಕುತ್ಸ ( + ಶಂಖಪಿಂಗ) ಆಂಗೀರಸ. ಅಂಬರೀಶ. ಯೌವನಾಶ್ವ.

೫. ಕೌಂಡಿನ್ಯ—ವಾಸಿಷ್ಠ. ಮೈತ್ರಾವರುಣ, ಕೌಂಡಿನ್ಯ.

೬. ಕೌಶಿಕ—ವೈಶ್ವಾಮಿತ್ರ, ಅಘಮರ್ಷಣ, ಕೌಶಿಕ.

೭. ಗಾರ್ಗ್ಯ—ಆಂಗೀರಸ, ಬಾರ್ಹಸ್ಪತ್ಯ, ಭಾರದ್ವಾಜ. ಗಾರ್ಗ್ಯ.

೮. ಗೌತಮ—ಆಂಗೀರಸ, ಆಯಾಸ್ಯ, ಗೌತಮ.

೯. ಜಾಮದಗ್ನ್ಯ—ಭಾರ್ಗವ. ಚ್ಯಾವನ, ಆಪ್ನವಾನ್, ಔರವ, ಜಾಮದಗ್ನ್ಯ.

೧೦. ಧನಂಜಯ—ವೈಶ್ವಾಮಿತ್ರ. ಮಾಧುಚ್ಛಂದಸ. ಧನಂಜಯ.

೧೧. ನೈಧ್ರುವ—ಕಾಶ್ಯಪ, ಅವತ್ಸಾರ ನೈಧ್ರುವ.

೧೨. ಭಾರದ್ವಾಜ—ಆಂಗೀರಸ, ಬಾರ್ಹಸ್ಪತ್ಯ, ಭಾರದ್ವಾಜ.

೧೩. ಮುದ್ಗಲ—ಆಂಗೀರಸ. ಭಾರ್ಮ್ಯಾಶ್ವ, ಮೌದ್ಗಲ.

೧೪. ವತ್ಸ—ಭಾರ್ಗವ, ಚ್ಯಾವನ, ಆಪ್ನವಾನ್. ಔರವ, ಜಾಮದಗ್ನ್ಯ.

೧೫. ವಸಿಷ್ಠ—ವಾಸಿಷ್ಠ. ಇಂದ್ರಪ್ರಮದ, ಆಭರದ್ವಸ್.

೧೬. ವಿಶ್ವಾಮಿತ್ರ—ವಿಶ್ವಾಮಿತ್ರ, ದೇವರಾತ, ದೇವಲ.

೧೭. ಶಾಂಡಿಲ್ಯ—ಶಾಂಡಿಲ, ಅಸಿತ. ದೇವಲ,

೧೮. ಸಾಂಖ್ಯಾಯನ—ಗೋಮ, ವಸು. ಸಾಂಖ್ಯಾಯನ ಇಲ್ಲವೇ ಸಾಂಖ್ಯಾಯನ, ವಾಸಿಷ್ಠ—ಇಂದ್ರಪ್ರಮದ.

ಕುತ್ಸ ಗೋತ್ರದವನು ಕೌತ್ಸನಾಗುತ್ತಾನೆ. ಮತ್ತು ಕುಶಿಕ ಗೋತ್ರದವನು ಕೌಶಿಕನಾಗುತ್ತಾನೆ. ಆದರೆ ಆ ಎರಡು ಗೋತ್ರಗಳು ಕೊಂಕಣಿಯಲ್ಲಿ ಕಂಶ ( =ಕೌಂಶ) ಮತ್ತು ಕಾಂಶ್ಯ ಎಂದು ಉಚ್ಚರಿಸಲ್ಪಡುತ್ತವೆ. ಅಲ್ಲದೇ ಕುತ್ಸ ಶಬ್ದದೊಂದಿಗೆ ಶಂಖ, ಪಿಂಗ ಎಂಬ ಎರಡು ಹೆಸರುಗಳು ಜೊತೆಯಲ್ಲಿ ಬರು

ತ್ತವೆ. ಅದರ ಕಾರಣವೇನೆಂದು ತಿಳಿದು-ಬಂದಿಲ್ಲ. ಕುತ್ಸಗೋತ್ರದವರು ಹಿಂದಿನಿಂದಲೂ ತಮ್ಮ ಗೋತ್ರವನ್ನು ಶಂಖ, ಪಿಂಗ-ಕಂಶ ಎಂದು ಉಚ್ಚರಿಸುತ್ತ ಬಂದಿದ್ದಾರೆ.

ಶಾಂಡಿಲ್ಯ ಎಂಬ ಗೋತ್ರದ ಸಾರಸ್ವತ ಬ್ರಾಹ್ಮಣರೆಲ್ಲರೂ ಕನೋಜದಲ್ಲಿ ನೆಲಸಿದ್ದರು. ಗೋವದ ಸಾರಸ್ವತ ಬ್ರಾಹ್ಮಣ ಸಮುದಾಯದಲ್ಲಿ ಶಾಂಡಿಲ್ಯ ಗೋತ್ರದವರು ಕೂಡ ಇರುವುದರಿಂದ ಅವರಲ್ಲಿ ಕನೋಜ ಪಂಗಡದ ಬ್ರಾಹ್ಮಣರು ಕೂಡ ಸೇರಿದ್ದಾರೆಂದು ಸಿದ್ಧವಾಗುತ್ತದೆ. ಹಾಗೆಯೇ ಗೋವದ ಸಾರಸ್ವತರಲ್ಲಿ ಸಾಂಖ್ಯಾಯನ ಗೋತ್ರದ ಬ್ರಾಹ್ಮಣರಿರುವುದು. ಅವರಲ್ಲಿ ಋಗ್ವೇದವ ಬಾಷ್ಕಲ ಶಾಖೆಯ ಬ್ರಾಹ್ಮಣರು ಕೂಡ ಇದ್ದರೆಂಬುದರ ಪ್ರಮಾಣವಾಗಿರುತ್ತದೆ.

ಯಜ್ಞಗಳಿಗೆ ಪ್ರಾಧಾನ್ಯತೆ ಇದ್ದ ಕಾಲದ ವರೆಗೆ ಸಾರಸ್ವತ ಬ್ರಾಹ್ಮಣರ ಬೇರೆ ಬೇರೆ ಗೋತ್ರಗಳ ಕುಟುಂಬಗಳು ಯಜ್ಞಗಳಲ್ಲಿ ನಿರ್ವಹಿಸಬೇಕಾಗುವ ಪಾತ್ರಕ್ಕೆ ಅನುಕೂಲವಾಗುವಂತೆ ಬೇರೆ ಬೇರೆ ವೇದಗಳನ್ನೂ, ಶಾಖಾ-ಸೂತ್ರಗಳನ್ನೂ ಅಭ್ಯಸಿಸುತಿದ್ದರು. ಅವುಗಳ ಅಂಗೋಪಾಂಗಗಳನ್ನು ಕಲಿಯುತಿದ್ದರು. ಕೆಲವು ಕುಟುಂಬಗಳ ಜನರು ಒಂದು ವೇದವನ್ನು ವಿಶೇಷ ರೀತಿಯಿಂದಲೂ. ಬೇರೆ ವೇದಗಳನ್ನು ಸಾಮಾನ್ಯ ರೀತಿಯಿಂದಲೂ ಕಲಿತುಕೊಳ್ಳುತಿದ್ದರು. ಘನಪಾಠಿಗಳ ಹಲವು ಕುಟುಂಬಗಳಿದ್ದವು. ಸಾಗರದ ರಾಮಾಚಾರ್ಯರ ಮನೆತನವು ಇತ್ತೀಚಿನ ವರೆಗೆ ಘನಪಾಠಿಗಳಿಗಾಗಿ ಹೆಸರಾಗಿತ್ತು.

ಮುಂದೆ ಜೈನರಿಂದ ಮತಾಂತರವಾಗಿ ಬ್ರಾಹ್ಮಣರಾದ ಜನರ ವಿರೋಧ ಮತ್ತು ಅಪಪ್ರಚಾರದಿಂದ ಯಜ್ಞಗಳಿಗೆ ಮೊದಲಿನ ಪ್ರಾಧಾನ್ಯತೆ ಇಲ್ಲವಾದುದರಿಂದ ವೇದಾಧ್ಯಯನಕ್ಕೆ ಪ್ರೋತ್ಸಾಹ ದೊರೆಯದಾಯಿತು. ಹೀಗಾಗಿ ಸಾರಸ್ವತ ಬ್ರಾಹ್ಮಣರಲ್ಲಿ ಹೆಚ್ಚಿನವರು ವೈದಿಕ ವೃತ್ತಿಯನ್ನು ತೊರೆದು ವ್ಯಾಪಾರ ಉದ್ಯಮಗಳಲ್ಲಿ ತೊಡಗಿದರು. ಒಂದು ಚಿಕ್ಕ ಪಂಗಡದ ಜನರು ತಮ್ಮ ಹಿರಿಯರಿಂದ ಸಾಗಿ ಬಂದ ವೇದಾಧ್ಯಯನವನ್ನು ಮುಂದುವರಿಸಿ ಹಿರಿಯರ ಪರಂಪರೆಯನ್ನು ಕಾಪಾಡಿದರು. ಬೇರೆ ಕೆಲವರು ತಮ್ಮ ಉದರಂಭರಣಕ್ಕಾಗಿ ಹಾಗೂ ಪೌರೋಹಿತ್ಯವನ್ನು ನಡಿಸಲಿಕ್ಕಾಗಿ ಆವಶ್ಯಕವಿದ್ದಷ್ಟೇ ಅಂಶಗಳನ್ನು ಕಲಿಯ ತೊಡಗಿದರು. ಆದರೆ ಬೇರೆ ಬೇರೆ ವೇದಗಳ ಹಾಗೂ ಶಾಖೆಗಳ ಕಾರ್ಯಗಳನ್ನು ನೆರವೇರಿಸಬಲ್ಲಂಥ ಪುರೋಹಿತರನ್ನು ಸಿದ್ಧಗೊಳಿಸುವುದು ಪ್ರಯಾಸದ ಹಾಗೂ ಪ್ರಯೋಜನವಿಲ್ಲದ ಕೆಲಸವಾಗಿದ್ದುದರಿಂದ ಎಲ್ಲರೂ ಋಗ್ವೇದದ ಶಾಕಲ ಶಾಖೆಯೊಂದನ್ನೇ ಅಭ್ಯಸಿಸತೊಡಗಿದ್ದರು. ಹಾಗಿದ್ದರೂ ಕೌಶಿಕಗೋತ್ರದ ಕೆಲವು

ಕುಟುಂಬಗಳ ಜನರು ಬಹಳ ಕಾಲದ ತನಕ ಯಜುರ್ವೇದದ ಅಧ್ಯಯನ ವನ್ನೂ, ಭಾರದ್ವಾಜ ಗೋತ್ರದ ಕೆಲವರು ಸಾಮವೇದದ ಅಧ್ಯಯನವನ್ನೂ ಸಾಗಿಸಿದ್ದರು.1

ಸಾರಸ್ವತ ಬ್ರಾಹ್ಮಣರಲ್ಲಿನ ಸಾಮವೇದಿಗಳ ಕುಟುಂಬಗಳು ವಸಈ ಮತ್ತು ಠಾಣಾಗಳಲ್ಲಿದ್ದವು.2 ಅವುಗಳು ಪೋರ್ತುಗೀಸರ ಬಲಾತ್ಕಾರದಿಂದಾಗಿ ಭ್ರಷ್ಟ ವಾದುವೆಂದು ತಿಳಿದುಬರುತ್ತದೆ. ಗೋವದಲ್ಲಿರುವ ಕೆಲವು ಕೌಶಿಕ ಗೋತ್ರದ ಕುಟುಂಬಗಳು ಇಂದಿಗೂ ತಮ್ಮ ಉಪಾಕರ್ಮವನ್ನು ಹಸ್ತನಕ್ಷತ್ರದಲ್ಲಿ ಜರಗಿಸು ತ್ತಿರುವುದು ಅವರು ಮೊದಲು ಯಜುರ್ವೇದಿಗಳಾಗಿದ್ದರೆಂಬುದರ ಪ್ರಮಾಣ ವಾಗಿರುತ್ತದೆ. ಯಾದವ ಅರಸ ಭಿಲ್ಲಮನು ಶಕವರ್ಷ ೯೨೨ರಲ್ಲಿ ಬರೆಸಿದ ಒಂದು ದಾನ ಶಾಸನವಲ್ಲಿ ಉಲ್ಲೇಖಿಸಿರುವ ಹಲವು ಬ್ರಾಹ್ಮಣರ ಹೆಸರುಗಳಲ್ಲಿ ಮೊತ್ತಮೊದಲಿನದು—**"ಮಾಧ್ಯಂದಿನ ಶಾಖೀಯ ಮಹಲಪೈಯಾಯ ಇಂದಪೈಸುತಾಯ"** ಎಂದಿದೆ–ಅಂದರೆ ಶುಕ್ಲ ಯಜುರ್ವೇದದ ಮಾಧ್ಯಂದಿನ ಶಾಖೆಯ ಇಂದಪೈಯ ಮಗ ಮಹಲಪೈಗೆ. ಎಂದರ್ಥ. ಈಗಲಾದರೋ ಸಾರಸ್ವತ ಬ್ರಾಹ್ಮಣರಲ್ಲಿನ ಗೃಹಸ್ಥವರ್ಗದವರು ಹೆಚ್ಚುಕಡಿಮೆ ಎಲ್ಲರೂ ವೇದಾಧ್ಯಾಯನವನ್ನು ಬಿಟ್ಟೇ ಬಿಟ್ಟಿದ್ದಾರೆನ್ನಬಹುದು. ಒಂದೆರಡು ಅಪವಾದ ಗಳಿರಬಹುದು ಅಷ್ಟೇ. ಅವರಲ್ಲಿ ಕೆಲವರು-ಅಂದರೆ ಪ್ರಾಚೀನ ಸಂಪ್ರದಾಯದಲ್ಲಿ ಶ್ರದ್ಧೆ ಇದ್ದವರು ತಮ್ಮ ಮಕ್ಕಳಿಗೆ ಉಪನಯನ ಮಾಡಿದ ಹಾಗೆಯೇ ಕೆಲವು ದಿನಗಳ ತನಕ ತಮ್ಮ ಪುರೋಹಿತರ ಮುಖಾಂತರ ಋಗ್ವೇದದ ಒಂದೆರಡು ಸೂಕ್ತಗಳನ್ನು ಹೇಳಿಸುತ್ತಾರೆ ಮತ್ತು ಅಗ್ನಿಕಾರ್ಯವನ್ನು ಮಾಡಿಸುತ್ತಾರೆ. ಆದರೆ ಆಧುನಿಕ ಪಾಠಶಾಲೆಗೆ ಹೋಗುವ ಆ ಮಕ್ಕಳಿಗೆ ಪ್ರಾಚೀನ ಸಂಪ್ರದಾಯ ದಲ್ಲಿ ಶ್ರದ್ಧೆ ಇಲ್ಲದುದರಿಂದ ಅವರು ವೇದ ಮಂತ್ರಗಳೊಂದಿಗೆ ಸಂಧ್ಯಾವಂದನೆಯ ಮಂತ್ರಗಳನ್ನೂ ಮರೆತುಬಿಡುತ್ತಾರೆ. ಪ್ರವರೋಚ್ಚಾರ ಕಾಲದಲ್ಲಿ ಎಲ್ಲರೂ— **"ಋಗ್ವೇದಸ್ಯ ಆಶ್ವಲಾಯನ ಸೂತ್ರಸ್ಯ ಶಾಕಲಶಾಖಾಧ್ಯಾಯಿಒ"** ಎನ್ನುತ್ತಿರುವುದು ಬರಿಯ ಔಪಚಾರಿಕವಾಗಿರುತ್ತದೆಯೇ ಹೊರತು ವಾಸ್ತವ ವಾಗಿರುವುದಿಲ್ಲ.

ದಕ್ಷಿಣ ಭಾರತದಲ್ಲಿ ನೆಲಸಿರುವ ಸಾರಸ್ವತ ಬ್ರಾಹ್ಮಣರಿಗೆ ಅವರು ಮಾಡಿದ ವೃತ್ತಿಯ ಮೇಲಿಂದ ಬಂದ ಮೊತ್ತಮೊದಲಿನ ಮತ್ತು ಅತ್ಯಂತ ಪ್ರಾಚೀನವಾದ

---

1. Sarasvat Families Part I. 2. Ibid. Part II page 26.

ಉಪಾಧಿಯು ಅಥವಾ ಕುಲನಾಮವು "ಸೆಣಾಇ" ಅಥವಾ "ಶೆಣಾಇ" ಎಂಬು ದಾಗಿದೆ. ಮಹಾರಾಷ್ಟ್ರದಲ್ಲಿ ಅದು "ಶೇಣಾವಈ" ಎಂದಿದ್ದುದು ಈಗ "ಶೇಣವೀ" ಎಂಬ ರೂಪದಲ್ಲಿ ಸಾರಸ್ವತ ಬ್ರಾಹ್ಮಣರು ಎಂದು ಸೂಚಿಸಲು ಬಳಸಲ್ಪಡುತ್ತದೆ. "ಸೆಣಾಇ" ಎಂಬುದು ಸಂಸ್ಕೃತದ "ಸೇನಾನೀ" ಎಂಬ ಶಬ್ದದ ಹಾಗೂ "ಶೇಣಾವಈ" ಎಂಬುದು ಸಂಸ್ಕೃತದ "ಸೇನಾಪತಿ" ಎಂಬ ಶಬ್ದದ ಪ್ರಾಕೃತ ರೂಪಾಂತರಗಳಾಗಿರುತ್ತವೆ. ಆ ಅಡ್ಡ ಹೆಸರು ಯಾವ ಕಾಲದಲ್ಲಿ ಬಂದಿತೆಂದು ನಿರ್ಧರಿಸಲು ಯಾವ ಪ್ರಮಾಣವೂ ದೊರೆಯುವುದಿಲ್ಲ. ಆ ಸೆಣಾಇ ಎಂಬ ಶಬ್ದವು ಕನ್ನಡದಲ್ಲಿ "ಸೇನಬೋವ" ಎಂಬ ರೂಪದಲ್ಲಿ "ಸೈನ್ಯನಡಿಸುವವ" ಎಂಬರ್ಥದಲ್ಲಿ ಬಳಸಲ್ಪಡುತಿದ್ದಿತೆಂದು ರೆ. ಕಿಟ್ಟೆಲರ ಕನ್ನಡ–ಇಂಗ್ಲೀಷ; ಶಬ್ದಕೋಶದಿಂದ ತಿಳಿದುಬರುತ್ತದೆ. ಆ ಕೋಶದಲ್ಲಿ "ಬಂಡಿ ಬೋವ=ಬಂಡಿ ನಡಿಸುವವ" ಎಂಬ ಉದಾಹರಣೆಯೂ ಇದೆ. ಶೆಣಾಇ ಎಂಬ ಶಬ್ದವು ಕನ್ನಡದಲ್ಲಿ ಸೇನಬೋವ ಎಂದು ಮಾತ್ರವಲ್ಲದೇ ಸೇನಭವ, ಸೇನಭಾವ, ಶಾನಭಾವ, ಶಾನಭಾಗ, ಶಾನಭೋಗ ಮುಂತಾದ ನಾನಾರೂಪ ಗಳಾಗಿದೆ. ಹಾಗೆಯೇ ಸಂಸ್ಕೃತದ ದಲಪತಿ ಎಂಬ ಶಬ್ದವು ಮೊತ್ತಮೊದಲು "ದಳವಇ" ಎಂದಾಗಿ ತರುವಾಯ "ದಳವೈ" ಆಗಿ ಈಗ "ದಳವೀ" ಎಂಬ ರೂಪದಿಂದ ಸಾರಸ್ವತ ಬ್ರಾಹ್ಮಣರಲ್ಲಿ ಕೆಲವರ ಕುಲನಾಮವಾಗಿ ಬಳಕೆಯಲ್ಲಿದೆ.

ಹಿಂದೆ ಕರ್ಣಾಟ ರಾಜರ ಅರಮನೆಗಳಲ್ಲಿ ಕರಣಿಕನ ಕೆಲಸವನ್ನು ಅಂದರೆ ಲೆಕ್ಕಪತ್ರಗಳನ್ನು ಬರೆಯುವ ಕೆಲಸವನ್ನು ಮತ್ತು ಕುಲಕರಣಿಯ ಕೆಲಸವನ್ನು ಅಂದರೆ ಹಳ್ಳಿಯಲ್ಲಿನ ಭೂಮಿಗಳ ಅಳತೆ, ನಕ್ಷೆ ಮತ್ತು ತೀರ್ವೆಯ ಲೆಕ್ಕಗಳನ್ನು ಇಡುವ ಕೆಲಸವನ್ನು ಶೇಣಾಇ ಉಪನಾಮದ ಸಾರಸ್ವತ ಬ್ರಾಹ್ಮಣರೇ ಮಾಡು ತಿದ್ದುದರಿಂದ ಕಾಲಕ್ರಮೇಣ ಶೆಣಾಇ ಇಲ್ಲವೇ ಸೇನಬೋವ ಎಂಬ ಶಬ್ದವು ಕರಣಿಕ ಎಂಬ ಅರ್ಥದಲ್ಲಿ ಬಳಸಲ್ಪಡತೊಡಗಿತು. ಆದುದರಿಂದ ಈಗ ಆ ಕೆಲಸವನ್ನು ಯಾವ ಜಾತಿಯವನೇ ಮಾಡುತಿರಲಿ ಅವನನ್ನು ಕೊಂಕಣಿಯಲ್ಲಿ ಶೆಣಾಇ ಎಂದೂ, ತುಳುವಿನಲ್ಲಿ ಶೇಣೇರ್ ಎಂದೂ, ಕನ್ನಡದಲ್ಲಿ ಶಾನಭಾಗ ಎಂದೂ ಕರೆಯುತ್ತಾರೆ. ಹಿಂದೆ ತುಳುನಾಡಿನಲ್ಲಿ ಎಲ್ಲ ಗ್ರಾಮಗಳ ಕುಲಕರಣಿ ಗಳು ಸಾರಸ್ವತ ಬ್ರಾಹ್ಮಣರೇ ಆಗಿದ್ದರು. ಬ್ರಿಟಿಷರ ಆಳ್ವಿಕೆಯು ಆರಂಭವಾದ ತರುವಾಯ ಇಂಗ್ಲೀಷು ವಿದ್ಯೆಗೆ ಮನಸೋತ ಹಾಗೂ ಹಳ್ಳಿಯ ಜೀವನದಿಂದ ಬೇಸತ್ತ ಹಲವು ಸಾರಸ್ವತ ಬ್ರಾಹ್ಮಣರು ತಮ್ಮ ಮನೆತನದಲ್ಲಿ ಸಂತಾನ ಪಾರಂಪರ್ಯವಾಗಿ ಸಾಗಿ ಬಂದಿದ್ದ ಸೇನಬೋವಿಕೆಯನ್ನು ಅನ್ಯಜಾತಿಯವರಿಗೆ

ಮಾರಿ ಪಟ್ಟಣಗಳನ್ನು ಸೇರಿದರು. ಹೀಗಾಗಿ ಅನ್ಯಜಾತಿಯವರು ಕೂಡ ಸೇನ ಬೋವರಾದರು. ಹಾಗಿದ್ದರೂ ಇತ್ತೀಚೆಗೆ ಸರಕಾರದವರು ಕಾನೂನನ್ನು ಬದಲಾಯಿಸುವ ತನಕವೂ ಹಲವು ಸಾರಸ್ವತ ಬ್ರಾಹ್ಮಣರ ಮನೆತನಗಳು ಪಳ್ಳಿಯಲ್ಲಿನ ಸೇನಬೋವಿಕೆಯನ್ನು ನಡಿಸಿಕೊಂಡು ಬರುತ್ತಿದ್ದವು ಗೋವದಲ್ಲಿ ಶೆಣೈ ಶಬ್ದವು ಗುರು ಅಥವಾ ಅಧ್ಯಾಪಕ ಎಂಬರ್ಥದಲ್ಲಿ ಬಳಸಲ್ಪಡುತ್ತದೆ.

ಕೆಲವರು "ಶೆಣೈ" ಶಬ್ದದ ಮೂಲವು "ಶಾಣ್ಣವಿ" ಎಂದರೆ "ತೊಂಭತ್ತಾರು ಗ್ರಾಮದವರು" ಎಂದು ಸಾಧಿಸಲು ಪ್ರಯತ್ನಿಸಿದ್ದಾರೆ. ಅಂದರೆ ಅವರ ಅಭಿಪ್ರಾಯದಲ್ಲಿ ಗೋವದಲ್ಲಿನ "ಸಾಸಷ್ಟಿ=ಆರುವತ್ತಾರು" ಗ್ರಾಮಗಳವರು ಮತ್ತು "ತೀಸವಾಡಿ=ಮೂವತ್ತು ಗ್ರಾಮಗಳ ಗುಂಪು" ಕೂಡಿ "ಶಾಣ್ಣವಿ" ಎಂಬ ಶಬ್ದವು ಹುಟ್ಟಿತು ಎಂದಿದೆ. ಅವರು ಶೆಣೈ ಶಬ್ದದ ಮೂಲವು ಸೇನಾನಿ ಎಂದು ಒಪ್ಪಿಕೊಂಡರೆ ಇತರರು ತಮ್ಮನ್ನು ಕ್ಷತ್ರಿಯರೆನ್ನಬಹುದೆಂದು ಅಂಜಿದುದೇ ಶಾಣ್ಣವಿ ಎಂಬ ಶಬ್ದವನ್ನು ಮುಂದೆ ತರಲು ಕಾರಣವಾಗಿತೆನ್ನಬಹುದು. ಆದರೆ ಅವರು ದಕ್ಷಿಣ ಭಾರತದಲ್ಲಿನ ಹಲವು ಅರಸುಗಳ ಸೇನಾಧಿಪತಿಗಳು ಬ್ರಾಹ್ಮಣರೇ ಆಗಿದ್ದರೆಂಬ ಐತಿಹಾಸಿಕ ವಿಷಯವನ್ನು ಅರಿತಿರಲಿಲ್ಲವೆನ್ನಬಹುದು.

ಅಲ್ಲದೆ ಸಾರಸ್ವತ ಬ್ರಾಹ್ಮಣರಲ್ಲಿ ಶೇಣೈ ಎಂಬ ಕುಲನಾಮವು ಎಂದಿನಿಂದ ಬಳಕೆಗೆ ಬಂದಿತು ಅಥವಾ ಶೇಣೈ ಇಲ್ಲವೇ ಶೇಣವೀ ಎಂಬ ಶಬ್ದವು ಸಾರಸ್ವತ ಬ್ರಾಹ್ಮಣರ ಜಾತಿಯನ್ನು ಸೂಚಿಸಲು ಬಳಕೆಗೆ ಬಂದುದರ ಕಾರಣವೇನು? ಎಂಬುದನ್ನು ಥಕ್ಕನೇ ಬಗೆಹರಿಸಲು ಸಾಧ್ಯವಿಲ್ಲ. ಕೊಂಕಣದಿಂದ ಸೈನ್ಯಸಹಿತ ಹೋಗಿ ಬಂಗಾಲದಲ್ಲಿ ರಾಜ್ಯವನ್ನು ಕಟ್ಟಿದ ಸೇನವಂಶದ ಅರಸರು ಮೂಲದಲ್ಲಿ ಯಾರಾಗಿದ್ದರು? ಹಾಗೆಯೇ ಗುಜರಾತದಲ್ಲಿ ಆಳಿದ ಸೇನಾಪತಿ ವಂಶದ ಅರಸರು ಯಾವ ಮೂಲದವರು? ಮುಂತಾದ ಪ್ರಶ್ನೆಗಳನ್ನು ಯಾರೂ ಈ ತನಕ ಬಗೆಹರಿಸಿಲ್ಲ.



## ಶ್ರೀಮಚ್ಛಂಕರಾಚಾರ್ಯರು ಮತ್ತು ಸಾರಸ್ವತ ಬ್ರಾಹ್ಮಣರು

ಶ್ರೀಮಚ್ಛಂಕರಾಚಾರ್ಯರ ಗುರುಗಳಾಗಿದ್ದ ಶ್ರೀಮದ್ ಗೋವಿಂದ ಭಗವತ್ಪಾದಾಚಾರ್ಯರು ಮತ್ತು ಪರಮಗುರುಗಳಾಗಿದ್ದ ಶ್ರೀಮದ್ ಗೌಡ

ಪಾದಾಚಾರ್ಯರು ಸಾರಸ್ವತ ಬಾಹ್ಮಣರೆಂದು ಕೆಲವರು ಹೇಳಿದ್ದಾರೆ. ಆದರೆ ಆ ಹೇಳಿಕೆಯಿಂದ ಆ ಇಬ್ಬರು ಆಚಾರ್ಯರು ದಕ್ಷಿಣ ಭಾರತದಲ್ಲಿ ನೆಲಸಿದ್ದ ಸಾರಸ್ವತ ಬ್ರಾಹ್ಮಣ ಸಮುದಾಯದವರೋ ಇಲ್ಲವೇ ಉತ್ತರ ಭಾರತದವರೋ ಎಂಬುದು ಮಾತ್ರ ತಿಳಿಯುವುದಿಲ್ಲ. ಶ್ರೀ ಶಂಕರಾಚಾರ್ಯರು ಕೂಡ ದಕ್ಷಿಣ ಭಾರತದ ನಿವಾಸಿಗಳೆನ್ನಬಹುದೇ ಹೊರತು ಅವರನ್ನು ದಾಕ್ಷಿಣಾತ್ಯ ಮೂಲ ದವರೆನ್ನಲಾಗುವುದಿಲ್ಲ. ಏಕೆಂದರೆ ಶ್ರೀ ಶಂಕರಾಚಾರ್ಯರ ತಂದೆ ಶಿವಗುರು ಶಕ್ತಿಪೂಜಕರಾಗಿದ್ದರೆಂದೂ, ಸ್ವಯಂ ಶಂಕರಾಚಾರ್ಯರು ಶಕ್ತಿಪೂಜಕರಾಗಿದ್ದು ದರಿಂದಲೇ ಅವರು ಕಾಂಚಿಯಲ್ಲಿ ಶ್ರೀ ಕಾಮಾಕ್ಷೀದೇವಿಯ ಪ್ರತಿಷ್ಠೆಮಾಡಿದ್ದ ರೆಂದೂ, ಆ ಕಾರಣದಿಂದಲೇ ಶಕ್ತಿಯ ಸ್ತೋತ್ರ ರೂಪವಾದ ಸೌಂದರ್ಯ ಲಹರಿಯೊಂದಿಗೆ ಆನಂದಲಹರಿಯನ್ನು ರಚಿಸಿದರೆಂದೂ ತಿಳಿದು ಬರುವುದರಿಂದ ಶ್ರೀ ಆಚಾರ್ಯರು ಮೂಲದಲ್ಲಿ ಸಾರಸ್ವತ ಬ್ರಾಹ್ಮಣರಾಗಿದ್ದರೆನ್ನಬೇಕಾಗುತ್ತದೆ. ಅದು ಹೇಗಿದ್ದರೂ ಶ್ರೀ ಶಂಕರಾಚಾರ್ಯರು ಸ್ಥಾಪಿಸಿದ ಕಾಂಚಿಯ ಜಗದ್ಗುರು ಧರ್ಮಪೀಠವನ್ನು ಹಲವು ಮಂದಿ ಕೊಂಕಣದ ಸಾರಸ್ವತ ಬ್ರಾಹ್ಮಣರು ಮತ್ತು ಕನೋಜಬ್ರಾಹ್ಮಣರು ಅಲಂಕರಿಸಿದ್ದರೆಂಬುದು ಮಾತ್ರ ಐತಿಹಾಸಿಕ ಸತ್ಯವಾಗಿದೆ.

ಶ್ರೀಮಾನ್ ಎನ್. ವೆಂಕಟರಾಮನ್ ಎಮ್. ಏ. ಅವರು ಬರೆದ "Shankaracharya the Great and His Succeessors at Kanchi" ಎಂಬ ಪುಸ್ತಕದಲ್ಲಿ ಕಾಂಚಿಯ ಗುರುಪರಂಪರೆ ಇದೆ. ಅವರು ಅದರಲ್ಲಿ ಹಲವು ಗುರುಗಳ ಪೂರ್ವಾಶ್ರಮದ ಹೆಸರು ಮತ್ತು ಜಾತಿಗಳನ್ನು ಕೊಟ್ಟಿದ್ದಾರೆ. ಅದರಲ್ಲಿ ಮುಂದೆ ಕೊಟ್ಟಿರುವ ಕಾಂಚೀ ಗುರುಗಳು ಸಾರಸ್ವತ ವರ್ಗದವರೆಂದು ತಿಳಿದು ಬರುತ್ತದೆ:—

೧. ಕಾಂಚಿಯ ಗುರುಪರಂಪರೆಯಲ್ಲಿ ಎಂಟನೆಯವರಾದ ಶ್ರೀಮತ್ ಸುರೇಶ್ವರಾನಂದ ಸರಸ್ವತಿಯವರು ಕೊಂಕಣದ ಮಹಾಬಲೇಶ್ವರದವರಾಗಿದ್ದರು. ಅವರ ಪೂರ್ವಾಶ್ರಮದ ಹೆಸರು ಮಹೇಶ್ವರನೆಂದಿತ್ತು, ಮತ್ತು ತಂದೆಯ ಹೆಸರು ಈಶ್ವರ ಪಂಡಿತನೆಂದಿತ್ತು.

೨. ಹದಿನಾಲ್ಕನೆಯವರಾದ ಉಜ್ವಲಶಂಕರ ಸರಸ್ವತಿಯವರು ಮಹಾ ರಾಷ್ಟ್ರದವರಾಗಿದ್ದರು. ಅವರ ಪೂರ್ವಾಶ್ರಮದ ಹೆಸರು ಅಚ್ಯುತಕೇಶವ ನೆಂದೂ, ತಂದೆಯ ಹೆಸರು ಕೇಶವಶಂಕರನೆಂದೂ ಇತ್ತು.

೩. ಹದಿನೈದನೆಯವರಾದ ಗೌಡಸದಾಶಿವ ಸರಸ್ವತಿಯವರು ಕನೋಜದ ಬ್ರಾಹ್ಮಣರಾಗಿದ್ದರು. ಅವರ ತಂದೆಯ ಹೆಸರು ದೇವಮಿಶ್ರನೆಂದಿತ್ತು.

೪. ಪದಿನಾರನೆಯುವರಾದ ಶ್ರೀಮತ್ ಸುರೇಂದ್ರ ಸರಸ್ವತಿಯುವರು ಮಹಾರಾಷ್ಟ್ರದವರಾಗಿದ್ದರು. ಅವರ ಪೂರ್ವಾಶ್ರಮದ ಹೆಸರು ಮಾಧವ ನೆಂದಿದ್ದು ತಂದೆಯ ಹೆಸರು ಮಥುರಾನಾಥ ಎಂದಿತ್ತು.

೫. ಹತ್ತೊಂಬತ್ತನೆಯುವರಾದ ಶ್ರೀಮತ್ ಚಂದ್ರಶೇಖರ ಸರಸ್ವತಿ ಯುವರು ಕೊಂಕಣ ಬ್ರಾಹ್ಮಣರಾಗಿದ್ದರು. ಅವರ ತಂದೆಯ ಹೆಸರು ಅಚ್ಯುತ ಎಂದಿತ್ತು.

೬. ಇಪ್ಪತ್ತನೆಯುವರಾದ ಶ್ರೀಮತ್ಪರಿಪೂರ್ಣ ಬೋಧ ಸರಸ್ವತಿಯುವರು ಕೊಂಕಣದ ರತ್ನಾಗಿರಿಯುವರಾಗಿದ್ದರು. ಅವರ ಪೂರ್ವಾಶ್ರಮದ ಹೆಸರು ಮಧುರನೆಂದಿದ್ದು ತಂದೆಯ ಹೆಸರು ರಾಮನಾಥನೆಂದಿತ್ತು.

೭. ಇಪ್ಪತ್ತೆರಡನೆಯುವರಾದ ಶ್ರೀಮತ್ ಚಿತ್ಸುಖಾನಂದ ಸರಸ್ವತಿ ಯುವರು ಕೊಂಕಣ ಬ್ರಾಹ್ಮಣರಾಗಿದ್ದರು. ಇವರ ಪೂರ್ವಾಶ್ರಮದ ಹೆಸರು ಶಿವಶರ್ಮ ಎಂದಿತ್ತು. ಇವರು ಆಶ್ರಮ ಸ್ವೀಕರಿಸಿದಂದಿನಿಂದ ಸಮಾಧಿಸ್ಥರಾಗುವ ತನಕ ಹದಿನೈದು ವರ್ಷಗಳ ಕಾಲವೂ ಕೊಂಕಣದಲ್ಲಿಯೇ ಇದ್ದರು. ಕಾಂಚಿಯಲ್ಲಿ ಗುರುಗಳಾದ ಕೊಂಕಣಿಗರಲ್ಲಿ ಬಹುಶಃ ಇವರೇ ಕೊನೆಯವರೆಂದು ತೋರುತ್ತದೆ.

೮. ಇಪ್ಪತ್ತೆಂಟನೆಯುವರಾದ ಶ್ರೀ ಮನ್ಮಹಾದೇವೇಂದ್ರ ಸರಸ್ವತಿ ಯುವರು ಮೈಥಿಲ ಬ್ರಾಹ್ಮಣರಾಗಿದ್ದರು. ಇವರ ಪೂರ್ವಾಶ್ರಮದ ಹೆಸರು ಶೇಷಮಿಶ್ರ ಎಂದೂ ತಂದೆಯ ಹೆಸರು ಭಾನು ಮಿಶ್ರ ಎಂದೂ ಇತ್ತು.

೯. ಮೂವತ್ತೇಳನೆಯುವರಾದ ಶ್ರೀಮತ್ ಸಚ್ಚಿದ್ವಿಲಾಸ ಸರಸ್ವತಿ ಯುವರು ಕನೋಜ ಬ್ರಾಹ್ಮಣರಾಗಿದ್ದರು. ಇವರ ಪೂರ್ವಾಶ್ರಮದ ಹೆಸರು ಶ್ರೀಪತಿ ಎಂದೂ ತಂದೆಯ ಹೆಸರು ಕಮಲೇಶ್ವರ ಎಂದೂ ಇತ್ತು.

ಶ್ರೀಮಾನ್ ವೆಂಕಟರಾಮನ್ ಅವರು ಬರೆದ ಪುಸ್ತಕದಲ್ಲಿ ಬೇರೆ ಹಲವು ಗುರುಗಳ ಪೂರ್ವಾಶ್ರಮದ ಹೆಸರು ಮತ್ತು ದೇಶಗಳು-ವಿವರಿಸಲ್ಪಟ್ಟಿಲ್ಲವಾದುದ ರಿಂದ ಕಾಂಚಿಯ ಗುರುಪೀಠವನ್ನು ಬೇರೆಷ್ಟು ಮಂದಿ ಸಾರಸ್ವತ ವರ್ಗದ ಬ್ರಾಹ್ಮಣರು ಅಲಂಕರಿಸಿದ್ದರೆಂದು ತಿಳಿಯಲು ಸಾಧ್ಯವಾಗಲಿಲ್ಲ.

ಶ್ರೀಮಚ್ಛಂಕರಾಚಾರ್ಯರೊಂದಿಗೆ ನಡಿಸಿದ ಶಾಸ್ತ್ರ-ವಾದದಲ್ಲಿ ಸೋತು ಸಂನ್ಯಾಸವನ್ನು ಸ್ವೀಕರಿಸಿದ ಮಂಡನ ಮಿಶ್ರರೇ ಸುರೇಶ್ವರಾಚಾರ್ಯರೆಂದು ಪ್ರಾಚೀನವಾದ ಸಕಲ ಶಂಕರದಿಗ್ವಿಜಯಗ್ರಂಥಗಳು ಸಾರುತ್ತವೆ. ಮಂಡನ ಮಿಶ್ರರು ಕನೋಜ ಬ್ರಾಹ್ಮಣರಾಗಿದ್ದು ಪ್ರಸಿದ್ಧ ಮೀಮಾಂಸಕರಾಗಿದ್ದ ಭಟ್ಟ ಕುಮಾರಿಲಮಿಶ್ರರ ಶಿಷ್ಯರಾಗಿದ್ದರು. ಆದರೆ ಅರ್ವಾಚೀನರಾದ ಕೆಲವು

ವಿದ್ವಾಂಸರು ಮಂಡನಮಿಶ್ರರು ಮತ್ತು ಸುರೇಶ್ವರಾಚಾರ್ಯರು ಒಂದೇ ವ್ಯಕ್ತಿ ಎಂಬುದರಲ್ಲಿ–ಸಂದೇಹ ವ್ಯಕ್ತಪಡಿಸಿದ್ದಾರೆ. ಏಕೆಂದರೆ ವ್ಯಾಸಾಚಲ ಎಂಬ ಹೆಸರಿನ ಕವಿಯೊಬ್ಬನು ರಚಿಸಿದ ಶಂಕರದಿಗ್ವಿಜಯದಲ್ಲಿ ಮಂಡನ ಮಿಶ್ರರು ಬೇರೆ-ಸುರೇಶ್ವರಾಚಾರ್ಯರು ಬೇರೆ ಎಂಬಂತೆ ವರ್ಣಿಸಿದ್ದಾನೆ. ಅಂದರೆ ಇತರ ಗ್ರಂಥಗಳಲ್ಲಿ ಶ್ರೀ ಶಂಕರಾಚಾರ್ಯರೊಂದಿಗೆ ಶಾಸ್ತ್ರವಾದವನ್ನು ನಡಿಸಿದವನು ಮಂಡನ ಮಿಶ್ರನೆಂದು ಹೇಳಿದ್ದರೂ, ವ್ಯಾಸಾಚಲನ ಗ್ರಂಥದಲ್ಲಿ ಮಂಡನ ಮಿಶ್ರನು ಶ್ರೀ ಶಂಕರಾಚಾರ್ಯರೊಂದಿಗೆ ಶಾಸ್ತ್ರ-ವಾದ ಮಾಡಿದ ಕಥೆ ಇಲ್ಲ. ಬದಲಿಗೆ ವ್ಯಾಸಾಚಲನು ಭಟ್ಟ ಕುಮಾರಿಲರಿಗೆ-ಮಂಡನ ಮಿಶ್ರನ ಜೊತೆಗೆ ವಿಶ್ವರೂಪನೆಂಬೊಬ್ಬ ಹೊಸ ಶಿಷ್ಯನನ್ನು ನಿರ್ಮಿಸಿ ಒಂದು ವಿಚಿತ್ರವಾದ ಕಥೆಯನ್ನು ಹೆಣೆದಿದ್ದಾನೆ. ಅಂದರೆ ವ್ಯಾಸಾಚಲನು ಇತಿಹಾಸಕಾರನಾಗಿರದೆ ಕವಿಯಾಗಿರುವುದರಿಂದ-ತನ್ನ ಕವಿತಾಚಾತುರ್ಯವನ್ನೂ, ನಿರ್ಮಾಪಕಶಕ್ತಿಯನ್ನೂ ಆ ಶಂಕರ ವಿಜಯದಲ್ಲಿ ಚೆಲೋ ರೀತಿಯಲ್ಲಿ ತೋರಿಸಿದ್ದಾನೆ. ಅವನು ಹೆಣೆದ ಕಥೆಯು ಮುಂದಿನಂತಿದೆ. ಶ್ರೀ ಶಂಕರರು ಕುಮಾರಿಲಭಟ್ಟರನ್ನು ಕಾಣಲು ಹೋದಾಗ-ಕುಮಾರಿಲರು ಪ್ರಾಯೋಪವೇಶನವನ್ನು ಕೈಗೊಂಡು ತುಷಾಗ್ನಿಯಲ್ಲಿ ಮಲಗಿದ್ದರು. ಅವರು ಶಂಕರಾಚಾರ್ಯರನ್ನು ಕಂಡು ತುಂಬಾ ಸಂತೋಷವನ್ನು ತೋರಿದರು. ಮತ್ತು ಶಂಕರಾಚಾರ್ಯರು ಕುಮಾರಿಲರನ್ನು ಪೂಜಿಸಿ ತಾನು ಬರೆದ ಮಹಾಭಾಷ್ಯವನ್ನು ಅವರಿಗೆ ತೋರಿಸಿದರು. ಆಗ ಕುಮಾರಿಲರು ಶಂಕರರನ್ನು ಕುರಿತು—ವಿಶ್ವರೂಪನೆಂಬೊಬ್ಬ ನನ್ನ ಶಿಷ್ಯನು ಮಗಧದಲ್ಲಿದ್ದಾನೆ. ನಿನ್ನ ಭಾಷ್ಯವನ್ನು ವಿಮರ್ಶಿಸಲು ಅವನೇ ಯೋಗ್ಯನಾದವನು. ಅವನು ಪ್ರವೃತ್ತಿಮಾರ್ಗಪರನು, ಅವನನ್ನು ಹೇಗಾದರೂ ನಿನ್ನ ವಶವರ್ತಿಯಾಗುವಂತೆ ಮಾಡು, ನಿನ್ನ ಕೆಲಸವಾಗುವುದೆಂದು ಹೇಳಿದರು ಮತ್ತು ಶಂಕರರನ್ನು ಬೀಳ್ಕೊಟ್ಟರು. ಆಗ ಅಲ್ಲಿಯೇ ತನ್ನ ಗುರುವಿನ ಅಂದರೆ ಕುಮಾರಿಲರ ಬಳಿಯಲ್ಲಿಯೇ ಕುಳಿತಿದ್ದ ಮಂಡನಮಿಶ್ರನು ಎದ್ದು ಬಂದು ಶ್ರೀ ಶಂಕರಾಚಾರ್ಯರನ್ನು ನಮಸ್ಕರಿಸಿ ಬಹಳವಾಗಿ ಸ್ತುತಿಸಿದನು. ಮಂಡನಮಿಶ್ರನ ಸ್ತುತಿಯಿಂದ ತುಷ್ಟರಾದ ಶಂಕರರು ಮಂಡನಮಿಶ್ರನಿಗೆ ತನ್ನ ಅದ್ವೈತ ತತ್ತ್ವವನ್ನು ಬೋಧಿಸಿ—ಅವನನ್ನು ತನ್ನ ಪಾದಗಳಲ್ಲಿ ಭಕ್ತಿಯುಳ್ಳವನನ್ನಾಗಿ ಮಾಡಿ ಹಾಗೂ ಅವನನ್ನು ಅಲ್ಲಿಯೇ ಬಿಟ್ಟು ಹೊರಡಲನುವಾದರು[1]. ಹಾಗೂ ವಿಶ್ವರೂಪನನ್ನು ಕಾಣಲು

1. ಏವಮೇನಮನುನೀಯ ಸತ್ಪದೈರ್ಬ್ರಹ್ಮವಾದನಪರೈರ್ಗುರುವರ್ಯಃ ॥
ಮಂಡನಂ ನಿಜಪದೇ ಸ್ಥಿರಭಕ್ತಿಂ ಸಂವಿಧಾಯ ಗಮನಾಯ ಮನೋಽಧಾತ್ ॥ ೫-೪೨ ।

ಆಕಾಶಮಾರ್ಗವಾಗಿ ಮಗಧಕ್ಕೆ ಹೋಗಿ ಅಲ್ಲಿ ವಿಶ್ವರೂಪನ ಮನೆಯ ಅಂಗಳದಲ್ಲಿಳಿದರು. ತರುವಾಯದ ಕಥೆಯು ಇತರ ಶಂಕರವಿಜಯಗಳಲ್ಲಿ ಮಂಡನಮಿಶ್ರನ ಕುರಿತಾಗಿ ಹೇಳಿದುದೇ ಆಗಿರುತ್ತದೆ.

ಹಿಂದಿನ ಕಥೆಯಿಂದ ನಿಷ್ಪನ್ನವಾಗುವುದೇನೆಂದರೆ—ಮೊದಲನೆಯದಾಗಿ ಶಂಕರಾಚಾರ್ಯರಿಗೂ-ಮಂಡನ ಮಿಶ್ರರಿಗೂ ಶಾಸ್ತ್ರಾರ್ಥದ ಸಂಬಂಧವಾಗಿ ವಾದ ನಡೆದಿಲ್ಲ ಮತ್ತು ಮಂಡನಮಿಶ್ರರು ವಾದವಲ್ಲಿ ಸೋತು ಸಂನ್ಯಾಸವನ್ನು ಸ್ವೀಕರಿಸಲಿಲ್ಲ ಎಂಬುದಾಗಿದೆ. ಎರಡನೆಯದಾಗಿ—ಮಗಧವಾಸಿಯಾಗಿದ್ದ ವಿಶ್ವರೂಪನೆಂಬವನೇ ಶ್ರೀ ಶಂಕರಾಚಾರ್ಯರೊಂದಿಗೆ ವಾದದಲ್ಲಿ ಸೋತು ಸಂನ್ಯಾಸವನ್ನು ಸ್ವೀಕರಿಸದವನು ಮತ್ತು ತರುವಾಯ ಸುರೇಶ್ವರಾಚಾರ್ಯ ಎಂಬ ಹೆಸರಿನಲ್ಲಿ ಪ್ರಸಿದ್ಧನಾದವನು ಎಂಬುದಾಗಿದೆ. ಆದರೆ ವ್ಯಾಸಾಚಲನು ಹೇಳಿದ ಈ ಕಥೆಯು ಅವನಿಗಿಂತ ಪೂರ್ವದವರು ಬರೆದಿಟ್ಟ ಕಥೆಗೆ ಸಂಪೂರ್ಣ ವಿರುದ್ಧವಾಗಿರುವುದರಿಂದಲೂ, ಆ ಕಥೆಗೆ ಯಾವುದೊಂದು ಆಧಾರವಿಲ್ಲದುದರಿಂದಲೂ ಅದು ಸರ್ವಥಾ ತ್ಯಾಜ್ಯವಾಗಿರುತ್ತದೆ.

ವ್ಯಾಸಾಚಲನ ತರುವಾಯದವರೆಂದು ತಿಳಿದುಬರುವ ಮಾಧವ ವಿದ್ಯಾರಣ್ಯರು ತಾನು ರಚಿಸಿದ ಶಂಕರವಿಜಯದಲ್ಲಿ ವ್ಯಾಸಾಚಲ ಕವಿಯನ್ನು ಹೊಗಳಿದ್ದಾರಾದರೂ. ವ್ಯಾಸಾಚಲನು ವಿಶ್ವರೂಪನ ಕುರಿತು ಹೇಳಿದ ಕಥೆಗೆ ವಿರುದ್ಧವಾಗಿ ಶ್ರೀ ಶಂಕರಾಚಾರ್ಯರೊಂದಿಗೆ ಶಾಸ್ತ್ರಾರ್ಥದಲ್ಲಿ ವಾದ ನಡಿಸಿದವನು ಮಂಡನ ಮಿಶ್ರನೆಂದು ಬಹಳ ಸ್ಪಷ್ಟವಾಗಿ ಹೇಳಿದ್ದಾರೆ ಮತ್ತು ಒಂದು ಪದ್ಯದಲ್ಲಿ ಮಂಡನ ಮಿಶ್ರನನ್ನೇ ವಿಶ್ವರೂಪ ಎಂಬ ವಿಶೇಷಣದಿಂದ ಕರೆದಿದ್ದಾರೆ. (ಸರ್ಗ ೮ ಶ್ಲೋಕ ೬೩) ಇದರ ಮೇಲಿಂದ ವಿದ್ಯಾರಣ್ಯರ ಕಾಲದಲ್ಲಿ ಬಳಕೆಯಲ್ಲಿದ್ದ ವ್ಯಾಸಾಚಲನ ಶಂಕರವಿಜಯದಲ್ಲಿ—ಈಗಿನಂಥ ಕಥೆಯಿರಲಿಲ್ಲವೆಂದು ಅನುಮಾನಿಸಬೇಕಾಗುತ್ತದೆ. ಅರ್ವಾಚೀನನಾದ ಆನಂದಗಿರಿಯು ಕೂಡ ಶ್ರೀ ಶಂಕರಾಚಾರ್ಯರೊಂದಿಗೆ ವಾದಮಾಡಿದವನು ಮಂಡನ ಮಿಶ್ರನೆಂದು ಹೇಳಿದ್ದಾನೆ. ಆದುದರಿಂದ ಮಂಡನ ಮಿಶ್ರನೇ ಸಂನ್ಯಾಸವನ್ನು ಸ್ವೀಕರಿಸಿದ ತರುವಾಯ ಸುರೇಶ್ವರಾಚಾರ್ಯರೆಂಬ ಹೆಸರಿನಿಂದ ಪ್ರಸಿದ್ಧನಾದನೆಂದು ಸಂದೇಹವಿಲ್ಲದೆ ಹೇಳಬಹುದು.

ಸುರೇಶ್ವರಾಚಾರ್ಯರ ಕುರಿತಾದ ಮತಭೇದವು ಅರ್ವಾಚೀನ ವಿದ್ವಾಂಸರಲ್ಲಿಯೂ ಇದೆ. ಶ್ರೀಮಾನ್ ಕೆ. ಎ. ನೀಲಕಂಠ ಶಾಸ್ತ್ರೀ, ಎಮ್. ಎ. ಅವರ ಅಭಿಪ್ರಾಯದಲ್ಲಿ ಮಂಡನಮಿಶ್ರ ಮತ್ತು ಸುರೇಶ್ವರಾಚಾರ್ಯರು ಬೇರೆ ಬೇರೆ

ವ್ಯಕ್ತಿಗಳೆಂದಿರುತ್ತದೆ:—ಆದರೆ ಇದು ಆಧಾರರಹಿತವಾಗಿರುತ್ತದೆಂದು ಹಿಂದೆ ವಿವರಿಸಿವೆ. ಮಂಡನಮಿಶ್ರರು ಬೇರೆ ಸುರೇಶ್ವರಾಚಾರ್ಯರು ಬೇರೆ ಎನ್ನು ವವರ ವಾದಕ್ಕೆ ಶ್ರೀಮಾನ್ ಕೆ. ವೆಂಕಟರಾಮನ್ ಅವರು ತಾನು ಬರೆದ ಕಾಂಚೀಪೀಠದ ಇತಿಹಾಸದಲ್ಲಿ ಸರಿಯಾದ ಉತ್ತರ ಕೊಟ್ಟಿದ್ದಾರೆ. ಶಂಕರಾ ಚಾರ್ಯರು ಸ್ಥಾಪಿಸಿದರು ಎಂದು ಹೇಳುವ ಹಲವು ಮಠಗಳನ್ನು—ಸ್ಥಾಪಿಸಿ ದವರು ವಾಸ್ತವಿಕವಾಗಿ ಸುರೇಶ್ವರಾಚಾರ್ಯರೇ ಆಗಿದ್ದರು. ಆದುದರಿಂದಲೇ ಆ ಮಠಗಳ ಪರಂಪರೆಯಲ್ಲಿ ಶಂಕರಾಚಾರ್ಯರ ತರುವಾಯದ ಹೆಸರು ಸುರೇಶ್ವರಾಚಾರ್ಯರದಾಗಿರುತ್ತದೆ. ಶ್ರೀ ಶಂಕರಾಚಾರ್ಯರ ಕಾಲದಲ್ಲಿಯೇ ಮಂಡನ ಮಿಶ್ರನ ವಿದ್ವತ್ತಿನಿಂದ ಮತ್ತು ಖ್ಯಾತಿಯಿಂದಾಗಿ ಇತರ ಶಿಷ್ಯರು ಒಳಗಿಂದೊಳಗೇ ಕರುಬುತಿದ್ದರೆಂದು ಶಂಕರ ವಿಜಯಗಳಿಂದ ತಿಳಿದುಬರುತ್ತದೆ. ಹೀಗಿರುವಾಗ—ಹೊಸ ಬ್ರಾಹ್ಮಣರು-ಮಂಡನ ಮಿಶ್ರನು ತಮ್ಮವನಲ್ಲವೆಂಬ ಕಾರಣದಿಂದ ಹೊಟ್ಟೆಕಿಚ್ಚುಪಟ್ಟು-ಮಂಡನ ಮಿಶ್ರನು ಮತ್ತು ಸುರೇಶ್ವರಾ ಚಾರ್ಯರು ಒಂದೇ ವ್ಯಕ್ತಿಯಲ್ಲವೆಂದು ಹೇಳಿದುದರಿಂದ ಆಶ್ಚರ್ಯಪಡ ಬೇಕಾಗಿಲ್ಲ. ಈ ಕುರಿತು ಶ್ರೀಮಾನ್ ಕೆ. ವೆಂಕಟರಾಮನ್ ಅವರು ಹೇಳಿದ ಮಾತುಗಳನ್ನೇ ಇಲ್ಲಿ ಉದಹರಿಸಲಾಗುವುದು:—

"Suresvaracharya is the Celebrated Mandana Misra, a great Mimansa teacher, and pupil of Kumarila Bhatta. He is said to have been an incarnation of Brhama; and his wife was a very learned lady so much so that she was looked upon as Sarasvati herself. He was by cast a Kanaujia Goud Brahman. He renounced the world and his doctrines as the result of a dispute with Sankara, and followed the latter as his disciple. He is the author of a number of Vedanta and Mimamsa works—(೧) ನೈಷ್ಕರ್ಮ್ಯಸಿದ್ಧಿ, (೨) ತೈತ್ತಿ ರೀಯ ಉಪನಿಷದ್ ಭಾಷ್ಯ (೩) ಬೃಹದಾರಣ್ಯಕೋಪನಿಷದ್ ಭಾಷ್ಯವಾರ್ತಿಕ, (೪) ಮಾನಸೋಲ್ಲಾಸ. (೫) ಪಂಚೀಕರಣವಾರ್ತಿಕ. (೬) ಬ್ರಹ್ಮಸಿದ್ಧಿ. (೭) ವಿಧಿವಿವೇಕ. (೮) ವಿಭ್ರಮವಿಲಾಸ. "Prithvidhava" "Brahmasvarupa" and "Visvarupa" are probably only other names for him; though some times they are regarded as different persons. I have already said how he is claimed as the first

head of several mathas. Undoubtedly, he is the most illustrious of Sri Sankara's pupils, and dsservedly held in great esteem by his followeres .This pre-eminence seems to have excited the jealousy of others, which led to a sort of split among the great Guru's followers soon after his demise if not quite during his life time.

That is probably the meaning of the circumstantial account of the squabble over the writing of a Vartika on the Brahmasutra Bhashya, whicn Madhava gives in his **Sankara Vijaya.**

ಮಿಶ್ರ ಎಂಬ ಉಪಾಧಿಯು, ಮೂಲದಲ್ಲಿ ಸಾರಸ್ವತ ಬ್ರಾಹ್ಮಣರದೇ ಆಗಿತ್ತು. ಮತ್ತು ಅವರೇ ತರುವಾಯದ ಕಾಲದಲ್ಲಿ ಕನೋಜಕ್ಕೆ ಹೋಗಿ ನೆಲಸಿದುದರಿಂದ ಅಲ್ಲಿ ಬಳಕೆಗೆ ಬಂದಿತ್ತು. ಈಗ ಆ ಉಪಾಧಿಯು ಸರಯೂ ಪಾರೀಣ ಹಾಗೂ ಮೈಥಿಲ ಬ್ರಾಹ್ಮಣರಲ್ಲಿಯೂ ಬಳಕೆಯಲ್ಲಿದೆ. ಕಾಶೀನಾಗರೀ ಪ್ರಚಾರಿಣೀ ಸಭೆಯವರು ಪ್ರಕಟಿಸಿದ "ಸಂಕ್ಷಿಪ್ತ ಹಿಂದೀ ಶಬ್ದಸಾಗರ" ಎಂಬ ಕೋಶದಲ್ಲಿ 'ಮಿಶ್ರ' ಶಬ್ದದ ವಿವರವು ಮುಂದಿನಂತಿದೆ—ಮಿಶ್ರ ಸರ್ಯೂ ಪಾರೀಣ. ಕಾನ್ಯಕುಬ್ಜ ಔರ್ ಸಾರಸ್ವತ ಆದಿ ಬ್ರಾಹ್ಮಣೋಂಕೀ ಏಕ ವರ್ಗಕೀ ಉಪಾಧಿ.

## ೫

## ದೇಶಾಂತರಗಳಲ್ಲಿ ಸಾರಸ್ವತ ಬ್ರಾಹ್ಮಣರು

ಸಾರಸ್ವತ ಬ್ರಾಹ್ಮಣರಲ್ಲಿ ಹೆಚ್ಚಿನವರು ವೈದಿಕ ವೃತ್ತಿಯನ್ನು ತೊರೆದು ವ್ಯಾಪಾರವನ್ನು ಕೈಗೊಂಡರೆಂದು ಹಿಂದೆ ಹೇಳಿದೆ. ಆದರೆ ಆ ಮೊದಲೇ ಅವರಲ್ಲಿ ಹೆಚ್ಚು ಧನಿಕರಾಗಿದ್ದವರು ವ್ಯಾಪಾರವನ್ನು ಕೈಗೊಂಡು ಹಡಗುಗಳ ಮೂಲಕ ದೇಶ ದೇಶಾಂತರಗಳೊಂದಿಗೂ ವ್ಯಾಪಾರ ನಡಿಸುತಿದ್ದರು. ಮತ್ತು ಹೊರದೇಶಗಳಲ್ಲಿಯೂ. ದಕ್ಷಿಣ ಭಾರತದ ಇಡೀ ಪಶ್ಚಿಮ ಕರಾವಳಿಯಲ್ಲಿಯೂ ಅಲ್ಲಲ್ಲಿ ವ್ಯಾಪಾರದ ಮಳಿಗೆಗಳನ್ನು ಸ್ಥಾಪಿಸಿದ್ದರು. ಈ ಸಂದರ್ಭದಲ್ಲಿ ಪಲ್ಲವ ವಂಶದ ಬ್ರಾಹ್ಮಣರು ಕೂಡ ವ್ಯಾಪಾರವನ್ನು ನಡಿಸುತಿದ್ದರೆಂದು ಹೇಳಬೇಕು. ಪಲ್ಲವವಂಶದವರು ದಕ್ಷಿಣ ಭಾರತದ ಪೂರ್ವಕರಾವಳಿಯಿಂದ ಹಡಗುಗಳ

ಮೂಲಕ-ಸುಮಾತ್ರಾ ಜಾವಾ ಮೊದಲಾದ ದ್ವೀಪಗಳಿಗೆ ಹೋಗಿದ್ದರೆಂಬ ವಿಷಯವು ಚರಿತ್ರೆಗಳಲ್ಲಿ ಹಲವರು ಓದಿರಬಹುದಾದರೂ, ಪಶ್ಚಿಮ ಕರಾವಳಿಯಲ್ಲಿ ನೆಲಸಿದ್ದ ಸಾರಸ್ವತ ಬ್ರಾಹ್ಮಣರು ಹಡಗುಗಳ ಮೂಲಕ ಹೋಗಿ ಅರಬದೇಶವನ್ನು ವಶಪಡಿಸಿಕೊಂಡಿದ್ದರೆಂಬ ವಿಷಯವು ಕತ್ತಲೆಯಲ್ಲಿಯೇ ಉಳಿದಿದೆ.

ಮೈಸೂರಿನ ಪ್ರಖ್ಯಾತ ಕಾದಂಬರೀ ಲೇಖಕರಾಗಿದ್ದ ದಿವಂಗತ ಬಿ. ವೆಂಕಟಾಚಾರ್ಯರವರು ಶಕ ೧೮೩೬ರಲ್ಲಿ ಬರೆದು ಪ್ರಕಟಿಸಿದ "ದೇಶಾಂತರಗಳಲ್ಲಿ ಪ್ರಾಚೀನ ಭಾರತರ ಉಪನಿವೇಶಗಳು" ಎಂಬ ಪುಸ್ತಕದ ೩೦ನೆಯ ಪುಟದಿಂದ ಮುಂದಿನ ವಿಷಯವು ಬಣ್ಣಿಸಲಾಗಿದೆ.

"ಅರಬ್ಬಿ ದೇಶದಲ್ಲಿ ಮಹಮ್ಮದನ ಆವಿರ್ಭಾವಕ್ಕೆ ಮೊದಲು ಒಬ್ಬ ಹಿಂದೂ ರಾಜನು ಇದ್ದನೆಂದು ಪುರಾತತ್ವವನ್ನು ತಿಳಿದ ಯುರೋಪು ಪಂಡಿತರು ನಮಗೊಂದು ಹೊಸ ಸುದ್ದಿಯನ್ನು ತಿಳಿಸುತ್ತಾರೆ. ಮುಕ್ತೇಶ್ವರನೆಂಬೊಬ್ಬ ಸಾರಸ್ವತ ಬ್ರಾಹ್ಮಣನು ಮಕ್ಕಾದಲ್ಲಿ ರಾಜನಾಗಿದ್ದನೆಂತಲೂ, ಅವನಿಗೆ ಮಗನಾದ ಸಹರಿಯನು ಅವನ ಮಗ ಸಾಲ ಎಂಬಾತನೊಂದಿಗೆ ಅಲ್ಲಿಂದ ಓಡಿಸಲ್ಪಟ್ಟವನಾಗಿ ಅವರಿಬ್ಬರೂ ಬಂದು ಭಾರತ ವರ್ಷದಲ್ಲಿ ನಿಂತರೆಂದೂ ಕನಿಂಗ್‌ಹ್ಯಾಮ್ ಸಾಹೇಬನ ಹೇಳಿಕೆಯಿಂದ ತಿಳಿದು ಬರುತ್ತದೆ.

ಅರಬ್ಬಿ ದೇಶದಲ್ಲಿ ಹಿಂದೂ ಪ್ರಾಧಾನ್ಯತೆಯ ವಿಚಾರದಲ್ಲೊಂದು ಪ್ರವಾದವಿರುವುದೇನೆಂದರೆ ಮಕ್ಕಾದಲ್ಲೊಂದು ಶಿವಲಿಂಗವು ಇರುವುದಾಗಿಯೂ ಇಸಲಾಮುಧರ್ಮ ಪ್ರವರ್ತಕನಾದ ಮಹಮ್ಮದನಿಗೆ ಮೊದಲು ಅಲ್ಲಿ ಅಗ್ನಿಪೂಜಕರ ಪ್ರಾದುರ್ಭಾವವಾಗಿದ್ದಿತೆಂತಲೂ ಆಗ ಭಾರತವಾಸಿಗಳಾದ ಹಿಂದೂಗಳು ವ್ಯಾಪಾರಕ್ಕಾಗಿಯೂ ತೀರ್ಥಯಾತ್ರೆಯ ಸಲುವಾಗಿಯೂ ಅಲ್ಲಿಗೆ ಹೋಗಿ ಬರುತಿದ್ದರೆಂತಲೂ ಹಿಂದೂಗಳ ಪ್ರಾಧಾನ್ಯದ ಕಾಲದಲ್ಲಿ ಅಲ್ಲೊಂದು ಶಿವಲಿಂಗವು ಪ್ರತಿಷ್ಠಿತವಾಯಿತೆಂತಲೂ ಹೇಳಲ್ಪಡುತ್ತದೆ. ಭವಿಷ್ಯಪುರಾಣದಲ್ಲಿ ಮಕ್ಕೇಶ್ವರನಾದ ಶಿವಮೂರ್ತಿಯು

ಹೆಸರು ಬಂದಿದೆ. ಹಿಂದೂಮತಕ್ಕೆ ವಿರೋಧಿಗಳಾದ ಮುಸಲ್ಮಾನರು ಪ್ರಾಬಲ್ಯಕ್ಕೆ ಬಂದ ಹಾಗೆಲ್ಲಾ ಹಿಂದೂಗಳು ಮಕ್ಕಾಕ್ಕೆ ಹೋಗಿ ಬರುವುದು ನಿಂತು ಹೋಯಿತೆಂದೂ ಮುಸಲ್ಮಾನರು ಮಕ್ಕೇಶ್ವರನ ಮೂರ್ತಿಯನ್ನು ಮರೆಮಾಡಿಟ್ಟುಕೊಂಡರೆಂದೂ, ಈಗ ಮಕ್ಕಾ ದಲ್ಲಿ 'ಕಾಬಾ' ಎಂಬ ಮಂದಿರದಲ್ಲಿರುವ ಕೃಷ್ಣಶಿಲೆಯೇ ಮಕ್ಕೇ ಶ್ವರನ ರೂಪಾಂತರವೆಂತಲೂ ಪ್ರಬಲವಾದ ಪ್ರವಾದವಿದೆ. ಈ ಪ್ರವಾದವು ವಿಶ್ವಕೋಶದಲ್ಲಿ ಉದಹರಿಸಲ್ಪಟ್ಟಿದೆ.

ಮೇಲೆ ಹೇಳಿದ ರಾಜಾ ಮುಕ್ತೇಶ್ವರನೇ ಶಿವಲಿಂಗವನ್ನು ಸ್ಥಾಪಿಸಿ ಅದಕ್ಕೆ ತನ್ನ ಹೆಸರಾದ "ಮುಕ್ತೇಶ್ವರನೆಂಬ" ಹೆಸರಿಟ್ಟ ನೆಂದೂ ಬೋಧೆಯಾಗುತ್ತದಲ್ಲದೇ ಮುಕ್ತೇಶ್ವರನೆಂಬ ಹೆಸರೇ ನಗರಕ್ಕೂ ಬಂದು ಕ್ರಮೇಣ ಅದು ರೂಪಾಂತರ ಹೊಂದಿ "ಮಕ್ಕಾ" ಎಂಬುದಾಗಿ ಈಗದು ಮುಸಲ್ಮಾನರಿಗೆ ಮುಕ್ತಿಸ್ಥಾನ ವಾಗಿ ಪರಿಣಮಿಸಿದೆ." (ಬಿ. ವೆಂಕಟಾಚಾರ್ಯ)

ಒಂದಿಸ ವರ್ಣನೆಯ ಮೇಲಿಂದ ಬಹಳ ಪ್ರಾಚೀನ ಕಾಲದಲ್ಲಿಯೇ ಸಾರಸ್ವತ ಬ್ರಾಹ್ಮಣರಲ್ಲಿ ಅತ್ಯಂತ ಧನಿಕರಾಗಿದ್ದವರು ಹಡಗುಗಳಲ್ಲಿ ಪರದೇಶ ಗಳಿಗೆ ಹೋಗಿ ಅಲ್ಲಿ ತಮ್ಮ ಆಳ್ವಿಕೆಯನ್ನು ಸ್ಥಾಪಿಸಿದ್ದರೆಂದು ಸಿದ್ಧವಾಗುತ್ತದೆ. ಅವರು ಬರಿಯ ಆಳ್ವಿಕೆಯನ್ನು ಮಾತ್ರ ನಡಿಸುವವರಾಗಿರದೇ. ಧರ್ಮಪ್ರಚಾರ ಕರೂ. ವ್ಯಾಪಾರಿಗಳೂ ಆಗಿರುತ್ತಿದ್ದರೆಂದು ತಿಳಿಯಬೇಕು. ಏಕೆಂದರೆ ಅವರು ದೊಡ್ಡ ಸಮೂಹವಾಗಿ ಹೋಗಿ ಅಲ್ಲಿ ನೆಲಸದೇ ರಾಜ್ಯವನ್ನು ಸ್ಥಾಪಿಸಲು ಸಾಧ್ಯವಿರಲಿಲ್ಲವೆಂಬುದು ಸ್ವತಸಿದ್ಧವಿದೆ. ಆದುದರಿಂದ ಅವರ ಸಮೂಹದಲ್ಲಿ ಶ್ರೋತ್ರಿಯರಾದ ಬ್ರಾಹ್ಮಣರೂ. ಕ್ಷಾತ್ರಧರ್ಮವನ್ನು ಕೈಗೊಂಡ ಯೋದ್ಧರೂ. ವ್ಯಾಪಾರಿಗಳೂ ಇರಲೇಬೇಕು—ಎಂಬುದರಲ್ಲಿ ಸಂದೇಹವಿರುವುದಿಲ್ಲ. ಹಜರತ್ ಮುಹಮ್ಮದರ ಚರಿತ್ರೆಯಲ್ಲಿ ಅರಬದೇಶದ ಜನರು ಕಲ್ಲುಗಳನ್ನು ಪೂಜಿಸು ತ್ತಿದ್ದರೆಂದು ಹೇಳಿರುವುದರಿಂದ ಅರಬದಲ್ಲಿ ನೆಲಸಿದ್ದ ಸಾರಸ್ವತ ಬ್ರಾಹ್ಮಣರು ಅರಬೀ ಜನರನ್ನು ಹಿಂದುಗಳನ್ನಾಗಿ ಮಾಡಿ ಅವರಲ್ಲಿ ಹಿಂದೂಧರ್ಮವನ್ನು ಪ್ರಚಾರಮಾಡಿದ್ದರೆಂತಲೂ ದೇವಾಲಯಗಳನ್ನು ಕಟ್ಟಿ ಶಿವಲಿಂಗಗಳನ್ನು ಸ್ಥಾಪಿಸಿದ್ದ ರೆಂತಲೂ ಸಿದ್ಧವಾಗುತ್ತದೆ.

ಪ್ರಸಂಗಬಂದರೆ ಸಾರಸ್ವತ ಬ್ರಾಹ್ಮಣರು ಕ್ಷಾತ್ರಧರ್ಮವನ್ನು ಕೈಗೊಳ್ಳಲು ಹಿಂಜರಿಯುತ್ತಿರಲಿಲ್ಲವಾದುದರಿಂದ ಮಕ್ಕಾದಲ್ಲಿ ಮುಕ್ತೇಶ್ವರನೆಂಬ ಸಾರಸ್ವತ ಬ್ರಾಹ್ಮಣನು ಅರಸನಾಗಿ ಆಳುತಿದ್ದನೆಂಬುದರಲ್ಲಿ ಆಶ್ಚರ್ಯಪಡಬಹುದಾದುದೇನೂ ಇಲ್ಲ. ಸಂಕ್ಷೇಪವಾಗಿ ಹೇಳುವುದಾದರೆ ಹಜರತ್ ಮಹಮ್ಮದರ ಇಸ್ಲಾಮ್ ಧರ್ಮ ಪ್ರಚಾರಕ್ಕೆ ಮೊದಲು ಅರಬದಲ್ಲಿ ನೆಲಸಿದ್ದ ಸಾರಸ್ವತ ಬ್ರಾಹ್ಮಣರು ಅರಬದ ರಾಜಕೀಯ, ಧಾರ್ಮಿಕ ಹಾಗೂ ವ್ಯಾವಹಾರಿಕ ಅಥವಾ ವ್ಯಾವಸಾಯಿಕ ಅಧಿಕಾರವನ್ನೆಲ್ಲ ತಮ್ಮ ಅಂಕೆಯಲ್ಲಿರಿಸಿಕೊಂಡಿದ್ದರೆನ್ನಬಹುದು.

ಹಜರತ್ ಮಹಮ್ಮದರ ಇಸ್ಲಾಮ್ ಧರ್ಮದ ಪ್ರಚಾರವೆಂದರೆ ಪರಕೀಯರಾಗಿದ್ದ ಭಾರತೀಯರ ಅಧಿಕಾರಕ್ಕೆ ವಿರುದ್ಧವಾಗಿ ಧಾರ್ಮಿಕರೂಪದಿಂದ ಹೂಡಿದ ರಾಜಕೀಯ ಆಂದೋಲನವಾಗಿತ್ತು ಅಥವಾ ಸ್ವಾತಂತ್ರ್ಯಸಮರವಾಗಿತ್ತೆನ್ನಬಹುದು. ಅಂಥ ಧಾರ್ಮಿಕ ಆಂದೋಲನವನ್ನು ಹೂಡಿದ ಹಜರತ್ ಮಹಮ್ಮದರು ತನ್ನ ದೇಶದ ಜನರ ಬೆಂಬಲವನ್ನು ಪಡೆದು ಸಾರಸ್ವತ ಬ್ರಾಹ್ಮಣರ ಆಧೀನವಿದ್ದ ಧಾರ್ಮಿಕ ಹಾಗೂ ರಾಜಕೀಯ ಅಧಿಕಾರವನ್ನು ಸಂಪೂರ್ಣವಾಗಿ ಕಸಿದುಕೊಂಡರು. ಮತ್ತು ಮಕ್ಕಾದಲ್ಲಿದ್ದ ಶಿವಾಲಯಗಳನ್ನು ಮಸೀದಿಗಳನ್ನಾಗಿ ಮಾರ್ಪಡಿಸಿದರೆಂದು ಒಂದು ಅಸ್ಪಷ್ಟವಾದ ದಂತಕಥೆಯು ಸಾರಸ್ವತ ಬ್ರಾಹ್ಮಣರಲ್ಲಿ ಬಹಳ ಹಿಂದಿನ ಕಾಲದಿಂದ ಸಾಗಿಬಂದಿದೆ. ಹಿಂದಿನ ವಿವರಗಳಿಗೆ ಪೋಷಕವಾದ ಕೆಲವು ವಿಷಯಗಳು ಮುಂದಿನಂತಿವೆ:—

ಹಜರತ್ ಮಹಮ್ಮದರು ಧಾರ್ಮಿಕ ಬಲಾತ್ಕಾರವನ್ನು ಬೋಧಿಸುತ್ತಿರಲಿಲ್ಲವೆಂದು ಚರಿತ್ರೆಯಲ್ಲಿ ಬರೆದಿರುತ್ತಾರಾದರೂ, ಅವರ ಅನುಯಾಯಿಗಳು, ವ್ಯಾಪಾರಿಗಳಾಗಿದ್ದ ಹಾಗೂ ವೈಧಿಕಧರ್ಮ ಪ್ರಚಾರಕರಾಗಿದ್ದ ಸಾರಸ್ವತ ಬ್ರಾಹ್ಮಣರು ಇಸ್ಲಾಮನ್ನು ಒಪ್ಪುವುದಿಲ್ಲವೆಂಬ ಕಾರಣದಿಂದ, ಅವರನ್ನು ಬಲಾತ್ಕಾರದಿಂದ ಮತಾಂತರಿಸಿ ಮಿತಿಮೀರಿ ಪೀಡಿಸತೊಡಗಿದುದರಿಂದ, ಮತಾಂತರಗೊಂಡ ಸಾರಸ್ವತ ಬ್ರಾಹ್ಮಣರ ಒಂದು ಪಂಗಡವು ಶಕದ ಏಳನೆಯ ಶತಮಾನದಲ್ಲಿ ಅರಬರ ಅತ್ಯಾಚಾರದಿಂದ ಪಾರಾಗುವ ಸಲುವಾಗಿ ಸಾಧ್ಯವಿದ್ದಷ್ಟು ಸಂಪತ್ತನ್ನು ಹಿಡಿದುಕೊಂಡು, ತಮ್ಮ ಹೆಂಡತಿ ಮಕ್ಕಳೊಂದಿಗ ಅರಬದಿಂದ ಹಡಗುಗಳನ್ನು ಹತ್ತಿ ತಮ್ಮ ಮಾತೃಭೂಮಿಯಾದ ಭಾರತದ ಕಡೆಗೆ ಹೊರಟವರು ಪಶ್ಚಿಮ ಕರಾವಳಿಯ ಭಟಕಳವನ್ನು ತಲಪಿ ಅಲ್ಲಿ ಇಳಿದರು. ಹಾಗೆ ಹೊಸತಾಗಿ ಬಂದ ಆ ಜನರನ್ನು ಭಟಕಳದಲ್ಲಿ ನೆಲಸಿದ್ದ ಕೊಂಕಣಿ ಜನರು

"ನವಾಯತೆ" ಅಂದರೆ ಹೊಸದಾಗಿ ಬಂದವರೆಂದು ಕರೆದರು. ನವಾಯತೆ ಎಂಬ ಶಬ್ದವು "ನವಾಯತೊ" ಎಂಬ ಪ್ರಾಕೃತ ಶಬ್ದದ ಬಹುವಚನ ರೂಪ ವಾಗಿರುತ್ತದೆ. ಸಂಸ್ಕೃತದಲ್ಲಿನ "ನವಾಗತಃ = ಹೊಸದಾಗಿ ಬಂದವನು" ಎಂಬ ಶಬ್ದವು ಕೊಂಕಣಿಯಲ್ಲಿ "ನವಾಯತೊ" ಎಂದು ಮಾರ್ಪಟ್ಟಿತು. ಕನ್ನಡದಲ್ಲಿ ಆ ಶಬ್ದವು "ನವಾಯತ" ಎಂದಾಗಿದೆ. ಹಾಗೆ ಬಂದ ಆ ಜನರ ಭಾಷೆಯು– ಭಟಕಳದ ಜನರಾಡುವ ಕೊಂಕಣಿಗೆ ಬಹಳ ಹತ್ತಿರವಾಗಿತ್ತು. ಹೀಗಾಗಿ ಆ ಜನರು ಭಟಕಳದ ಜನರೊಂದಿಗೆ ಬಹಳ ಬೇಗನೇ ಸಲಿಗೆಯಿಂದ ವ್ಯವಹರಿಸ ತೊಡಗಿದರು.

ಹೊಸತಾಗಿ ಬಂದ ಆ ಜನರು ಮುಸಲ್ಮಾನರಾಗಿದ್ದುದರಿಂದ. ಅವರ ತರುವಾಯ ಭಾರತವರ್ಷದಲ್ಲಿ ಮತಾಂತರಗೊಂಡು ಮುಸಲ್ಮಾನರಾದವರನ್ನು ಕೊಂಕಣಿಯಲ್ಲಿ "ನವಾಯತೊ" ಶಬ್ದವನ್ನೇ ತುಸು ರೂಪಾಂತರಿಸಿ "ನಾಯತೊ" ಎಂದು ಕರೆಯತೊಡಗಿದರು. ಕೊಂಕಣಿಯಲ್ಲಿ ನಾಯತೊ ಎಂಬ ಶಬ್ದದ ಅರ್ಥವು "ಮುಸಲ್ಮಾನ" ಎಂದಿಷ್ಟೇ ಇರುತ್ತದೆ. ಅದಕ್ಕೆ ಬೇರೆ ಯಾವ ಅರ್ಥವೂ ಇಲ್ಲ. ಆದರೆ "ನವಾಯತೊ" ಎಂಬ ಶಬ್ದದ ಅರ್ಥವು ಭಟಕಳದಲ್ಲಿ ನೆಲಸಿದ್ದ ಕೊಂಕಣಿ ನುಡಿಯುವ ಮುಸಲ್ಮಾನರ ಪಂಗಡದ ಮನುಷ್ಯನೆಂದಿರು ತ್ತದೆ. ಅಲ್ಲಿ "ಮುಸಲ್ಮಾನ" ಎಂಬ ಅರ್ಥವು ಗೌಣವಾಗಿರುತ್ತದೆ.

ನವಾಯತರು ಕೊಂಕಣಿಯಾಡುತ್ತಿರುವುದರ ಸರಿಯಾದ ಕಾರಣವನ್ನು ಕಂಡುಕೊಳ್ಳಲಾರದ ಕೆಲವರು ನವಾಯತರೆಂದರೆ ಭಟಕಳಕ್ಕೆ ವ್ಯಾಪಾರಕ್ಕೆಂದು ಬಂದಿದ್ದ ಅರಬಿಯರಿಂದ ಭಟಕಳದಲ್ಲಿನ ಕೊಂಕಣಿಯಾಡುವ ಹಿಂದೂ ಸ್ತ್ರೀಯರಲ್ಲಿ ಹುಟ್ಟಿದ ಸಂತತಿಯವರೆಂದು ತಿಳಿದುಕೊಂಡಿದ್ದಾರೆ1. ಆದರೆ ಹಾಗೆ ತಿಳಿದುಕೊಂಡವರು. ನವಾಯತರು ನುಡಿಯುವ ಕೊಂಕಣಿಯು ಭಟಕಳ ದಲ್ಲಿ ಬಳಕೆಯಲ್ಲಿರುವ ಕೊಂಕಣಿಯಿಂದ ಹಲವು ಅಂಶಗಳಲ್ಲಿ ಭಿನ್ನವಾಗಿದೆ ಯೆಂಬುದನ್ನು ಗಣನೆಗೆ ತೆಗೆದುಕೊಂಡಿಲ್ಲವೆನ್ನಬೇಕು. ಅಲ್ಲದೆ ನವಾಯತರು ತಮ್ಮ ಹಿರಿಯರು ಅರಬಿಯದಿಂದಲೇ ವಲಸೆ ಬಂದವರೆಂಬ ಐತಿಹ್ಯವು ತಮ್ಮಲ್ಲಿ ವಂಶಪಾರಂಪರ್ಯವಾಗಿ ಸಾಗಿ ಬಂದಿದೆಯೆಂದು ಹೇಳುವುದನ್ನು ಕೇಳಿಲ್ಲ ವೆನ್ನಬೇಕು. ಅವರು ಹೇಳುವುದು ಪೂರ್ಣ ಸತ್ಯವೆಂದು ಮುಂದಿನ ವಿವರ ಗಳಿಂದ ತಿಳಿಯಬಹುದು.

---

1. Navayats of Kanara—by Victor S. De Souza.

೧೯೩೩ ನೆಯ ಇಸವಿಯಲ್ಲಿ ಮಕ್ಕಾಯಾತ್ರೆಗೆ ಹೋಗಿದ್ದ ಭಾರತೀಯ ಮುಸಲ್ಮಾನ ಸಜ್ಜನರೊಬ್ಬರು ಹಿಂದಿರುಗುವಾಗ ತುರ್ಕಿಯ ಹಾದಿಯಾಗಿ ಬಂದಿದ್ದರು. ಅವರು ತುರ್ಕಿಯಲ್ಲಿನ ಇಸ್ತಾಂಬೂಲ್ (Constantinople) ವಸ್ತು ಸಂಗ್ರಹಾಲಯದಲ್ಲಿ ಪ್ರದರ್ಶನಕ್ಕೆ ಇಟ್ಟ ಕೆಲವು ತಾಮ್ರಪಟಗಳ ಮೇಲೆ ಬರೆದಿರುವ ಅರಬೀ ಭಾಷೆಯ ಕವಿತೆಗಳನ್ನು ಪ್ರತಿಮಾಡಿ ತಂದಿದ್ದರು. ಆ ತಾಮ್ರಪಟಗಳು ಅರಬದೇಶದವುಗಳಾಗಿದ್ದು ಮಕ್ಕಾ ದೇವಾಲಯ ಹಾಗೂ ಹಿಂದೂ ಧರ್ಮಗಳಿಗೆ ಸಂಬಂಧಪಟ್ಟವುಗಳಾಗಿದ್ದವು. ಅವುಗಳ ಮೇಲೆ ಬರೆದಿರುವ ಕವಿತೆಗಳು, ಇಸ್ಲಾಮ್ ಧರ್ಮಸ್ಥಾಪನೆಯಾಗುವ ಮೊದಲು ಅರಬದಲ್ಲಿನ ಮಕ್ಕಾ ಶಿವಾಲಯದಲ್ಲಿ ಪ್ರತಿ ವರ್ಷ ನೆರೆಯುವ ಜಾತ್ರೆಯ ಕಾಲದಲ್ಲಿ ಜರಗಿಸ ಲಾಗುತ್ತಿದ್ದ ಕವಿ ಸಂಮೇಳನದಲ್ಲಿ ಪಾರಿತೋಷಿಕ ಪಡೆದ ಕವಿತೆಗಳಾಗಿದ್ದವು. ಅವುಗಳಲ್ಲಿ ಹಿಂದೂಗಳ ವೇದಗಳ ಪ್ರಶಂಸೆಯೂ ಇತರ ಆಧ್ಯಾತ್ಮಿಕ ವಿಚಾರಗಳೂ ಇದ್ದವು. ಹಿಂದೆ ಹೇಳಿದ ಮುಸಲ್ಮಾನ ಸಜ್ಜನರು ಆ ಕವಿತೆಗಳ ಕುರಿತು ವಿಸ್ತಾರವಾದ ಒಂದು ಪ್ರಬಂಧವನ್ನು ಬರೆದು ಆ ಕವಿತೆಗಳ ಮೂಲದೊಂದಿಗೆ ಭಾಷಾಂತರವನ್ನೂ ಕೊಟ್ಟು ಕಲ್ಕತ್ತದಿಂದ ಶ್ರೀ ರಾಮಾನಂದ ಚತರ್ಜೀಯವರ ಸಂಪಾದಕತ್ವದಲ್ಲಿ ಹೊರಡುತ್ತಿದ್ದ "ವಿಶಾಲಭಾರತ" ಎಂಬ ಹಿಂದೀ ಮಾಸ ಪತ್ರಿಕೆಯ ೧೯೩೪ ನೆಯ ಇಸವಿ ಎಪ್ರೀಲ್ ತಿಂಗಳ ಸಂಚಿಕೆಯಲ್ಲಿ ಪ್ರಕಟಿಸಿದ್ದರು. ಮತ್ತು ಆ ಪ್ರಬಂಧದ ಕನ್ನಡ ಭಾಷಾಂತರವು ಅದೇ ವರ್ಷದ ಜುಲಾಯಿ ತಿಂಗಳ "ಸ್ವದೇಶೀಪ್ರಚಾರಕ" ಎಂಬ ಮಂಗಳೂರಿನ ಮಾಸಪತ್ರಿಕಯಲ್ಲಿ ಪ್ರಕಟವಾಗಿತ್ತು.

ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ ೨. ಡಾಕ್ಟರ್, ಎಸ್. ಶ್ರೀಕಂಠ ಶಾಸ್ತ್ರೀ ಎಮ್. ಏ. ಪಿ. ಎಚ್. ಡಿ. ಅವರು ಬರೆದ "ಭಾರತೀಯ ಸಂಸ್ಕೃತಿ" ಎಂಬ ಪುಸ್ತಕದ ೩೨೨ ನೆಯ ಪುಟದಲ್ಲಿ ಮುಂದಿನ ಅಂಶವಿದೆ:—

**"ಅರೇಬಿಯ ದೇಶದಲ್ಲಿ ಮುಹಮ್ಮದ ಪೈಗಂಬರರ ಮತಪ್ರಚಾರಕ್ಕೆ ಹಿಂದೆ ಲಿಂಗಪೂಜೆ, ಮೂರ್ತಿಪೂಜೆಗಳಿದ್ದವೆಂತಲೂ ಕಾಬದ ಸುತ್ತಲೂ ಇದ್ದ ವಿಗ್ರಹಗಳಿಗೆ ಕನ್ಯೆಯರೇ ಪೂಜಕರಾಗಿದ್ದರೆಂತಲೂ ಮಕ್ಕಾ ದೇವಾಲಯವನ್ನು ಸಮೀಪಿಸುವಾಗ ಹಾಜ್ ಯಾತ್ರಿಕನು ಪಂಚೆ ಉತ್ತರೀಯಗಳನ್ನು ಧರಿಸಬೇಕಾಗಿತ್ತೆಂತಲೂ ತಿಳಿದು ಬರುವುದು.** (Shustery—Outlines of Islamic Culture: Wester mark—Pagan Survivals in Mohammedanism.)

ಮದ್ರಾಸಿನಿಂದ ಹೊರಡುವ "Hindu" ದಿನಪತ್ರಿಕೆಯು 1963 ನೆಯ ಇಸವಿ ಫೇಬ್ರುವರಿ ತಿಂಗಳ "Weekly Magazine" ಒಂದರಲ್ಲಿ ಪ್ರಕಟವಾದ "The Palace of the Nawabs of Arcot" ಎಂಬ ಲೇಖನದಲ್ಲಿ ಭಟಕಳದ ನವಾಯತರು ಅರಬರ ಅತ್ಯಾಚಾರವನ್ನು ತಾಳಲಾರದೆ ಕ್ರಿಸ್ತನ ಏಳನೆಯ ಶತಮಾನದಲ್ಲಿ ಅರಬದಿಂದ ವಲಸೆ ಬಂದು ಭಟಕಳದಲ್ಲಿ ನೆಲಸಿದ್ದರೆಂತಲೂ, ಆರ್ಕಾಟದ ನವಾಬನಾಗಿದ್ದ ಚಂದಾಸಾಹೇಬನು ಭಟಕಳದ ನವಾಯತನಾಗಿದ್ದನೆಂತಲೂ ಇತ್ತು.

ಹಿಂದಿನ ವಿವರಗಳ ಮೇಲಿಂದ ಇಸ್ಲಾಮದ ಪ್ರಾದುರ್ಭಾವಕ್ಕೆ ಮೊದಲು ಅರಬದೇಶದಲ್ಲಿ ಹಿಂದೂಗಳ ಆಳ್ವಿಕೆ ಇತ್ತೆಂದೂ, ಅರಬದಲ್ಲಿ ಸಾರಸ್ವತ ಬ್ರಾಹ್ಮಣರು ನೆಲಸಿದ್ದರೆಂದೂ ಸಿದ್ಧವಾಗುತ್ತದಲ್ಲದೇ ಶ್ರೀವೆಂಕಟಾಚಾರ್ಯರು ಬರೆದ ಪುಸ್ತಕದೊಳಗಿನ ವಿಷಯಗಳು ವಾಸ್ತವಿಕವಾದವುಗಳೆಂದು ಕೂಡ ಸಿದ್ಧವಾಗುತ್ತದೆ.

ಚಿತ್ಪಾವನ ಬ್ರಾಹ್ಮಣರು ಪರದೇಶದಿಂದ ಭಾರತವರ್ಷದೊಳಗೆ ಬಂದವರೆಂಬ ಒಂದು-ಐತಿಹ್ಯವು ಬಹಳ ಕಾಲದಿಂದ ಪ್ರಚಾರದಲ್ಲಿದೆ. ಅದನ್ನು ಹಿಂದಿನ ವಿವರಗಳ ಆಧಾರದಿಂದ ವಿಮರ್ಶಿಸಿದರೆ ಚಿತ್ಪಾವನರು ಕೂಡ ಅರಬದೇಶದಲ್ಲಿ ನೆಲಸಿದ್ದ ಸಾರಸ್ವತ ಬ್ರಾಹ್ಮಣರಾಗಿದ್ದರೆಂದೂ, ನವಾಯತರು ಅರಬದಿಂದ ಹೊರಟು ಬರುವ ಕಾಲದಲ್ಲಿ ಇಲ್ಲವೇ ತುಸು ಮೊದಲು. ಅರಬರ ಅತ್ಯಾಚಾರದಿಂದ ಅಥವಾ ಬಲಾತ್ಕಾರದ ಮತಾಂತರದಿಂದ ತಪ್ಪಿಸಿಕೊಂಡು ಬಂದ ಜನರ ಪಂಗಡವೆಂದೂ ಹೇಳಬೇಕಾಗುವುದು. ಅವರು ಹಲವು ತಲೆಮಾರುಗಳಿಂದ ಅರಬದಲ್ಲಿಯೇ ನೆಲಸಿದ್ದುದರಿಂದ ಅಲ್ಲಿನ ವಾಯು ಗುಣದಿಂದಾಗಿ ಅವರ ಕಣ್ಣುಗಳ ಬಣ್ಣದಲ್ಲಿ ಮತ್ತು ಶರೀರ ಪ್ರಕೃತಿಯಲ್ಲಿ ಕೆಲವು ಪರಿವರ್ತನಗಳಾಗಿದ್ದವು. ನವಾಯತರಲ್ಲಿಯೂ ಅದೇ ಬಗೆಯ ಪರಿವರ್ತನವು ಕಂಡು ಬರುವುದನ್ನು ಪರಿಶೀಲಿಸಿದರೆ ಹಿಂದಿನ ಅನುಮಾನವು ಸರಿಯಾದುದೆಂದು ಹೇಳಬೇಕಾಗುವುದು. ಚಿತ್ಪಾವನರಲ್ಲಿ ಕಂಡು ಬರುವ ಅಂಥ ಲಕ್ಷಣಗಳಿಂದ ಕೆಲವು ಇತಿಹಾಸಕಾರರು[1]

---

1. Deriving from the same original stock, the Mediterranean and the Nordic show resemblances in the shape of their heads; but where as the Mediterranean head is small, the Nordic is massive. The largest percentage of this element in South India is found among the Citpavan or Konkanastha Brahmans. A History of South India by Sri K. A. Nilakanta Shastri M. A. Page 61.

ಚಿತ್ಪಾವನ ಬ್ರಾಹ್ಮಣರಲ್ಲಿ ನಾರ್ಡಿಕ್ ಜನಾಂಗದ ಲಕ್ಷಣಗಳು ಹೆಚ್ಚು ಅಂಶದಲ್ಲಿವೆ ಯೆಂದಿದ್ದಾರೆ. ಗುಜರಾತದಲ್ಲಿನ ನಾಗರ ಬ್ರಾಹ್ಮಣರ ಕುರಿತಾಗಿಯೂ ಕೆಲವು ಇತಿಹಾಸಕಾರರಲ್ಲಿ ಇದೇ ಬಗೆಯ ಅಭಿಪ್ರಾಯವಿದೆ. ಆದರೆ ಯಾವ ಮೂಲದ ಜನರಾದರೂ ತಮ್ಮ ಮೂಲನೆಲೆಯನ್ನು ಬಿಟ್ಟು ಬೇರೊಂದು ಬಗೆಯ ವಾಯು ಗುಣವುಳ್ಳ ಹಾಗೂ ಭೌಗೋಲಿಕ ಅಂತರವಿರುವ ಪ್ರದೇಶದಲ್ಲಿ ಹೋಗಿ ನೆಲಸಿದ ರೆಂದಾದರೆ ಕೆಲವು ತಲೆಮಾರುಗಳ ತರುವಾಯ ಆ ಜನರ ಶರೀರ ಸ್ಥಿತಿಯು ಅಥವಾ ಅಂಗಾಂಗಗಳ ರಚನೆಯು ತಾನಾಗಿ ಪರಿವರ್ತನ ಹೊಂದುತ್ತದೆಂಬ ಪ್ರಕೃತಿ ನಿಯಮವನ್ನು ಆಧುನಿಕ ಇತಿಹಾಸಕಾರರಾಗಲೀ ಪಾಶ್ಚಿಮಾತ್ಯ ವಿಜ್ಞಾನಿ ಗಳಾಗಲೀ ಗಣನೆಗೆ ತೆಗೆದುಕೊಂಡಂತೆ ತೋರುವುದಿಲ್ಲ. ಅಂದರೆ ಚಿತ್ಪಾವನರು ಮೂಲದಲ್ಲಿ ಭಾರತೀಯರಾಗಿದ್ದ ಸಾರಸ್ವತರೇ ಹೊರತು ಪರದೇಶೀಯರಾದ ನಾರ್ಡಿಕ್ ಜನಾಂಗದವರಲ್ಲ. ಏಕೆಂದರೆ ಮೂಲದಿಂದಲೂ ಅವರ ಭಾಷೆಯು ಪ್ರಾಕೃತ ಅಥವಾ ಕೊಂಕಣಿಯಾಗಿದ್ದುದೇ ಅದರ ದೃಢವಾದ ಪ್ರಮಾಣವಾಗಿರು ತ್ತದೆ.

## ೬

## ಸಾರಸ್ವತ ಬ್ರಾಹ್ಮಣರು ಮತ್ತು ವಿಜಯನಗರ ಸಾಮ್ರಾಜ್ಯ

ವಿಜಯನಗರ ಸಾಮ್ರಾಜ್ಯದ ಇತಿಹಾಸವನ್ನು ಬರೆದ ಪ್ರತಿಯೊಬ್ಬರು ವಿಜಯನಗರವೆಂಬ ರಂಗದಲ್ಲಿ ಕಾಣಬರುವ ಹಲವು "ಮಾಧವರ" ಪೈಕಿ ವಿಜಯ ನಗರ ಸ್ಥಾಪನೆಗೆ ಕಾರಣನಾದ ಮಾಧವನು ಯಾರೆಂದು ಕಂಡುಕೊಳ್ಳಲಾಗದುದ ರಿಂದ, ಮತ್ತು ವಿಜಯನಗರದ ಸ್ಥಾಪನೆಯ ಕುರಿತು ಜನರಲ್ಲಿ ಬಳಕೆಯಲ್ಲಿರುವ ಕಟ್ಟುಕಥೆಗಳನ್ನು ಸತ್ಯವೆಂದು ನಂಬಿದುದರಿಂದ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಸಕಲ ಶ್ರೇಯಸ್ಸನ್ನು ಮಾಧವ ವಿದ್ಯಾರಣ್ಯನೆಂಬ ವಿದ್ವಾಂಸನೊಬ್ಬ ನಿಗೇ ಸಲ್ಲಿಸಿದ್ದಾರೆ. ಅವರು ಹಾಗೆ ಮಾಡುವಾಗ ವಿಜಯನಗರದ ರಾಜ್ಯ ವನ್ನು ಸಾಮ್ರಾಜ್ಯವನ್ನಾಗಿ ಮಾರ್ಪಡಿಸುವುದರಲ್ಲಿ ಪ್ರಮುಖಪಾತ್ರವಹಿಸಿದ ಮತ್ತು ವಿಜಯನಗರದ ಆಸ್ಥಾನದಲ್ಲಿ ಅತ್ಯಂತ ಪ್ರಭಾವ ಶಾಲಿಯಾಗಿದ್ದು– ವಿಜಯನಗರದರಸರ ಮಹಾದಂಡನಾಯಕನಾಗಿದ್ದ, ಹಾಗೂ ಮಂತ್ರಿಯಾಗಿದ್ದ ಚಾವುಂಡ ಮಾಧವನೆಂಬ ಗೋವದ ಸಾರಸ್ವತ ಬ್ರಾಹ್ಮಣನನ್ನು ಸಂಪೂರ್ಣವಾಗಿ

ಕಡೆಗಣಿಸಿದ್ದಾರೆ. ಚಾವುಂಡ ಮಾಧವನ ಶೌರ್ಯ ಮತ್ತು ಸಾಹಸಗಳನ್ನು, ಅವನ ರಾಜನೀತಿನೈಪುಣ್ಯವನ್ನು, ಅವನ ಧರ್ಮನಿಷ್ಠೆಯನ್ನು ಕೊಂಡಾಡಿ ವಿಜಯನಗರದ ಅರಸರು ಬರೆಸಿದ ಹಲವು ಶಾಸನಗಳು ಇವೆ. ಆದರೆ ವಿಜಯನಗರದ ಸ್ಥಾಪನೆಯಲ್ಲಿ ಇಲ್ಲವೇ ಸಾಮ್ರಾಜ್ಯದ ಬೆಳವಣಿಗೆಯಲ್ಲಿ ವಿದ್ಯಾರಣ್ಯ ಮಾಧವನ ಪಾತ್ರವೆಂಥದು; ಅವನು ಮಾಡಿದ ಕೆಲಸವಾವುದು; ಅಥವಾ ವಿಜಯನಗರದ ಆಸ್ಥಾನದಲ್ಲಿ ಅವನಿಗಿದ್ದ ಸ್ಥಾನವಾವುದು ಮೊದಲಾದವುಗಳನ್ನು ನಿರ್ಧರಿಸಲು ಸಹಾಯ ಮಾಡುವಂಥ ಪ್ರಾಮಾಣಿಕವಾದ ಒಂದೇ ಒಂದು ಶಾಸನವಾದರೂ ಇಲ್ಲ. ಅಂದರೆ ವಿದ್ಯಾರಣ್ಯ ಮಾಧವನ ಕುರಿತು ಬಳಕೆಯಲ್ಲಿರುವ ಕಥೆಗಳಲ್ಲಿ ಒಂದಕ್ಕಾದರೂ ಲಿಖಿತ ಪ್ರಮಾಣಗಳ ಆಧಾರವಿಲ್ಲ. ಅರ್ಥಾತ್ ಆ ಕಥೆಗಳೆಲ್ಲವೂ ವಿಜಯನಗರ ಸಾಮ್ರಾಜ್ಯದ ಕೊನೆಗಾಲದಲ್ಲಿ ಅಧಿಕಾರಕ್ಕೆ ಬಂದಿದ್ದ ಜನರು ತೇಲಿಸಿ ಬಿಟ್ಟ ಗಾಳಿ ಬುರುಡೆಗಳೆನ್ನಬಹುದಾಗಿದೆ. ಆ ಕಥೆಗಳಲ್ಲಿ ಒಂದೆರಡನ್ನು ಸತ್ಯವೆಂದು ಸಾಧಿಸುವಂಥ ಕೆಲವು ಶಾಸನಗಳಿವೆಯಾದರೂ ವಿದ್ವಾಂಸರು ಅವುಗಳನ್ನು ನಂಬಿಕೆಗೆ ಅರ್ಹವಾದವುಗಳಲ್ಲವೆಂದು ನಿರ್ಧರಿಸಿದ್ದಾರೆ.

ಶಕ ೧೮೫೮ ರಲ್ಲಿ ವಿಜಯನಗರದ ಷಟ್‌ಶತಾಬ್ದಿಸ್ಮಾರಕೋತ್ಸವದ ಅಂಗವಾಗಿ ಪ್ರಕಟಿಸಲ್ಪಟ್ಟ ಹಾಗೂ ಶ್ರೀಮಾನ್ ದೇಸಾಯಿ ಪಾಂಡುರಂಗರಾಯರು ಬಿ. ಎ. (ಆನರ್ಸ್) ಅವರು ಬರೆದ "ವಿಜಯನಗರ ಸಾಮ್ರಾಜ್ಯ" ಎಂಬ ಪುಸ್ತಕದ ಪರಿಶಿಷ್ಟ ೨ರಲ್ಲಿ ಇತಿಹಾಸ ಸಂಶೋಧಕರಾದ ಫಾದರ್ ಹೆರಾಸ್ ಮತ್ತು ಡಾಕ್ಟರ್ ಸಾಲಿತೊರರು ವಿದ್ಯಾರಣ್ಯ ಮಾಧವನ ಕುರಿತು ವ್ಯಕ್ತಗೊಳಿಸಿದ ಅಭಿಪ್ರಾಯಗಳನ್ನು ಶ್ರೀ ಪಾಂಡುರಂಗರಾಯರು ಸಂಗ್ರಹಿಸಿ ಕೊಟ್ಟಿದ್ದಾರೆ. ಅವುಗಳನ್ನು ಇದ್ದ ಹಾಗೆಯೇ ಎತ್ತಿ ಇಲ್ಲಿ ಕೊಡಲಾಗುವುದು:—

(೧) ಫಾದರ್ ಹೆರಾಸರ ಅತಿವಾದ-1.

೧. ಹರಿಹರ ಬಂಧುಗಳು ವಿಜಯೋತ್ಸವ ಪ್ರಸಂಗದಲ್ಲಿ (೧೩೪೬) ಶೃಂಗೇರಿಯಲ್ಲಿ ದಾನಮಾಡುವಾಗ ವಿದ್ಯಾರಣ್ಯರ ನಿರ್ದೇಶವಿಲ್ಲ. ಅದೇಕೆ?

೨. ಮುಂದಿನ ಶೃಂಗೇರಿಯ (೧೩೫೬) ದಾನದಲ್ಲಿಯೂ ವಿದ್ಯಾರಣ್ಯರ ನಿರ್ದೇಶವಿಲ್ಲ. ಈ ಮೊದಲಾದ ದಾನಗಳಲ್ಲಿ ವಿದ್ಯಾತೀರ್ಥರ ಹೆಸರು ಬರುವುದೇ ಹೊರತು ವಿದ್ಯಾರಣ್ಯರು ಬರುವುದಿಲ್ಲ.

1. ಅತಿವಾದವೆಂಬುದು ಶ್ರೀ ಪಾಂಡುರಂಗರಾಯರ ಮತ.

೩. ಮುಂದೆ ವಿದ್ಯಾರಣ್ಯರಿಗೆ ಬುಕ್ಕ. ಇಮ್ಮಡಿ ಹರಿಹರ ಮೊದಲಾದವರು ದಾನಗಳನ್ನು ಕೊಟ್ಟ ಹಲವು ಶಾಸನಗಳಿವೆ. ಅವುಗಳಲ್ಲಿ ವಿದ್ಯಾರಣ್ಯರು ವಿಜಯನಗರ ಸ್ಥಾಪಕರೆಂದು ಎಲ್ಲಿಯೂ ಹೇಳಿಲ್ಲ.

೪. ವಿಜಯನಗರವನ್ನು ಕುರಿತು-ವಿದ್ಯಾನಗರ, ವಿದ್ಯಾನಗರಿ ಎಂದು ಹೇಳುವ ಪ್ರಾಮಾಣಿಕ ಶಾಸನಗಳು ಹೆಚ್ಚಾಗಿ ಮುಂದೆ ೧೫-೧೬ ಶತಮಾನಗಳಲ್ಲಿ ದೊರೆವುವು.

೫. ಶೃಂಗೇರಿಯ ಜಗದ್ಗುರುಗಳು ವಿಜಯನಗರ ಸಾಮ್ರಾಜ್ಯದ ಗೌರವವು ತಮ್ಮ ಪೀಠಕ್ಕೆ ಬರಬೇಕೆಂಬ ಹವ್ಯಾಸದಿಂದ ೧೬ನೆಯ ಶತಮಾನದ ಆರಂಭವಲ್ಲಿ ವಿದ್ಯಾರಣ್ಯರು ವಿಜಯನಗರವನ್ನು ಸ್ಥಾಪಿಸಿದರು ಎಂಬ ಸುಳ್ಳು ಕಥೆಯುನ್ನು ತೇಲಿಬಿಟ್ಟರು. (Heras pp. 15–35)

(೨) ಡಾ. ಸಾಲೆತೂರ್—

೧. ನಂಬಲರ್ಹವಾದ ಒಂದು ಶಾಸನದಲ್ಲಿಯೂ ಮಾಧವ-ವಿದ್ಯಾರಣ್ಯರು[1] ಒಬ್ಬರೇ ಎಂದು ಹೇಳಲಾಗಿಲ್ಲ.

೨. ಶೃಂಗೇರಿಯ ಸಂಪ್ರದಾಯವನ್ನು[2] ತಿಳುಹುವ ವಿದ್ಯಾರಣ್ಯಕಾಲಜ್ಞಾನ, ಗುರುವಂಶ ಕಾವ್ಯ ಮೊದಲಾದ ಗ್ರಂಥಗಳಿಂದ ಮಾಧವ-ವಿದ್ಯಾರಣ್ಯರು ಭಿನ್ನರೆಂದು ಪ್ರತೀತವಾಗುತ್ತದೆ.

೩. ಮಾಧವಾಚಾರ್ಯರನ್ನು ಕುರಿತು ಬರುವ ನಿರ್ದೇಶಗಳೆಲ್ಲ ಬುಕ್ಕರಾಯನ ಕಾಲದವು. ವಿದ್ಯಾರಣ್ಯರ ಕುರಿತ ನಿರ್ದೇಶಗಳೆಲ್ಲ ಪ್ರಾಮುಖ್ಯವಾಗಿ ಇಮ್ಮಡಿ ಹರಿಹರನ ಕಾಲದವು. ೧೩೭೫ನೆಯ ವರ್ಷಕ್ಕಿಂತ ಹಿಂದೆ ವಿದ್ಯಾರಣ್ಯರ ಹೆಸರು ಬರುವ ಪ್ರಾಮಾಣಿಕವಾದ ಒಂದು ಶಾಸನವೂ ಇದು ವರೆಗೆ ದೊರೆತಿಲ್ಲ.

೪. ೧೩೩೬ ರಿಂದ ೧೩೮೭ ರ ವರೆಗೆ ಪರಂಪರಾಗತ ಮತದಂತೆ ವಿದ್ಯಾರಣ್ಯಯತಿಗಳ ಬಗೆಗೆ ಉಲ್ಲೇಖಗಳು ದೊರೆಯುತ್ತವೆ. ಈ ನಡುವಿನ ಕಾಲದಲ್ಲಿ ರಚಿತವಾದುವೆಂದು ವಿದಿತವಾಗುವ ಮಾಧವಾಚಾರ್ಯರ ಗ್ರಂಥಗಳು ದೊರೆತಿವೆ (ಉದಾ:—ಕಾಲಮಾಧವ ೧೩೫೯) ಇವುಗಳಲ್ಲಿ ಗ್ರಂಥಕಾರನ ಉಲ್ಲೇಖವು ಮಾಧವಾಚಾರ್ಯನೆಂಬ ಗೃಹಸ್ಥಾಶ್ರಮದ ಹೆಸರಿನಿಂದ ಸ್ಪಷ್ಟವಾಗಿ ಬರುತ್ತದೆ. ಇ. ಇ.

---

1. ಅಂದರೆ ಅರಸರ ಆಸ್ಥಾನದಲ್ಲಿನ ಮಾಧವ ಮತ್ತು ವಿದ್ಯಾರಣ್ಯರು.
2. ಪರಂಪರೆಯನ್ನು.

ಹಿಂದೆ ಉದಹರಿಸಿದ–ಆ ಇಬ್ಬರು ವಿದ್ವಾಂಸರ ಅಭಿಪ್ರಾಯಗಳ ಸಾರಾಂಶವನ್ನು ಮುಂದಿನಂತೆ ಸಂಕ್ಷೇಪಿಸಬಹುದು:—೧. ವಿಜಯನಗರವನ್ನು ಸ್ಥಾಪಿಸಿದವನು ವಿದ್ಯಾರಣ್ಯನಲ್ಲ. ೨. ವಿದ್ಯಾರಣ್ಯನು ಶೃಂಗೇರಿಯ ಸ್ವಾಮಿಯಾಗಿರಲಿಲ್ಲ. ಮತ್ತು ೩. ವಿದ್ಯಾರಣ್ಯನು ವಿಜಯನಗರವನ್ನು ಸ್ಥಾಪಿಸಿದನು ಎಂದು ಹೇಳುವ ಶಾಸನಗಳು ಕೃತ್ರಿಮವಾದವುಗಳು.

ಈಗ ಉಪಲಬ್ಧವಿರುವ ಶಾಸನಗಳ ಪ್ರಮಾಣಗಳನ್ನು ಪರಿಶೀಲಿಸಿದರೆ ಪ್ರತಿಯೊಬ್ಬನು ಅದೇ ತೀರ್ಮಾನಕ್ಕೆ ಬರಬೇಕಾಗುತ್ತದೆಂಬುದನ್ನು ಮುಂದಿನ ವಿವರಗಳಿಂದ ತಿಳಿದುಕೊಳ್ಳಬಹುದು—

ಶೃಂಗೇರಿಪೀಠದ ಗುರುಪರಂಪರೆಯಲ್ಲಿ ಶ್ರೀ ವಿದ್ಯಾಶಂಕರ ತೀರ್ಥರವರು ೧೨೬೮[1]ನೆಯ ಇಸವಿಯಲ್ಲಿ ಅಧಿಕಾರಕ್ಕೆ ಬಂದವರು ೧೩೨೮ನೆಯ ಇಸವಿಯಲ್ಲಿ ಶ್ರೀ ಭಾರತೀ ಕೃಷ್ಣತೀರ್ಥರಿಗೆ ಆಶ್ರಮವಿತ್ತು ೧೩೩೩ರಲ್ಲಿ ಸಮಾಧಿ ಪಡೆದರೆಂತಲೂ ಶ್ರೀ ಭಾರತೀ ಕೃಷ್ಣತೀರ್ಥರವರು ೧೩೩೧ರಲ್ಲಿ ವಿದ್ಯಾರಣ್ಯರಿಗೆ ಆಶ್ರಮವಿತ್ತು ೧೩೮೦ರಲ್ಲಿ ಸಮಾಧಿಹೊಂದಿದರೆಂತಲೂ, ಶ್ರೀ ವಿದ್ಯಾರಣ್ಯರು ೧೩೮೬ರಲ್ಲಿ ಸಮಾಧಿಸ್ಥರಾದರೆಂತಲೂ ಉಲ್ಲೇಖಿಸಲಾಗಿದೆ. ಆದರೆ ಶ್ರೀ ವಿದ್ಯಾಶಂಕರ ತೀರ್ಥರವರು ೧೩೩೩ರಲ್ಲಿ ಸಮಾಧಿಸ್ಥರಾಗಿರದೇ ಅದರ ತರುವಾಯ ಇಪ್ಪತ್ತಮೂರು ವರ್ಷಗಳ ಕಾಲ ಬದುಕಿದ್ದರೆಂಬ ಕುರಿತು ಎರಡು ಶಾಸನಗಳ ಪ್ರಮಾಣವಿದೆ. ೧೩೪೬ನೆಯ ಇಸವಿಯಲ್ಲಿ ಮೊದಲನೆಯ ಹರಿಹರನು ಆನೆಗೊಂದಿಯಲ್ಲಿ ಆಳುತ್ತಿದ್ದಾಗ ಶ್ರೀ ವಿದ್ಯಾಶಂಕರ ತೀರ್ಥರ ಹೆಸರಿನಲ್ಲಿ ಬರೆಸಿದ ಶಾಸನ ಒಂದು. ಮತ್ತು ೧೩೫೬[2]ನೆಯ ಇಸವಿಯಲ್ಲಿ ವಿಜಯನಗರವನ್ನು ರಾಜಧಾನಿಯನ್ನಾಗಿಮಾಡಿ–ಅಲ್ಲಿಂದ ಆಳುತ್ತಿದ್ದ ಮೊದಲನೆಯ ಬುಕ್ಕರಾಯನು ಶೃಂಗೇರಿಗೆ ಹೋಗಿ ಶ್ರೀ ವಿದ್ಯಾಶಂಕರ ತೀರ್ಥರನ್ನು ಸಂದರ್ಶಿಸಿ ಬರಸಿಕೊಟ್ಟ ಶಾಸನವು ಎರಡನೆಯದು. ಅನ್ಯಮಾಗ ಘಾದರ ಪರಾಸರ ಹೇಳಿಕೆಗಳಲ್ಲಿ ಅತಿಯಾದುದು ಏನೂ ಇರಲಿಲ್ಲವೆಂದು ಸ್ಪಷ್ಟವಾಗುತ್ತದೆ. ಅಂದರೆ ೧೩೫೬ರಲ್ಲಿ ವಿದ್ಯಾರಣ್ಯರು ಶೃಂಗೇರಿಯ ಸ್ವಾಮಿಗಳಾಗಿರಲಿಲ್ಲವೆಂದು ಸಿದ್ಧವಾಗುತ್ತದೆ.

---

1. Mysore Gazetteer Vol. II. Part III Page 1433.
2. Vidyatirtha was alive in 1356 A. D. for in that year Bukka paid a visit to him and made a grant of lands to him for providing for the servents of the math and for the food of the ascetics Mysore Gazetteer Vol. II Part III Page 1434.

ವಿದ್ಯಾರಣ್ಯರ ಆದೇಶದಂತೆ ವಿದ್ಯಾನಗರವೆಂಬ ಪಟ್ಟಣವು ಕಟ್ಟಲ್ಪಟ್ಟು ಅಲ್ಲಿನ ಸಿಂಹಾಸನದಲ್ಲಿ ಮೊದಲನೆಯ ಹರಿಹರನಿಗೆ ಪಟ್ಟಾಭಿಷೇಕವಾಯಿತೆಂದೂ, ಪಟ್ಟಾಭಿಷೇಕದ ಕಾಲದಲ್ಲಿ ಹರಿಹರನು ಹಲವರಿಗೆ ಹಲವು ಹಳ್ಳಿಗಳನ್ನು ದಾನ ಕೊಟ್ಟನೆಂದೂ, ವಿದ್ಯಾನಗರವನ್ನು ರಾಜಧಾನಿಯನ್ನಾಗಿಮಾಡಿ ಮೊದಲನೆಯ ಹರಿಹರನು ಆಳುತ್ತಿದ್ದನೆಂದೂ ಹೇಳುವ ಹಲವು ಶಾಸನಗಳಿವೆ. ಆದರೆ ಮೊದಲನೆಯ ಹರಿಹರನ ಜೀವಿತ ಕಾಲದಲ್ಲಿ ವಿಜಯನಗರ ಪಟ್ಟಣವು ಕಟ್ಟಿ ಮುಗಿದಿರಲಿಲ್ಲವೆಂದೂ, ಹರಿಹರನು ದೋರ ಸಮುದ್ರರಾಜಧಾನಿಯಿಂದ ಆಳುತ್ತಿದ್ದನೆಂದೂ, ಅವನ ತರುವಾಯ ಪಟ್ಟಕ್ಕೆ ಬಂದ ಮೊದಲನೆಯ ಬುಕ್ಕನು ರಾಜಧಾನಿಯನ್ನು ದೋರ ಸಮುದ್ರದಿಂದ ಹೊಸಪಟ್ಟಣಕ್ಕೂ ೧೩೫೪ ರಲ್ಲಿ ಅಲ್ಲಿಂದ ವಿಜಯನಗರಕ್ಕೂ ಸ್ಥಳಾಂತರಿಸಿದನೆಂದೂ ತಿಳಿದು ಬರುತ್ತದೆ.[1]

ಹಾಗೆಯೇ ವಿದ್ಯಾರಣ್ಯ ಮಾಧವನು ವಿಜಯನಗರವನ್ನಾಳಿದ ಮೊದಲನೆಯ ಹರಿಹರರಾಯನ ಇಲ್ಲವೇ ಬುಕ್ಕರಾಯನ ಮಂತ್ರಿಯಾಗಿದ್ದನೆಂದಾಗಲೀ, ಅವರ ಗುರುವಾಗಿದ್ದನೆಂದಾಗಲೀ ಸಿದ್ಧಪಡಿಸುವ ಯಾವುದೊಂದು ಪ್ರಮಾಣವಿಲ್ಲ.[2] ಈಗ ಉಪಲಬ್ಧವಿರುವ ಪ್ರಮಾಣಗಳನ್ನು ಪರಿಶೀಲಿಸಿದರೆ ವಿದ್ಯಾರಣ್ಯ ಮಾಧವನು ಕಾರ್ಯರಂಗವನ್ನು ಪ್ರವೇಶಿಸಿದ ಕಾಲವು ೧೩೬೦ ನೆಯ ಇಸವಿಯ ತರುವಾಯವೆಂದು ಸಂದೇಹಕ್ಕೆಡೆಯಿಲ್ಲದಂತೆ ಸಿದ್ಧವಾಗುತ್ತದೆ.

ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಎಂಬ ಗ್ರಂಥದ ೧೫೫ ನೆಯ ಪುಟದಲ್ಲಿ ಮುಂದಿನ ವಿವರವಿದೆ:—"**ವಿಜಯನಗರದ ದೊರೆಗಳಲ್ಲಿ ಕೆಲವರು ಕಾಳಾಮುಖ ಗುರುಗಳ ಅನುಯಾಯಿಗಳಾಗಿದ್ದಂತೆ ತಿಳಿದು**

---

1. Bukka I transferred the capital from Dorasamudra to Hosapattana between 1352 or 1354. about the last year of the reign of his brother Harihara I. and his own first year, and thence to Vijayanagar it being more central and convenient for administering the affairs of a large kingdom. Though Vijayanagar had been found 18 Years before it had not yet been occupied as the Capital as much of the country in the west and south had yet to be recovered or brought under control. Ibid. page. 1447.
2. Mayana Madhava, indeed as Vidyaranya, helped in the establishment of the kingdom and the capital (ಇದಕ್ಕೆ ಆಧಾರವೇ ಇಲ್ಲ). though there is nothing to show he held any temporal office under either Harihara I or Bukha I Mysore Gazetter page 1445.

**ಬರುತ್ತದೆ ಹರಿಹರ I ಮತ್ತು ಬುಕ್ಕ Iರ ಗುರುವು ಪಾಶುಪತನಾಗಿದ್ದ ಕಾಶೀ ಕಲಾ ಕ್ರಿಯಾಶಕ್ತಿ. ವಿಜಯನಗರ ಸ್ಥಾಪನೆಗೆ ಬಹುವಾಗಿ ಶ್ರಮಿಸಿದ ಮಹಾದಂಡನಾಯಕನೂ, ಮಂತ್ರಿಯೂ ಆಗಿದ್ದ ಮಾಧವನಿಗೂ ಇವನೇ ಗುರುವಾಗಿದ್ದಂತೆ ಶಾಸನವೊಂದರಿಂದ (E. C. VII S. R. 281) ತಿಳಿಯುತ್ತದೆ."**

ವಿಜಯನಗರವೆಂಬ ರಂಗದಲ್ಲಿ ಮೂವರು, ನಾಲ್ವರು "ಮಾಧವ" ಎಂಬ ಹೆಸರಿನ ವ್ಯಕ್ತಿಗಳಿದ್ದುದೇ ವಿಜಯನಗರ ಸಾಮ್ರಾಜ್ಯದ ಇತಿಹಾಸ ಬರೆಯು ವವರನ್ನು ಗೊಂದಲದಲ್ಲಿ ಬೀಳುವಂತೆ ಮಾಡಿದೆಯೆನ್ನಬಹುದು. ಭಾರದ್ವಾಜ ಗೋತ್ರದ ಮಾಯಣ ಎಂಬ ಬ್ರಾಹ್ಮಣನಿಗೆ ಶ್ರೀಮತಿ ಎಂಬ ಪತ್ನಿಯಲ್ಲಿ ೧. ಮಾಧವ, ೨. ಸಾಯಣ, ೩. ಭೋಗನಾಥ ಎಂಬ ಹೆಸರಿನ ಮೂವರು ಪುತ್ರರಿದ್ದರು. ಅವರಲ್ಲಿ ಹಿರಿಯನಾದ ಮಾಧವನು ಅಪಾರ ವಿದ್ಯೆಯನ್ನು ಸಂಪಾದಿಸಿ ವಿದ್ಯಾರಣ್ಯನೆನಿಸಿಕೊಂಡನು. ಮುಂದೆ ಸಾಯಣನು ತನ್ನ ಮಗ ನಿಗೂ(?) ಮಾಧವನೆಂಬ ಹೆಸರನ್ನೇ ಇಟ್ಟನು. ಹೀಗಾಗಿ ಆಧುನಿಕ ಇತಿಹಾಸ ಕಾರರು ಅವರನ್ನು ಗುರುತಿಸಲು ಮಾಯಣನ ಮಗ ಮಾಧವನನ್ನು ಮಾಯಣ ಮಾಧವನೆಂದೂ, ಸಾಯಣನ ಮಗ ಮಾಧವನನ್ನು ಸಾಯಣ ಮಾಧವನೆಂದೂ ಹೆಸರಿಸಿದ್ದಾರೆ.

ವಿಜಯನಗರ ಸಾಮ್ರಾಜ್ಯದ ಮಹಾದಂಡನಾಯಕನಾಗಿದ್ದ, ಹಾಗೂ ಕೆಲವು ಸಮಯ ಮಂತ್ರಿಯಾಗಿದ್ದ ಮಾಧವನು ಅಂಗೀರಸಗೋತ್ರದ ಚಾವುಂಡ ಭಟ್ಟನ ಮತ್ತು ಅವನ ಪತ್ನಿ ಮಾಚಲದೇವಿ (ಮಾಚಾಂಬಿಕೆ)ಯರ ಪುತ್ರನಾಗಿದ್ದ. ಇತಿಹಾಸಕಾರರು ಇವನನ್ನು ಚಾವುಂಡ ಮಾಧವನೆಂದಿದ್ದಾರೆ. ಇವನ ತರುವಾಯ ವಿಜಯನಗರದ ಆಸ್ಥಾನದಲ್ಲಿ ಅತ್ಯಂತ ಪ್ರಭಾವಶಾಲಿಯಾಗಿದ್ದ ಇನ್ನೊಬ್ಬ ಮಾಧವನನ್ನು ವೀರವಸಂತಮಾಧವನೆಂದು ಹೆಸರಿಸಿದ್ದಾರೆ. ವೀರವಸಂತ ಮಾಧವನು ಚಾವುಂಡ ಮಾಧವನಂತೆಯೇ ವಿಜಯನಗರದ ದಂಡನಾಯಕ ನಾಗಿದ್ದನಲ್ಲದೇ ಎರಡನೆಯ ಹರಿಹರನ ಮಂತ್ರಿಯೂ ಆಗಿದ್ದ. ಈ ಎಲ್ಲ ಮಾಧವರು ದೊಡ್ಡ ವಿದ್ವಾಂಸರಾಗಿದ್ದು ಸಂಸ್ಕೃತದಲ್ಲಿ ಹಲವು ಗ್ರಂಥಗಳನ್ನು ರಚಿಸಿದ್ದಾರೆ. ಆ ಗ್ರಂಥಗಳಲ್ಲಿ ಯಾವ ಮಾಧವನು ರಚಿಸಿದ ಗ್ರಂಥವು ಯಾವು ದೆಂದು ನಿರ್ಧರಿಸುವುದು ತುಂಬಾ ಪ್ರಯಾಸದ ಕೆಲಸವಾಗಿದೆ.

ದಿವಂಗತ ಶೆಣೈ ವಾಮನ ರಘುನಾಥ ವರ್ದೆ ವಾಲಾವಲೀಕರ್ ಎಂಬ ಹೆಸರಿನ ಗೋವದ ವಿದ್ವಾಂಸರು "ಗೋಂಯ್ ಕಾರಾಂಚೀ ಗೋಂಯಾ ಭಾಯಲೀ

ವಸಣೂಕ್" ಅಂದರೆ ಗೋವದವರ-ಗೋವದ ಹೊರಗಿನ ವಸತಿ ಎಂಬ ಕೊಂಕಣಿ ಪುಸ್ತಕದಲ್ಲಿ ವಿಜಯನಗರದ ಆಸ್ಥಾನದಲ್ಲಿದ್ದ ಚಾವುಂಡ ಮಾಧವ ಮತ್ತು ವಸಂತ ಮಾಧವ ಎಂಬಿಬ್ಬರೂ ಗೋವದ ಸಾರಸ್ವತ ಬ್ರಾಹ್ಮಣರೆಂದು ಸಕಲ ಪ್ರಮಾಣಗಳ ಸಹಿತವಾಗಿ ಸಿದ್ಧಪಡಿಸಿದ್ದಾರೆ. ಹಾಗೆಯೇ ಬೆಂಗಳೂರಿನ ಪ್ರಸಿದ್ಧ ಜ್ಯೋತಿಷಿ ಶ್ರೀಮಾನ್ ಬಿ. ಸೂರ್ಯನಾರಾಯಣ ರಾವ್. ಬಿ.ಎ.ಎಲ್ ಎಲ್.ಬಿ. ಅವರು ಬರೆದ "A History of Sivaganga Muth" ಎಂಬ ಪುಸ್ತಕದಲ್ಲಿ ವಿಜಯ ನಗರದ ಮಂತ್ರಿಯಾಗಿದ್ದ ಹಾಗೂ ಸೂತಸಂಹಿತೆಗೆ ಟೀಕೆ ಬರೆದ "ಮಾಧವ" ಎಂಬವನು ಸಾರಸ್ವತ ಬ್ರಾಹ್ಮಣನೆಂದು ಸ್ಪಷ್ಟಪಡಿಸಿದ್ದಾರೆ. ಮೈಸೂರು ಗಜೆಟಿಯರಿನಲ್ಲಿ ವಿವರಿಸಿರುವ ಪ್ರಕಾರ ಚಾವುಂಡ ಮಾಧವನು ಮೊದಲನೆಯ ಹರಿಹರರಾಯನ ಕಾಲದಿಂದ ಎರಡನೆಯ ಹರಿಹರನ ಕಾಲದ ವರೆಗೆ ಅಂದರೆ ಶಕವರ್ಷ ೧೨೫೮ ರಿಂದ ೧೩೦೬ರ ವರೆನ ನಾಲ್ವತ್ತೆಂಟು ವರ್ಷಗಳ ಅವಧಿಯಲ್ಲಿ ಬೇರೆ ಬೇರೆ ಸಂದರ್ಭಗಳಿಗೆ ತಕ್ಕಂತೆ ಮಹಾದಂಡನಾಯಕನಾಗಿಯೂ, ಮಂತ್ರಿ ಯಾಗಿಯೂ. ಮಂಡಲೇಶ್ವರನಾಗಿಯೂ ಕಾರ್ಯವೆಸಗಿದ್ದಾನೆ.

ಚಾವುಂಡ ಮಾಧವನು ಯುದ್ಧವಿದ್ಯೆಯಲ್ಲಿ ಮತ್ತು ರಾಜನೀತಿಯಲ್ಲಿ ನಿಪುಣನಾಗಿದ್ದಂತೆಯೇ—ವೇದವೇದಾಂಗ ಪಾರಂಗತನಾಗಿಯೂ ಇದ್ದ. ಅವನಿಗೆ "ಉಪನಿಷನ್ಮಾರ್ಗ ಪ್ರತಿಷ್ಠಾಗುರು" ಎಂಬ ಬಿರುದು ಇತ್ತು. ಬೇರೆ ಬೇರೆ ಶಾಸನಗಳಲ್ಲಿ ಅವನ ಹೆಸರು ಮಾಧವಮಂತ್ರಿ, ಮಾಧವಾಂಕ, ಮಾಧವರಾಯ, ಮಾದರಸ ಒಡೆಯ ಮುಂತಾಗಿ ಉಲ್ಲೇಖಿಸಲ್ಪಟ್ಟಿದೆ. ಅವನ ಮಗನ ಹೆಸರು ಬಾಳ್ತರಸ ಎಂದಿದ್ದು, ಅವನು ಬೇರೆ ಬೇರೆ ರಾಜಕೀಯ ಅಧಿಕಾರಗಳನ್ನು ಹೊಂದಿದ್ದನೆಂದು ತಿಳಿದುಬರುತ್ತದೆ. ವಿಜಯನಗರದ ಮಹಾ ದಂಡನಾಯಕ ನಾಗಿದ್ದ ಚಾವುಂಡ ಮಾಧವನು ಶಕವರ್ಷ ೧೨೮೮–೮೯ರ ನಡುಗಾಲದಲ್ಲಿ ಗೋವವನ್ನು ಮುಸಲ್ಮಾನರಿಂದ ಗೆದ್ದುಕೊಂಡು ವಿಜಯನಗರ ಸಾಮ್ರಾಜ್ಯದಲ್ಲಿ ಸೇರಿಸಿದ್ದನು. ಅವನು ಗೋವವನ್ನು ಗೆದ್ದ ಸ್ಮರಣಾರ್ಥವಾಗಿ ತನ್ನ ತಾಯಿಯ ಹೆಸರಿನಲ್ಲಿ "ಮಾಚಲಪುರ" ಎಂತಲೂ, ತಂದೆಯ ಹೆಸರಿನಲ್ಲಿ "ಚಾವುಂಡಪುರ" ಎಂತಲೂ ತನ್ನ ಸ್ವಂತ ಹೆಸರಿನಲ್ಲಿ ಮಾಧವಪುರ ಎಂತಲೂ ಮೂರು ಬ್ರಹ್ಮ ಪುರಿಗಳನ್ನು ಸ್ಥಾಪಿಸಿದ್ದನು. ತರುವಾಯ ಶಕವರ್ಷ ೧೨೯೦ರಲ್ಲಿ ಬುಕ್ಕರಾಯನು ಚಾವುಂಡ ಮಾಧವನನ್ನು ಗೋವ ಸಹಿತವಾಗಿ ಇಡಿಯ ಪಶ್ಚಿಮ ಕರಾವಳಿಯ ಮಂಡಲೇಶ್ವರನನ್ನಾಗಿ ಮಾಡಿ ಆ ರಾಜ್ಯವನ್ನು ಅವನ ಆಳ್ವಿಕೆಗೆ ಬಿಟ್ಟುಕೊಟ್ಟಿ

ದ್ದನು1. ಅವನು ಮಂಡಲೇಶ್ವರನಾಗಿದ್ದಾಗ ಬರೆಯಿಸಿದ ಶಾಸನಗಳಲ್ಲಿ ಅವನ ಹೆಸರು "ಮಾದರಸ ಒಡೆಯರು" ಎಂದು ಉಲ್ಲೇಖಿಸಲಾಗಿದೆ.

ಚಾವುಂಡ ಮಾಧವನ ತರುವಾಯ ವಿಜಯನಗರದ ಆಸ್ಥಾನದಲ್ಲಿ ಅತ್ಯಂತ ಪ್ರಭಾವಶಾಲಿಯಾಗಿದ್ದವನೆಂದರೆ ಗೋವದ ಸಾರಸ್ವತ ಬ್ರಾಹ್ಮಣನಾಗಿದ್ದ ವೀರ ವಸಂತ ಮಾಧವನೆಂಬವನಾಗಿದ್ದನು. ಅವನು ಚಾವುಂಡ ಮಾಧವನ ತರುವಾಯ ವಿಜಯನಗರ ಸಾಮ್ರಾಜ್ಯದ ಮಹಾ ದಂಡನಾಯಕನಾಗಿದ್ದನು. ಸ್ವಲ್ಪಕಾಲ ಅವನು ಎರಡನೆಯ ಹರಿಹರನ ಮಗ ಚಿಕ್ಕ ರಾಯನ ಮಂತ್ರಿಯಾಗಿದ್ದನು2. ಕೊನೆಗೆ ಅವನು ಗೋವ ಮತ್ತು ತುಳುನಾಡಿನ ಮಂಡಲೇಶ್ವರನಾಗಿದ್ದನು. ವೀರವಸಂತ ಮಾಧವನಿಗೆ "ಸಪ್ತಕೊಂಕಣ ಧೂಳೀಪಟ್ಟ" (E. C. VIII Honnali 71) ಎಂಬ ಬಿರುದನ್ನು ಕೊಟ್ಟಿರುವುದನ್ನು ಯೋಚಿಸಿದರೆ ತುಳು ನಾಡನ್ನು ಗೆದ್ದು ವಿಜಯನಗರ ಸಾಮ್ರಾಜ್ಯದಲ್ಲಿ ಸೇರಿಸಿದವನು ಅವನೇ ಆಗಿರ ಬೇಕೆಂಬ ಅನುಮಾನವಾಗುತ್ತದೆ. ಅವನು ತುಳುನಾಡಿನ ಕುಕ್ಕೆಯ ಸುಬ್ರಹ್ಮಣ್ಯ ದೇವಾಲಯಕ್ಕೆ ಭೂಮಿಯನ್ನು ದಾನಮಾಡಿ ಬರೆಸಿದ ಶಾಸನದಲ್ಲಿ ಅವನ ಹೆಸರು "ಪ್ರಖ್ಯಾತದಾನ ಶೌಂಡಸ್ಯ ಮಾಧವಾರ್ಯೋಮಹೀಪತಿಃ ಶ್ರೀಮ ದ್ಗೋವಾಪುರಾಧೀಶಃ" ಎಂದು ಉಲ್ಲೇಖಿಸಲ್ಪಟ್ಟಿದೆ3.

ವೀರವಸಂತ ಮಾಧವನಿಗೆ ಬಾಚಣ್ಣ (=ಭಾಸ್ಕರ) ಮತ್ತು ನರಹರಿ ಎಂಬ ಇಬ್ಬರು ಮಕ್ಕಳಿದ್ದರೆಂದು ತಿಳಿಯುತ್ತದೆ. ವೀರವಸಂತ ಮಾಧವನ ತರುವಾಯ ಗೋವ ಮತ್ತು ತುಳುನಾಡುಗಳ ಮಂಡಲಾಧಿಪತ್ಯವು ಅವನ ಹಿರಿಯ ಮಗ ಬಾಚಣ್ಣನಿಗೆ ಬಂತು. ಬಾಚಣ್ಣನನ್ನು ಕೆಲವು ಶಾಸನಗಳಲ್ಲಿ ಬಾಚಪ್ಪ ಎಂದು ಉಲ್ಲೇಖಿಸಿದೆ. ಬಾಚಣ್ಣನು ಮಂಡಲೇಶ್ವರನಾಗಿದ್ದಾಗ ತಂದೆಯ ಹಾಗೆಯೇ ಕುಕ್ಕೆಯ ಸುಬ್ರಹ್ಮಣ್ಯ ದೇವಾಲಯಕ್ಕೆ ಭೂಮಿಯನ್ನು

---

1. Mysore Gazettear page 1443. 2. Ibid page 1511.
3. Annual Report of the Mysore Archaeoligical Department for the year 1943, page 145. South Kanara.
4. Bachappa Vodeyar was a subordinate of Bukka II the Vijayanagara king. He ruled the Goa kingdom after Madhava Mantri. His brother was Narahari. He had also the name of Bhaskara. A number of inscriptions refer to him (See E. C. VII He. 71, M. A. R. 1941. p. 206 etc.). In M. E. R. 1927 No. 369 he is referred to as ruling the kingdom of Barkur under Bukkaraya. Annual Report of Mysore Archaeologiaal Department for the year 1943.

ದಾನಮಾಡಿದ್ದನೆಂದು ಅವನು ಬರೆಸಿದ ಶಾಸನದಿಂದ ಗೊತ್ತಾಗುತ್ತದೆ. ಆ ಶಾಸನವು ನಾಗರೀ ಲಿಪಿಯಿಂದ ಬರೆಯಲ್ಪಟ್ಟಿದ್ದು ಬಾಚಣ್ಣನ ಒಪ್ಪವು ಕನ್ನಡ ಲಿಪಿಯಲ್ಲಿದೆ. ಅದರಲ್ಲಿ "ಶ್ರೀ ಮನ್ಮಹಾರಾಜಾಧಿರಾಜ ರಾಜ ಪರಮೇಶ್ವರ ಶ್ರೀವೀರ ಹರಿಹರ ರಾಯರ ಕುಮಾರ ಬುಕ್ಕಮಹಾರಾಯರ ನಿರೂಪದಿಂ ಮಂಗಲೂರ ರಾಜ್ಯವನೂ ಗೋವೆಯ ಬಾಚಪ್ಪ ಒಡೆಯರು ಆಳುತಿಹಲ್ಲಿ ಶಕ ವರುಷ ೧೨೬೯ ವರ್ತಮಾನ ವ್ಯಯ ಸಂವತ್ಸರದ ಚೈತ್ರ ಶು ೧ದಲು ಕಡಬದ ಸ್ಥಳದ ಕುಕ್ಕೆಯದ ದೇವರಿಗೆ ಧರ್ಮಶಾಸನದ ಕ್ರಮವೆಂತೆಂದರೆ" ಎಂಬ ಒಕ್ಕಣೆ ಇದೆ. ಮತ್ತು ಶಾಸನ ಪೂರ್ತಿಯಾದ ತರುವಾಯ ಕೊನೆಯಲ್ಲಿ "ಶ್ರೀ ಶ್ರೀ ವೊಪ್ಪ ಬಾಚಂಣನ ಬರಹಾ" ಎಂದು ಇದೆ. ಈ ಶಾಸನದ ಕಾಲವು ೧೩೪೭ನೆಯ ಇಸವಿ ಮಾರ್ಚಿ ೨೧ನೆಯ ತಾರೀಕಿಗೆ ಸರಿಬರುತ್ತದೆ. ಹಿಂದಿನ ವಿವರಗಳಿಂದ ವೀರವಸಂತ ಮಾಧವನು ಹಾಗೂ ಅವನ ಮಗ ಬಾಚಣ್ಣನು–ಗೋವ ಮತ್ತು ತುಳುನಾಡುಗಳನ್ನು ಅರಸರಾಗಿ ಆಳಿದ್ದಾರೆಂಬುವುದರಿಂದ–ಆ ಕಾಲದಲ್ಲಿ ತುಳುನಾಡು ಸಾರಸ್ವತ ಬ್ರಾಹ್ಮಣರ ಆಳ್ವಿಕೆಗೆ ಒಳಪಟ್ಟಿದ್ದಿತೆಂದು ಹಿಂದಿನ ಶಾಸನಗಳಿಂದ ಸಿದ್ಧವಾಗುತ್ತದೆ.

ವಿಜಯನಗರದ ಆಸ್ಥಾನದಲ್ಲಿ ಚಾವುಂಡ ಮಾಧವ, ಮತ್ತು ವೀರವಸಂತ ಮಾಧವ ಎಂಬ ಇಬ್ಬರು ಮಾತ್ರವಲ್ಲದೇ ಅವರ ಮಕ್ಕಳೂ, ಅವರ ಸಂಬಂಧಿಕರಾದ ಇನ್ನೂ ಹಲವರೂ ಅಧಿಕಾರದಲ್ಲಿದ್ದರೆಂದು ಹೇಳಿದರೆ ತಪ್ಪಾಗದು. ಅರ್ಥಾತ್ ವಿಜಯನಗರದ ಆಸ್ಥಾನದಲ್ಲಿ ಗೋವದ ಸಾರಸ್ವತ ಬ್ರಾಹ್ಮಣರ ಪ್ರಭಾವವು ತುಂಬಾ ಇದ್ದಿತೆಂದು ಸಂದೇಹವಿಲ್ಲದೇ ಹೇಳಬಹುದು. ಮತ್ತು ವಿಜಯನಗರದ ಅರಸರು ಆ ಬ್ರಾಹ್ಮಣರನ್ನು ಎಷ್ಟು ಗೌರವದಿಂದ ಕಾಣುತ್ತಿದ್ದರೆಂಬುದನ್ನು—ಅವರು ಬರೆಸಿದ ಶಾಸನಗಳಿಂದ ತಿಳಿಯಬಹುದು. (ಚಾವುಂಡ ಮಾಧವನ ಕುರಿತಾದ ಕೆಲವು ವಿಷಯಗಳನ್ನು ಪರಿಶಿಷ್ಟದಲ್ಲಿ ಕೊಟ್ಟುದನ್ನು ಓದಬಹುದು.)

ಉತ್ತರ ಭಾರತದಿಂದ ಬಂದು ದಕ್ಷಿಣ ಭಾರತದ ಪಶ್ಚಿಮ ಕರಾವಳಿಯಲ್ಲಿ ನೆಲಸಿದ ಬ್ರಾಹ್ಮಣರಲ್ಲಿ ಪಶ್ಚಿಮ ಭಾರತದ ಅಂದರೆ ಪಂಜಾಬ ಮತ್ತು ಸಿಂಧು ಪ್ರಾಂತದಿಂದ ಬಂದ ಸಾರಸ್ವತ ವರ್ಗವೇ ಮೊದಲಿನದೆನ್ನಬೇಕು. ಏಕೆಂದರೆ ಸಾರಸ್ವತ ಬ್ರಾಹ್ಮಣರು ತಮ್ಮ ಪಂಚೆಯಲ್ಲಿ ಮತ್ತು ಬ್ರಾಹ್ಮಣೆಯರು ತಮ್ಮ ಸೀರೆಯಲ್ಲಿ ಕಚ್ಚೆಯನ್ನೆಳೆಯುವುದು ಅವರ ಪಂಜಾಬದ ಅಥವಾ ವಾಯವ್ಯ ಭಾರತದ ಮೂಲವನ್ನು ಸೂಚಿಸುತ್ತದೆ. ಅಂದರೆ ಸಿಂಧಿಗಳು, ಪಂಜಾಬಿಗಳು

ಮತ್ತು ವಾಯುವ್ಯ ಭಾರತದ ಸ್ತ್ರೀಪುರುಷರು ಚಲ್ಲಣವನ್ನು ಉಟ್ಟು, ಮೇಲ್ಗಡೆ ಕುಡ್ತವನ್ನು ತೊಡುವ ಜನರು ಅವರು ದಕ್ಷಿಣ ಭಾರತಕ್ಕೆ ಬಂದ ತರುವಾಯ ಗಂಡಸರು ಪಂಚೆಯನ್ನೂ, ಸ್ತ್ರೀಯರು ಸೀರೆಯನ್ನೂ ಉಟ್ಟು, ಅವರಲ್ಲಿ ಕಚ್ಚೆಯನ್ನೆಳೆದು ಚಲ್ಲಣದಂತೆ ಮಾಡಿದರು. ಮೊದಲು ಹೆಂಗಸರು ತಲೆಯನ್ನು ಮತ್ತು ಎದೆಯನ್ನು ಮುಚ್ಚಲು ಕುಡ್ತತದ ಮೇಲೆ ಒಂದು ಶಾಲನ್ನು ಹೊದ್ದುಕೊಳ್ಳುತ್ತಿದ್ದರು. ಸೀರೆ ಉಡತೊಡಗಿದ ತರುವಾಯ ಸೀರೆಯಿಂದಲೇ ಒಂದು ಸೆರಗನ್ನೆಳೆದು ತಲೆಯನ್ನೂ, ಎದೆಯನ್ನೂ, ಮುಚ್ಚಿಕೊಳ್ಳತೊಡಗಿದರು.

ಅದರ ವಾಸ್ತವಿಕತೆಯನ್ನು ಸಾರಸ್ವತ ಬ್ರಾಹ್ಮಣರಲ್ಲಿನ ಮದುವೆಯ ಲಗ್ನದ ಕಾಲದಲ್ಲಿ ಕಾಣಬಹುದು. ಸಾರಸ್ವತ ಬ್ರಾಹ್ಮಣರಲ್ಲಿ ಲಗ್ನಕಾಲದ ವಧುವಿಗೆ ಸೀರೆಯನ್ನುಡಿಸುವಾಗ ಅದರ ಸೆರಗನ್ನು ಸೊಂಟದ ಮೇಲಕ್ಕೆಳೆಯುವುದಿಲ್ಲ. ಅಂದರೆ ಸೀರೆಯನ್ನು ಚಲ್ಲಣದಂತೆಯೇ ಕಚ್ಚೆಹಾಕಿ ಉಡಿಸುತ್ತಾರೆ. ಮೇಲಿನ ಮೈಯನ್ನು ಮುಚ್ಚಲು ಹಿಂದಿನ ಕಾಲದಲ್ಲಿ "ಬಾಜೂ" ಎಂಬ ಇಡೀ ತೋಳಿನ ಕುಡ್ತವನ್ನು ತೊಡಿಸುತ್ತಿದ್ದರು. ಈಗ ರವಕೆಯನ್ನು ತೊಡಿಸುತ್ತಾರೆ. ಮತ್ತು ಅವಗುಂಠನಕ್ಕಾಗಿ ಬಳಸಬೇಕಾಗಿದ್ದ ಶಾಲನ್ನು ಅಥವಾ ಬಿಳಿಯ ವಸ್ತ್ರವನ್ನು ಸ್ವಸ್ತಿಕಾಕಾರವಾಗಿ ಎದೆಯ ಮೇಲೆ ಹೊದೆಯುತ್ತಾರೆ. ಆ ಬಿಳಿಯ ವಸ್ತ್ರದ ಹೆಸರು ಕೊಂಕಣಿಯಲ್ಲಿ "ವೋಳಿಯೇ (+ಚೆಂ)ಅಂಗವಲೆಂ" ಅಂದರೆ ಮುಸುಕು ಹಾಕುವ ವಸ್ತ್ರ ಎಂದಿರುತ್ತದೆ. ಕೊಂಕಣಿಯಲ್ಲಿ "ವೋಳಿ" = Veil ಮತ್ತು Cover ಅಂದರೆ ಮುಸುಕು ಇಲ್ಲವೇ ಗವಸಣಿಕೆ ಎಂದು ಅರ್ಥವಿದೆ. ವಾಸ್ತವಿಕವಾಗಿ ಅದು ಅವಗುಂಠನದ ವಸ್ತ್ರವಾಗಿರುತ್ತದೆ.

## ೨

## ಶಿವಾರಾಧನೆ, ನಾಗಪೂಜೆ ಮತ್ತು ಸಾರಸ್ವತ ಬ್ರಾಹ್ಮಣರು

ಆರ್ಯಜನರು ಶಿವಾರಾಧನೆಯನ್ನು, ನಾಗಪೂಜೆಯನ್ನು ಮತ್ತು ದೇವೀ ಪೂಜೆಯನ್ನು ಭಾರತವರ್ಷದ ಮೂಲನಿವಾಸಿಗಳಿಂದ, ಮುಖ್ಯವಾಗಿ ದ್ರಾವಿಡ ಜನರಿಂದ ಪಡೆದರೆಂದು ಮತ್ತು ಅವುಗಳು ಋಗ್ವೇದ ಕಾಲದ ತರುವಾಯದ ಬೆಳವಣಿಗೆಗಳೆಂದು ಅಧಿಕಾಂಶ ಬ್ರಿಟಿಷ್ ವಿದ್ವಾಂಸರ ಅಭಿಪ್ರಾಯವಾಗಿದೆ.

ಆದರೆ ಅವರ ಆ ಅಭಿಪ್ರಾಯವು ಬರಿಯ ಊಹೆಗಳನ್ನು ಆಧರಿಸಿಕೊಂಡಿದೆಯೇ ಹೊರತು ಅವಕ್ಕೆ ಯಾವುದೊಂದು ದೃಢವಾದ ಬುಡವಿಲ್ಲ. ಅಂದರೆ ಆರ್ಯ ಜನರ ಆಗಮನ ಕಾಲಕ್ಕಿಂತ ಮೊದಲು ಭಾರತವರ್ಷದಲ್ಲಿ ನೆಲಸಿದ್ದ ಜನರಲ್ಲಿ ಶಿವಾರಾಧನೆಯಾಗಲೀ, ನಾಗಪೂಜೆಯಾಗಲೀ, ಇದ್ದಿತೆಂದು ಸಿದ್ಧಪಡಿಸುವ ಯಾವುದೊಂದು ಪ್ರಮಾಣವು ಉತ್ತರಭಾರತದಲ್ಲಾಗಲೀ, ದಕ್ಷಿಣ ಭಾರತ ದಲ್ಲಾಗಲೀ ಇಂದಿನ ತನಕ ದೊರೆತಿಲ್ಲ. ಮಾತ್ರವಲ್ಲ ಬ್ರಿಟಿಷ್ ವಿದ್ವಾಂಸರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಗೊಳಿಸುವುದಕ್ಕಿಂತ ಮೊದಲು ಋಗ್ವೇದದ ಅಧ್ಯಯನ ಮಾಡಿದ್ದುದಾದರೆ ಅವರು ಹಾಗೆ ಅನ್ನುತ್ತಿರಲಿಲ್ಲವೆನ್ನಬಹುದು. ಏಕೆಂದರೆ ಋಗ್ವೇದವಲ್ಲಿ ಶಿವ, ರುದ್ರ, ಸರ್ಪ, ಅಹಿರ್ಬುಧ್ನ್ಯ ಮೊದಲಾದ ಶಬ್ದಗಳಿರುವುದು ಮಾತ್ರವಲ್ಲದೆ ಅವುಗಳನ್ನು ದೇವತಾರೂಪದಿಂದ ಸ್ತುತಿಸಿದ ಮಂತ್ರಗಳು ಕೂಡ ಇವೆ, ಅಂದರೆ ಆರ್ಯಜನರು ತಮ್ಮ ಆರಾಧ್ಯ ದೇವ ನಾಗಿದ್ದ ಅಗ್ನಿಯನ್ನೇ ಪ್ರಸಂಗಾನುಸಾರವಾಗಿ, ಶಿವ, ರುದ್ರ, ಅಹಿರ್ಬುಧ್ನ್ಯ ಮುಂತಾದ ಹೆಸರುಗಳಿಂದ ಕರೆಯುತ್ತಿದ್ದರೆಂದು ಋಗ್ವೇದದಲ್ಲಿನ ಮಂತ್ರಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ:—

**ತ್ವಮಗ್ನೇ ಪ್ರಥಮೋ ಅಂಗಿರಾಋಷಿರ್ದೇವೋದೇವಾ**
**ನಾಮಭವ ಶಿವಃ ಸಖಾ ।**
**ತವವ್ರತೇ ಕವಯೋ ವಿದ್ಮನಾಪಸೋ ಅಜಾಯಂತ**
**ಮರುತೋ ಭ್ರಾಜದೃಷ್ಟಯಃ ॥ ೧-೩೧-೧ ॥**

ಅರ್ಥ—ಹೇ ಅಗ್ನಿದೇವನೇ! ನೀನು ಮೊತ್ತಮೊದಲು ಅಂಗಿರಾಋಷಿ (=ಕೆಂಡ)ಯ ರೂಪದಿಂದ ದೇವರುಗಳ ದೇವನೂ, ಶಿವನೂ (=ಕಲ್ಯಾಣ ಕಾರಕನೂ) ಗೆಳೆಯನೂ ಆದಿ. ನಿನ್ನ ವ್ರತದಲ್ಲಿ (=ಯಜ್ಞ ಸಮಾರಂಭದ ಅಗ್ನಿಕುಂಡದಲ್ಲಿ) ಶಬ್ದಮಾಡುವವರೂ (ಕವಿಗಳು) ಕೆಂಡದಂತೆ ಮಿನುಗುವ ಈಟಿಗಳುಳ್ಳವರೂ ಎಚ್ಚರಿಕೆಯಿಂದ ವರ್ತಿಸುವವರೂ ಆದ ಮರುತ್ತುಗಳು ಹುಟ್ಟಿದರು.

**ಆರೇ ಅಸ್ಮದಮತಿಮಾರೇ ಅಂಹ ಆರೇ ವಿಶ್ವಾಂದುರ್ಮತಿಂ**
**ಯನ್ನಿಪಾಸಿ ।**
**ದೋಷಾ ಶಿವಃ ಸಹಸಃ ಸೂನೋ ಅಗ್ನೇ ಯಂ ದೇವ**
**ಆಚಿತ್ ಸಚಸೇ ಸ್ವಸ್ತಿ ॥ ೪-೧೧-೬ ॥**

ಅರ್ಥ—ಶಿವಸ್ವರೂಪಿಯಾದ ಹೇ ಅಗ್ನಿದೇವನೇ–ನೀನು ನಮ್ಮ ಸಕಲ ಅವಿಚಾರಗಳನ್ನು, ಸಕಲಪಾಪಗಳನ್ನು, ಸಕಲ ಕೆಟ್ಟ ವಿಚಾರಗಳನ್ನು ದೂರ ಗೊಳಿಸುತ್ತೀ. ಬಲದಪುತ್ರನೂ ಮಂಗಲಮಯನೂ ಆಗಿರುವ ಹೇ ಅಗ್ನಿದೇವನೇ ನೀನು ರಾತ್ರಿಕಾಲದ ಕತ್ತಲೆಯಲ್ಲಿ ನಮ್ಮ ಸಂರಕ್ಷಕನಾಗಿ ನಮ್ಮ ಬಳಿಯಲ್ಲಿಯೇ ಇರುತ್ತೀ. ಮುಂದಿನ ಮಂತ್ರದಲ್ಲಿ ಅಗ್ನಿಯನ್ನು ಸ್ಪಷ್ಟವಾಗಿ ರುದ್ರನೆಂದು ಕರೆದಿದೆ:—

**ತ್ವಮಗ್ನೇ ರುದ್ರೋ ಅಸುರೋ ಮಹೋದಿವಸ್ತ್ವಂ**
**ಶರ್ಧೋ ಮಾರುತಂಪೃಕ್ಷ ಈಶೀಷೇ ।**
**ತ್ವಂ ವಾತೈರರುಣೈರ್ಯಾಸಿ ಶಂಗಯಸ್ತ್ವಂ ಪೂಷಾ ವಿಧತಃ**
**ಪಾಸಿನುತ್ಮನಾ ॥ ೭.೧.೬ ॥**

ಅರ್ಥ—ಹೇ ಅಗ್ನಿದೇವನೇ–ನೀನೇ ರುದ್ರನು. ನೀನೇ ಮಹದಾಕಾಶ ದಲ್ಲಿರುವ ಸೂರ್ಯನು ಮರುತ್ತುಗಳ ಪಡೆಯೂ ನೀನೇ. ನೀನು ಕೆಂಪು ಬಣ್ಣದ ಗಾಳಿಗಳೊಂದಿಗೆ ಹೋಗುತ್ತೀ. ಅಂದರೆ ಬಲವಾದ ಗಾಳಿಯು ಬೀಸುವಾಗ ನಿನ್ನ ಕೆಂಪು ಬಣ್ಣದ ಜ್ವಾಲೆಗಳು ಗಾಳಿಯೊಂದಿಗೆ ಕೂಡಿ ಓಡುತ್ತವೆ. (ಗೃಹಸ್ಥರ) ಮನೆಗಳಿಗೆ ಶುಭಕಾರಕನಾದ ನೀನು ಪೂಷನೆಂಬ ಹೆಸರಿಗೆ ತಕ್ಕಂತೆ ನಿನ್ನ ಭಕ್ತರನ್ನು ಪೋಷಿಸಿ ಸಂರಕ್ಷಿಸುತ್ತೀ.

ಹಿಂದಿನ ಮಂತ್ರಗಳಿಂದ ಋಗ್ವೇದ ಕಾಲದಲ್ಲಿಯೇ ಋಷಿಗಳು ಅಗ್ನಿಯನ್ನು ಶಿವ ಮತ್ತು ರುದ್ರ ಎಂಬ ಹೆಸರಿನಿಂದ ಆರಾಧಿಸುತ್ತಿದ್ದರೆಂದು ಸಿದ್ಧವಾಗುತ್ತದೆ. ಯಜುರ್ವೇದದಲ್ಲಿ ಮುಂದಿನಂತೆ ಹೇಳಿದೆ.

**ಶಿವೋ ಭೂತ್ವಾಮಹ್ಯಮಗ್ನೇ ಅಥೋಸೀದ ಶಿವಸ್ತ್ವಮ್ ।**
**ಶಿವಾಃ ಕೃತ್ವಾ ದಿಶಃ ಸರ್ವಾಃ ಸ್ವಾಂ ಯೋನಿಮಿಹಾಸದ ॥**
**ವಾಜಸನೇಯಿ ಸಂಹಿತೆ-೧೮-೧೭ ॥**

**॥ ತೈತ್ತಿರೀಯ ಸಂಹಿತೆ-೪-೧-೯-೧೬ ॥**

ಅರ್ಥ—ಹೇ ಅಗ್ನಿದೇವನೇ ಶಿವನಾದ ನೀನು, ನನಗೆ ಶಿವನಾಗಿ ಅಂದರೆ ಕಲ್ಯಾಣಕಾರಕನಾಗಿ ಈಗ ಕುಳಿತುಕೋ; ನೀನೇ ಶಿವನು. ಎಲ್ಲ ದಿಕ್ಕುಗಳನ್ನು (ನಿನ್ನ ಬೆಳಕಿನಿಂದ) ಮಂಗಲಮಯಗಳಾಗುವಂತೆ ಮಾಡಿ. ಇಲ್ಲಿ ನಿನ್ನ ಯೋನಿ ಯಲ್ಲಿ (=ಗಾರ್ಹಪತ್ಯಕುಂಡದಲ್ಲಿ) ಕುಳಿತುಕೊ. ಹಾಗೆಯೇ ವಾಜಸನೇಯಿ

ಸಂಹಿತೆಯಲ್ಲಿ ಅಗ್ನಿಯನ್ನು ಸ್ಪಷ್ಟವಾಗಿ "**ಶಿವೋ ನಾಮಾಸಿ**" **॥ ೩-೬೩ ॥** ಶಿವನೆಂಬ ಹೆಸರುಳ್ಳವನಾಗಿರುತ್ತೀ—ಎಂದಿದೆ.

ತೈತ್ತೀರಿಯ ಸಂಹಿತೆಯಲ್ಲಿ ಒಂದು ಸರ್ತಿಯಲ್ಲ ಹಲವು ಸರ್ತಿ–"**ರುದ್ರೋ ವಾ ಏಷ ಯದಗ್ನಿ ॥ ೫-೪-೩-೧ ಇತ್ಯಾದಿ ॥**" ಯಾವ ಈ ಅಗ್ನಿ ಇರುವಸೋ ಅವನೇ ರುದ್ರಸು ಎಂದು ಹೇಳಿದೆ.

ವಾಸ್ತವವಾಗಿ ಹೇಳುವುದಾದರೆ ಆರ್ಯರಲ್ಲಿನ ನೂರಾರು ಪಂಗಡಗಳು ಅಗ್ನಿಯನ್ನು ನಾನಾ ಹೆಸರುಗಳಿಂದ ಕರೆದು ನಾನಾ ರೀತಿಯಿಂದ ನಾನಾ ರೂಪಗಳಲ್ಲಿ ಆರಾಧಿಸುತ್ತಿದ್ದರು, ಅದನ್ನು ಶತಪಥ ಬ್ರಾಹ್ಮಣದಲ್ಲಿಸ ಮುಂದಿಸ ಅಂಶದಿಂದ ತಿಳಿದುಕೊಳ್ಳಬಹುದು:—"**ತದ್ವಾ ಅಗ್ನಯೇ ಇತಿ ಕ್ರಿಯತೇ; ಅಗ್ನಿರ್ವೈ ಸದೇವಃ । ತಸ್ಯ ಏತಾನಿ ನಾಮಾನಿ । ಶರ್ವ ಇತಿ ಯಥಾ ಪ್ರಾಚ್ಯಾ ಆಚಕ್ಷತೇ । ಭವ ಇತಿ ಬಾಹೀಕಾಃ । ಪಶೂನಾಂ ಪತೀ ರುದ್ರೋ ಅಗ್ನಿರಿತಿ । ತಾನಿ ಅಸ್ಯ ಅಶಾಂತಾನಿ ಏವ ಇತರಾಣಿ ನಾಮಾನಿ ॥ ಅಗ್ನಿರಿತಿ ಏವ ಶಾಂತತಮುಮ್ ॥ ತಸ್ಮಾದ್ ಅಗ್ನಯೇ ಇತಿಕ್ರಿಯತೇ; ಸ್ವಿಷ್ಟಕೃತೇ ಇತಿ ॥**" ಅರ್ಥ—ಆಹುತಿಗಳು "ಅಗ್ನಿದೇವನಿಗೆ" ಎಂದೇ ಕೊಡಲ್ಪಡುತ್ತವೆ. ಮತ್ತು ಅಗ್ನಿಯೇ ಆ ದೇವನು ಹಾಗೂ ಆ ವನವೇ ಆ ಹೆಸರುಗಳು ಯಾವುವೆಂದರೆ "ಶರ್ವ" ಎಂಬುದಾಗಿ ಮೂಡಣ ಕಡೆಯುವರು ಕರೆಯುತ್ತಾರೆ. "ಭವ" ಎಂದು ಬಾಹೀಕರೆನ್ನುತ್ತಾರೆ. ಪಶುಗಳಪತಿ ಅನ್ನುತ್ತಾರೆ. ರುದ್ರನೆನ್ನುತ್ತಾರೆ. ಅಂದರೆ ನಾನಾ ಹೆಸರುಗಳಿಂದ ಕರೆಯುತ್ತಾರೆ. ಆದರೆ ಪಶುಪತಿ, ರುದ್ರ ಮೊದಲಾದ ಇತರ ಹೆಸರುಗಳು ಅಶಾಂತ ಅಂದರೆ ಉಗ್ರಸ್ವಭಾವದವುಗಳು. ಅಗ್ನಿ ಎಂಬ ಹೆಸರು ಮಾತ್ರ ಶಾಂತ, ಸೌಮ್ಯ ಮತ್ತು ಮಂಗಲಕರವಾದುದು. ಆದುದರಿಂದಲೇ ಆಹುತಿಗಳನ್ನು ಕೊಡುವಾಗ "ಅಗ್ನಯೇ=ಅಗ್ನಿದೇವನಿಗೆ" ಎಂತಲೂ "ಸ್ವಿಷ್ಟಕೃತೇ= ಒಳ್ಳೆಯ ಬಯಕೆಗಳನ್ನು ಈಡೇರಿಸಿಕೊಡುವವನಿಗೆ" ಎಂತಲೂ ಹೇಳಲಾಗುತ್ತದೆ.

ಹಿಂದಿನ ಉದಾಹರಣೆಗಳಿಂದ ಆರ್ಯಜನರು ಅಗ್ನಿಯನ್ನೇ ಶಿವನೆನ್ನುತಿದ್ದರೆಂಬು ಸಂದೇಹಕ್ಕೆ ಎಡೆಯಿಲ್ಲದಂತೆ ಸಿದ್ಧವಾಗುತ್ತದೆ. ಆದುದರಿಂದ ಆರ್ಯರು ಶಿವಾರಾಧನೆಯನ್ನು ಅನ್ಯರಿಂದ ಪಡೆದರು, ಅಥವಾ ಶಿವನು ದ್ರಾವಿಡರ ದೇವರು ಮುಂತಾಗಿ ಹೇಳಿದುದರಲ್ಲಿ ಏನೂ ಹುರುಳಿರಲಿಲ್ಲವೆಂದು ಬೇರೆ ಹೇಳಬೇಕಾಗಿಲ್ಲ.

ಆರ್ಯಜನರು ಬಹಳ ಪ್ರಾಚೀನ ಕಾಲದಲ್ಲಿ ಅಶ್ವತ್ಥಮರದ ಎರಡು ಕಟ್ಟಿಗೆಗಳನ್ನು ಒಂದರ ಮೇಲೆ ಮತ್ತೊಂದನ್ನು ಅಡ್ಡಲಾಗಿಟ್ಟು ಒಮ್ಮೆ ಅತ್ತ, ಒಮ್ಮೆ ಇತ್ತಲಾಗಿ ಬಹಳ ಬಲದಿಂದ ಕಡೆದು ಬೆಂಕಿಯನ್ನು ಹುಟ್ಟಿಸುತ್ತಿದ್ದರು. ಆ ಕಟ್ಟಿಗೆಗಳನ್ನು "ಅರಣಿಗಳು" ಅನ್ನುತಿದ್ದರು. ಅವರಲ್ಲಿ ಕೆಲವರು ಕಲ್ಲುಗಳಿಂದ ಕಡೆದು ಬೆಂಕಿಯನ್ನು ಹುಟ್ಟಿಸುತಿದ್ದರು. ಅರಣಿಗಳಲ್ಲಿ ಬೆಂಕಿ ಹುಟ್ಟಿಸಿದ ವಿಷಯವು ಋಗ್ವೇದದಲ್ಲಿನ ಮುಂದಿನ ಮಂತ್ರದಲ್ಲಿದೆ:—

**ಅಗ್ನಿಂ ನರೋ ದೀಧಿತಿಭಿರರಣ್ಯೋರ್ಹಸ್ತಚ್ಯುತೀ ಜನಯಂತ ಪ್ರಶಸ್ತಮ್ ।**
**ದೂರೇದೃಶಂ ಗೃಹಪತಿಮಥರ್ಯುಮ್ ॥ ೭-೧-೧ ॥**

ಅರ್ಥ—ಮನುಷ್ಯರು ಆಳವಾದ ಧ್ಯಾನದಿಂದಲೂ ಕೈಗಳ ಚಟುವಟಿಕೆಗಳಿಂದಲೂ ಎರಡು ಅರಣಿಗಳಲ್ಲಿ ಅಗ್ನಿಯನ್ನು ಹುಟ್ಟಿಸಿದರು. ಆ ಅಗ್ನಿಯು ಯಜ್ಞಗೃಹದ ಒಡೆಯನೂ, ಸೌಮ್ಯನಾಗಿ ಉರಿದರೂ ದೂರದವರೆಗೆ ಕಾಣಿಸುವವನೂ, ಸ್ತುತಿಗೆ ಯೋಗ್ಯನಾದವನೂ ಆಗಿದ್ದನು. ಹಾಗೆಯೇ ಇಂದ್ರನ ಸಂಬಂಧವಲ್ಲಿ ಬಂದ ಮಂತ್ರದಲ್ಲಿ ಇಂದ್ರನು ಎರಡು ಕಲ್ಲುಗಳಲ್ಲಿ ಅಗ್ನಿಯನ್ನು ಹುಟ್ಟಿಸಿದನೆಂದು ಹೇಳಿದೆ:— **"ಅಶ್ಮನೋರಂತರಗ್ನಿಂ ಜಜಾನ ॥ ೨-೧೨-೩ ॥"**

ಮುಂದೆ ಆರ್ಯರಲ್ಲಿ ಕೆಲವರು ಅಗ್ನಿಯನ್ನು ಹುಟ್ಟಿಸಲು ಕೊಂಚ ಸುಲಭವಾದ ಉಪಾಯವನ್ನು ಕಂಡುಹಿಡಿದರು. ಅವರು ಎರಡು ಅರಣಿಗಳನ್ನು ಭೂಮಿಯ ಮೇಲೆ ಸ್ವಸ್ತಿಯ + ಆಕಾರದಲ್ಲಿಟ್ಟು ನಾಲ್ಕು ಮೊಳೆಗಳಿಂದ ಭೂಮಿಯಲ್ಲಿ ಜಡಿಯುತ್ತಿದ್ದರು. ಅದರ ನಾಲ್ಕು ಮೊರೆಗಳು ನಾಲ್ಕು ದಿಕ್ಕುಗಳನ್ನು ಸೂಚಿಸುತಿದ್ದವು. ತರುವಾಯ ಆ ಸ್ವಸ್ತಿಯ ಮಧ್ಯದಲ್ಲಿ ಕೊರೆದ ತೂತಿನಲ್ಲಿ ಒಂದು ದಂಡವನ್ನು ಹೂಗಿಸಿ ಅದಕ್ಕೆ ಹಗ್ಗ ಸುತ್ತಿ ಮಜ್ಜಿಗೆ ಕಡೆದಂತೆ ಕಡೆದು ಅಗ್ನಿಯನ್ನು ಹುಟ್ಟಿಸುತಿದ್ದರು. ತೂತನ್ನು ಯೋನಿಯೆಂದೂ, ಮಂಥನ ದಂಡವನ್ನು ಪ್ರಮಂಥವೆಂದೂ ಅನ್ನುತಿದ್ದರು.[1] ಯೋನಿಯೆಂದರೆ ಅಗ್ನಿಯ ಉತ್ಪತ್ತಿಸ್ಥಾನವೆಂಬ ಅರ್ಥವಿದೆ. ಆ ಯೋನಿಯಲ್ಲಿ ಪ್ರಮಂಥವನ್ನಿಟ್ಟರೆ. ಅಗ್ನಿಯನ್ನು ಕಡೆಯುವ ಆ ಯಂತ್ರಕ್ಕೆ ಐದು ಮೊರೆಗಳಾಗುತ್ತಿದ್ದವು ಮತ್ತು ಅವುಗಳು—ಪೂರ್ವ. ದಕ್ಷಿಣ. ಪಶ್ಚಿಮ. ಉತ್ತರ ಮತ್ತು ಊರ್ಧ್ವ ಎಂದು

1. ಕರ್ಮಪ್ರದೀಪ, ೭-೫ ಮತ್ತು ೭-೧೧.

ಐದು ದಿಕ್ಕುಗಳನ್ನು ತೋರಿಸುತಿದ್ದವು. ಹಿಂದೆ ಆ ಯಂತ್ರವನ್ನು ಪ್ರಜಾಪತಿ ಯೆನ್ನುತಿದ್ದರು. ಕೊನೆಗೆ ಆ ಅಗ್ನಿಮಂಥನ ಯಂತ್ರವು ಶಿವನ ಸಂಕೇತ ಅಥವಾ ಪ್ರತಿನಿಧಿಯಾಗಿ ಮಾರ್ಪಟ್ಟಿತು. ಆದುದರಿಂದಲೇ ಪುರಾಣಗಳಲ್ಲಿ ಪ್ರಜಾಪತಿಗೆ ಮತ್ತು ಶಿವನಿಗೆ ಐದು ಮೋರೆಗಳೆಂದು ವರ್ಣಿಸಲಾಗಿದೆಯೆನ್ನ ಬಹುದು.

ಬ್ರಾಹ್ಮೀ ವರ್ಣಮಾಲೆಯಲ್ಲಿ ಸ್ವಸ್ತಿ+ಆಕೃತಿಯು "ಕ" ಎಂಬ ವ್ಯಂಜನ ವಾಗಿರುತ್ತದೆ. ಮತ್ತು ದಂಡವು ರ "।" ಎಂಬ ವ್ಯಂಜನವಾಗಿರುತ್ತದೆ. "ರ" ಕಾರವು ಅಗ್ನಿಯೆಂಬ ಅರ್ಥವುಳ್ಳದಾಗಿದೆ. ಮತ್ತು "ಕ"ದ ಕುರಿತು ವೈದಿಕ ಸಾಹಿತ್ಯದಲ್ಲಿ ನಾನಾ ಕಲ್ಪನೆಗಳಿವೆ. ಋಗ್ವೇದದ ಹತ್ತನೆಯ ಮಂಡಲದ ೧೨೧ನೆಯ ಸೂಕ್ತದಲ್ಲಿ "ಕಃ" ಎಂಬುದು ಪ್ರಜಾಪತಿಯೆಂದು ಹೇಳಿ ಸ್ತುತಿಸ ಲಾಗಿದೆ. ತೈತ್ತಿರೀಯ ಸಂಹಿತೆಯು **"ಪ್ರಜಾಪತಿರ್ವೈ ಕಃ ॥ ೧-೬-೬-೪ ಮತ್ತು ೧-೭-೬-೬ ॥"** ಅಂದರೆ "ಪ್ರಜಾಪತಿಯೇ ಕ" ಎಂದು ಹೇಳುತ್ತದೆ. ತೈತ್ತಿರೀಯ ಬ್ರಾಹ್ಮಣವು **"ಪ್ರಜಾಪತಿಃ ಸಂವತ್ಸರೋ ಮಹಾನ್ ಕಃ ॥ ೩-೧೦-೧ ॥"** ಅಂದರೆ ಪ್ರಜಾಪತಿಯು ಸಂವತ್ಸರರೂಪದ ದೊಡ್ಡ "ಕ" ಆಗಿದ್ದಾನೆಂದು ಹೇಳಿ ತರುವಾಯ ಆ ಸಂವತ್ಸರವನ್ನು ಒಂದು ಹಕ್ಕಿಗೆ ಹೋಲಿಸು ತ್ತದೆ:– **"ತಸ್ಯ (=ಸಂವತ್ಸರಸ್ಯ) ವಸಂತಃ ಶಿರಃ। ಗ್ರೀಷ್ಮೋ ದಕ್ಷಿಣ ಪಕ್ಷಃ। ವರ್ಷಾಃಪುಚ್ಛಮ್। ಶರದುತ್ತರ ಪಕ್ಷಃ। ಹೇಮಂತೋ ಮಧ್ಯಮ್ ॥ ೩-೧೦-೪ ॥"** ವಸಂತ ಋತುವು ಆ ಹಕ್ಕಿಯ ತಲೆ; ದಕ್ಷಿಣ ರೆಕ್ಕೆಯು ಗ್ರೀಷ್ಮ ಋತು. ವರ್ಷಾಋತುವು ಆ ಪಕ್ಕಿಯ ಬಾಲ; ಶರದೃತುವು ಆ ಹಕ್ಕಿಯ ಉತ್ತರ ದಿಕ್ಕಿನ ರೆಕ್ಕೆ (ಎಡರೆಕ್ಕೆ) ಮತ್ತು ಹೇಮಂತ ಋತುವು (ನಡುವಿನಗುಳಿ) ನಡುವಾಗಿರುತ್ತದೆ. ಅಂದರೆ ಆ ಹಕ್ಕಿಯು ಬೇರೆ ಯಾವುದೂ ಆಗಿರದೇ ಹಿಂದೆ ಹೇಳಿದ ಸ್ವಸ್ತಿ ಮತ್ತು ದಂಡಗಳ ಜೋಡಣೆಯಿಂದ ಹುಟ್ಟಿದ ಅಗ್ನಿಮಂಥನ ಯಂತ್ರವಾಗಿರುತ್ತದೆ. ಮತ್ತು ಅದು ಪ್ರಜಾಪತಿಯಾಗಿರುತ್ತದೆ. ಅದು ಪೂರ್ವ, ದಕ್ಷಿಣ, ಪಶ್ಚಿಮ ಮತ್ತು ಉತ್ತರ ದಿಕ್ಕುಗಳನ್ನು ತೋರಿಸುವುದ ರೊಂದಿಗೆ ಕ್ರಾಂತಿ ವೃತ್ತವನ್ನೂ ಸೂಚಿಸುತ್ತದೆ. ಕ್ರಾಂತಿವೃತ್ತವೇ ಸಂವತ್ಸರ ವಾಗಿರುತ್ತದೆ. ಅಂದರೆ ಭೂಮಿಯು ಅದರಲ್ಲಿ ಸುತ್ತಿಬರುವುದರಿಂದಲೇ ಸಂವತ್ಸರವಾಗುತ್ತದೆ. ಸಂವತ್ಸರವೇ ಪ್ರಜಾಪತಿಯಾಗಿರುವುದರಿಂದ ಕ್ರಾಂತಿ ವೃತ್ತದಲ್ಲಿ ಹರಡಿರುವ ನಕ್ಷತ್ರಗಳು ಪ್ರಜಾಪತಿಯ ಮಕ್ಕಳಾಗಿರುತ್ತವೆ. ಅಗ್ನಿಯ ಮೂಲವು ಪ್ರಜಾಪತಿಯಾಗಿರುವುದರಿಂದ, ಹಾಗೂ ಅಗ್ನಿಯೇ ಯಜ್ಞಗಳ

ಮೂಲವಾಗಿರುವುದರಿಂದ, ಅಗ್ನಿ ಮತ್ತು ಯಜ್ಞಗಳು ಪ್ರಜಾಪತಿಯ ಪ್ರಜೆಗಳಾಗಿರುತ್ತವೆ.

ಕಾಲಕ್ರಮೇಣ ಅಗ್ನಿಮಂಥನ ಯಂತ್ರದಿಂದ ಅಗ್ನಿಯನ್ನು ಹುಟ್ಟಿಸುವುದು ನಿಂತುಹೋದುದರಿಂದ, ಆ ಯಂತ್ರವು ಅಗ್ನಿಯ ಸಂಕೇತ ಮಾತ್ರವಾಗಿ ಉಳಿಯಿತು. ಅದನ್ನೇ ತರುವಾಯದವರು ಶಿವನಲಿಂಗವೆಂದರು. ಲಿಂಗ ಎಂಬ ಶಬ್ದದ ಮೂಲಾರ್ಥವು "ಲಕ್ಷಣ" ಇಲ್ಲವೇ "ಸಂಕೇತ" ಎಂದಿರುತ್ತದೆ. ಆದುದರಿಂದ ಅಗ್ನಿಯ ಸಂಕೇತವೆಂದರೂ, ಶಿವನ ಲಿಂಗವೆಂದರೂ ಅರ್ಥ ಒಂದೇ ಎಂಬುದು ಸ್ಪಷ್ಟವಿದೆ. ಆದರೆ ತರುವಾಯದವರಿಗೆ ಅದರ ಮೂಲವೇನೆಂಬುದು ಗೊತ್ತಾಗದೇ ಹೋದುದರಿಂದ ಆ ಸಂಕೇತಗಳಿಗೆ ಸ್ತ್ರೀಯ ಮತ್ತು ಪುರುಷನ ಜನನೇಂದ್ರಿಯಗಳ ಸಂಯೋಗವೆಂಬ ಅಪಾರ್ಥ ಮಾಡಿದರು. ಅರ್ಥಾತ್ ಅಗ್ನಿಮಂಥನ ಯಂತ್ರವೇ ತರುವಾಯದ ಶಿವಲಿಂಗದ ಮೂಲವೆಂದು ಹೇಳಿದರೆ ತಪ್ಪಾಗದು.

ಅಗ್ನಿಯನ್ನು ಕಡೆಯಲು ಬಳಸುವ ಅರಣಿಗಳೆಂಬ ಕಟ್ಟಿಗೆಗಳು ಅಶ್ವತ್ಥ ವೃಕ್ಷದವುಗಳಾಗಿರುವುದರಿಂದ ಅಶ್ವತ್ಥವೃಕ್ಷವು ಅಗ್ನಿಯ ಪ್ರತಿನಿಧಿ ಅಥವಾ ಪ್ರತ್ಯಕ್ಷ ಅಗ್ನಿಯೇ ಆಗಿರುತ್ತದೆ. ಹೀಗಾಗಿ ಅಶ್ವತ್ಥವೃಕ್ಷಕ್ಕೆ ದೇವತ್ವ ಪ್ರಾಪ್ತವಾಗಿದೆ. ಆದುದರಿಂದಲೇ ಗೀತೆಯಲ್ಲಿ ಶ್ರೀಕೃಷ್ಣನು **"ಅಶ್ವತ್ಥಃ ಸರ್ವವೃಕ್ಷಾಣಾಮ್ ॥ ೧೦-೨೬ ॥"** ಅಂದರೆ ಎಲ್ಲ ಮರಗಳಲ್ಲಿ ಅರಳಿಮರವು ನಾನು ಎಂದು ಹೇಳಿರುವುದಾಗಿದೆ.

ಋಗ್ವೇದದಲ್ಲಿ ಅಗ್ನಿಯನ್ನು "ಶಿವನೆಂದು ಕರೆದಂತೆಯೇ" ಅಹಿರ್ಬುಧ್ನ್ಯಃ ಅಂದರೆ ಆಳದಲ್ಲಿ ಅಥವಾ ತಳದಲ್ಲಿರುವ ಹಾವು ಎಂದು ಕೂಡ ಕರೆದಿದೆ. ಕತ್ತಲೆಯನ್ನು ಸೂಚಿಸುವ ವೃತ್ರನನ್ನು ಕೂಡ "ಅಹಿ" ಅಂದರೆ ಹಾವು ಎಂದು ಕರೆದಿದ್ದರೂ ಅಗ್ನಿಗಾಗಿ ಅಹಿ ಶಬ್ದವನ್ನು ಬಳಸಿದ ಪ್ರತಿಯೊಂದು ಸಂದರ್ಭದಲ್ಲಿ ಅದರೊಡನೆ ಬುಧ್ನ ಶಬ್ದವನ್ನು ಕೂಡ ಬಳಸಿದೆ. ಬುಧ್ನ ಅಂದರೆ ಬುಡ, ಅಡಿ, ತಳ ಮತ್ತು ಆಳವೆಂದೂ ಆಕಾಶ ಮತ್ತು ಶರೀರವೆಂದೂ ಅರ್ಥಗಳಿವೆ. ಮತ್ತು ಒಮ್ಮೊಮ್ಮೆ ಅದು "ಯಾವುದೊಂದರ ಮೂಲ" ಎಂಬ ಅರ್ಥವನ್ನೂ ಕೊಡುತ್ತದೆ. ಅಗ್ನಿಯನ್ನು "ಹಾವು" ಎಂದು ಕರೆದ ತರುವಾಯ ಅಗ್ನಿಯ ಪ್ರತಿನಿಧಿಯಾಗಿರುವ ಶಿವನೊಡನೆ ಹಾವು ಇರಲೇಬೇಕಾಗಿದೆ. ಅಂದರೆ ಅಹಿ ಶಬ್ದವು ಅಗ್ನಿಯ ಜ್ವಾಲೆಯನ್ನು ಸೂಚಿಸುತ್ತದೆನ್ನಬಹುದು. ಆದುದರಿಂದಲೇ "ಶಿವನನ್ನು ಅಹಿಭೃತ್=ಹಾವನ್ನು ಹೊತ್ತಿರುವವನು" ಮತ್ತು "ನಾಗಭೂಷಣ=ಹಾವು ಆಭರಣವಾಗಿರುವವನು" ಎಂದು ಕರೆದಿರಬೇಕು. ಅಷ್ಟೇ ಅಲ್ಲ

ವೈದಿಕೋತ್ತರ ಸಾಹಿತ್ಯದಲ್ಲಿ ಶಿವ ಮತ್ತು ರುದ್ರರನ್ನು "ಅಹಿರ್ಬುಧ್ನ್ಯ" ಎಂದು ಕರೆಯಲಾಗಿದೆ.

ಋಗ್ವೇದದಲ್ಲಿ ಅಗ್ನಿಯನ್ನು **"ಅಪಾಂ ನಪಾತ್ ॥ ೩.೯.೧ ॥** ಅಂದರೆ ನೀರುಗಳ ಪುತ್ರ ಎಂತಲೂ, **"ಆಪೋ ಅಗ್ನಿಂ ಜನಯಂತ ಮಾತರಃ ॥ ೧೦-೯೧.೬ ॥** ಅಂದರೆ ನೀರುಗಳೆಂಬ ತಾಯಿಗಳು ಅಗ್ನಿಯನ್ನು ಹುಟ್ಟಿಸಿದವು ಎಂತಲೂ ಹೇಳಿದೆ. ಹಾಗೆಯೇ ಅಹಿರ್ಬುಧ್ನ್ಯನು ನೀರಿನಲ್ಲಿ ಹುಟ್ಟಿದವನೆಂದೂ, ನೀರಿನ ತಳದಲ್ಲಿರುವವನೆಂದೂ ಹೇಳಿದೆ:–**ಅಬ್ಜಾಮುಕ್ಥೈ ರಹಿಂ ಗೃಣೀಷೇ ಬುಧ್ನೇನದೀನಾಂ ರಜಃಸು ಷೀದನ್ ೭.೩೪.೧೬॥"** ಅಂದರೆ—ನೀರಿನಲ್ಲಿ ಹುಟ್ಟಿದವನೂ, ನದಿಗಳ ತಳದಲ್ಲಿನ ರಜಗಳಲ್ಲಿ ಕುಳಿತಿರುವಂಥವನೂ ಆಗಿರುವ ಅಹಿಯನ್ನು (=ಹಾವನ್ನು) ನಾನು ಉಕ್ಥಮಂತ್ರಗಳಿಂದ ಸ್ತುತಿಸುತ್ತೇನೆ ಎಂದರ್ಥ. ಹಾಗೆಯೇ— **"ಮಾನೋ ಅಹಿರ್ಬುಧ್ನ್ಯೋ ರಿಷೇ ಮಾ ಧಾನ್ಮಾ ಯಜ್ಞೋ ಅಸ್ಯ ಸ್ರಿಧದ್ರುತಾಯೋಃ ॥ ೭.೩೪. ೧೭ ॥"** ಅಂದರೆ ಆಳದಲ್ಲಿ ನೆಲಸಿರುವ ಹಾವು ನಮಗೆ ಯಾವ ಕೇಡನ್ನೂ ಮಾಡದಿರಲಿ, ಮತ್ತು ಈ ಸೇವಕನ ಯಜ್ಞವು ಯಾವ ವಿಘ್ನವೂ ಇಲ್ಲದೆ ನೆರವೇರಲಿ ಎಂದು ಕೂಡ ಪ್ರಾರ್ಥಿಸಿದೆ.

ಅಹಿರ್ಬುಧ್ನ್ಯ ಶಬ್ದವು ಸ್ವತಂತ್ರವಾಗಿ ಬಂದ ಮಂತ್ರಗಳು ಋಗ್ವೇದದಲ್ಲಿ ಬರೇ ಮೂರು ಮಾತ್ರ ಇವೆ. ಇತರ ಮಂತ್ರಗಳಲ್ಲಿ ಅಹಿರ್ಬುಧ್ನ್ಯ ಶಬ್ದವು ಅಗ್ನಿಯ ಇತರ ಹೆಸರುಗಳಾಗಿರುವ ಅಜಏಕಪಾದ್, ಅಪಾಂನಪಾತ್ ಮೊದಲಾದ ಶಬ್ದಗಳ ಜೊತೆಯಲ್ಲಿಯೇ ಬಂದಿವೆ. ಆದುದರಿಂದ "ಅಹಿರ್ಬುಧ್ನ್ಯ=ಆಳದಲ್ಲಿರುವ ಹಾವು" ಎಂಬ ಹೆಸರು ಅಗ್ನಿಯದೇ ಆಗಿದ್ದಿತೆಂತಲೂ, ಅಗ್ನಿಯನ್ನು ಅಹಿರ್ಬುಧ್ನಯೆಂದು ಬಹಳ ಪ್ರಾಚೀನ ಕಾಲದಿಂದಲೇ ಕರೆಯಲಾಗುತ್ತಿತ್ತೆಂತಲೂ ಸಿದ್ಧವಾಗುತ್ತದೆ.

ವಾಜಸನೇಯಿ ಸಂಹಿತೆಯಲ್ಲಿ ಗಾರ್ಹಪತ್ಯಾಗ್ನಿಯನ್ನು ಆಳದಲ್ಲಿರುವ ಹಾವು ಎಂದು ಕರೆದಿದೆ:— **"ಅಹಿರಸಿ ಬುಧ್ನ್ಯೋ ॥ ೫.೩೩ ॥"** ನೀನು ಆಳದಲ್ಲಿರುವ ಹಾವಾಗಿರುತ್ತೀ.

ಐತರೇಯ ಬ್ರಾಹ್ಮಣವಾದರೋ ಅಹಿರ್ಬುಧ್ನ್ಯನೆಂದರೆ ಗಾರ್ಹಪತ್ಯಾಗ್ನಿಯೆಂದು ಸ್ಪಷ್ಟವಾಗಿ ಹೇಳುತ್ತದೆ:— **"ಏಷ ಹ ವಾ ಅಹಿರ್ಬುಧ್ನ್ಯೋ ಯದಗ್ನಿರ್ಗಾರ್ಹಪತ್ಯಃ ॥ ೩.೩-೩೬ ॥"** ಅಂದರೆ—ಯಾವ ಈ ಗಾರ್ಹಪತ್ಯಾಗ್ನಿ ಇರುವನೋ ಅವನೇ ಆಳದಲ್ಲಿರುವ ಹಾವಾಗಿರುತ್ತಾನೆ—ಎಂದರ್ಥ.

ಹಿಂದಿನ ಉದಾಹರಣೆಗಳಿಂದ ಗಾರ್ಹಪತ್ಯಕುಂಡದ ತಳದಲ್ಲಿ ಸದಾಕಾಲವೂ ರಕ್ಷಿತನಾಗಿರುವ ಅಗ್ನಿಯನ್ನೇ "ಅಹಿರ್ಬುಧ್ನ್ಯ = ಆಳದಲ್ಲಿರುವ ಹಾವು" ಎಂದು ಕರೆಯುತ್ತಿದ್ದರೆಂದೂ–ಗಾರ್ಹಪತ್ಯಾಗ್ನಿಯ ಪ್ರತಿನಿಧಿಯೆಂದು–ಹಾವಿನ ಪ್ರತಿಮೆಯನ್ನು ಇಡುತ್ತಿದ್ದರೆಂದೂ ಹೇಳಬಹುದು. ಮತ್ತು ಗಾರ್ಹಪತ್ಯಾಗ್ನಿಯನ್ನು "ಆಳದಲ್ಲಿರುವ ಹಾವು" ಎಂದುದರಿಂದಲೇ ಹಾವಿನ ಅಥವಾ ಮಹಾಶೇಷನ ದೇವಾಲಯಗಳು ಸುತ್ತಲೂ ಎತ್ತರವಾಗಿರುವಂತೆ ಅಂದರೆ ಅಗ್ನಿಕುಂಡದಂತಿರುವ ತಗ್ಗಿನಲ್ಲಿ ಕಟ್ಟಲ್ಪಡುತ್ತಿದ್ದವೆಂದೂ ಹೇಳಬಹುದು. ಅಷ್ಟು ಮಾತ್ರವಲ್ಲದೇ ವೈದಿಕಸಾಹಿತ್ಯದಲ್ಲಿ ಸರ್ಪನಿಗೆ ಮತ್ತು ನಾಗನಿಗೆ ಆಹುತಿಗಳನ್ನು ಅಥವಾ ಹವಿಸ್ಸನ್ನು ಅರ್ಪಿಸುತ್ತಿದ್ದ ಉಲ್ಲೇಖಗಳೂ ಇವೆ. ತೈತ್ತಿರೀಯ ಬ್ರಾಹ್ಮಣದಲ್ಲಿ ಇರುವ ನಕ್ಷತ್ರೇಷ್ಟಿಗಳಲ್ಲಿ ಆಶ್ಲೇಷಾ ನಕ್ಷತ್ರದ ದೇವತೆಯಾಗಿರುವ ಸರ್ಪಗಳಿಗೂ ಉತ್ತರಾಭಾದ್ರಾ ನಕ್ಷತ್ರದ ದೇವತೆಯಾಗಿರುವ ಅಹಿರ್ಬುಧ್ನ್ಯನಿಗೂ ಹವಿಸ್ಸನ್ನು ಅರ್ಪಿಸಲಾಗುತ್ತದೆ:—**ಇದಂ ಸರ್ಪೇಭ್ಯೋ ಹವಿರಸ್ತು ಜುಷ್ಟಮ್** ‖ **೩-೧-೧-೫** ‖

**ಅಹಿರ್ಬುಧ್ನಿಯ ಪ್ರಥಮಾನ ಏತಿ ।**
**ಶ್ರೇಷ್ಠೋ ದೇವಾನಾಮುತ ಮಾನುಷಾಣಾಮ್ ‖**
**೩-೧-೨-೯ ‖**

ಆಶ್ವಲಾಯನ ಗೃಹ್ಯಸೂತ್ರದ ವಿಧಿಯಂತೆ ಸ್ವಾಧ್ಯಾಯ ಕಾಲದಲ್ಲಿ ನಾಗಗಳಿಗೆ ತರ್ಪಣವನ್ನೂ, ಶ್ರಾವಣೀ ಹುಣ್ಣಿಮೆಯಂದು ಶ್ರವಣಾಕರ್ಮದಲ್ಲಿ ಅಥವಾ ಉಪಾಕರ್ಮ ಹೋಮದಲ್ಲಿ ಸರ್ಪಗಳಿಗೆ ಬಲಿಯನ್ನೂ ಅರ್ಪಿಸಬೇಕಾಗಿದೆ. ಹಾಗೂ ಶ್ರಾದ್ಧಕಾಲದಲ್ಲಿ ಆಲಂಭನಮಾಡಿದ ಪಶುವಿನ ನೆತ್ತರನ್ನು ಮತ್ತು ಕರುಳುಗಳಲ್ಲಿ ಕರಗದೇ ಉಳಿದಿರುವ ಹುಲ್ಲು ಮೊದಲಾದವುಗಳನ್ನು ಸರ್ಪಗಳಿಗೆ ಆಹುತಿಯಾಗಿ ಅರ್ಪಿಸಬೇಕಾಗಿದೆ:—

**ಸರ್ಪೇಭ್ಯೋ ಯತ್ತತ್ರಾಸೃಗೂವಧ್ಯಂ ವಾವಸ್ರುತಂ**
**ಭವಂತಿ ‖ ೪-೯ ‖**

ಹಿಂದಿನ ಉದಾಹರಣೆಗಳಿಂದ ಆರ್ಯ ಜನರಲ್ಲಿ ಸರ್ಪ ಮತ್ತು ನಾಗಗಳ ಆರಾಧನೆಯು ಮೊದಲಿನಿಂದಲೂ ಇದ್ದಿತೆಂದು ಸಿದ್ಧವಾಗುತ್ತದೆ. ಅಷ್ಟೇ ಅಲ್ಲ ಸಿಂಧೂ ಕಣಿವೆಯ ಅಗೆತಗಳಲ್ಲಿ ದೊರಕಿದ ಮುದ್ರೆಗಳ ಮೇಲೆ ನಾಗಗಳ ಚಿತ್ರವಿರುವುದು ನಾಗಪೂಜೆಯು ಬಹಳ ಪ್ರಾಚೀನ ಕಾಲದಲ್ಲಿಯೇ ಬಳಕೆಗೆ ಬಂದಿ

ತ್ತೆಂಬುದನ್ನು ಸಿದ್ಧಪಡಿಸುತ್ತದೆ. ಆದರೆ ವೈದಿಕ ಕಾಲದಲ್ಲಿ ಪ್ರತಿಮೆಗಳನ್ನು ಯಜ್ಞಶಾಲೆಯೊಳಗೆ ತಂದು ಯಜ್ಞಕುಂಡದ ಬಳಿಯಲ್ಲಿ ಅವುಗಳಿಗಾಗಿ ಹಾಸಿದ ದರ್ಭೆಯ ಮೇಲಿಟ್ಟ ತರುವಾಯ ಆಯಾ ಪ್ರತಿಮೆಯ ಹೆಸರಿನಲ್ಲಿ ಆಹುತಿಗಳು ಯಜ್ಞಕುಂಡದಲ್ಲಿ ಅರ್ಪಿಸಲ್ಪಡುತ್ತಿದ್ದವೇ ಹೊರತು ಅವುಗಳಿಗೆ ಬೇರೆ ಬಗೆಯ ಪೂಜೆಗಳು ಜರಗುತಿದ್ದವೆಂದು ಹೇಳಲಾಗುವುದಿಲ್ಲ. ಮತ್ತು ಅವುಗಳಿಗಾಗಿ ದೇವಾಲಯಗಳು ಕಟ್ಟಲ್ಪಡುತಿರಲಿಲ್ಲ. ವೈದಿಕೋತ್ತರ ಕಾಲದಲ್ಲಿ ಪ್ರತಿಮೆಗಳನ್ನು ದೇವಾಲಯಗಳಲ್ಲಿ ಪ್ರತಿಷ್ಠಿಸಿ, ಪೂಜೆಮಾಡುತ್ತಿದ್ದರೆಂದು ಹೇಳಬಹುದು. ಮಹಾಭಾರತದ ಶಲ್ಯಪರ್ವದ ೩೮ನೆಯ ಅಧ್ಯಾಯದಲ್ಲಿ. ಬಲರಾಮನು ತೀರ್ಥ ಯಾತ್ರೆಗೆ ಹೋದ ಕಥೆಯಲ್ಲಿ "ನಾಗವರ್ತ್ಮ" ಎಂಬ ಪುಣ್ಯಕ್ಷೇತ್ರದ ವರ್ಣನೆ ಮುಂದಿನಂತೆ ಬಂದಿದೆ:—

ತತಃ ಪ್ರಾಯಾದ್ ಬಲೋ ರಾಜನ್ ದಕ್ಷಿಣೇನ
ಸರಸ್ವತೀಮ್ ।
ಗತ್ವಾ ಚೈವಂ ಮಹಾಬಾಹುರ್ನಾತಿದೂರೇ
ಮಹಾಯಶಾಃ ॥ ೨೯ ॥

ಧರ್ಮಾತ್ಮಾ ನಾಗವರ್ತ್ಮಾನಂ ತೀರ್ಥಮಾಗಮದಚ್ಯುತಃ ।
ಯತ್ರ ಪನ್ನಗರಾಜಸ್ಯ ವಾಸುಕೇಸ್ಸನ್ನಿವೇಶನಮ್ ॥ ೩೦ ॥
ಮಹಾದ್ಯುತೇರ್ಮಹಾರಾಜ ಬಹುಭಿಃ ಪನ್ನಗೈರ್ವೃತಮ್ ।
ಋಷೀಣಾಂ ಚ ಸಹಸ್ರಾಣಿ ತತ್ರ ನಿತ್ಯಂ ಚತುರ್ದಶ ॥ ೩೧ ॥
ಯತ್ರ ದೇವಾಃ ಸಮಾಗಮ್ಯ ವಾಸುಕಿಂ ಪನ್ನಗೋತ್ತಮಮ್ ।
ಸರ್ವೇ ಪನ್ನಗರಾಜಾನಮಭ್ಯಸಿಂಚನ್ ಯಥಾ ವಿಧಿಃ ॥೩೨॥

ಅರ್ಥ—ಹಾಗೆಯೇ ಬಲರಾಮನು ಸರಸ್ವತೀ ನದಿಯ ದಕ್ಷಿಣವಡದಿಂದಾಗಿ ಮುಂದುವರಿದು ತುಸು ದೂರ ಹೋಗುವಷ್ಟರಲ್ಲಿ ನಾಗವರ್ತ್ಮ ಎಂಬ ತೀರ್ಥ ಕ್ಷೇತ್ರವನ್ನು ತಲಪಿದನು. ಅಲ್ಲಿ ಬಹಳ ಕಾಂತಿಯಿಂದ ಬೆಳಗುವವನೂ, ಸರ್ಪ ಗಳಿಂದ ಸುತ್ತುವರಿಯಲ್ಪಟ್ಟವನೂ, ಸರ್ಪಗಳ ಅರಸನೂ ಆಗಿದ್ದ ವಾಸುಕಿಯ ಮಂದಿರವಿದ್ದಿತು. ಅಲ್ಲಿ ನಿತ್ಯವೂ ಹದಿನಾಲ್ಕುಸಾವಿರ ಋಷಿಗಳು ಇರುತ್ತಿದ್ದರು ಮತ್ತು ದೇವತೆಗಳೂ ಅಲ್ಲಿಗೆ ಬರುತಿದ್ದರು. ಹಾಗೂ ಅವರೆಲ್ಲರೂ ವಿಧಿಪೂರ್ವಕ

ವಾಗಿ ನಾಗಶ್ರೇಷ್ಠನೂ, ನಾಗಗಳ ಅರಸನೂ ಆಗಿದ್ದ ವಾಸುಕಿಯನ್ನು ಅಭಿಷೇಕಿಸು ತಿದ್ದರು.

ಇದರ ಮೇಲಿಂದ ನಾಗವರ್ತ್ಮ ಎಂಬ ಪುಣ್ಯಕ್ಷೇತ್ರವು ಅಥವಾ ನಾಗರಾಜನ ನಿವಾಸಸ್ಥಾನವು ಸರಸ್ವತೀ ನದಿಯ ದಕ್ಷಿಣ ದಂಡೆಯಿಂದ ತುಸುವೇ ದೂರ ದಲ್ಲಿದ್ದಿತೆಂದೂ, ಅಲ್ಲಿ ನಾಗಜನರು ಇರುತ್ತಿದ್ದರೆಂದೂ, ಅವರೊಂದಿಗೆ ಸಾವಿರ ಗಟ್ಟಳೆಯ ಬ್ರಾಹ್ಮಣರು ಕೂಡ ಇರುತ್ತಿದ್ದರೆಂದೂ ತಿಳಿಯಬೇಕಾಗುತ್ತದೆ. ಸರಸ್ವತೀನದಿಯು ಘಗ್ಗರ ನದಿಯೊಂದಿಗೆ ಕೂಡಿ ಮುಂದುವರಿದು ಸತಲಜ ನದಿಯನ್ನು ಕೂಡಿದ್ದಿತೆಂದೂ ಸತಲಜ ನದಿಯು ಮುಂದುವರಿದು ಸಿಂಧುವನ್ನು ಕೂಡುತ್ತದೆಂದೂ ತಿಳಿದುಬರುವುದರಿಂದ ನಾಗರಾಜನ ನೆಲೆಯು ದಕ್ಷಿಣ ಪಂಜಾಬದಲ್ಲಿದ್ದಿತೆಂದು ಹೇಳಬೇಕಾಗುತ್ತದೆ. ತರುವಾಯದ ಪುರಾಣಗಳಲ್ಲಿ ನಾಗಲೋಕವು ಪಾತಾಳದಲ್ಲಿದೆಯೆಂದು ಹೇಳಿದೆ. ಆದುದರಿಂದ ದಕ್ಷಿಣ ಪಂಜಾಬದಲ್ಲಿ ನೆಲಸಿದ್ದ ನಾಗಜನರು ಅಂದರೆ ನಾಗಾರಾಧನೆಯನ್ನು ಮಾಡುವ ಜನರು ದಕ್ಷಿಣಪಂಜಾಬದಿಂದ ಇನ್ನೂ ದಕ್ಷಿಣಕ್ಕಿರುವ ಪಾತಾಳಕ್ಕೆ ಹೋಗಿ ನೆಲಸಿದ್ದರೆಂದು ತಿಳಿಯಬೇಕಾಗುತ್ತದೆ. ಪಾತಾಳವೆಂದರೆ ಸಿಂಧುನದವು ಸಮುದ್ರ ವನ್ನು ಕೂಡುವಲ್ಲಿನ ಕರಾವಳಿ ಪ್ರದೇಶವಾಗಿದ್ದಿತು. ತರುವಾಯ ಸಿಂಧು ನದವು ಹಾಗೂ ನರ್ಮದಾ ನದಿಯು ಸಮುದ್ರವನ್ನು ಕೂಡುವ—ನಡುವಣ ಇಡೀ ಕರಾವಳಿಯ ಪ್ರದೇಶವನ್ನು ನಾಗಲೋಕವೆನ್ನುತ್ತಿದ್ದರೆಂದು ತೋರು ತ್ತದೆ.[1]

ಪುರಾಣಗಳಲ್ಲಿನ ಕಥೆಗಳನ್ನು ರಚಿಸಿದವರು ವೈದಿಕ ಗ್ರಂಥಗಳಲ್ಲಿನ ಕಲ್ಪಿತ ಸರ್ಪಗಳನ್ನು ಮತ್ತು ಅವುಗಳ ಆರಾಧಕರನ್ನು ಕೂಡಿಯೇ ಸರ್ಪಗಳನ್ನಾಗಿ ಮಾಡಿ ಕಥೆ ಹೆಣೆದಿರುವುದರಿಂದ, ಆ ಕಥೆಗಳಲ್ಲಿನ ಐತಿಹಾಸಿಕ ತಥ್ಯವನ್ನು ಪೃಥಕ್ಕರಿಸಿ ಕಂಡುಕೊಳ್ಳುವುದು ತುಂಬಾ ಪ್ರಯಾಸದ ಕೆಲಸವಾಗಿದೆ. ಹೇಗಿ

---

1. Mahishmat, the father of Sahasrarjuna of the Puranic tradition, wrested an ancient port near Broach on the Narmada, from the Nagas, in order to found Malishmati. Two facts emerge from these references. First, the Nagas were associated with the region from the mouth of the river Indus to the mouth of Narmada and perhaps further south. Secondly, Prabhasa was associated with the Nagas referred to as belonging to Patala. Somanatha The Shrine Eternal; by K. M. Munshi page 10.

ದ್ದರೂ ನಾಗನನ್ನು ಪೂಜಿಸುವ ಜನರನ್ನೇ ಪುರಾಣಕಾರರು ನಾಗರನ್ನಾಗಿ ಅಥವಾ ಸರ್ಪಗಳನ್ನಾಗಿ ಪರಿವರ್ತಿಸಿದ್ದರೆಂಬುದರಲ್ಲಿ ಸಂದೇಹವಿಲ್ಲ. ಅಲ್ಲದೆ ಪುರಾಣಕಾರರು ಸರ್ಪಗಳೆಂದು ಬಣ್ಣಿಸಿರುವ ತಕ್ಷಕ, ಕರ್ಕೋಟಕ ಮೊದಲಾದ ಹೆಸರಿನವರು ವಾಸ್ತವಿಕ ಹಾಗೂ ಐತಿಹಾಸಿಕ ವ್ಯಕ್ತಿಗಳಾಗಿದ್ದರೆಂದು ತಿಳಿದು ಬರುತ್ತದೆ.1

ಪ್ರೊಫೆಸರ್ ಕೆ. ಪಿ. ಜಯಸ್ವಾಲ್ ಅವರ ಪರಿಶ್ರಮ ಮತ್ತು ದೀರ್ಘ ಸಂಶೋಧನೆಗಳ ಫಲವಾಗಿ, ತಮ್ಮ ಹೆಸರುಗಳ ಕೊನೆಯಲ್ಲಿ ನಾಗಚಿಹ್ನೆಯನ್ನು ಮುದ್ರಿಸಿರುವ ನಾಣ್ಯಗಳನ್ನು ಬಳಕೆಗೆ ತಂದ ಒಂದು ರಾಜವಂಶದ ವಿಶ್ವಾಸಾರ್ಹವಾದ ಇತಿಹಾಸವು ಬೆಳಕಿಗೆ ಬಂದಿದೆ. ಅಲ್ಲದೆ ಆ ರಾಜವಂಶದಲ್ಲಿ ಎರಡು ಶಾಖೆಗಳಿದ್ದುದು ಗೊತ್ತಾಗಿದೆ. ಮೊದಲನೆಯ ಶಾಖೆಯ ಮೂಲಪುರುಷನ ಹೆಸರು "ಶೇಷನಾಗ" ಎಂದಿತ್ತು. ಆ ವಂಶದವರ ಆಳ್ವಿಕೆಯು ಶಕಪೂರ್ವ ೧೮೮ರಲ್ಲಿ ಆರಂಭವಾದುದು ಹದಿಮೂರು ಅರಸುಗಳ ಆಳ್ವಿಕೆಯ ತರುವಾಯ ಶಕದ ಆರಂಭಕಾಲದಲ್ಲಿ ಕೊನೆಗೊಂಡಿತು. ಆ ತರುವಾಯ "ನವನಾಗ" ಎಂಬವನಿಂದ ಶಕ ೨೧೮ರಲ್ಲಿ ಎರಡನೆಯ ಶಾಖೆಯುವರ ಆಳ್ವಿಕೆಯು ಆರಂಭವಾಯಿತು. ಅವರ ಒಂದು ರಾಜಧಾನಿಯು ಮಧ್ಯಭಾರತದ ಪದ್ಮಾವತಿ ಎಂಬಲ್ಲಿಯೂ ಇನ್ನೊಂದು ರಾಜಧಾನಿಯು ಉತ್ತರಪ್ರದೇಶದ ಮಥುರಾ ಪಟ್ಟಣದಲ್ಲಿಯೂ ಇದ್ದಿತು. ನವನಾಗನಿಂದ ಆರಂಭವಾದ ಶಾಖೆಯುವರನ್ನು ಭಾರಶಿವನಾಗರೆನ್ನುತಿದ್ದರು. ಏಕೆಂದರೆ ಆ ವಂಶದ ಅರಸರು ಸದಾಕಾಲವೂ ತಮ್ಮ ಹೆಗಲಲ್ಲಿ ಒಂದು ಶಿವಲಿಂಗವನ್ನು ಹೊತ್ತುಕೊಂಡಿರುತ್ತಿದ್ದರು.2 ಅವರ ಸಾಮ್ರಾಜ್ಯದಲ್ಲಿ ಪೂರ್ವಪಂಜಾಬ, ರಾಜಸ್ಥಾನ, ಮಧ್ಯಭಾರತ, ಮಧ್ಯಪ್ರದೇಶ, ವಿಂಧ್ಯಪ್ರದೇಶ, ಉತ್ತರಪ್ರದೇಶ ಮತ್ತು ಬಿಹಾರಗಳು ಸೇರಿದ್ದವು. ಮಧ್ಯಪ್ರದೇಶದಲ್ಲಿ ಆಳುತಿದ್ದ ವಾಕಾಟಕ ರಾಜವಂಶವು ಕೂಡ ನಾಗಕುಲಕ್ಕೆ ಸೇರಿದುದೆಂಬ ಅಭಿಪ್ರಾಯವಿವೆ. ಹೇಗಿದ್ದರೂ ವಾಕಾಟಕ ವಂಶದ ಮೊದಲನೆಯ ಪ್ರವರಸೇನನು (ಶಕ– ೨೦೨-೨೬೨) ನಾಗವಂಶದ ಭವನಾಗನ ಮಗಳ ಮಗನಾಗಿದ್ದನೆಂದು ತಿಳಿದುಬರುತ್ತದೆ.

---

1. Takshaka and Korkotoka from whom one can protect oneself by invoking Shiva, their Lord and Master, were in fact the names of Naga rulers. Somanatha The Shrine Eterual. page 11
2. Ancient India page 367. by Sri V. D. Mahajan. M. A.

ನಾಗವಂಶದ ಮೊದಲನೆಯ ಅರಸನ ಹೆಸರು "ಶೇಷನಾಗ" ಎಂದಿದ್ದುದರಿಂದ ಪುರಾಣಕಾರರು ಅದನ್ನು "ಮಹಾಶೇಷ" ಎಂಬ ಪೌರಾಣಿಕ ಹೆಸರಿನೊಂದಿಗೆ ಹೊಂದಿಸಿ ಸರ್ಪಕುಲದ ಕಥೆಯನ್ನು ಕಟ್ಟಿ ಪುರಾಣಗಳಲ್ಲಿ ಸೇರಿಸಿದ್ದರೆನ್ನಬಹುದು.

ನಾಗಪೂಜೆಯ ಮೂಲವು ವೇದಗಳಲ್ಲಿ ಇದ್ದು, ಆರ್ಯರಲ್ಲಿನ ಒಂದು ಪಂಗಡವು ಶಿವನನ್ನು ಅಥವಾ ಅಗ್ನಿಯನ್ನು ನಾಗಸಂಕೇತದ ಮೂಲಕ ಆರಾಧಿಸುತ್ತಿತ್ತೆನ್ನಬಹುದು. ಮತ್ತು ಅದುವೇ ವಿಕಸಿತವಾಗುತ್ತ ಇಂದಿನ ರೂಪಕ್ಕೆ ತಲಪಿದ್ದಿತೆಂದು ವೈದಿಕ ಸಾಹಿತ್ಯದಲ್ಲಿ ದೊರೆಯುವ ಕೆಲವು ಸೂಚನೆಗಳಿಂದ ಹೇಳಬಹುದು. ಅಲ್ಲದೆ ಮಹಾಭಾರತದಲ್ಲಿ ಬಂದಿರುವ ನಾಗವರ್ತ್ಮದ ವರ್ಣನೆಯ ಮೇಲಿಂದ, ಸರಸ್ವತೀ ನದಿಯ ದಕ್ಷಿಣ ತೀರದಲ್ಲಿ ನಾಗಾರಾಧನೆಯು ಬಳಕೆಗೆ ಬಂದಿದ್ದಿತೆಂದು ತಿಳಿಯುವುದರಿಂದ, ಅಲ್ಲಿ ನೆಲಸಿದ್ದ ಬ್ರಾಹ್ಮಣರಿಂದಾಗಿಯೇ ನಾಗಾರಾಧನೆಯು ಸರ್ವತ್ರ ಹಬ್ಬಿದ್ದಿತೆಂದು ಹೇಳಬೇಕಾಗುತ್ತದೆ.

ಆದುದರಿಂದ ವಿಶ್ವಾಸಾರ್ಹವಾದ ಪ್ರಮಾಣಗಳು ದೊರೆಯುವ ಮೊದಲೇ ಅಥವಾ ದೃಢವಾದ ಪ್ರಮಾಣಗಳ ಆಧಾರವಿಲ್ಲದೇ, ದಕ್ಷಿಣ ಭಾರತದಲ್ಲಿ ನಾಗಾರಾಧನೆಯು ಬಳಕೆಯಲ್ಲಿದೆಯೆಂಬ ಒಂದೇ ಆಧಾರದಿಂದ ತುಳು ಜನರನ್ನಾಗಲೀ, ಮಲೆಯಾಳಿಗಳನ್ನಾಗಲೀ ನಾಗಕುಲದವರೆಂದು, ಕೆಲವರು ಹೇಳುತ್ತಿರುವುದು ಸಮಂಜಸವಲ್ಲ. ಹಾಗೆನ್ನಲು ಇನ್ನೂ ಹೆಚ್ಚಿನ ಪ್ರಮಾಣಗಳ ಹಾಗೂ ಸಂಶೋಧನೆಯ ಆವಶ್ಯಕತೆಯಿದೆ. ಏಕೆಂದರೆ ಶಿವಾರಾಧನೆ ಮತ್ತು ನಾಗಾರಾಧನೆಗಳು ಒಂದಕ್ಕೊಂದು ಅತ್ಯಂತ ನಿಕಟವಾಗಿ ಸಂಬದ್ಧವಾಗಿವೆ. ಹೀಗಿರುವುದರಿಂದ ಬುದ್ಧಪೂರ್ವ ಕಾಲದಲ್ಲಿಯೇ ಉತ್ತರಭಾರತದಿಂದ ಬಂದು ದಕ್ಷಿಣಭಾರತದಲ್ಲಿ ನೆಲಸಿದ ಅಗ್ನಿಪೂಜಕರಾಗಿದ್ದ ಬ್ರಾಹ್ಮಣರಿಂದಲೇ ದಕ್ಷಿಣ ಭಾರತದಲ್ಲಿ ಶಿವಾರಾಧನೆ ಮತ್ತು ನಾಗಾರಾಧನೆಗಳು ಬಳಕೆಗೆ ಬಂದಿದ್ದವೆಂದು ಹೇಳುವುದು ಯುಕ್ತಿಸಂಗತವೂ, ಪ್ರಮಾಣಯುಕ್ತವೂ ಆಗಿರುತ್ತದೆ. ಭಗವಾನ್ ಬುದ್ಧನ ತರುವಾಯ ಉತ್ತರ ಭಾರತದಲ್ಲಾದ ಧರ್ಮಪರಿವರ್ತನ, ಯಜ್ಞಗಳ ಮೇಲಿನ ನಿರ್ಬಂಧ, ರಾಜ್ಯಕ್ರಾಂತಿ, ಪರಕೀಯರ ಸತತವಾದ ಆಕ್ರಮಣ ಮೊದಲಾದವುಗಳಿಂದ ಉತ್ತರ ಭಾರತದಲ್ಲಿನ ಪ್ರಾಚೀನ ಧರ್ಮವು ಸಮೂಲವಾಗಿ ಉಧ್ವಸ್ತವಾಗಿದೆ. ಹೀಗಾಗಿ ಉತ್ತರ ಭಾರತದಲ್ಲೀಗ ಯಾವ ಪ್ರಾಚೀನ ಕಟ್ಟುಕಟ್ಟಳೆಯೂ ತನ್ನ ಮೂಲರೂಪದಲ್ಲಿ ಉಳಿದಿಲ್ಲ. ಪ್ರಾಚೀನ ವೈದಿಕ ಧರ್ಮದ ಯಾವುದಾದರೊಂದು ಅವಶೇಷವು ತನ್ನ ಮೂಲರೂಪದಲ್ಲಿ ಉಳಿದಿರುವುದಾದರೆ ಅದು ದಕ್ಷಿಣ ಭಾರತದಲ್ಲಿ ಮಾತ್ರವೆನ್ನಬೇಕು.

ಉತ್ತರ ಭಾರತದಿಂದ ಬಂದು ದಕ್ಷಿಣ ಭಾರತದಲ್ಲಿ ನೆಲಸಿದ್ದ ಸಾರಸ್ವತ ಬ್ರಾಹ್ಮಣರಿಂದಾಗಿಯೇ ದಕ್ಷಿಣ ಭಾರತದಲ್ಲಿ ಶಿವಾರಾಧನೆ ಮತ್ತು ನಾಗಾರಾಧನೆಗಳು ಬಳಕೆಗೆ ಬಂದಿದ್ದವೆನ್ನಲು ಒಂದೆರಡು ಪ್ರಮಾಣಗಳಿವೆ. ಶಿವಾರಾಧನೆ ಮತ್ತು ನಾಗಪೂಜೆಗಳು ಸಾರಸ್ವತ ಬ್ರಾಹ್ಮಣರಲ್ಲಿ ಕಡ್ಡಾಯವಾಗಿವೆ. ಅಂದರೆ ಮೊದಲನೆಯದಾಗಿ "ಮಂಗೇಶ" ಎಂಬ ದೇವರು ಅಥವಾ ಮಹಾಶೇಷ ಮತ್ತು ಶಿವಲಿಂಗಗಳು ಜೊತೆಯಾಗಿರುವ ದೇವರು ಸಾರಸ್ವತರ ಕುಲದೇವನಾಗಿದ್ದಾನೆ. ಎರಡನೆಯದಾಗಿ ಸಾರಸ್ವತ ಬ್ರಾಹ್ಮಣರಲ್ಲಿನ ವಿವಾಹದಲ್ಲಿ ವಧೂವರರು ನಾಗ ಪೂಜೆಯನ್ನು ಮಾಡಲೇ ಬೇಕಾಗಿದೆ. ಈಗಿನ ವಿವಾಹಗಳು ಒಂದು ಇಲ್ಲವೆ ಎರಡು ದಿನಗಳಲ್ಲಿ ನಾಟಕದ ದೃಶ್ಯಗಳಂತೆ ನಡೆದು ಹೋಗುತ್ತಿವೆಯಾದರೂ ಹಿಂದೆ ಸಾರಸ್ವತ ಬ್ರಾಹ್ಮಣರಲ್ಲಿನ ವಿವಾಹವು ಎಂಟು ದಿನಗಳದ್ದಾಗಿರುತ್ತಿತ್ತು. ಮತ್ತು ಅದರಲ್ಲಿ ನಾಲ್ಕನೆಯ ದಿನ ( =ಚಲುತೆಂ ದಿನ =ಚಲುತಂಪನ) ನಾಗೋಲಿ ಅಥವಾ ನಾಗಬಲಿ ಎಂಬ ವಿಧಿ ಇದೆ. ಮತ್ತು ಆ ವಿಧಿಯು ಆಪಸ್ತಂಬ ಗೃಹ್ಯ ಸೂತ್ರದಲ್ಲಿ ಹೇಳಿದೆ. ನಾಗೋಲಿಯಲ್ಲಿ ಅಕ್ಕಿಯ ಹಿಟ್ಟಿನಿಂದ ಎಂಟು ನಾಗಗಳನ್ನು ಮತ್ತು ಪ್ರತಿಯೊಂದು ನಾಗಕ್ಕೆ ಎರಡರಂತೆ ಹದಿನಾರು ತತ್ತಿಗಳನ್ನು ಮಾಡಿ ಬಾಳೆಯ ಎಲೆಯ ಮೇಲಿಟ್ಟು–ವಧೂವರರು ಅವುಗಳನ್ನು ಪೂಜಿಸಲಿಕ್ಕಿದೆ. ಪೂಜೆಯಾದ ತರುವಾಯ ಪುರೋಹಿತರು ವಧೂವರರಿಗೆ ತಮ್ಮ ಕಣ್ಣುಗಳನ್ನು ಮುಚ್ಚಲು ಹೇಳುತ್ತಾರೆ ಹಾಗೂ ವಧೂವರರು ಕಣ್ಣು ಮುಚ್ಚಿದಾಗ ಪುರೋಹಿತರು ನಾಗಗಳನ್ನು ಪಾತಾಳಕ್ಕೆ ಕಳುಹಿಸುತ್ತಾರೆ. ಅಂದರೆ ಅದಕ್ಕಾಗಿ ನೀರು ತುಂಬಿಸಿಟ್ಟ ಪಾತ್ರೆಯಲ್ಲಿನ ನೀರಿನಲ್ಲಿ ಮುಳುಗಿಸುತ್ತಾರೆ. ಅದನ್ನು ವಧೂವರರು ನೋಡಕೂಡದು.

ಅಗ್ನಿಯ ಪ್ರತಿನಿಧಿಯಾಗಿರುವ ಅಶ್ವತ್ಥವೃಕ್ಷದ ಬುಡದಲ್ಲಿ ನಾಗಪ್ರತಿಷ್ಠೆ ಮಾಡುವುದು; ಅಶ್ವತ್ಥದ ಹಾಗೂ ನಾಗದ ಪೂಜೆಯ ಕಾಲದಲ್ಲಿ ಅವುಗಳಿಗೆ ಜನಿವಾರ ಹಾಕುವುದು, ಸತ್ತ ಸರ್ಪವನ್ನು ಕಂಡರೆ ವಿಧಿಪೂರ್ವಕವಾಗಿ ಅದರ ದಹನ ಸಂಸ್ಕಾರವನ್ನು ಮಾಡಿದ ತರುವಾಯ ಉತ್ತರಕ್ರಿಯೆಗಳನ್ನು ಮಾಡ ಬೇಕಾಗಿರುವುದು–ಅಂದರೆ ಅಶ್ವತ್ಥವನ್ನು ಮತ್ತು ನಾಗವನ್ನು ಬ್ರಾಹ್ಮಣನೆಂದು ತಿಳಿಯುವುದು ನಾಗಾರಾಧನೆಯು ಅಗ್ನಿಪೂಜಕರಾದ ಬ್ರಾಹ್ಮಣರಿಂದಲೇ ಬಳಕೆಗೆ ಬಂದುದೆಂಬುದನ್ನು ಸಿದ್ಧಪಡಿಸುತ್ತವೆ. ಏಕೆಂದರೆ ಅಗ್ನಿಯು ಕೂಡ ಬ್ರಾಹ್ಮಣ ನಾಗಿರುತ್ತಾನೆಂಬ ನಂಬಿಕೆ ಇದೆ.

ದಿವಂಗತ ರಾಷ್ಟ್ರಕವಿ ಶ್ರೀಮಾನ್ ಮಂಜೇಶ್ವರದ ಗೋವಿಂದ ಪೈ ಅವರು

ಹಿಂದೆ ತೆಂಕನಾಡು ಸಾಹಿತ್ಯ ಸಂಮ್ಮೇಳನದ ಪತ್ರಿಕೆಯಲ್ಲಿ ಪ್ರಕಟಿಸಿದ "ತುಳುನಾಡು ಪೂರ್ವಸ್ಮೃತಿ' ಎಂಬ ಲೇಖನದಲ್ಲಿ (ಪುಟ ೬—ಸಾಲು ೪) "ವೇದಗಳಲ್ಲಿ ಸರ್ಪಾರ್ಥದಲ್ಲಿ ನಾಗ ಎಂಬ ಪದವಿಲ್ಲದಿರುವುದರಿಂದ ಸಂಸ್ಕೃತದಲ್ಲಿ ಅವರ ಹೆಸರಿಂದ ಎರಕೊಂಡಿರಬೇಕು" ಅಂದಿದ್ದಾರೆ. ಆದರೆ ಅವರ ಆ ಹೇಳಿಕೆಯು ಪಾಶ್ಚಿಮಾತ್ಯ ವಿದ್ವಾಂಸರ ಆಧಾರ ರಹಿತವಾದ ಕಲ್ಪನೆಯನ್ನು ವಿಮರ್ಶಿಸದೇನೇ ಸರಿಯೆಂದು ನಂಬಿದುದರ ಫಲವೆನ್ನಬಹುದೇ ಹೊರತು ಅವರು ಸ್ವಯಂ ವಿಚಾರಿಸಿ ನುಡಿದುದಲ್ಲವೆನ್ನಬೇಕು. ವೇದಗಳಲ್ಲಿ ನಾಗ ಶಬ್ದ ಒಂದೇ ಅಲ್ಲ ಬೇರೆ ಹಲವು ಶಬ್ದಗಳೂ ಇಲ್ಲ. ಆ ಎಲ್ಲ ಶಬ್ದಗಳು ವೇದಗಳಲ್ಲಿ ಬಳಸಲ್ಪಟ್ಟಿಲ್ಲ ವೆಂದೊಡನೆ ಆ ಶಬ್ದಗಳು ವೇದಗಳ ಭಾಷೆಯಲ್ಲಿ ಇರಲಿಲ್ಲವೆಂದಾಗಲೀ ಅವು ಗಳು ವೇದಭಾಷೆಯವುಗಳಲ್ಲವೆಂದಾಗಲೀ ಸಿದ್ಧವಾಗುವುದಿಲ್ಲ. ನಾಗ ಶಬ್ದದ ಮೂಲವು "ನಗ" ಎಂಬ ಸಂಸ್ಕೃತ ಶಬ್ದವಾಗಿರುತ್ತದೆ. ಮತ್ತು ನಗ ಶಬ್ದವು ಅಥರ್ವವೇದದಲ್ಲಿ ಬಳಸಲ್ಪಟ್ಟಿದೆ. **"ಯಾನಿ ನಕ್ಷತ್ರಾಣಿ ದಿವ್ಯಂತರಿಕ್ಷೇ ಅಪ್ಸು ಭೂಮೌ ಯಾನಿ ನಗೇಷು ದಿಕ್ಷು। ಪ್ರಕಲ್ಪಯಂಶ್ಚಂದ್ರಮಾ ಯಾನ್ಯೇತಿ ಸರ್ವಾಣಿ ಮಮೈತಾನಿ ಶಿವಾನಿ ಸಂತು. ॥ ೧೯-೮-೧ ॥** ಅರ್ಥ-ದ್ಯುಲೋಕದಲ್ಲಿ, ಅಂತರಿಕ್ಷದಲ್ಲಿ, ಜಲಗಳಲ್ಲಿ, ಭೂಮಿಯಲ್ಲಿ, ಪರ್ವತ ಗಳಲ್ಲಿ, ಮತ್ತು ದಿಕ್ಕುಗಳಲ್ಲಿ ಯಾವ ನಕ್ಷತ್ರಗಳಿವೆಯೋ, ಮತ್ತು ಚಂದ್ರನು ಸಾಗುತ್ತಿರುವಾಗ ಯಾವ ನಕ್ಷತ್ರಗಳನ್ನು ಗೌರವಿಸುತ್ತಾನೋ ಆ ಎಲ್ಲ ನಕ್ಷತ್ರ ಗಳು ನನಗೆ ಕಲ್ಯಾಣಕಾರಕಗಳಾಗಲಿ.

ಸಂಸ್ಕೃತದಲ್ಲಿನ **"ಗಮ್ = ಹೋಗು ಅಥವಾ ನಡೆಯು"** ಎಂಬ ರ್ಥದ ಧಾತುವು ನಾಮ ರೂಪದಲ್ಲಿ ಬೇರೆ ಶಬ್ದಗಳೊಂದಿಗೆ ಕೂಡುವಾಗ **"ಗ"** ಎಂಬ ರೂಪವನ್ನು ತಾಳುತ್ತದೆ. ಉದಾ:—**"ಅನುಗ = ಹಿಂಬಾಲಿಸಿ ಹೋಗುವವ" "ಉರಗ – ಎದೆಯಿಂದ ನಡೆಯುವವ"** ಇತ್ಯಾದಿ. ಹಾಗೆಯೇ ಅದು ನಿಷೇಧಾರ್ಥಕ **"ನ"** ಎಂಬ ಅವ್ಯಯದೊಂದಿಗೆ ಕೂಡಿ **"ನಗ = ನಡೆದು ಹೋಗಲಾರದಂಥ"** ಎಂಬರ್ಥದ ನಾಮಪದವಾಗುತ್ತದೆ ಮತ್ತು **"ಪರ್ವತ"** ಹಾಗೂ **"ಸರ್ಪ"** ಎಂಬ ಅರ್ಥಗಳಲ್ಲಿ ಬಳಸಲ್ಪಡುತ್ತದೆ. ಆ **"ನಗ"** ಎಂಬ ಶಬ್ದವನ್ನು ಅವರ ಅಪತ್ಯ ಅಥವಾ ಸಂತತಿ ಎಂಬರ್ಥದಲ್ಲಿ ಪರಿವರ್ತಿಸುವುದಾದರೆ ಅದರ ರೂಪವು ವ್ಯಾಕರಣ ನಿಯಮಗಳಿಗನುಸಾರವಾಗಿ **"ನಾಗ"** ಎಂದು ಆಗಿಯೇ ಆಗುತ್ತದೆ. ಮತ್ತು ಪರ್ವತದ ಸಂತತಿ "ನಾಗ" ಎಂಬುದು ಆನೆ ಎಂಬ ಅರ್ಥವನ್ನೂ, ಸರ್ಪದ ಸಂತತಿ "ನಾಗ" ಎಂಬುದು

"ಸರ್ಪ" ಎಂಬರ್ಥವನ್ನೂ ಕೊಡುತ್ತದೆ. ಸರ್ಪದ ಸಂತತಿಯು ಸರ್ಪವಲ್ಲದೇ ಬೇರೇನಾಗಲು ಸಾಧ್ಯವಿದೆ.? ಹೀಗೆ ನಗದ ಸಂತತಿಯು ನಾಗ–ಎಂಬುದು ಸುಸ್ಪಷ್ಟವಿದೆ. ಆದುದರಿಂದ ನಾಗ ಶಬ್ದವು ಸಂಸ್ಕೃತ ಭಾಷೆಯದಲ್ಲವೆನ್ನುವುದ ರಲ್ಲಿ ಏನೂ ಹುರುಳಿಲ್ಲವೆಂದು ಸಿದ್ಧವಾಗುತ್ತದೆ.

ಸರ್ ಮೊನಿಯರ್ ವಿಲಿಯಮ್ಸ್ ಎಂಬ ಸಂಸ್ಕೃತದ ಮಹಾಪಂಡಿತರು ತಾನು ರಚಿಸಿದ ಸಂಸ್ಕೃತ-ಇಂಗ್ಲೀಷ್ ಶಬ್ದಕೋಶದಲ್ಲಿ ನಾಗ ಶಬ್ದದ ಕುರಿತು ಮುಂದಿನಂತೆ ವಿವರಿಸಿದ್ದಾರೆ:—"**ನಾಗ** Nāga (prob. neither fr. na-ga nor fr. nagna) ಅಂದರೆ ನಾಗ ಶಬ್ದವು ನಗ ಶಬ್ದದಿಂದಾಗಲೀ ನಗ್ನ ಶಬ್ದ ದಿಂದಾಗಲೀ ಹುಟ್ಟಿರಲಾರದು" ಅಂದಿದ್ದಾರೆ ಸಂಸ್ಕೃತದ ಮಹಾಪಂಡಿತರಾದ ಅವರು "ನಾಗ" ಶಬ್ದವು "ನಗ" ಶಬ್ದದಿಂದ ಹುಟ್ಟಿರಲಾರದು ಎಂದಿರುವುದು ಬಹಳ ಸೋಜಿಗವಾಗಿದೆ. ಬಹುತರವಾಗಿ ಅವರು "ಆರ್ಯಜನರು ನಾಗಾರಾಧನೆ ಯನ್ನು ಅನ್ಯರಿಂದ ಪಡೆದರು" ಎಂಬುದಾಗಿ ಇತರ ಬ್ರಿಟಿಷ್ ವಿದ್ವಾಂಸರು ಮುಂದೆ ತಂದ ಕಲ್ಪನೆಯನ್ನು ಸಮರ್ಥಿಸುವ ಉದ್ದೇಶದಿಂದ ಹಾಗೆ ಹೇಳಿರ ಬಹುದೆಂದು ತೋರುತ್ತದೆ.

## ೮

## ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಾರಸ್ವತ ಬ್ರಾಹ್ಮಣರು

ಶಕ ೧೪೩೨ ರಲ್ಲಿ ಪೊರ್ತುಗೀಸರು ಗೋವವನ್ನು ಆಕ್ರಮಿಸಿ ಹಿಡಿದು ಕೊಂಡ ತರುವಾಯವೇ ಸಾರಸ್ವತ ಬ್ರಾಹ್ಮಣರು ಗೋವೆಯಿಂದ ವಲಸೆ ಬಂದು ತುಳುನಾಡಿನಲ್ಲಿ ನೆಲಸಿದ್ದರೆಂದು ಹೆಚ್ಚಿನ ಜನರ ಎಣಿಕೆಯಾಗಿದೆ. ಆದರೆ ವಾಸ್ತವ ವಾಗಿ ಪೊರ್ತುಗೀಸರು ಭಾರತ ವರ್ಷದ ಕಡೆಗೆ ಬರುವುದರ ಹಲವು ಶತಮಾನ ಗಳ ಮೊದಲೇ ಗೋವದಿಂದ ದಕ್ಷಿಣಕ್ಕಿರುವ ಪಶ್ಚಿಮಕರಾವಳಿಯ ಊರುಗಳಲ್ಲಿ ಸಾರಸ್ವತ ಬ್ರಾಹ್ಮಣರ ಸಾಕಷ್ಟು ದೊಡ್ಡವಸತಿಯಿದ್ದಿತೆಂಬುದಕ್ಕೆ ಅವರಿಗೆ ಸೇರಿದ ಕೆಲವು ಪ್ರಾಚೀನ ದೇವಾಲಯಗಳು ಪ್ರತ್ಯಕ್ಷ ಪ್ರಮಾಣಗಳಾಗಿರುತ್ತವೆ. ಹಿಂದೆ ಕಾರ್ಕಳದಿಂದ ಪ್ರಕಟಿಸಲ್ಪಡುತಿದ್ದ ಶಕ್ತಿ ಮಾಸಪತ್ರಿಕೆಯಲ್ಲಿ ದಿವಂಗತ ಮಂಜೇಶ್ವ ರದ ಗೋವಿಂದ ಪೈಗಳವರು ಶಕ ೧೨೧೫ರಲ್ಲಿ ಮಂಜೇಶ್ವರದ ಶ್ರೀಮದನಂತೇಶ್ವರ ದೇವಾಲಯವು ಸಾರಸ್ವತ ಬ್ರಾಹ್ಮಣರ ವಶದಲ್ಲಿದ್ದಿತೆಂದೂ, ದೇವಸ್ಥಾನವಿರ

ಬೇಕಾದರೆ, ಅವರ ದೊಡ್ಡ ವಸತಿಯು ಇರಲೇಬೇಕೆಂದೂ ಪ್ರತಿಪಾದಿಸಿ ಒಂದು ಲೇಖನವನ್ನುಕೊಟ್ಟಿದ್ದರು. ಆದರೆ ಆ ಕಾಲದಲ್ಲಿ ಶ್ರೀ ಪೈಗಳವರು ಮಂಗಳೂರಿನ ಗೊಲ್ಲರಕೇರಿ ಗಣಪತಿ ದೇವಾಲಯದ ಮುಂದುಗಡೆಯಲ್ಲಿರುವ ಹಾಗೂ ಆಳುವ ಅರಸ ಎರಡನೆಯ ಬಂಕಿದೇವನು ಶಕ ೧೨೩೫ರಲ್ಲಿ ಸಾರಸ್ವತ ಬ್ರಾಹ್ಮಣ ವಾಮನ ಸೇನಭವರಿಗೆ-ಮೂರು ದೇವಾಲಯಗಳಲ್ಲಿನ ದೇವರುಗಳಿಗೆ ನೈವೇದ್ಯ-ನಡಿಸಿಕೊಂಡು ಬರಬೇಕೆಂದು ಒಂದು ದೊಡ್ಡ ಭೂಮಿಯನ್ನು ದಾನಮಾಡಿ ಬರೆಸಿಕೊಟ್ಟ ಶಿಲಾಸ್ತಂಭ ಶಾಸನವನ್ನು ನೋಡಿರಲಾರರು. ಅಂದರೆ ಆ ಶಾಸನವು ಶಕದ ಹದಿಮೂರನೆಯ ಶತಮಾನಕ್ಕಿಂತ ಮೊದಲೇ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಾರಸ್ವತ ಬ್ರಾಹ್ಮಣರು ಮತ್ತು ಅವರ ದೇವಾಲಯಗಳಿದ್ದವೆಂದು ಸಾರಿ ಹೇಳುತ್ತದೆ. ಹೀಗಿದ್ದರೂ ಸಾರಸ್ವತ ಬ್ರಾಹ್ಮಣರು ತುಳುನಾಡಿಗೆ ಬಂದಿದ್ದ ನಿಶ್ಚಿತ ಕಾಲವನ್ನು ಹೇಳಲಾಗುವಂಥ ಪ್ರಮಾಣಗಳು ಈ ತನಕ ದೊರಕಿಲ್ಲ. ಆದರೆ ತುಳುನಾಡಿನಲ್ಲಿ ನೆಲಸಿದ್ದ ಸಾರಸ್ವತ ಬ್ರಾಹ್ಮಣರ ಇತಿಹಾಸವು ತುಳುನಾಡನ್ನು ಆಳುತಿದ್ದ ಆಳುವಂಶದ ಅರಸು ಮನೆತನದೊಂದಿಗೆ ನಿಕಟವಾಗಿ ಸಂಬದ್ಧವಾಗಿದೆಯೆಂದು ನಿಶ್ಚಿತವಾಗಿ ಹೇಳಬಹುದಾಗಿದೆ. ಆದುದರಿಂದ ಅವರು ಬಂದ ಕಾಲವನ್ನು ನಿರ್ಧರಿಸುವುದಕ್ಕಿಂತ ಮೊದಲು ಆಳುವಂಶದ ಅರಸರ ಇತಿಹಾಸವನ್ನು ಸಂಕ್ಷಿಪ್ತ ರೀತಿಯಿಂದಲಾದರೂ ವಿಮರ್ಶಿಸುವ ಆವಶ್ಯಕತೆಯಿದೆ.

ಸಾಧಾರಣ ಶಾಲಿವಾಹನ ಶಕದ ನಾಲ್ಕನೆಯ ಶತಮಾನದ ಆದಿಭಾಗದಿಂದ ಹದಿನೈದನೆಯ ಶತಮಾನದ ಕೊನೆಯ ವರೆಗೆ ಉದ್ಯಾವರ, ಬಾರಕೂರು, ಮಂಗಳೂರು ಮೊದಲಾದ ಪಟ್ಟಣಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ತುಳುನಾಡನ್ನು ಆಳಿದ ಆಳುವಂಶದ ಅರಸರೊಂದಿಗೆ ಆರನೆಯ ಶತಮಾನದಿಂದಲೇ ಸಾರಸ್ವತ ಬ್ರಾಹ್ಮಣರ ಸಂಪರ್ಕವು ಇದ್ದಿರಬಹುದು. ಆದರೆ ಆ ಕುರಿತು ಈ ತನಕ ಯಾವುದೊಂದು ಲಿಖಿತ ಪ್ರಮಾಣವು ದೊರೆತಿಲ್ಲ. ಪರಂತು ಶಕದ ಐದನೆಯ ಶತಮಾನದ ಕೊನೆಭಾಗದಲ್ಲಿ ಆಳುತಿದ್ದ ಮಾರಮ್ಮ ಆಳ್ವರಸನ ಎರಡು ಶಿಲಾ ಶಾಸನಗಳು ಉದ್ಯಾವರದ ಶಂಭುಕಲ್ಲು ಭೈರವ ದೇವಾಲಯದ ಮುಂದುಗಡೆಯಲ್ಲಿ ದೊರೆತಿವೆ. ಮತ್ತು ಆ ಶಾಸನಗಳಲ್ಲಿ ಶೈವಮತದ ಗೊರವರ ಉಲ್ಲೇಖವಿವೆ:—**"ಸ್ವಸ್ತಿ ಶ್ರೀ ಮಾರಮ್ಮ ಆಳ್ವರಸರ್ ಕೊಳಲ ನಕರಕ್ಕೆ ಕರಸಿ ನಾಯ್ಗನಾಳ್ದ ಕಾಯಿಸಿದೊ ಒದೆವೂರ ನಕರ ಸಹಿತ್ತ ಸಕಲ ಶ್ರೀ ಆಳ್ಗಳ್ ಗೊರವರು"** ಈ ಒಕ್ಕಣೆಯಲ್ಲಿನ ಗೊರವರು ಭೈರವೋಪಾಸಕರಾಗಿದ್ದ ಕಾಶ್ಮೀರೀ ಕಾಳಾಮುಖ ಬ್ರಾಹ್ಮಣ ಅರ್ಚಕ

ರಾಗಿದ್ದರೆಂಬುದರಲ್ಲಿ ಸಂದೇಹವಿಲ್ಲ. ಮತ್ತು ಅವರೇ ತರುವಾಯದ ಸ್ಥಾನಿಕ ಬ್ರಾಹ್ಮಣರೆಂಬುದರಲ್ಲಿ ಸಂದೇಹವಿಲ್ಲ. ಅರ್ಥಾತ್ ಶಕದ ಐದನೆಯ ಶತಮಾನ ದಲ್ಲಿಯೇ ಕಾಳಾಮುಖ ಗೊರವರು ತುಳುನಾಡಿನಲ್ಲಿದ್ದರೆಂದು ಸಿದ್ಧವಾಗುತ್ತದೆ. ಸಾಮಾನ್ಯವಾಗಿ ಶೈವಮತದ ಕಾಳಾಮುಖ ಬ್ರಾಹ್ಮಣರಿದ್ದಲ್ಲಿ ಶೈವಮತದ ಸಾರಸ್ವತ ಬ್ರಾಹ್ಮಣರು ಇದ್ದೇ ಇರುತ್ತಾರೆ. ಅಂದರೆ ಕಾಳಾಮುಖಗೊರವರು ಶಿವ, ಭೈರವ, ಶಕ್ತಿ ಮೊದಲಾದ ದೇವತೆಗಳ ಅರ್ಚಕತನವನ್ನು ಮಾಡುತ್ತಿದ್ದರೇ ಹೊರತು ಜನರ ಧಾರ್ಮಿಕ ಸಂಸ್ಕಾರಗಳಲ್ಲಿ ಪೌರೋಹಿತ್ಯವನ್ನು ಮಾಡುತ್ತಿರ ಲಿಲ್ಲ. ಅದೇ ರೀತಿಯಲ್ಲಿ ಸಾರಸ್ವತ ಬ್ರಾಹ್ಮಣರು ದೇವತಾವಿಗ್ರಹಗಳ ಅರ್ಚಕತನವನ್ನು ಮಾಡುತ್ತಿರಲಿಲ್ಲ, ಆದುದರಿಂದ ಆಳು ಅರಸರ ಧಾರ್ಮಿಕ ಸಂಸ್ಕಾರಗಳಲ್ಲಿ ಪೌರೋಹಿತ್ಯವನ್ನುಮಾಡಲು ಸಾರಸ್ವತ ಬ್ರಾಹ್ಮಣರು ಇದ್ದ ರೆಂದು ಹೇಳಲೇಬೇಕಾಗುತ್ತದೆ. ಏಕೆಂದರೆ ಆ ಕಾಲದ ತುಳುನಾಡಿನಲ್ಲಿ ಬೇರೆ ವರ್ಗದ ಬ್ರಾಹ್ಮಣರೇ ಇರಲಿಲ್ಲ. ಮತ್ತು ಇರಲು ಸಾಧ್ಯವಿರಲಿಲ್ಲ. ಅಲ್ಲದೇ ತರುವಾಯದ ಕೆಲವು ಶಾಸನಗಳಲ್ಲಿ ಸೇನಭವ, ಸಹನಿ, ಮೊದಲಾದ ಸಾರಸ್ವತ ಬ್ರಾಹ್ಮಣರ ಉಪಾಧಿಗಳು ಕಂಡು ಬರುವುದರಿಂದ ಆ ಶಾಸನಗಳ ಕಾಲಕ್ಕಿಂತ ಮೊದಲಿನಿಂದಲೂ ತುಳುನಾಡಿನಲ್ಲಿ ಸಾರಸ್ವತ ಬ್ರಾಹ್ಮಣರು ಇದ್ದರೆಂದು ಹೇಳ ಬಹುದಾಗಿದೆ. ಅಲ್ಲದೇ ಆಳು ಅರಸರ ಆಳ್ವಿಕೆಯು ದಕ್ಷಿಣ ಕನ್ನಡ ಜಿಲ್ಲೆಯೊಳಗೇ ಸೀಮಿತವಾಗಿರದೆ ಕೊಂಕಣವನ್ನು ಅಂದರೆ ಉತ್ತರ ಕನ್ನಡ ಜಿಲ್ಲೆಯನ್ನು ಕೂಡ ಒಳಗೊಂಡಿತ್ತು.

ಆಳು ಮತ್ತು ಅರಸು ಎಂಬ ಎರಡು ಶಬ್ದಗಳು ಕೂಡಿ ಮುಂದೆ ಆಳ್ವರಸು ಎಂಬ ರೂಪವು ಬಳಕೆಗೆ ಬಂತು. ತರುವಾಯ ಅದು ಆಳ್ವ ಮತ್ತು ಆಳ್ಪ ಎಂದು ರೂಪಾಂತರ ಹೊಂದಿತು ಕೊನೆಗೆ ಆಳುವ ಮತ್ತು ಆಳುಪ ಎಂದು ಸ್ಥಿರವಾಯಿತು. ಆದರೆ ಚಾಲುಕ್ಯ ಮಂಗಲೇಶನು ಚಾಲುಕ್ಯ ಕೀರ್ತಿವರ್ಮನ ಕುರಿತು ಶಕ ೫೦೪ರಲ್ಲಿ ಬರೆಸಿದ ಮಹಾಕೂಟದ ಶಿಲಾಸ್ತಂಭ ಶಾಸನದಲ್ಲಿ ಕೀರ್ತಿ ವರ್ಮನು ಗೆದ್ದ ಅರಸುಗಳ ಹೆಸರುಗಳ ಸಾಲಿನಲ್ಲಿ ಬರೆದಿರುವ "ಆಳುಕ" ಎಂಬ ಶಬ್ದವು ಒಂದು ವಿಚಿತ್ರವಾದ ಕಲ್ಪನೆಗೆ ಎಡೆಮಾಡಿಕೊಟ್ಟಿದೆ. ಅಂದರೆ ಆಳುಕ ಎಂಬ ಶಬ್ದವು ಆಳುಪ ಎಂಬ ಶಬ್ದದ ಬದಲಿಗೆ ಬಂದಿದೆಯೆಂದೂ ಆಳುಕ ಅಥವಾ ಆಲುಕ ಎಂಬ ಶಬ್ದವು ಸಂಸ್ಕೃತದಲ್ಲಿ ಮಹಾಶೇಷನ ಹೆಸರಾಗಿದೆಯೆಂದೂ, ಆ ಕಾರಣದಿಂದ ಆಳುಪರು ನಾಗಕುಲದವರಾಗಿರಬಹುದೆಂದೂ ಡಾಕ್ಟರ್ ಫ್ಲೀಟ್ ಎಂಬ ಬ್ರಿಟಿಷ್ ವಿದ್ವಾಂಸರೊಬ್ಬರು ತನ್ನ ಊಹೆಯನ್ನು ವ್ಯಕ್ತಗೊಳಿಸಿದ್ದರು.

ತರುವಾಯ ಶ್ರೀಮಾನ್ ಮಂಜೇಶ್ವರದ ಗೋವಿಂದ ಪೈ ಅವರು ತಾನು ಪ್ರಕಟಿಸಿದ ತುಳುನಾಡು ಎಂಬ ಲೇಖದಲ್ಲಿ ಫ್ಲಿಟ್ ಸಾಹೇಬರ ಊಹನೆಯನ್ನು ಸಮರ್ಥಿಸುವ ಹಾಗೆ ಅಲುಕ ಶಬ್ದವು ಹೇಮಚಂದ್ರನ ಅಭಿಧಾನ ಚಿಂತಾಮಣಿಯಲ್ಲಿ ಮಹಾಶೇಷ ಎಂಬ ಅರ್ಥದಲ್ಲಿ ಬಂದದೆಯೆಂದೂ, ನಾಗ ಶಬ್ದವು ಸಂಸ್ಕೃತ ಮೂಲದ್ದಲ್ಲವೆಂದೂ ವಿವರಿಸಿದರು. ಅವರ ತರುವಾಯ ಡಾಕ್ಟರ್ ಭಾಸ್ಕರ ಆನಂದ ಸಾಲೆತೂರರು ತನ್ನ ತುಳುನಾಡಿನ ಚರಿತ್ರೆಯಲ್ಲಿ ಮೊದಲಿನವರಿಬ್ಬರ ಕಲ್ಪನೆಗಳನ್ನು ಸಮರ್ಥಿಸಿದರು ಮಾತ್ರವಲ್ಲದೇ ಆಳುಪ ಅರಸರು ನಾಗ ಕುಲದವರೇ ಎಂಬುವಕ್ಕೆ ಆಧಾರವಾಗಿ ಮಂಗಳೂರಿನ ಗೊಲ್ಲರ ಗಣಪತಿ ದೇವಾಲಯದ ಮುಂದುಗಡೆಯಲ್ಲಿರುವ ಆಳುಪ ಅರಸರ ಶಿಲಾಸ್ತಂಭ ಶಾಸನದಲ್ಲಿ ಹೆಡೆ ಬಿಚ್ಚಿದ ನಾಗನ ಚಿತ್ರವಿದೆಯೆಂದು[1] ಸೂಚಿಸಿದರು. ಆದರೆ ಅವರು ಆ ಹಾವಿನ ಕೆತ್ತನೆಯನ್ನಾಗಲೀ ಆ ಹಾವಿನ ಎಡಬಲಗಳಲ್ಲಿ ಕೆತ್ತಿರುವ ಬ್ರಹ್ಮ ಮತ್ತು ಶಿವನ ವಿಗ್ರಹಗಳನ್ನಾಗಲೀ ಪರಾಂಬರಿಸಲಿಲ್ಲವೆಂದರೆ ತಪ್ಪಾಗದು ಏಕೆಂದರೆ ವಾಸ್ತವವಾಗಿ ಆ ಶಿಲೆಯ ಕಂಭದ ಮೇಲಿನ ವಿಗ್ರಹಗಳು ಬ್ರಹ್ಮ; ಶೇಷಶಾಯಿ ವಿಷ್ಣು ಮತ್ತು ಶಿವನದಾಗಿರುತ್ತವೆ. ಅದರ ವಿವರವು ಮುಂದೆ ಬರಲಿರುವುದು.

ಪರಂತು ಯಾರೊಬ್ಬನಾದರೂ ಡಾಕ್ಟರ್ ಫ್ಲೀಟರ ಊಹನೆಯು ಸರಿಯಾಗಿದ್ದಿತೇ ಎಂಬುದನ್ನು ವಿಮರ್ಶಿಸುವ ಪ್ರಯಾಸವನ್ನು ಕೈಗೊಳ್ಳಲಿಲ್ಲ. ಬೇರೊಂದು ರೀತಿಯಲ್ಲಿ ಹೇಳುವುದಾಗಿದ್ದರೆ ಮಂಗಲೇಶನು ಮಹಾಕೂಟದ ಶಾಸನವನ್ನು ಬರೆಸಿದ ಕಾಲವು ಶಕದ ಆರನೆಯ ಶತಮಾನದ ಪ್ರಥಮ ಪಾದವಾಗಿದ್ದು, ಹೇಮಚಂದ್ರನು ಅಭಿಧಾನ ಚಿಂತಾಮಣಿಯನ್ನು ರಚಿಸಿದ ಕಾಲವು ಹದಿನೆರಡನೆಯ ಶತಮಾನವಾಗಿದ್ದಿತೆಂಬುದನ್ನಾಗಲೀ ಹೇಮಚಂದ್ರನಿಗಿಂತ ಪ್ರಾಚೀನನಾದ ಅಮರಸಿಂಹನು ರಚಿಸಿದ ಕೋಶದಲ್ಲಿ ಅಲುಕ ಎಂಬ ಶಬ್ದವು ಇಲ್ಲವೆಂಬುದನ್ನಾಗಲೀ, ಆರನೆಯ ಶತಮಾನದಲ್ಲಿ ಆಳುವಂಶದವರನ್ನು 'ಆಳುಪ' ಎಂದು ಕರೆಯುತ್ತಿರಲಿಲ್ಲವೆಂಬುದನ್ನಾಗಲೀ, ಅಲುಕ ಶಬ್ದವು ಯಾವ ಮೂಲದ ಶಬ್ದವಾಗಿರಬಹುದೆಂದಾಗಲೀ ಯಾರೊಬ್ಬನೂ ವಿಮರ್ಶಿಸಲಿಲ್ಲ. ಮತ್ತು ಇತರ ಮುಖ್ಯ ವಿಷಯಗಳನ್ನೂ ಗಣಿಸಲಿಲ್ಲ. ಅಂದರೆ ಮೊದಲನೆಯದಾಗಿ ಮಹಾ

---

1. The Naga origin of the Alupas which is thus suggested here is proved by two facts, the figure of a hooded serpent which is found in an effaced Alupa stone inscription in the Gollar Ganapati Temple at Mangalore and the ultra-Saivite tendencies of the Alupas p. 61.

ಕೂಟದ ಶಾಸನವನ್ನು ಬರೆಯುವ ಕಾಲದಲ್ಲಿ ಆಳುವಂಶದ ಅರಸರನ್ನು "ಆಳುಪ" ಎನ್ನುತ್ತಿದ್ದರೆಂಬುದಕ್ಕೆ ಯಾವುದೊಂದು ಪ್ರಮಾಣವಿಲ್ಲ. ಎರಡನೆಯದಾಗಿ ಆಳುವಂಶದ ಅರಸರನ್ನು "ಆಳುಕ" ಎಂದು ಕರೆದ ಬೇರೆ ಪ್ರಮಾಣಗಳೂ ಇಲ್ಲ. ಆಳುಪ ಎಂಬ ಶಬ್ದವು ಆ ಶಾಸನ ಬರೆಯುವ ಕಾಲದಲ್ಲಿ ಬಳಕೆಗೆ ಬಂದಿದ್ದಿತೆಂದು ಗ್ರಹಿಸಿ ಸಾಗಿವರೂ ಆಳುಕ ಎಂಬ ಶಬ್ದವು ಆಳುಪರಿಗಾಗಿ ಬಳಸಲ್ಪಟ್ಟಿದೆಯೆಂಬುದಕ್ಕಾಗಲೀ, ಆ ಶಾಸನದಲ್ಲಿ "ಆಳುಕ" ಶಬ್ದವು ಮಹಾಶೇಷ ಎಂಬ ಅರ್ಥದಲ್ಲಿ ಬಳಸಲ್ಪಟ್ಟಿದೆಯೆಂಬುದಕ್ಕಾಗಲೀ ಯಾವುದೊಂದು ಆಧಾರವಿಲ್ಲ. ಹಾಗೆ ಹೇಳುವುದಾದರೆ ಶಾಸನ ಬರೆಯುವವನು ಆಳುಪ ಎಂದು ಬರೆಯುವಾಗ ತಪ್ಪಿ ಆಳುಕ ಎಂದು ಬರೆದಿರಬಹುದು ಇಲ್ಲವೇ ಓದುವವರು ಆಳುಕ ಎಂದು ಓದಿರಬಹುದೇ ಹೊರತು ಆಳುಕ ಎಂಬ ಶಬ್ದವನ್ನು ಮಹಾಶೇಷ ಎಂಬ ಅರ್ಥದಲ್ಲಿ ಬಳಸಲಾಗಿದೆಯೆನ್ನಲು ಸಾಧ್ಯವಿಲ್ಲ. ತಾತ್ಪರ್ಯವೇನೆಂದರೆ ಆಳುವಂಶದವರು ನಾಗಕುಲದವರೆನ್ನುವ ಕಲ್ಪನೆಗೆ ಯಾವ ಆಧಾರವೂ ಇಲ್ಲ. ಅಷ್ಟೇ ಅಲ್ಲ ಆಳು ಅರಸರಿಗೆ ಸಂಬಂಧಪಟ್ಟ ಯಾವುದೊಂದು ಶಾಸನದಲ್ಲಿಯೂ ಅವರನ್ನು ನಾಗಕುಲದವರೆಂದೂಹಿಸಲು ಎಡೆಯಿರುವ ಒಂದೇ ಒಂದು ಸಂಕೇತ ಕೂಡ ದೊರೆಯುವುದಿಲ್ಲ. ಆದಕ್ಕೆ ಪ್ರತಿಯಾಗಿ ಅವರು ಚಂದ್ರಕುಲದವರೆಂದು ಹೇಳುವ ಸ್ಪಷ್ಟವಾದ ಬರವಣಿಗೆಗಳಿವೆ. ಪೃಥ್ವಿಸಾಗರ ಆಳುಪೇಂದ್ರ (ಶಕ ೬೫೨–೭೨)ನ ಶಾಸನದಲ್ಲಿ "ಸೋಮವಂಶೋದ್ಭವ" ಎಂದೂ ಶ್ರೀ ಕುಂದವರ್ಮ ಆಳುಪೇಂದ್ರನು ಶಕ ೮೯೦ರಲ್ಲಿ ಬರೆಸಿದ ಕದ್ರಿ ಲೋಕೇಶ್ವರನ ಪೀಠದಲ್ಲಿನ ಶಾಸನದಲ್ಲಿ "ಸೋಮಕುಲಾಂಭೋಜ" ಎಂದೂ ಸ್ಪಷ್ಟವಾಗಿ ಬರೆದಿದೆ.

ಇನ್ನು ಗೊಲ್ಲರ ಗಣಪತಿ ದೇವಾಲಯದ ಮುಂದುಗಡೆಯಲ್ಲಿರುವ ಶಿಲಾಸ್ತಂಭದ ಶಾಸನದ1 ಕುರಿತು ಹೇಳುವುದಾದರೆ ಅದು ಶಕ ೧೨೭೫ರಲ್ಲಿ ತುಳುನಾಡಿನ ಅರಸನಾಗಿ ಪಟ್ಟಕ್ಕೆ ಬಂದ ಎರಡನೆಯ ಬಂಕಿದೇವನು ತನ್ನ ತಾಯಿಯ ಶ್ರಾದ್ಧದ ದಿನ ವಾಮನ ಸೇನಭವ ಎಂಬ ಸಾರಸ್ವತ ಬ್ರಾಹ್ಮಣನಿಗೆ, ನೀರೇಶ್ವಾಲ್ಯದಲ್ಲಿ ಮೂರು ದೇವಾಲಯಗಳಲ್ಲಿನ ಬ್ರಹ್ಮ ವಿಷ್ಣು ಮತ್ತು ಮಹೇಶ್ವರ ಎಂಬ ದೇವರುಗಳ ನೈವೇದ್ಯವನ್ನು ನಡಿಸಿಬರುವಂತೆ ವಿಧಿಸಿ ದೊಡ್ಡದೊಂದು ಭೂಮಿಯನ್ನು ದಾನಮಾಡಿ ಬರೆಸಿಕೊಟ್ಟ ಶಾಸನವಾಗಿರುತ್ತದೆ. ಹೀಗಾಗಿ ಆ ಶಿಲಾಸ್ತಂಭದಲ್ಲಿ ಬರವಣಿಗೆಯನ್ನು ಆರಂಭಿಸುವ ಮೊದಲು ಚತುರ್ಮುಖನಾಗಿರುವ

---

1. ಆ ಶಾಸನವು ಈ ಗ್ರಂಥದ ಲೇಖಕನ ಮನೆತನದ ಹಿರಿಯರಿಗೆ ಸಂಬಂಧಪಟ್ಟಿದ್ದುದರಿಂದ ಅದರ ಸರಿಯಾದ ಐತಿಹ್ಯವು ಲೇಖಕನಿಗೆ ಗೊತ್ತಿದೆ.

ಬ್ರಹ್ಮ, ತರುವಾಯ ಮಹಾಶೇಷನ ತಲ್ಪದಲ್ಲಿ ಪವಡಿಸಿರುವ ವಿಷ್ಣು ಆ ತರುವಾಯ ಚಂದ್ರಶೇಖರನಾಗಿರುವ ಶಿವ ಹೀಗೆ ಮೂರು ವಿಗ್ರಹಗಳನ್ನು ಅಚ್ಚುಕಟ್ಟಾಗಿ ಕೆತ್ತಲಾಗಿದೆ. ಆರುನೂರು ವರ್ಷಗಳಿಗಿಂತ ಪ್ರಾಚೀನವಾಗಿರುವ ಆ ವಿಗ್ರಹಗಳು ಮಳೆಗಾಳಿಗಳಿಂದಾಗಿ ಕೊಂಚ ಸವೆದಿವೆಯಾದರೂ ಸೂಕ್ಷ್ಮವಾಗಿ ಪರಾಂಬರಿಸಿದರೆ ಸರಿಯಾಗಿ ಗುರುತು ಹತ್ತುವಂತಿವೆ. ಡಾಕ್ಟರ್ ಸಾಲೆತೂರರು ಆ ಮೂರು ವಿಗ್ರಹಗಳ ಪೈಕಿ ಹಾವಿನ ಹೆಡೆಯನ್ನು ಮಾತ್ರ ನೋಡಿದ್ದರೆಂದು ತೋರುತ್ತದೆ.

ಶ್ರೀಮಾನ್ ಮಂಜೇಶ್ವರದ ಗೋವಿಂದ ಪೈ ಅವರು ಮತ್ತು ಡಾಕ್ಟರ್ ಸಾಲೆತೂರ ಅವರು ತಮ್ಮ ಲೇಖನಗಳನ್ನು ಪ್ರಕಟಿಸುವ ಕಾಲದಲ್ಲಿ ಆಳು ಅರಸರ ನಾಣ್ಯಗಳಿಗೆ ಸಂಬಂಧಪಟ್ಟ ಶೋಧವು ಪೂರ್ಣವಾಗಿರಲಿಲ್ಲ. ಆದರೆ ೧೯೬೫ನೆ ಇಸವಿಯ "The journal of the Numismatic Society of India" Vol XXVII Part I ಎಂಬ ಪುಸ್ತಕದಲ್ಲಿ ಶ್ರೀಮಾನ್ ಮಂಜೇಶ್ವರದ ಮುಕುಂದ ಪ್ರಭು ಅವರು ಒಂದು ಲೇಖನವನ್ನು ಪ್ರಕಟಿಸಿದ್ದಾರೆ. ಅದರಲ್ಲಿ ಅವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದೊರೆತ ಆಳುಪ ಅರಸರ ನಾಣ್ಯಗಳ ಕುರಿತು ನಾಣ್ಯಗಳ ಪಡಿಯಚ್ಚುಗಳ ಸಹಿತವಾಗಿ ವಿಸ್ತೃತವಾದ ವಿವರಣೆಯನ್ನು ಕೊಟ್ಟಿದ್ದಾರೆ. ಕೆಲವು ನಾಣ್ಯಗಳ ಒಂದು ಮಗ್ಗುಲಲ್ಲಿ "ಪಾಂಡ್ಯಧನಂಜಯ" ಎಂಬುದಾಗಿ ಕನ್ನಡಲಿಪಿಯಲ್ಲಿ ಅಚ್ಚಾಗಿದ್ದು ಇನ್ನೊಂದು ಮಗ್ಗುಲಲ್ಲಿ ಚಪ್ಪರಕಟ್ಟಿನ ಒಳಗೆ ಎರಡು ಮೀನುಗಳಿವೆ ಮತ್ತು ಅವುಗಳ ಎಡಗಡೆಯಲ್ಲಿ ನೀರಿನ ಕಲಶವೂ ಬಲಗಡೆಯಲ್ಲಿ ಚಾಮರವೂ ಇದೆ. ಬೇರೆ ನಾಣ್ಯಗಳಲ್ಲಿ "ಪಾಂಡ್ಯಧನಂಜಯ" ಎಂದು ನಾಗರೀಲಿಪಿಯಲ್ಲಿವೆ. ಕೊನೆಕೊನೆಯ ಆಳುಪ ಅರಸರು ತಮ್ಮ ಹೆಸರಿನೊಂದಿಗೆ ಪಾಂಡ್ಯ ಚಕ್ರವರ್ತಿ ಎಂಬ ಬಿರುದನ್ನು ಧರಿಸುತ್ತಿದ್ದುದರಿಂದ ಮತ್ತು ಆ ನಾಣ್ಯಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದೊರೆತಿರುವುದರಿಂದ "ಪಾಂಡ್ಯ ಧನಂಜಯ" ಎಂಬ ಬಿರುದನ್ನು ಧರಿಸಿದ ಅರಸನು ಆಳುವಂಶದವನೇ ಎಂಬುದರಲ್ಲಿ ಸಂದೇಹ ಉಳಿಯುವುದಿಲ್ಲ. ಅಲ್ಲದೇ ಆಳುಅರಸರ ಒಂದೆರಡು ಶಾಸನಗಳಲ್ಲಿ ಪಾಂಡ್ಯಧನಂಜಯನೆಂಬ ಉಲ್ಲೇಖವೂ ಇದೆ.

ಡಾಕ್ಟರ್ ಸಾಲೆತೂರರು ಆಳುಪ ಶಬ್ದದ ಮೂಲವು ತಮಿಳಿನ "ಆಳ್" ಎಂಬ ಧಾತುವಲ್ಲವೆಂಬ ಅಭಿಪ್ರಾಯಪಟ್ಟಿದ್ದಾರೆ.[1] ಆದರೆ ಅದು ಸರಿಯೆನ್ನಲಾಗುವುದಿಲ್ಲ. ಏಕೆಂದರೆ ಆಳು ಅರಸರ ಹೆಚ್ಚಿನ ಶಾಸನಗಳು ಆಂಧ್ರೀ ಲಿಪಿ

1. Ancient Karnataka; History of Tuluva. page 59.

ಯಿಂದಲೇ ಬರೆಯಲ್ಪಟ್ಟಿವೆಯಾದರೂ ಅವುಗಳಲ್ಲಿ ಬಳಸಲ್ಪಟ್ಟ ಹಲವು ಶಬ್ದಗಳು ಹಳೆಗನ್ನಡದಂತಿರದೇ ತಮಿಳಿನಂತಿವೆ. ಉದಾ:—ನಕರ, ನಾಯ್ಗ, ಮುಡಿಮೆ ಇತ್ಯಾದಿ. ಅಲ್ಲದೇ ಉತ್ತರದಲ್ಲಿ ಕನ್ನಡ ಮತ್ತು ದಕ್ಷಿಣದಲ್ಲಿ ಮಲೆಯಾಳಿ ಇವುಗಳ ನಡುವೆ ಇರುವ ತುಳು ಭಾಷೆಯಲ್ಲಿನ ಸರ್ವನಾಮಗಳು ಹಾಗೂ ಕೆಲವು ನಾಮಪದಗಳು ಕನ್ನಡವನ್ನಾಗಲೀ, ಮಲೆಯಾಳಿಯನ್ನಾಗಲೀ ಹೋಲದೇ ತಮಿಳನ್ನು ಹೋಲುತ್ತಿರುವುದು ಆಳುಪರ ತಮಿಳು ಮೂಲವನ್ನು ಸೂಚಿಸುತ್ತವೆ. ಹಾಗೂ ಆಳುಪ ಅರಸ ಕುಂದವರ್ಮನು ಕದ್ರಿ ದೇವಾಲಯದೊಳಗಿನ ಲೋಕೇಶ್ವರನ ಪೀಠದಲ್ಲಿ ಕೆತ್ತಿಸಿದ ಸಂಸ್ಕೃತ ಶಾಸನವು ತಮಿಳು ಗ್ರಂಥ ಲಿಪಿಯಲ್ಲಿರುವುದು, ಮತ್ತು ಗೊಲ್ಲರಕೇರಿ ಗಣಪತಿ ದೇವಾಲಯದ ಮುಂದುಗಡೆಯಲ್ಲಿರುವ ಶಾಸನವು ಆಂಧ್ರಲಿಪಿಯಲ್ಲಿದ್ದರೂ ಆ ಶಿಲಾಸ್ತಂಭದ ತಲೆಯ ಮೇಲೆ ತಮಿಳು ಲಿಪಿಯ ವಾಕ್ಯಗಳಿರುವುದು ಆಳುವಂಶದವರ ತಮಿಳು ಸಂಬಂಧವನ್ನು ಸಿದ್ಧಪಡಿಸುತ್ತವೆ. ಹಾಗೆಯೇ ಹಿಂದೆ ವಿವರಿಸಿದ ಪಾಂಡ್ಯಧನಂಜಯನ ನಾಣ್ಯಗಳಲ್ಲಿ ಮೀನಲಾಂಛನವಿರುವುದು ಮತ್ತು ಆಳುವಂಶದ ಕೊನೆಯ ಅರಸರು ಪಾಂಡ್ಯ ಚಕ್ರವರ್ತಿ ಎಂಬ ಬಿರುದನ್ನು ಧರಿಸುತಿದ್ದುದು, ಅವರ ತಮಿಳು ಮೂಲವನ್ನೂ, ತಮಿಳು ರಾಜವಂಶದವರೊಂದಿಗೆ ಅವರಿಗಿದ್ದ ನಿಕಟಸಂಬಂಧವನ್ನೂ ಸಿದ್ಧಪಡಿಸುತ್ತವೆ. ಆದರೆ ಆಳು ವಂಶದವರು ಮೂಲದಿಂದಲೂ ಪಾಂಡ್ಯವಂಶದವರೆನ್ನಲಾಗುವುದಿಲ್ಲ. ಮತ್ತು ಕೊನೆಕೊನೆಯ ಅರಸರು ಪಾಂಡ್ಯ ಚಕ್ರವರ್ತಿ ಎಂಬ ಬಿರುದನ್ನು ಧರಿಸುತ್ತಿದ್ದುದೇಕೆಂಬುದನ್ನು ಹೇಳಲಾಗುವುದಿಲ್ಲ. ಹಾಗೆಯೇ ಅವರಲ್ಲಿ ಅಳಿಯ ಸಂತಾನಕಟ್ಟು ಎಂದಿನಿಂದ ಮತ್ತು ಏಕೆ ಬಳಕೆಗೆ ಬಂತೆಂದು ಹೇಳಲಾಗುವುದಿಲ್ಲ. ಹೇಗಿದ್ದರೂ ಆಳು ಅರಸರು ತಮ್ಮ ಹೆಸರಿನೊಂದಿಗೆ "ಆಳು" ಎಂಬ ಶಬ್ದವನ್ನು ದೇವರದಾಸ ಅಥವಾ ಭಕ್ತ ಎಂಬ ಅರ್ಥದಲ್ಲಿ ಬಳಸುತ್ತಿದ್ದಿರಬಹುದೋ ಎಂದು ಅನುಮಾನಿಸಬಹುದಾಗಿದೆ.

ದಕ್ಷಿಣ ಭಾರತದಲ್ಲಿ ನಾಗಪೂಜೆಯು ಸಾರಸ್ವತ ಬ್ರಾಹ್ಮಣರಿಂದಲೇ ಬಳಕೆಗೆ ಬಂದಿದ್ದಿತು ಮತ್ತು ಆಳುವಂಶದ ಅರಸುಗಳೊಂದಿಗೆ ಸಾರಸ್ವತ ಬ್ರಾಹ್ಮಣರ ಸಂಪರ್ಕವಿದ್ದಿತೆಂಬ ಪ್ರತಿಪಾದನೆಯನ್ನು ಸಿದ್ಧಪಡಿಸುವ ಉದ್ದೇಶದಿಂದ ನಾಗಕುಲದ ಮತ್ತು ಆಳುವಂಶದ ಕುರಿತು ಇಷ್ಟು ಸೂಕ್ಷ್ಮವಾದ ವಿಮರ್ಶೆ ಮಾಡಬೇಕಾಯಿತೆಂದು ಬೇರೆ ಹೇಳಬೇಕಾಗಿಲ್ಲ. ಅಂದರೆ ತುಳು ನಾಡಿನಲ್ಲಿ ಮಹಾಶೇಷನ ಹಾಗೂ ಮಹಾಶೇಷನೊಂದಿಗೆ ಶಿವಲಿಂಗವಿರುವ

ಮತ್ತು ಪಂಚಾಯತನ ದೇವತೆಗಳಿರುವ ದೇವಾಲಯಗಳಿವೆ. ಹಾಗೂ ಆ ದೇವಾಲಯಗಳ ಸ್ಥಾಪನಾಕಾಲದೊಂದಿಗೆ ತುಳುನಾಡಿನಲ್ಲಿ ಸಾರಸ್ವತಬ್ರಾಹ್ಮಣರ ವಸತಿಯು ಪ್ರಾಚೀನತೆಯು ಸಂಬದ್ಧವಾಗಿದೆ. ಏಕೆಂದರೆ ಸಾರಸ್ವತಬ್ರಾಹ್ಮಣರು ನಾಗನೊಂದಿಗಿರುವ ಶಿವನ ಆರಾಧಕರಾಗಿರುವುದರಿಂದ ಆ ದೇವಾಲಯಗಳು ನೇರಾಗಿ ಸಾರಸ್ವತ ಬ್ರಾಹ್ಮಣರಿಗೆ ಸಂಬಂಧಿಸಿವೆ. ಹಾಗೂ ಅವುಗಳ ಸ್ಥಾಪನೆಗೆ ಸಾರಸ್ವತಬ್ರಾಹ್ಮಣರೇ ಕಾರಣರಾಗಿದ್ದಾರೆ. ಅಲ್ಲದೆ ಗೋವದಲ್ಲಿ ಸಾರಸ್ವತ ಬ್ರಾಹ್ಮಣರು ಆರಾಧಿಸುತಿದ್ದ ಸಕಲದೇವತೆಗಳ ಆಲಯಗಳೂ ಪ್ರಾಚೀನ ಕಾಲ ದಿಂದಲೂ ತುಳುನಾಡಿನಲ್ಲಿದ್ದವು ಮತ್ತು ಅವುಗಳಲ್ಲಿ ಹೆಚ್ಚಿನವು ಈಗಲೂ ಇವೆ. ಅಂದರೆ ತುಳುನಾಡಿನಲ್ಲಿ ಶಿವಾಲಯಗಳಿವೆ; ಶಕ್ತ್ಯಾಲಯಗಳಿವೆ; ನಾಗಾಲಯ ಗಳಿವೆ; ಭೈರವಾಲಯಗಳಿವೆ; ವೀರಭದ್ರನ ಗುಡಿಗಳಿವೆ; ವಿಷ್ಣುವಿನ ಆಲಯ ಗಳಿವೆ; ಸೂರ್ಯನ ಆಲಯಗಳಿವೆ; ಗಣಪತಿಯ ಆಲಯಗಳಿವೆ; ಬೇತಾಳ ನಿದ್ದಾನೆ; ಭಗವತಿ ಇದ್ದಾಳೆ; ಹಲವು ದೇವಾಲಯಗಳಲ್ಲಿ ದೇವತಾ ಪಂಚಾಯತನ ಗಳಿವೆ; ಸಪ್ತಮಾತೃಕೆಯರಿದ್ದಾರೆ; ಸಪ್ತಮಾತೃಕೆಯರೆಂದರೆ — ಬ್ರಾಹ್ಮೀ; ಮಾಹೇಶ್ವರೀ; ಕೌಮಾರೀ; ವೈಷ್ಣವಿ; ವಾರಾಹೀ (=ವರಾಹದ ಮುಖ ಉಳ್ಳವಳು) ಇಂದ್ರಾಣೀ ಮತ್ತು ಚಾಮುಂಡಾ ಎಂಬ ಏಳು ದೇವಿಯರು; ಹೀಗೆ ತುಳುನಾಡಿನಲ್ಲಿ ನಾನಾ ದೇವತೆಗಳ ಸಾವಿರಾರು ದೇವಾಲಯಗಳಿದ್ದವು. ಮತ್ತು ಆ ಎಲ್ಲ ದೇವಾಲಯಗಳಲ್ಲಿ ಕಾಳಾಮುಖ ಗೊರವರೇ ಅರ್ಚಕ ರಾಗಿದ್ದರು. ಹಾಗೂ ಅಧಿಕಾಂಶ ದೇವಾಲಯಗಳ ಸಂಪೂರ್ಣ ಅಧಿಕಾರವು ಗೊರವರಿಗೆ ಸೇರಿದ್ದಿತು. ಶೈವಮತಾನುಯಾಯಿಗಳಾಗಿದ್ದ ಆಳುಪ ಅರಸರು ಆ ದೇವಾಲಯಗಳಿಗೆ ಉಂಬಳಿಯಾಗಿ ಭೂಮಿಗಳನ್ನು ಬಿಟ್ಟಿದ್ದರು.

ಮಂಜೇಶ್ವರದಲ್ಲಿನ ಶ್ರೀ ಮದನಂತೇಶ್ವರ ದೇವಾಲಯ, ಮಂಗಳೂರಿನಲ್ಲಿ ಕರಂಗಲಪಾಡಿಯಲ್ಲಿನ ಶಿವಾಲಯ ಮತ್ತು ಗೊಲ್ಲರಕೇರಿಯಲ್ಲಿನ ಗಣಪತಿ ದೇವಾಲಯ—ಇವು ಮೂರು ಸಾರಸ್ವತ ಬ್ರಾಹ್ಮಣರ ಸ್ವಂತದ ದೇವಾಲಯ ಗಳಾಗಿದ್ದವು. ಮತ್ತು ಮಂಗಳೂರಿನ ಹೊಯಿಗೆ (=ನೀರೇಶ್ವಾಲ್ಯ)ಯಲ್ಲಿನ ಬ್ರಹ್ಮಾ, ವಿಷ್ಣು ಮತ್ತು ಮಹೇಶ್ವರ ಎಂಬ ಮೂರು ದೇವಾಲಯಗಳು ಸಾರಸ್ವತ ಬ್ರಾಹ್ಮಣರ ಪೂರ್ಣಾಧಿಕಾರಕ್ಕೆ ಸೇರಿದ್ದವು. ಈಗ ಅವುಗಳಲ್ಲಿ ಕರಂಗಲಪಾಡಿಯಲ್ಲಿನ ಶಿವಾಲಯ, ಗೊಲ್ಲರಕೇರಿಯಲ್ಲಿನ ಗಣಪತಿ ದೇವಾಲಯ ಮತ್ತು ಮಂಜೇಶ್ವರದ ಶ್ರೀ ಮದನಂತೇಶ್ವರ ಎಂಬ ಮೂರು ದೇವಾಲಯಗಳು ಮಾತ್ರ ಸಾರಸ್ವತ ಬ್ರಾಹ್ಮಣರ ವಶದಲ್ಲಿ ಉಳಿದಿವೆ. ಬೇರೆ ಮೂರು

ದೇವಾಲಯಗಳಲ್ಲಿ ಬ್ರಹ್ಮಾ ಮತ್ತು ವಿಷ್ಣುವಿನ ದೇವಾಲಯಗಳು ಈಗ ಇಲ್ಲ. ಈಶ್ವರನ ದೇವಾಲಯ ಬೇರೆ ವರ್ಗದ ಜನರ ವಶದಲ್ಲಿದೆ.

ಶಾಲಿವಾಹನ ಶಕದ ಹದಿಮೂರನೆಯ ಶತಮಾನದ ಕೊನೆಯ ತನಕ ತುಳುನಾಡಿನಲ್ಲಿ ಸಾರಸ್ವತ ಬ್ರಾಹ್ಮಣರ, ಕಾಳಾಮುಖ ಗುರವರ ಸಂತತಿಯವ ರಾದ ಸ್ಥಾನಿಕ ಬ್ರಾಹ್ಮಣರ ಹೊರತು ಇತರ ಜಾತಿಯ ಬ್ರಾಹ್ಮಣರು ಇರಲಿಲ್ಲ. ಹದಿನೈದನೆಯ ಶತಮಾನಕ್ಕಿಂತ ಮೊದಲಿನ ಯಾವ ಶಾಸನದಲ್ಲಿಯೂ ಇತರ ಬ್ರಾಹ್ಮಣರ ಉಲ್ಲೇಖವು ದೊರೆಯುವುದಿಲ್ಲ. ಅಷ್ಟೇ ಅಲ್ಲ ಶಕದ ನಾಲ್ಕನೆಯ ಶತಮಾನದಿಂದ ಹದಿನೈದನೆಯ ಶತಮಾನದ ಕೊನೆಯ ತನಕ ತುಳುನಾಡನ್ನು ಅವ್ಯಾಹತವಾಗಿ ಆಳಿದ ಆಳುಪ ಅರಸರ ಶಾಸನಗಳಲ್ಲಿ ಗೊರವರ ಮತ್ತು ಸಾರಸ್ವತ ಬ್ರಾಹ್ಮಣರ ಹೊರತು ಅನ್ಯವರ್ಗದ ಬ್ರಾಹ್ಮಣರ ಉಲ್ಲೇಖವು ದೊರೆಯುವುದಿಲ್ಲ,

ಗ್ರಾಮಪದ್ಧತಿಯೆಂಬ ಒಂದು ಗ್ರಂಥದಲ್ಲಿ ವಿಚಿತ್ರ ರೀತಿಯಿಂದ ಹುಟ್ಟಿದ ಕದಂಬ ಮಯೂರವರ್ಮ ಎಂಬ ಅರಸನೊಬ್ಬನು ಅಹಿಚ್ಛತ್ರದಿಂದ ಬ್ರಾಹ್ಮಣರ ಹಲವು ಕುಟುಂಬಗಳನ್ನು ಕರತಂದು ತುಳುನಾಡಿನಲ್ಲಿ ಮತ್ತು ಕೇರಳದಲ್ಲಿ ಸ್ಥಾಪಿಸಿದ ನೆಂಬ ಕಥೆಯಿದೆ. ಹಾಗೆಯೇ ಕಾಂಚಿಯ ಮುಕ್ಕಂತಿ ಪಲ್ಲವ ಎಂಬವನ ಕುರಿತಾಗಿಯೂ ಒಂದು ಕಥೆಯಿದೆಯಂತೆ. ದಿವಂಗತ ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ ಅವರು ಹಿಂದೆ ಸಾಹಿತ್ಯ ಸಮಿತಿ ಪತ್ರಿಕೆಯಲ್ಲಿ "ಹೈಗ—ಪೈವ" ಎಂಬ ಲೇಖನದಲ್ಲಿ ಆ ಎರಡು ಕಥೆಗಳನ್ನೂ ವಿಮರ್ಶಿಸಿದ್ದಾರೆ. ಮತ್ತು ಆ ಕಥೆಗಳಲ್ಲಿ ಉಕ್ತರಾದ ಮಯೂರವರ್ಮ ಮತ್ತು ಮುಕ್ಕಂತಿ ಪಲ್ಲವ ಎಂಬಿ ಬ್ಬರೂ ಕಾಲ್ಪನಿಕ ವ್ಯಕ್ತಿಗಳೇ ಹೊರತು ಐತಿಹಾಸಿಕ ವ್ಯಕ್ತಿಗಳಲ್ಲವೆಂದು ಸಿದ್ಧ ಪಡಿಸಿದ್ದಾರೆ. ಕರ್ಣಾಟಕ ರಾಜ್ಯದಲ್ಲಿ ಕದಂಬರಾಜ ವಂಶವನ್ನು ಸ್ಥಾಪಿಸಿದ ಮಯೂರನು ಸ್ವಯಂ ಬ್ರಾಹ್ಮಣನಾಗಿದ್ದನು. ಮತ್ತು ಅವನು ತನ್ನ ತಾಯಿ ನುಡಿಯಾಗಿದ್ದ ಪ್ರಾಕೃತ ಭಾಷೆಯಲ್ಲಿ ಬರೆಸಿದ ಶಾಸನದಲ್ಲಿ ತನ್ನನ್ನು "ಕದಂಬಾಣಂ ಮಯೂರಸಮ್ಮ" ಅಂದರೆ ಕದಂಬರ ಮಯೂರಶರ್ಮ ಎಂದು ಸ್ಪಷ್ಟವಾಗಿ ಬರೆಸಿದ್ದಾನೆ. ಆ ಉಲ್ಲೇಖದಿಂದಲೂ ಅವನ ಐದನೆಯ ತಲೆಮಾರಿನವನಾದ ಶಾಂತಿವರ್ಮನು ಬರೆಸಿದ ಶಾಸನದಲ್ಲಿನ ಉಲ್ಲೇಖದ ಮೇಲಿಂದಲೂ— ಮಯೂರಶರ್ಮನ ಕಾಲದಲ್ಲಿ ಅವನ ಸ್ವಜಾತಿಯ ಅಥವಾ ಕುಲದ ಹಲವು ಮಂದಿ ಬ್ರಾಹ್ಮಣರಿದ್ದರೆಂದು ಸಿದ್ಧವಾಗುತ್ತದೆ. ಮತ್ತು ಅವರೆಲ್ಲರೂ ಕೊಂಕಣ ದವರೆಂದೂ ತಿಳಿದುಬರುತ್ತದೆ.

ಮುಂದೆ ಹದಿನೈದನೆಯ ಶತಮಾನದ ತರುವಾಯ ಆಳುವ ಅರಸರ ಬಲವು ಕುಗ್ಗಿದುದರಿಂದ, ಜೈನರು ಪ್ರಬಲರಾಗುತ್ತ ಹೋದರು. ಮತ್ತು ಜೈನರ ಪ್ರೋತ್ಸಾಹ ಮತ್ತು ಸಹಕಾರಗಳಿಂದ ಉತ್ಕರ್ಷವನ್ನು ಪಡೆದ ಶಿವಳ್ಳಿಯ ವೈಷ್ಣವ ಬ್ರಾಹ್ಮಣರು ಜೈನರ ಬೆಂಬಲಪಡೆದು, ಅವರ ವಿರೋಧಿಗಳಾದ ಹಾಗೂ ಆಳುವ ಅರಸರ ಪಕ್ಷಪಾತಿಗಳಾಗಿದ್ದ ಮತ್ತು ಶೈವರಾಗಿದ್ದ ಸ್ಥಾನಿಕ ಬ್ರಾಹ್ಮಣರ ಅಧಿಕಾರಕ್ಕೆ ಸೇರಿದ ಒಂದೊಂದೇ ದೇವಾಲಯವನ್ನು ಕಸಿದು ಕೊಳ್ಳತೊಡಗಿದರು. ಮತ್ತು ದೇವಾಲಯದೊಳಗಿನ ಶಿವನ ಪ್ರತೀಕಗಳನ್ನು ಕಿತ್ತೊಗೆದು ವೈಷ್ಣವ ಪ್ರತೀಕಗಳನ್ನು ಸ್ಥಾಪಿಸತೊಡಗಿದರು. ಆ ಕುರಿತಾದ ವಿಸ್ತೃತ ವಿವರಗಳನ್ನು ತಿಳಿಯಬಯಸುವವರು ಡಾಕ್ಟರ್ ಭಾಸ್ಕರ ಆನಂದ ಸಾಲೆತೂರರು ಬರೆದ "The Sthanikas and Their Historical Importance" ಎಂಬ ಪುಸ್ತಕವನ್ನು ಓದಬಹುದು. ಆ ದೇವಾಲಯಗಳ ಪೈಕಿ ಉಡುಪಿಯಲ್ಲಿನ ಶ್ರೀಮದನಂತೇಶ್ವರ ದೇವಾಲಯದ ಸಂಬಂಧದಲ್ಲಿ ಶಿವಳ್ಳಿಯವರೇ ಆಗಿದ್ದ ಶ್ರೀಮಾನ್ ಎಸ್. ಯು. ಪಣಿಯಾಡಿಯವರು ೧೯೩೪ನೆಯ ಇಸವಿ ಜನವರಿ ೧೧ನೆಯ ಗುರುವಾರ ಮಂಗಳೂರಿನ ಕನ್ನಡ ವಾರಪತ್ರಿಕೆ "ನವಯುಗ" ಅದರ ಪರ್ಯಾಯ ಸಂಚಿಕೆಯಲ್ಲಿ ಪ್ರಕಟಿಸಿದ "ಉಡುಪಿ ಕ್ಷೇತ್ರದ ಸಂಕ್ಷಿಪ್ತ ಇತಿಹಾಸ" ಎಂಬ ಲೇಖನದಿಂದ ಒಂದು ಅಂಶ ವನ್ನು ಎತ್ತಿ ಇಲ್ಲಿ ಕೊಡಲಾಗುವುದು.

**"ಸುಮಾರು ಮೂರು ಶತಮಾನಗಳ ಹಿಂದೆ ಇಲ್ಲಿಯ ಶಿವ ಬ್ರಾಹ್ಮಣರಿಗೂ ಮಾಧ್ವಬ್ರಾಹ್ಮಣರಿಗೂ ಹೆಚ್ಚಿನ ಮನಸ್ತಾಪ ಉಂಟಾಗಿ ಕಲಹವೂ ಉಂಟಾಯಿತು. ಅದರ ಪರಿಣಾಮವಾಗಿ ಈ ಮಾಧ್ವ ಸಂನ್ಯಾಸಿಗಳಿಗೆ ಉಪದ್ರವ ಹೆಚ್ಚಿತು. ಶಿವಬ್ರಾಹ್ಮಣರು ಪ್ರಬಲರಾಗಿದ್ದ ಕಾರಣ ಇವರ ಮುಖ್ಯ ದೇವಸ್ಥಾನವಾದ ಶ್ರೀಕೃಷ್ಣ ದೇವಸ್ಥಾನದ ಪೂಜೆಗೆ ಅಡ್ಡಿಯನ್ನುಂಟುಮಾಡುತಿದ್ದರೆಂದು ತಿಳಿದು ಬರುತ್ತದೆ. ಈ ಕಾರಣದಿಂದ ಕೆಲವು ಸ್ವಾಮಿಯವರು ಊರು ಬಿಟ್ಟು ಹೋಗಿದ್ದರು. ನಿವೃತ್ತಿಯಿಲ್ಲದೇ ಕೆಲವರು ಮಾತ್ರ ಉಳಿದು ಕೊಂಡಿದ್ದರು. ಮತ್ತು ಈ ಉಪದ್ರವವನ್ನು ಸಹಿಸದೆಯೂ ಹಳ್ಳಿ ಗಳ ಮಠಗಳಲ್ಲಿ ಕುಳಿತುಕೊಂಡು ಮತಪ್ರಚಾರ ಮಾಡುವುದಕ್ಕಾ**

ಗಿಯೂ ಒಬ್ಬೊಬ್ಬರು ಒಂದೊಂದು ಸಮಯದಲ್ಲಿ ಬಂದು ಇಲ್ಲಿ ಪೂಜೆಯ ಕೆಲಸವನ್ನು ಮಾಡಿಕೊಳ್ಳುತ್ತಿದ್ದರು. ಆದರೆ ಆ ಕ್ರಮವು ಯಾವ ವ್ಯವಸ್ಥೆಯನ್ನೂ ಹೊಂದಿರಲಿಲ್ಲ.

ಶ್ರೀ ವಾದಿರಾಜ ಸ್ವಾಮಿಯವರು ಆಗಿನ ಕಾಲದ ಅವ್ಯವಸ್ಥೆಯನ್ನೂ ಈ ಶಿವಬ್ರಾಹ್ಮಣರ ಉಪದ್ರವವನ್ನೂ ನೋಡಿ ಮನನೊಂದು ಅದಕ್ಕೆ ಬೇಕಾದ ವ್ಯವಸ್ಥೆ ಮಾಡತೊಡಗಿದರು. ಶ್ರೀ ವಾದಿರಾಜ ಸ್ವಾಮಿಯವರು ಪ್ರಚಂಡ ಮೇಧಾವಿಗಳೂ, ವಾದ ಕುಶಲರೂ, ಉದಾರಹೃದಯರೂ, ತೇಜಸ್ವಿಗಳೂ, ತಪಸ್ವಿಗಳೂ ಆಗಿದ್ದುದರಿಂದ ಜನರನ್ನೂ, ಆಗಿನ ಕಾಲದ ರಾಜಕೀಯ ಅಧಿಕಾರಿಗಳನ್ನೂ ತನ್ನ ವಶಕ್ಕೆ ಶೀಘ್ರವಾಗಿ ಸೆಳೆದುಕೊಂಡರು. ಈ ಜನರ ಹಾಗೂ ರಾಜಕೀಯ ಅಧಿಕಾರಿಗಳ ಸಹಾಯದಿಂದ ಶಿವಬ್ರಾಹ್ಮಣರ ಸೊಕ್ಕನ್ನು ಮುರಿದು ಅವರನ್ನು ಉಡುಪಿಯಿಂದಲೇ ಓಡಿಸಿ ಅವರ ಹಕ್ಕಿನದಾದ ಶ್ರೀ ಮದನಂತೇಶ್ವರ ದೇವಸ್ಥಾನವನ್ನು ಸ್ವಾಧೀನ ಪಡಿಸಿಕೊಂಡು, ಆ ದೇವಸ್ಥಾನದ ಕೋಟೆಯನ್ನು ಒಡೆದು ಆ ಕೋಟೆಯ ಮೇಲೆ ಎಂಟು ಮಠಗಳನ್ನು ಸ್ಥಾಪಿಸಿ ಅನಂತೇಶ್ವರ ದೇವಸ್ಥಾನಕ್ಕೆ ದಿಗ್ಬಂಧನವನ್ನುಂಟುಮಾಡಿದರು."

ಹಿಂದಿನ ಅಂಶದಲ್ಲಿ ಉಲ್ಲೇಖಿಸಲ್ಪಟ್ಟಿರುವ ರಾಜಕೀಯ ಅಧಿಕಾರಿಗಳೆಂದರೆ ಜೈನಬಲ್ಲಾಳರೇ ಆಗಿದ್ದರೆಂಬುದನ್ನು ಡಾಕ್ಟರ್ ಸಾಲೆತೂರರು ಬರೆದ ಮುಂದಿನ ಅಂಶದಿಂದ ತಿಳಿದುಕೊಳ್ಳಬೇಕಾಗುತ್ತದೆ:–ಅಂದರೆ ಅವರ ಪುಸ್ತಕದಲ್ಲಿ ಮುಂದಿನ ವಿವರವಿದೆ:—

"It is interesting to note in this connection that in this quarrel between the Madhvas led by the redoubtable Vadiraja on the one hand and the Nitturu People on the other, the Panchamas (or the Harijons as we now would call them) took the side of the Nitturu People against the orthodox sections. And when the Vaisnavas who had installed the Venkataramana image in the place of Somalingesvara at

Nitturu, jeered at the latter deity thus in Tulu—Nitturu Somalinga bona Tankara (=ತಂಕರ) tanjana Tankara, the Panchamas retorted with an equally poignant line in Tulu thus Chittupadi Ballalera bente koryero Nidamburu Ballalera didambu gudyero, obviously against the Chittupadi and Nidamburu Ballals who had espoused the cause of the Madhva guru."

ಹೀಗೆ ಶಿವಳ್ಳಿಯವರು ತಮ್ಮ ವಶಪಡಿಸಿಕೊಂಡ ದೇವಾಲಯಗಳಲ್ಲಿನ ವಿಗ್ರಹಗಳನ್ನು ಬದಲಾಯಿಸಿದುದಲ್ಲದೇ ಅನಂತೇಶ್ವರ ದೇವಾಲಯಗಳಲ್ಲಿ ಮಹಾಶೇಷನ ಹೆಡೆಯ ಆಶ್ರಯದಲ್ಲಿದ್ದ ಶಿವಲಿಂಗಗಳನ್ನು ಕಿತ್ತು ಅವುಗಳ ಸ್ಥಾನದಲ್ಲಿ ವಿಷ್ಣುವಿನ ಮುಖಗಳನ್ನಿಟ್ಟರು. ಹಾಗೂ ಆ ದೇವಾಲಯಗಳಿಗಿದ್ದ ಮೊದಲಿನ ಶ್ರೀ ಮದನಂತೇಶ್ವರ ಎಂಬ ಹೆಸರನ್ನು ಶ್ರೀ ಮದನಂತಪದ್ಮನಾಭೇಶ್ವರ ಇಲ್ಲವೇ ಶ್ರೀಮದನಂತಪದ್ಮನಾಭ ಸ್ವಾಮಿ ದೇವಾಲಯವೆಂದು ಪರಿವರ್ತಿಸಿದರು,

ಆನಂದಗಿರಿ ಎಂಬವನು ಬರೆದ ಶಂಕರವಿಜಯ ಎಂಬ ಗ್ರಂಥದಲ್ಲಿ ಶ್ರೀ ಶಂಕರಾಚಾರ್ಯರು ಕುಕ್ಕೆಯ ಸುಬ್ರಹ್ಮಣ್ಯ ಕ್ಷೇತ್ರಕ್ಕೆ ಹೋಗಿದ್ದರೆಂದೂ ಅಲ್ಲಿ ಆಚಾರ್ಯರು ಶೇಷರೂಪಿ ಷಣ್ಮುಖನನ್ನು ಪೂಜಿಸಿದರೆಂದೂ (**ಭಕ್ತ್ಯಾ ಸಂಪೂಜಯಾಮಾಸ ಷಣ್ಮುಖಂ ಶೇಷರೂಪಿಣಮ್**) ಹೇಳಿದೆ. ಅದನ್ನು ಆಧರಿಸಿ ಬೇರೊಬ್ಬನು ಶ್ರೀ ಶಂಕರಾಚಾರ್ಯರು ಕುಕ್ಕೆಯ ದೇವಾಲಯದೊಳಗಿನ ದೇವತಾ ಪಂಚಾಯತನವನ್ನು ಸ್ಥಾಪಿಸಿದರೆಂಬ ಕಥೆ ಕಟ್ಟಿದ್ದಾನೆ. ಈಗಲಾದರೋ ಕುಕ್ಕೆಯ ದೇವಾಲಯದಲ್ಲಿದ್ದ ದೇವತಾ ಪಂಚಾಯತನವು ವಿಭಜಿಸಲ್ಪಟ್ಟಿದೆ. ಮತ್ತು ಸಿಂಹಾಸನದಲ್ಲಿದ್ದ ಗಣಪತಿಯು ಸ್ಥಾನಾಂತರಿಸಲ್ಪಟ್ಟು ಕತ್ತಲೆಯ ಮೂಲೆಯನ್ನು ಸೇರಿದ್ದಾನೆ. ಹೇಗಿದ್ದರೂ ಶ್ರೀ ಶಂಕರಾಚಾರ್ಯರು ಕುಕ್ಕೆಗೆ ಬಂದಿದ್ದರೆಂಬುದು ಆನಂದಗಿರಿಯ ಕಲ್ಪನೆಯೇ ಹೊರತು ವಾಸ್ತವಿಕವಾದುದಲ್ಲ. ಹೇಗೆಂದರೆ ಆನಂದಗಿರಿಯು ತನ್ನನ್ನು ಶ್ರೀ ಶಂಕರಾಚಾರ್ಯರ ಶಿಷ್ಯರಲ್ಲೊಬ್ಬನೆಂದು ಹೇಳಿಕೊಂಡಿದ್ದರೂ, ಅವನ ಗ್ರಂಥದಲ್ಲಿ ಶ್ರೀ ಶಂಕರಾಚಾರ್ಯರ ಶಿಷ್ಯನಾಗಿದ್ದ ಹಸ್ತಾಮಲಕನೆಂಬವನು ಗುರುವಿನಿಂದ ಅಪ್ಪಣೆಪಡೆದು ದಕ್ಷಿಣಭಾರತದ ಪಶ್ಚಿಮ ಕರಾವಳಿಯಲ್ಲಿ ವೈಷ್ಣವಮತದ ಪ್ರಚಾರಮಾಡಿ ರಜತಪೀಠದಲ್ಲಿ (=ಉಡುಪಿಯಲ್ಲಿ) ಶ್ರೀಕೃಷ್ಣನ ಪ್ರತಿಮೆಯನ್ನು ಸ್ಥಾಪಿಸಿದನೆಂದು ಹೇಳಿರುವುದರಿಂದ ಅವನು ಶಕದ ಹದಿನಾಲ್ಕನೆಯ ಶತಮಾನದ

ತರುವಾಯದವನೆಂದು ಹೇಳಬೇಕಾಗುತ್ತದೆ. ಅಲ್ಲದೆ ಅವನು ಬರೆದ ಹಲವು ಕಥೆಗಳು ಇತರರು ಬರೆದ ಶಂಕರವಿಜಯಗಳಲ್ಲಿ ಇಲ್ಲ. ಆದುದರಿಂದ ಅವನು ಬರೆದ ಕಥೆಗಳನ್ನು ಅವನ ಸ್ವಂತದ ಕಲ್ಪನೆಗಳೆನ್ನಬೇಕಾಗಿದೆ.

ದೇವತಾ ಪಂಚಾಯತನ ಅಥವಾ ಶಿವ ಪಂಚಾಯತನ ಎಂದರೆ ಪಂಚ ಮತಗಳ ದೇವತೆಗಳಾಗಿರುವ, ಶಿವ, ಶಕ್ತಿ, ವಿಷ್ಣು, ಸೂರ್ಯ ಮತ್ತು ಗಣಪತಿ ಎಂಬ ಐದು ದೇವತೆಗಳ ಕೂಟವಾಗಿರುತ್ತದೆ. ಶಿವಪಂಚಾಯತನದ ದೇವತೆಗಳು ಗೋವದ ಮಂಗೇಶ ದೇವಾಲಯದಲ್ಲಿ ಪ್ರಾಚೀನ ಕಾಲದಿಂದಲೂ ಇದ್ದು ಸಾರಸ್ವತ ಬ್ರಾಹ್ಮಣರು ಆ ದೇವತೆಗಳನ್ನು ಆರಾಧಿಸುತ್ತ ಬಂದಿದ್ದಾರೆ. ಆದುದರಿಂದ ಗೋವದಿಂದ ಬಂದು ತುಳುನಾಡಿನಲ್ಲಿ ನೆಲಸಿದ ಸಾರಸ್ವತ ಬ್ರಾಹ್ಮಣರೇ ತುಳುನಾಡಿನಲ್ಲಿ ದೇವತಾ ಪಂಚಾಯತನಗಳನ್ನು ಸ್ಥಾಪಿಸಿದವರೆಂದರೆ ತಪ್ಪಾಗದು. ಅಂದರೆ ಹಿಂದಿನ ಕಾಲದಲ್ಲಿ ತುಳುನಾಡಿನೊಳಗೆ ಸಾರಸ್ವತ ಬ್ರಾಹ್ಮಣರ ಮತ್ತು ಸ್ಥಾನಿಕ ಬ್ರಾಹ್ಮಣರ ಹೊರತು ಇತರ ಬ್ರಾಹ್ಮಣರು ಇಲ್ಲದುದರಿಂದಲೂ, ಸಾರಸ್ವತ ಬ್ರಾಹ್ಮಣರು ಮಾತ್ರ ಶಿವಪಂಚಾಯತನದ ಆರಾಧಕರಾಗಿದ್ದುದರಿಂದಲೂ, ಸಾರಸ್ವತ ಬ್ರಾಹ್ಮಣರೇ ಕುಕ್ಕೆಯಲ್ಲಿ ಮಹಾಶೇಷನ ದೇವಾಲಯವನ್ನು ಕಟ್ಟಿಸಿ ಅದರೊಳಗೆ ಶಿವಪಂಚಾಯತನವನ್ನು ಸ್ಥಾಪಿಸಿದ್ದರೆಂಬುದನ್ನು ಸಿದ್ಧಪಡಿಸಲು ಬೇರೆ ಪ್ರಮಾಣಗಳ ಆವಶ್ಯಕತೆಯಿಲ್ಲ.

ತುಳುನಾಡು ವಿಜಯನಗರ ಸಾಮ್ರಾಜ್ಯದೊಳಗೆ ಸೇರಿದ್ದು ಸಾರಸ್ವತ ಬ್ರಾಹ್ಮಣರು ವಿಜಯನಗರದ ಮಂಡಲೇಶ್ವರರಾಗಿ ತುಳುನಾಡನ್ನು ಆಳುತ್ತಿದ್ದ ಕಾಲದವರೆಗೆ ಕುಕ್ಕೆಯಲ್ಲಿ ಸಾರಸ್ವತ ಬ್ರಾಹ್ಮಣರ ದೊಡ್ಡ ವಸತಿ ಇದ್ದು ಕುಕ್ಕೆಯು ದೊಡ್ಡ ಪಟ್ಟಣವಾಗಿದ್ದಿತೆನ್ನಬಹುದು. ಅಲ್ಲಿ ಬೆಳೆದ ಕಾಡಿನೊಳಗೆ ಹಾಳುಬಿದ್ದ ಪಟ್ಟಣದ ಅವಶೇಷಗಳು ಇಂದಿಗೂ ಕಂಡುಬರುತ್ತವೆ. ಅಲ್ಲದೇ ಕುಕ್ಕೆಯಲ್ಲಿ ಸಾರಸ್ವತ ಬ್ರಾಹ್ಮಣರ ವಸತಿ ಇದ್ದು, ಕುಕ್ಕೆಯ ಸುಬ್ರಹ್ಮಣ್ಯ ದೇವಾಲಯದಲ್ಲಿ ಸಾರಸ್ವತ ಬ್ರಾಹ್ಮಣರಿಗೆ ಕೂಡ ಅಧಿಕಾರವಿದ್ದುದರಿಂದಲೇ ವಿಜಯನಗರದ ಮಂಡಲೇಶ್ವರನಾಗಿ ಗೋವಾದೊಂದಿಗೆ ತುಳುನಾಡಿನವರೆಗೆ ಇಡೀ ಪಶ್ಚಿಮ ಕರಾವಳಿಯ ರಾಜ್ಯವನ್ನು ಆಳುತ್ತಿದ್ದ ಗೋವದ ಸಾರಸ್ವತ ಬ್ರಾಹ್ಮಣ, ವಾಗಳೇ ಮನೆತನದ ವೀರವಸಂತ ಮಾಧವರಾಯನೂ, ಅವನ ತರುವಾಯ ಅಧಿಕಾರಕ್ಕೆ ಬಂದ ಅವನ ಮಗ ಬಾಚಣ್ಣರಾಯನೂ ಕುಕ್ಕೆಯ ಸುಬ್ರಹ್ಮಣ ದೇವಾಲಯಕ್ಕೆ ಭೂಮಿಯನ್ನು ದಾನಮಾಡಿ ಶಾಸನಗಳನ್ನು ಬರೆಸಿ ಕೊಟ್ಟಿದ್ದರೆನ್ನಬಹುದು. ಅಷ್ಟು ಮಾತ್ರವಲ್ಲದೇ ಶಕ ೧೬೩೦ರಲ್ಲಿ ಸಾರಸ್ವತ

ಬ್ರಾಹ್ಮಣರು ವಿಟ್ಲದಲ್ಲಿ ಕಟ್ಟಿಸಿದ ದೇವಾಲಯದಲ್ಲಿ ಪ್ರತಿಷ್ಠೆಮಾಡಲು ಕುಕ್ಕೆ ಸುಬ್ರಹ್ಮಣ್ಯ ದೇವಾಲಯದಿಂದಲೇ ಮಹಾಶೇಷನ ಪ್ರತಿಮೆಯನ್ನು ತಂದಿದ್ದ ರೆಂಬ ಐತಿಹಾಸಿಕ ವಿಷಯವು ಸಾರಸ್ವತ ಬ್ರಾಹ್ಮಣರಿಗೂ ಕುಕ್ಕೆ ದೇವಾಲಯದಲ್ಲಿ ಅಧಿಕಾರವಿದ್ದಿತೆಂದು ಸಿದ್ಧಪಡಿಸುತ್ತದೆ. ಸ್ಥಾನಿಕ ಬ್ರಾಹ್ಮಣರ ಅಧಿಕಾರವನ್ನು ಶಿವಳ್ಳಿಯವರು ಕಸಿದುಕೊಂಡ ತರುವಾಯ—ಸಾರಸ್ವತ ಬ್ರಾಹ್ಮಣರಿಗೂ ಸುಬ್ರಹ್ಮಣ್ಯ ದೇವಾಲಯದಲ್ಲಿ ಅಧಿಕಾರವಿಲ್ಲವಾಯಿತು.

ಕೆಲವರು ತಿಳಿದಿರುವಂತೆ ಶಿವಪಂಚಾಯತನವು ಕುಕ್ಕೆಯ ಸುಬ್ರಹ್ಮಣ್ಯ ದೇವಾಲಯದಲ್ಲಿ ಮಾತ್ರ ಇರುವುದಲ್ಲ. ಉಳ್ಳಾಲದ ಸೋಮೇಶ್ವರ ದೇವಾಲಯದಲ್ಲಿಯೂ, ನಾಸಿಕ ಜಿಲ್ಲೆಯಲ್ಲಿ ನಾಸಿಕದಿಂದ ೧೮ ಮೈಲು ದೂರದಲ್ಲಿರುವ ಸಿಂಡಿನೇರ ಎಂಬಲ್ಲಿನ ಗೋಂಡೇಶ್ವರ ದೇವಾಲಯದಲ್ಲಿಯೂ ಇದೆ. ಬೇರೆ ಎಷ್ಟು ದೇವಾಲಯಗಳಲ್ಲಿರಬಹುದೆಂದು ಇನ್ನು ತಿಳಿದುಬರಬೇಕಷ್ಟೇ. ಉಳ್ಳಾಲದ ಸೋಮೇಶ್ವರ ದೇವಾಲಯವು ಕಡಲಕರೆಯಲ್ಲಿ ಚಿಕ್ಕ ದಿಬ್ಬದ ಮೇಲೆ ಇದೆ. ದಿಬ್ಬವನ್ನು ಹತ್ತಿ ದೇವಾಲಯದೊಳಗೆ ಹೋಗಲು ಮೆಟ್ಟಲುಗಳ ಸಾಲು ಇದೆ. ಮೆಟ್ಟಲುಗಳು ಆರಂಭವಾಗುವ ಹಂತದಲ್ಲಿ ಮೆಟ್ಟಲುಗಳ ಎದುರುಗಡೆಯಲ್ಲಿ ಪಂಚದುರ್ಗೆಯ ಗುಡಿಯಿದೆ. ಮೆಟ್ಟಲುಗಳನ್ನು ಹತ್ತಿ ದೇವಾಲಯದ ಹೊರ ಸುತ್ತಿನಲ್ಲಿ ಇಳಿದರೆ, ಸುತ್ತಿನಲ್ಲಿ ಗಣಪತಿಯ. ಗೋಪಾಲಕೃಷ್ಣನ, ವಿಷ್ಣುವಿನ ಮತ್ತು ರಕ್ತೇಶ್ವರಿಯ ಗುಡಿಗಳಿವೆ. ಅಂದರೆ ಪಂಚಾಯತನದಲ್ಲಿರಬೇಕಾದ ಸೂರ್ಯನ ಗುಡಿ ಇಲ್ಲವಾಗಿದೆ. ಬದಲಿಗೆ ವಿಷ್ಣುವಿಗೆ ಸಂಬಂಧಪಟ್ಟ ಎರಡು ಗುಡಿಗಳಿವೆ. ಅರ್ಥಾತ್ ಸೂರ್ಯನ ಗುಡಿಯಲ್ಲಿ ಸೂರ್ಯನ ಬದಲಿಗೆ ಗೋಪಾಲಕೃಷ್ಣನ ಪ್ರತಿಮೆಯನ್ನಿಟ್ಟುದು ಅರ್ವಾಚೀನ ಬದಲಾವಣೆಯೆಂದು ತಿಳಿಯಬೇಕಾಗಿದೆ. ಆ ದೇವಾಲಯದ ಒಳಸುತ್ತಿನ ಎಡಗಡೆಯ ಚಾವಡಿಯಲ್ಲಿ ವೀರಭದ್ರ ಮತ್ತು ಗಣಪತಿಯರ ಮಧ್ಯದಲ್ಲಿ ಸಪ್ತಮಾತೃಕೆಯರ ಪ್ರತಿಮೆಗಳಿವೆ. ಈ ಕುರಿತು ಆಳವಾದ ಶೋಧಮಾಡುವ ಆವಶ್ಯಕತೆಯಿದೆ.

ಎಲ್ಲಕ್ಕಿಂತ ಮುಖ್ಯವಾಗಿ ಸೌರಾಷ್ಟ್ರದ ಕಡಲಕರೆಯ ಸೋಮನಾಥ ದೇವಾಲಯದಿಂದ ಮೊದಲುಗೊಂಡು ಪಶ್ಚಿಮ ಕಡಲಕರೆಯ ಉಳ್ಳಾಲದತನಕ (?) ಅಲ್ಲಲ್ಲಿ ಸೋಮನಾಥನ ಅಥವಾ ಸೋಮೇಶ್ವರನ ದೇವಾಲಯಗಳಿರುವುದು ಯಾವುದರ ಸಂಕೇತವೆಂದು ಕಂಡು ಹಿಡಿಯುವ ಆವಶ್ಯಕತೆಯೂ ಇದೆ.

ಮಂಗಳೂರಿನ ಗೊಲ್ಲರಕೇರಿ ಗಣಪತಿ ದೇವಾಲಯವು ಮಂಗಳೂರಿನ ಬಂದರದಲ್ಲಿ ಭಂಡಸಾಲೆ ವ್ಯಾಪಾರಿಗಳಾಗಿರುವ ಬಸ್ತಿಕಾರರ ಮನೆತನದವರಿಗೆ

ಸೇರಿದುದಾಗಿದ್ದು ಆ ದೇವಾಲಯದ ಮುಂದುಗಡೆಯಲ್ಲಿರುವ ಶಿಲಾಸ್ತಂಭದಲ್ಲಿ ಬರೆದ ಶಾಸನದಲ್ಲಿನ ಭೂಮಿಯ ದಾನವು ಬಸ್ತಿಕಾರರ ಪೂರ್ವಜ "ವಾಮನ ಸೇನ ಭವ" ಎಂಬವರಿಗೆ ದೊರಕಿತ್ತು. ಆ ಗಣಪತಿ ದೇವಾಲಯವು ಅವರ ಸ್ವಂತದ ಮನೆಗೆ ಸೇರಿದುದಾಗಿದ್ದು ಅವರ ಮನೆಯ ವಠಾರದೊಳಗೆ ಅಂದರೆ ಪ್ರಾಕಾರದ ಒಳಗೆ ಇದ್ದಿತು. ಹಾಗಿದ್ದರೂ ಆ ದೇವಾಲಯದೊಳಗಿನ— ಗಣಪತಿಯ ನೈವೇದ್ಯಕ್ಕೆಂದು ಹಿಂದಿನ ಅರಸರು ಭೂಮಿ ದಾನಕೊಟ್ಟು ಗಣಪತಿಯ ಹೆಸರಿನಲ್ಲಿ ಶಾಸನಗಳನ್ನು ಬರೆಸಿಕೊಟ್ಟಿದ್ದರು ಮತ್ತು ಆ ಶಾಸನ ಗಳು ದೇವಾಲಯದ ಗರ್ಭಗೃಹದೊಳಗೆನೇ ಇರುತಿದ್ದವು. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯವರ ಆಳ್ವಿಕೆ ಆರಂಭವಾದ ತರುವಾಯ, ಸರಕಾರದವರು ಗಣಪತಿ ದೇವಾಲಯವಿದ್ದ ವಠಾರದೊಳಗಿಂದ ಮಾರ್ಗ ತೆಗೆಸಿದುದರಿಂದ ಈಗ ಗಣಪತಿ ದೇವಾಲಯದ ಮುಂದುಗಡೆಯಿಂದ ಮಾರ್ಗ ಬಂದು ವಠಾರವು ಎರಡು ಭಾಗವಾಗಿದೆ.

ಗಣಪತಿ ದೇವಾಲಯದ ಬಲಗಡೆಯಿಂದ ಸಾಗುವ ಮಾರ್ಗದ ಇಬ್ಬದಿ ಗಳಲ್ಲಿಯೂ ಮೊದಲು ಗೊಲ್ಲರ ಮನೆಗಳಿದ್ದುದರಿಂದ ಅದನ್ನು ಗೊಲ್ಲರಕೇರಿ ಎನ್ನುತ್ತಿದ್ದರು. ಆ ದೇವಾಲಯದ ಹಿಂದುಗಡೆಯಿಂದ ಮೊದಲುಗೊಂಡು ಬೀಬಿ–ಆಲಾಬಿಯ ಎದುರಿನ ಮಾರ್ಗದವರೆಗೆ ಸಾಗಿರುವ ಮಾರ್ಗದ ಇಬ್ಬದಿ ಗಳಲ್ಲಿಯೂ ಇರುವ ಹಿತ್ತಲುಗಳು ಪ್ರಾಚೀನಕಾಲದಲ್ಲಿ ವಾಮನಸೇನಭವರಿಗೆ ಸೇರಿದ್ದವು. ಅವರ ಸಂತತಿಯವರು ಒಂದು ಹಿತ್ತಲನ್ನು ಜೈನರಿಗೆ ಬಸ್ತಿಯನ್ನು ಕಟ್ಟಿಸಲು ಕೊಟ್ಟುದರಿಂದ ಅವರ ಮನೆತನದವರಿಗೆ ಬಸ್ತಿಗೆ ಹಿತ್ತಲು ಕೊಟ್ಟವರು ಎಂದು ಆರಂಭವಾದ ಅಡ್ಡಹೆಸರು ತರುವಾಯ ಬಸ್ತಿಯವರು ಎಂದು ಮಾರ್ಪ ಟ್ಟಿತು. ದೇವಾಲಯದ ಮುಂದುಗಡೆಯ ವಠಾರ ಹಾಗೂ ಮನೆಗಳಿರುವ ಇಡೀ ಸಾಲು ಕೆಲವೇ ವರ್ಷಗಳ ಹಿಂದಿನ ತನಕ ಬಸ್ತಿಯವರ ಕುಟುಂಬದವರಿಗೆ ಸೇರಿದ್ದವು. ಗಣಪತಿ ದೇವಾಲಯದ ಮುಂದುಗಡೆಯಲ್ಲಿರುವ ಶಿಲಾಸ್ತಂಭದ ಮೇಲಿನ ಶಾಸನದ ಒಕ್ಕಣೆಯು ಮುಂದಿನಂತಿದೆ:—

**ಸ್ವಸ್ತಿ ಶ್ರೀಮತು ಪಾಂಡ್ಯ ಚಕ್ರವರ್ತಿ ರಾಯಗಜಾಂಕುಶ ಬಂಕಿದೇವಾಳುಪೇಂದ್ರ ದೇವರ ವಿಜಯರಾಜ್ಯಮುತ್ತರೋತ್ತರಾಭಿ ವೃದ್ಧಿಪ್ರವೃದ್ಧಮಾನಮಾಚಂದ್ರಾರ್ಕತಾರಾಂಬರಂ [ಸಲುತ್ತಮಿರೆ] ದುಷ್ಟನಿಗ್ರಹ ಶಿಷ್ಟಪ್ರತಿಪಾಲಕರಾಗಿ ಸುಖಸಂಕಥಾವಿನೋದದಿಂ**

ರಾಜ್ಯಂಗೆಯ್ಯುತ್ತಮಿರ್ದ ಶಕಾಬ್ದ ೧೨೨೫ನೆಯ ಶುಭಕೃತ್ಸಂವತ್ಸರದ ಮೇಷಮಾಸ ೬ನೆಯ ಆ[ದಿತ್ಯವಾರ] ಶ್ರೀಮತು ರಾಜಧಾನಿ ಮಂಗಳಾಪುರದರಮನೆಯ ಮೊಗಸಾಲೆಯುಲ್ಲೋಲಗಂಗೊಟ್ಟಿರಲು ಮುಂನ ತಮ್ಮಡಿಯಕ್ಕ ಮೋಚಲಮಹಾದೇವಿಯವರು ಸ್ವರ್ಗಸ್ತರಾದವರ ಪಿಂಡಪ್ರದಾನದಲು ನೀರದೇವಾಲ್ಯದಲು ಬ್ರಹ್ಮ, ವಿಷ್ಣು, ಮಹೇಶ್ವರರ್ಗೆ ಕಾದು ವಾಮನನ ಕೈಯಲು ಧಾರೆಎರದ ೧೨ [ಖ]ಡು ಅಕ್ಕಿಯ ಪುಪಾರಕ್ಕೆ ಆ ದಿನ ಕಂಣೂರ ಹರವಯ್ಯಲು [ಕಟವ]ಟ್ಟವೆಂಬ ಕಳಭೂಮಿ ಬದೆಕಾರು ಮೂ ೧೨ ನೂ ೧೨ ಕುಡಿತೆಯಕ್ಕಿಯ ನಿವೇದ್ಯಕ್ಕೆ ಆ ಭೂಮಿಯ ಸಿದ್ದಾಯವನು ಕಾದು ವಾಮನಸೇವಭವಂಗೆವೂ ಆತನ ಸಂತಾನಕ್ಕೆವೂ ಕೂಡೆ ನಿವೇದ್ಯವ ನಡಿ[ಸಿ]ಕೊಂಡು ಬಾಳುವು[ದೆಂ]ದು ಧಾರೆಯನೆರದು ಕೊಟ್ಟರು. ಈ ಧರ್ಮವ ನಾನೊಬ್ಬನಹುದಲ್ಲೆಂದಡೆ ವಾರಣಾಶಿಯಲು ಸಾವಿರ ಕಪಿಲೆಯ ಕೊಂದ ಬ್ರಹ್ಮೆತ್ತಿ ನರ್ಮದೆಯಲು ಸಾವಿರ ಬ್ರಾಹ್ಮಣ ಘಾತವ ಮಾಡಿದ ಬ್ರಹ್ಮೆತ್ತಿ ಸ್ಥಾನದೊಳಗಾವ ನಾನೊಬ್ಬನಹುದಲ್ಲೆಂದೆಡೆ ಸ್ಥಾನದಿಂದ ಹೊರಗೆ. ಅರಸನಿಗೆ ಕಪ್ಪ ತೆರುವ ಗ ೫೧. ಕಣ್ಣು [ಕೈ] ಶಿ [ಸ್ತಿ] ಎನ್ದು ಬರದ ಶಿಲಾ ಸಂಕೇತಮಂ ಕೇಳ್ದ ಶ್ರೀಮದರಸರ್ಗೆ ಮಂಗಳಮಹಾ ಶ್ರೀ ॥

ಆವರಣದೊಳಗೆ ಕೊಟ್ಟಿರುವ ಅಕ್ಷರಗಳು ಶಾಸನದಲ್ಲಿ ಸವೆದುಹೋಗಿರುವುದರಿಂದ ಅವುಗಳನ್ನು ಊಹಿಸಿ ಬರೆಯಲಾಗಿದೆ. ಕೆಲವು ಶಬ್ದಗಳ ಅರ್ಥಗಳು ಮುಂದಿನಂತಿವೆ:—ತಮ್ಮಡಿಯಕ್ಕ = ೧. ಶಿವಶರಣೆ = ೨. ಶೀರ್ಷರೂಪಗಳಾದ ಮೂ = ಮೂಡೆ; ಮುಡಿ. ಗ = ಗದ್ಯಾಣ; ಹದಿನೈದು ರೂಪಾಯಿ ಬೆಲೆಯ ಚಿನ್ನದ ನಾಣ್ಯ. ಸಿದ್ದಾಯ = ಕಂದಾಯ = ತೆರಿಗೆ; ಕಾದು = ಕಾದಿರಿಸಿ; ಕಪ್ಪ = ಕಪ್ಪ.

ಶಾಸನದಲ್ಲಿನ ಶಕ ಮತ್ತು ತಿಥಿಗಳು ೧೩೦೨ನೆಯ ಇಸವಿ ಎಪ್ರೀಲ್ ಒಂದನೆಯ ತಾರೀಕಿಗೆ ಸರಿಯಾಗುತ್ತವೆ. ಭೂಮಿಯನ್ನು ದಾನವಾಗಿ ಪಡೆದ ವಾಮನಸೇನಭವರು ಅರಸನಿಗೆ ಕಪ್ಪವಾಗಿ ೫೧ ಗದ್ಯಾಣಗಳನ್ನು ಅಂದರೆ ೭೬೫

ರೂಪಾಯಿಗಳನ್ನು ಸಲ್ಲಿಸಬೇಕಾಗಿತ್ತು. ಆ ಕಾಲದಲ್ಲಿ ೭೬೫ ರೂಪಾಯಿ ಸಿದ್ಧಾಯವಿರುವ ಭೂಮಿಯು ಬಹಳ ವಿಶಾಲವಾದುದಾಗಿರಬೇಕೆಂಬುದರಲ್ಲಿ ಸಂದೇಹವಿಲ್ಲ. ಶಾಸನದಲ್ಲಿ ಹೆಸರಿಸಿದ ನೀರ ದೇವಾಲ್ಯವು ಈಗ ನೀರೇಶ್ವಾಲ್ಯ ವೆಂದು ಕರೆಯಲ್ಪಡುವ ನೀರ ಶಿವಾಲಯ ಅಥವಾ ಸೋಮನಾಥ ಲಿಂಗವಿರುವ ಶಿವಾಲಯವಾಗಿರುತ್ತದೆ. ಆ ಕಾಲದಲ್ಲಿ ಹೊಳೆಯು ದೇವಾಲಯದ ಹತ್ತಿರವೇ ಹರಿಯುತಿದ್ದಿರಬಹುದು ಮತ್ತು ಹೊಳೆಯು ದೂರಸರಿದ ತರುವಾಯ ಹೊಯಿಗೆ ಬಿಟ್ಟುದರಿಂದ ಆ ಪ್ರದೇಶವನ್ನು ಹೊಯಿಗ ಅನ್ನುತಿದ್ದರೆಂದು ಹೇಳಬಹುದು. ಹೊಳೆಯು ದೇವಾಲಯದ ಸಮೀಪದಲ್ಲಿಯೇ ಹರಿಯು ತಿದ್ದುದರಿಂದ ಅದನ್ನು ನೀರ ದೇವಾಲಯವೆನ್ನುತಿದ್ದಿರಬಹುದು. ಅಥವಾ ಮಳೆಗಾಲದಲ್ಲಿ ಹೊಳೆಯ ನೀರು ದೇವಾಲಯದ ಸುತ್ತಿನೊಳಗೂ ಬರುತಿದ್ದಿರ ಬಹುದು. ಆ ಕಾಲದಲ್ಲಿ ಆಳುಪ ಅರಸರ ಅರಮನೆಯು ಜಪ್ಪುವಿನಲ್ಲಿತ್ತು. ಈಗ ಆ ಸ್ಥಳದಲ್ಲಿ ಯುರೋಪಿಯನ್ನರ ಕ್ಲಬ್ ಇದೆ.

ಶಾಸನದಲ್ಲಿ ಬರೆದ ಪ್ರಕಾರ ಅರಸನು ಸ್ವಯಂ ನೀರದೇವಾಲಯದೊಳಗೆ ಬಂದು, ದೇವರ ಮುಂದೆ ನಿಂತು ಶಾಸನವನ್ನು ಓದಿಸಿ ಕೇಳಿದ ತರುವಾಯ ಅದನ್ನು ದಾನ ಧಾರಾಪೂರ್ವಕವಾಗಿ ವಾಮನಸೇನಭವರಿಗೆ ಒಪ್ಪಿಸಿದ್ದನೆಂದು ಸಿದ್ಧವಾಗುತ್ತದೆ.1

ಈಗ ಆ ಶಾಸನವು ಗೊಲ್ಲರಕೇರಿ ಗಣಪತಿ ದೇವಾಲಯದ ಮುಂದುಗಡೆ ಯಲ್ಲಿರುವುದರ ಮೇಲಿಂದ ಅರಸನು ಶಾಸನವನ್ನು ಧಾರೆ ಎರೆದು ಕೊಟ್ಟ ತರುವಾಯ ವಾಮನಸೇನಭವರು ಅದನ್ನು ನೀರ ದೇವಾಲಯದಿಂದ ಹೊರಿಸಿ ತಂದು ತನ್ನ ಮನೆಯ ವಠಾರದೊಳಗಿನ ಗಣಪತಿ ದೇವಾಲಯದ ಬಳಿಯಲ್ಲಿ ನಿಲ್ಲಿಸಿದ್ದರೆಂದು ಸಿದ್ಧವಾಗುತ್ತದೆ.

ಶಾಸನದಲ್ಲಿ ಉಕ್ತನಾಗಿರುವ ಅರಸನು ತನ್ನ ತಾಯಿಯಾಗಿದ್ದ ಮಹಾ ರಾಣಿ ಪೋಚಲ ಮಹಾದೇವಿಯು ಶಿವಸಾನ್ನಿಧ್ಯವನ್ನು ಸೇರಿದ ತರುವಾಯ ಶಕ ೧೨೨೫ ರಲ್ಲಿ ಪಟ್ಟಕ್ಕೆ ಬಂದ ಎರಡನೆಯ ಬಂಕಿದೇವನಾಗಿದ್ದಾನೆ. ಶಾಸನ ದಲ್ಲಿ ಉಕ್ತವಾದ ದಾನವು ಅರಸನು ತನ್ನ ತಾಯಿಯ ಶ್ರಾದ್ಧದ ದಿನ ಕೊಟ್ಟು

---

1. This epigraph, we may incidentally observe, is called a "ಶಿಲಾಸಂಕೇತ" evidently because it was an agreement arrived at by the people and the king. In fact, the last sentence invokes a blessing on the ruler who was present on the occassion. Ancient Karnataka page 132.

ದಾದುದರಿಂದಲೂ, ದಾನಕೊಟ್ಟ ಭೂಮಿಯು ಬಹಳ ವಿಶಾಲವಾಗಿದ್ದುದರಿಂದಲೂ ಅರಸನು ಸ್ವಯಂ ದೇವಾಲಯದೊಳಗೆ ಬಂದು ದಾನವನ್ನು ಧಾರೆಯೆರದು ಕೊಟ್ಟಿರುವುದರಿಂದಲೂ ದಾನ ಪಡೆದ ಬ್ರಾಹ್ಮಣನು ಸಾಮಾನ್ಯನಾಗಿರದೇ ಅರಸನ ಪುರೋಹಿತನೇ ಆಗಿರಬಹುದಾಗಿದೆ.

ಶಾಸನದಲ್ಲಿ ನೈವೇದ್ಯವನ್ನು ನಡಿಸಬೇಕಾಗಿ ಉಕ್ತವಾಗಿರುವ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರ ದೇವಾಲಯಗಳು ನೀರೇಶ್ವಾಲ್ಯದಲ್ಲಿ ಅಂದರೆ ಈಗ ಬಿದಿರಿನ ಬಂದರು ಎಂದು ಕರೆಯಲಾಗುವ ಸ್ಥಳದಲ್ಲಿ ಅರ್ಥಾತ್ ರೈಲ್ವೇಗೂಡ್ಸು ಆಫೀಸು ಇರುವ ಮಾರ್ಗದ ಬದಿಯಲ್ಲಿ ಒಂದೇ ಸಾಲಿನಲ್ಲಿ ಒಂದರಿಂದ ಮತ್ತೊಂದರ ನಡುವೆ ನೂರು ಗಜಗಳಷ್ಟು ಅಂತರ ಬಿಟ್ಟು ಇದ್ದವು. ಈಗ ಅವುಗಳಲ್ಲಿ ನೀರ ಶಿವಾಲಯ ಅಥವಾ ಸೋಮನಾಥ ದೇವಾಲಯ ಒಂದು ಮಾತ್ರ ಉಳಿದಿದೆ. ವಿಷ್ಣುವಿನ ಮತ್ತು ಬ್ರಹ್ಮನ ದೇವಾಲಯಗಳು ಜೀರ್ಣ ವಾಗಿ ಬಿದ್ದುಹೋದುದರಿಂದ ಅವುಗಳನ್ನು ನಡಿಸಿಕೊಂಡುಬರುತ್ತಿದ್ದವರು ಆ ದೇವಾಲಯಗಳ ಸ್ಥಳಗಳನ್ನು ಮಾರಿದ್ದಾರೆ. ಹೀಗಾಗಿ ಈಗ ಬ್ರಹ್ಮನ ದೇವಾಲಯವಿದ್ದ ಸ್ಥಳದಲ್ಲಿ ನಾಲ್ಕು ಅಂಗಡಿಗಳಿವೆ ಮತ್ತು ವಿಷ್ಣುವಿನ ದೇವಾಲಯವಿದ್ದ ಸ್ಥಳದಲ್ಲಿ ಪೆಟ್ರೋಲ್ ಬಂಕು ಇದೆ ಮತ್ತು ಸೋಮನಾಥ ದೇವಾಲಯವು ಚಾರೋಡಿ ವರ್ಗದವರ ಅಂದರೆ ಗೋವದಲ್ಲಿ ಚಾರಡೆ ಎಂದು ಕರೆಯಲ್ಪಡುವ ಕ್ಷತ್ರಿಯ ಜಾತಿಯವರ ವಶದಲ್ಲಿದೆ. ಆ ಶಾಸನವು ಗೊಲ್ಲರ ಗಣಪತಿ ದೇವಾಲಯದ ಮುಂದುಗಡೆಯಲ್ಲಿರುವುದನ್ನು ಮತ್ತು ಶಾಸನದಲ್ಲಿ "ನೀರ ದೇವಾಲ್ಯದಲು" ಎಂದು ಉಲ್ಲೇಖಿಸಿರುವುದನ್ನು ಕಂಡು ಕನ್ನಡ-ಇಂಗ್ಲೀಷು ಶಬ್ದಕೋಶವನ್ನು ರಚಿಸಿದ ಪಾದ್ರಿ ಕಿಟ್ಟೆಲ್ ಅವರು ತನ್ನ ಕೋಶದಲ್ಲಿ ಗಣಪತಿ ದೇವಾಲಯವನ್ನು ನೀರ ದೇವಾಲ್ಯವೆನ್ನುತ್ತಿದ್ದರೆಂದು "ಮಂಗಳಾಪುರದ" ವಿವರಣೆಯಲ್ಲಿ ಹೇಳಿದ್ದಾರೆ.

ಕಾಲಕ್ರಮೇಣ ವಾಮನ ಸೇನಭವರ ಕುಟುಂಬವು ಬೆಳೆದು ಅವರಿಗೆ ದೊರೆತ ದಾನದ ಭೂಮಿ ಮತ್ತು ಇತರ ಸ್ಥಳಗಳು ಪಾಲಾಗಿ ಕುಟುಂಬದ ಜನರಲ್ಲಿ ಹಂಚಿಹೋದವು. ಗಣಪತಿ ದೇವಾಲಯ, ಅದರ ಹಿಂದುಗಡೆಯ ಹಾಗೂ ಮುಂದುಗಡೆಯ ಹಿತ್ತಲುಗಳು ಮತ್ತು ಸ್ವಲ್ಪ ಭೂಮಿ ಹಿರಿಯ ಶಾಖೆಯವರಿಗೆ ಉಳಿಯಿತು. ಶಕ ೧೭೩೨ರಲ್ಲಿ ಹಿರಿಯ ಶಾಖೆಯಲ್ಲಿ ದಾಸಪ್ಪ ಶೆಣೈ ಎಂಬವರು ಹಿರಿಯರಾಗಿದ್ದರು. ಅವರ ತಮ್ಮಂದಿರು ಆಸ್ತಿಪಾಸ್ತಿಯ ಪಾಲುಪಡೆದುಕೊಂಡು ಬೇರೆ ಮನೆಗಳಿಗೆ ಹೋದರು. ದಾಸಪ್ಪ ಶೆಣೈ

ಯವರಿಗೆ ರುಕ್ಮಯ್ಯ ಶೆಣೈ ಎಂಬವರು ಒಬ್ಬನೇ ಮಗ ಇದ್ದ. ಶಕ ೧೭೩೯ ರಲ್ಲಿ ಅಂದರೆ ೧೮೧೭ ರಲ್ಲಿ ಇಸವಿಯಲ್ಲಿ ಈಸ್ಟ್ ಇಂಡಿಯಾ ಕಂಪನಿಯವರು ಜಾರಿ ಮಾಡಿದ ಇಂಡಿಯಾ ರೆಗ್ಯುಲೇಶನ್ ಆ್ಯಕ್ಟ್ ಮೇರೆಗೆ ದಕ್ಷಿಣ ಕನ್ನಡ ಜಿಲ್ಲೆಯ ಕಲೆಕ್ಟರರು ಜಿಲ್ಲೆಯಲ್ಲಿ ಸರಕಾರೀ ತಸದೀಕುಗಳನ್ನು ಪಡೆಯುತಿದ್ದ ಎಲ್ಲ ದೇವಾಲಯಗಳನ್ನು ಸರಕಾರದ ವಶಕ್ಕೆ ತೆಗೆದುಕೊಂಡರು. ದಾಸಪ್ಪ ಶೆಣೈ ಯವರು ಬಹಳ ಪ್ರಯತ್ನ ಪಟ್ಟರೂ ತಮ್ಮ ಮನೆತನದ ದೇವಾಲಯವನ್ನು ಕೂಡ ಹಿಂದೆ ಪಡೆಯಲು ಸಾಧ್ಯವಾಗಲಿಲ್ಲ. ಹಾಗೆಯೇ ಕೆಲವು ವರ್ಷಗಳಲ್ಲಿ ಅವರು ನಿಧನ ಹೊಂದಿದರು.

ತರುವಾಯ ದಾಸಪ್ಪ ಶೆಣೈಯವರ ಮಗ ರುಕ್ಮಯ್ಯ ಶೆಣೈ ಒಬ್ಬರೇ ಆದರು ಏಕೆಂದರೆ ಅವರ ತಾಯಿ ಮೊದಲೇ ಮರಣ ಪಟ್ಟಿದ್ದರು. ಹಾಗೆಯೇ ರುಕ್ಮಯ್ಯ ಶೆಣೈಯವರಿಗೆ ಬಂಟವಾಳದ ಜಡ್ಡು ಬಾಳಿಗರ ಮನೆಯ ಕನ್ಯೆ ಯೊಂದಿಗೆ ವಿವಾಹವಾಗಿ, ಅವರು ತನ್ನ ಮನೆಯಲ್ಲಿ ಒಬ್ಬನೇ ಉಳಿಯುವುದ ಕ್ಕಿಂತ ಬಂಟವಾಳಕ್ಕೆ ಹೋಗಿ ವ್ಯಾಪಾರ ಮಾಡುವುದೊಳಿತೆಂದೆಣಿಸಿ, ಗಣಪತಿ ದೇವಾಲಯದ ಹಿಂದುಗಡೆಯಲ್ಲಿದ್ದ ಮನೆಯನ್ನೂ, ಮುಂದುಗಡೆಯಲ್ಲಿದ್ದ ಹಿತ್ತಲನ್ನೂ ಶ್ರೀಮಾನ್ ಮುಂಡಪ್ಪ ಬಂಗೇರರ ಹಿರಿಯರಿಗೆ ಮಾರಿ ಬಂಟವಾಳಕ್ಕೆ ಹೋಗಿ ನೆಲಸಿದರು. ಮತ್ತು ಭಂಡಸಾಲೆಯನ್ನು ತೆರೆದು ಅಕ್ಕಿಯ ವ್ಯಾಪಾರ ವನ್ನು ಮಾಡತೊಡಗಿದರು.

ಮುಂದೆ ಶಕ ೧೭೬೭ ರಲ್ಲಿ ಅಂದರೆ ೧೮೪೫ ನೆಯ ಇಸವಿಯಲ್ಲಿ ಜಿಲ್ಲೆಯ ಕಲೆಕ್ಟರರು ಸರಕಾರದ ವಶದಲ್ಲಿದ್ದ ದೇವಾಲಯಗಳನ್ನು ಒಂದೊಂದಾಗಿ ಇಲ್ಲವೇ ಎರಡೆರಡಾಗಿ—ವಿಶ್ವಸ್ಥರನ್ನು ನೇಮಿಸಿ ಅವರ ವಶಕ್ಕೆ ಬಿಟ್ಟು ಕೊಡತೊಡಗಿ ದರು. ಆಗ ಮಂಗಳೂರಲ್ಲಿದ್ದ ಬಸ್ತಿಕಾರರಲ್ಲಿ ಒಬ್ಬನಿಗಾದರೂ ತಮ್ಮ ಹಿರಿಯರ ದೇವಾಲಯಗಳನ್ನು ಸರಕಾರದವರು ವಶಪಡಿಸಿಕೊಂಡ ವಿಷಯದಲ್ಲಿ ಸರಿಯಾದ ಮಾಹಿತಿ ಇಲ್ಲದುದರಿಂದ ಹಾಗೂ ಬಂಟವಾಳಕ್ಕೆ ಹೋದ ರುಕ್ಮಯ್ಯ ಶೆಣೈ ಯವರಿಗೆ-ಕಲೆಕ್ಟರರು ದೇವಾಲಯಗಳನ್ನು ಬಿಟ್ಟು ಕೊಡುವ ಸುದ್ದಿಯು ತಲ ಪದುದರಿಂದ, ಬಸ್ತಿಯವರದಾಗಿದ್ದ ನಾಲ್ಕು ದೇವಾಲಯಗಳು ಪರರ ವಶ ವಾದವು. ಅಂದರೆ ನೀರೇಶ್ವಾಲ್ಯದಲ್ಲಿದ್ದ ಮೂರು ದೇವಾಲಯಗಳು ಮತ್ತು ಬೇರೆ ಕೆಲವು ದೇವಾಲಯಗಳು ಅತ್ತಾವರ ರಾಮರಾಯರ ಹಿರಿಯರು ವಿಶ್ವಸ್ಥ ರಾದುದರಿಂದ ಅವರ ವಶವಾದುವು. ಗೊಲ್ಲರ ಕೇರಿಯ ಗಣಪತಿಯ ದೇವಾಲಯವನ್ನು ಅಲ್ಲಿಯೇ ಹತ್ತಿರ ಮನೆಯಿದ್ದ ಒಬ್ಬ ಗೊಲ್ಲ ವಹಿಸಿಕೊಂಡ

ಆ ತರುವಾಯದಿಂದ ಆ ದೇವಾಲಯವು ಗೊಲ್ಲರ ಗಣಪತಿಯ ದೇವಾಲಯವೆಂದು ಹೆಸರಾಯಿತು. ರುಕ್ಮಯ್ಯ ಶೆಣೈಯವರು ಮಾರಿದ ಸ್ಥಳದಲ್ಲೀಗ ಎರಡು ದೊಡ್ಡ ದೊಡ್ಡ ಬಂಗಲೆಗಳಿವೆ. ಮತ್ತು ಅವುಗಳನ್ನು ಮುಂಡಪ್ಪ ಬಂಗೇರರ ಬಂಗ್ಲೆಗಳೆನ್ನುತ್ತಾರೆ.

ಮುಂದೆ ಶಕ ೧೭೮೫ರಲ್ಲಿ ಅಥವಾ ೧೮೬೩ನೆಯ ಇಸವಿಯಲ್ಲಿ ಜಿಲ್ಲೆಯ ಕಲೆಕ್ಟರರು ವಿಶ್ವಸ್ತರಿಗೆ ವಹಿಸಿಕೊಟ್ಟ ದೇವಾಲಯಗಳನ್ನು ಜಾತಿವಾರು ಗುಂಪುಗಳನ್ನಾಗಿ ಮಾಡಿ, ಆಯಾ ಜಾತಿಯವರಿಗೆ ಸೇರಿದ ದೇವಾಲಯಗಳ ವಿಶ್ವಸ್ಥರನ್ನು ನೇಮಿಸುವ ಅಧಿಕಾರವನ್ನು ಆಯಾ ಜಾತಿಯವರ ಸಮಿತಿಯನ್ನು ಸ್ಥಾಪಿಸಿ ಆ ಸಮಿತಿಗೆ ವಹಿಸಿಕೊಟ್ಟರು. ಸಾರಸ್ವತ ಬ್ರಾಹ್ಮಣರದಾಗಿದ್ದ ದೇವಾಲಯಗಳ ವಿಶ್ವಸ್ಥರನ್ನು ನೇಮಿಸುವ ಅಧಿಕಾರವು ಸಾರಸ್ವತರ ಸಮಿತಿಗೆ ಬಂತು. ಆ ಕಾಲದಲ್ಲಿ ಗೊಲ್ಲರ ಗಣಪತಿ ದೇವಾಲಯದ ವಿಶ್ವಸ್ಥನು ಗೊಲ್ಲನೇ ಆಗಿದ್ದರೂ, ಆ ದೇವಾಲಯವು ಸಾರಸ್ವತ ಬ್ರಾಹ್ಮಣರದಾಗಿದ್ದುದರಿಂದ ಅದರ ಮೇಲಿನ ಅಧಿಕಾರವು ಸಾರಸ್ವತರ ಸಮಿತಿಗೆ ಬಂದಿತ್ತು. ೧೯೦೫ನೆಯ ಇಸವಿಯಲ್ಲಿ ಸಾರಸ್ವತರ ಸಮಿತಿಯಲ್ಲಿ ಶ್ರೀಯುತರುಗಳಾದ ಬೇಂಕ್ ನಾರಾಯಣ ಪೈ; ವಕೀಲ ರಂಗಪ್ಪ ಭಾಂಡಾರಿ. ಮತ್ತು ವಕೀಲ ಅಡಿಗೆ ಶ್ರೀನಿವಾಸರಾಯ ಎಂಬ ಮೂವರು ಸದಸ್ಯರಿದ್ದರು. ಮತ್ತು ಜಿಲ್ಲಾ ನ್ಯಾಯಾಲಯದಲ್ಲಿ ಅಟೆಂಡರ್ ಆಗಿದ್ದ ಗೊಲ್ಲ ಮಂಜಯ್ಯ ಎಂಬವರು ಗಣಪತಿ ದೇವಾಲಯದ ವಿಶ್ವಸ್ಥರಾಗಿದ್ದರು ಆ ದೇವಾಲಯವು ಜೀರ್ಣವಾಗಿ ಅದರ ಒಂದು ಮೂಲೆಯು ಕುಸಿದಿತ್ತು. ಗೊಲ್ಲ ಮಂಜಯ್ಯನವರಿಂದ ದೇವಾಲಯದ ಜೀರ್ಣೋದ್ಧಾರವು ಸಾಧ್ಯವಿಲ್ಲದುದರಿಂದ ಅವರು ಆ ದೇವಾಲಯವನ್ನು ಸಾರಸ್ವತರ ಸಮಿತಿಗೆ ಒಪ್ಪಿಸಿದರು. ಸಮಿತಿಯವರು ಆ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸುವ ಶಕ್ತಿಯುಳ್ಳ ಒಬ್ಬ ಸಾರಸ್ವತ ಬ್ರಾಹ್ಮಣನಿಗೆ ವಹಿಸಿಕೊಟ್ಟರು. ಆ ಬ್ರಾಹ್ಮಣ ದೇವರ ಗರ್ಭಗುಡಿಯನ್ನು ಜೀರ್ಣೋದ್ಧಾರ ಮಾಡಿ ಪೂಜೆ-ನೈವೇದ್ಯ ಮೊದಲಾದವುಗಳನ್ನು ನಡಿಸಿ ಬರುತಿದ್ದ. ಅದು ಸುಸೂತ್ರವಾಗಿ ಸಾಗತೊಡಗಿದ ಹಾಗೆಯೇ ಗೊಲ್ಲ ಮಂಜಯ್ಯನವರ ಮಗ ದಾಸಪ್ಪ ಎಂಬವರು ಗಣಪತಿ ದೇವಾಲಯವು ತನ್ನ ಹಿರಿಯರದಾದುದರಿಂದ ಅದು ತನಗೆ ಸಿಗಬೇಕೆಂದು ಪ್ರಾರ್ಥಿಸಿ ಮಂಗಳೂರಿನ ಮತ್ತು ಮದ್ರಾಸಿನ ನ್ಯಾಯಾಲಯಗಳಲ್ಲಿ ಅರ್ಜಿ ಸಲ್ಲಿಸಿ ವ್ಯಾಜ್ಯ ಹೂಡಿದ್ದರು. ಆದರೆ ಅವರಿಗೆ ಎರಡು ಕಡೆಗಳಲ್ಲಿಯೂ ಅಪಜಯವಾಯಿತು. ಈಗ ಬಸ್ತಿಕಾರರ ಸಂಬಂಧಿಕರೂ, ವೇದವೇದಾಂಗಪಾರಂಗತರೂ, ಆಗಿರುವ ಮಂಜೇಶ್ವರದ ಕೇಶವ

ಭಟ್ಟರು ಆ ದೇವಾಲಯದ ಹೊರಭಾಗವನ್ನು ಉತ್ತಮ ರೀತಿಯಿಂದ ಕಟ್ಟಿಸಿ ದೇವಾಲಯವನ್ನು ಚಲೋರೀತಿಯಿಂದ ನಡಿಸಿಕೊಂಡು ಬರುತಿದ್ದಾರೆ.

ಇನ್ನು ಗಣಪತಿ ದೇವಾಲಯದ ವಿಷಯವನ್ನು ಹೇಳುವುದಾದರೆ ಅದರ ಹೆಸರು "ಗಣಪತಿ ದೇವಾಲಯ" ಎಂದಿದ್ದರೂ ದೇವಾಲಯದ ಒಳಗೆ ಸಾಧಾರಣ ಇನ್ನೂರೈವತ್ತು ವರ್ಷಗಳಿಂದಲೇ ಗಣಪತಿಯ ವಿಗ್ರಹ ಇಲ್ಲವಾಗಿದೆ. ಕಾರಣ ವೇನೆಂದರೆ ಆ ದೇವಾಲಯದಲ್ಲಿ ದೇವರ ಪೂಜಾದಿಗಳನ್ನು ನೆರವೇರಿಸುತಿದ್ದ ವಾಮನಸೇನಭವರ ಸಂತತಿಯವರು ಮುಂದೆ ವೈದಿಕ ವೃತ್ತಿಯನ್ನು ತೊರೆದು ವ್ಯಾಪಾರವನ್ನು ಕೈಗೊಂಡುದರಿಂದ ತಮ್ಮ ದೇವಾಲಯದಲ್ಲಿನ ಗಣಪತಿಯ ಪೂಜೆಯನ್ನು ಮಾಡಲು ಸ್ವಜಾತಿಯ ಬ್ರಾಹ್ಮಣನು ಸಿಗದಿರಲಾಗಿ ಪರಜಾತಿಯ ಬ್ರಾಹ್ಮಣನನ್ನು ಅರ್ಚಕನನ್ನಾಗಿ ನೇಮಿಸಿದ್ದರು. ಅವನು ಕ್ರಮವಾಗಿ ಪೂಜೆ-ಅರ್ಚನೆಗಳನ್ನು ಮಾಡಿಕೊಂಡು ಬರುತಿದ್ದ. ಹಾಗೆಯೇ ಅವನಿಗೆ ದೇವಾಲಯದ ಗರ್ಭಗೃಹದೊಳಗೆ ಗಣಪತಿಯ ಹೆಸರಿನಲ್ಲಿ ನೈವೇದ್ಯಕ್ಕಾಗಿ ಭೂಮಿಯನ್ನು ದಾನ ಮಾಡಿ ಬರಸಿದ ಶಾಸನಗಳಿರುವ ಗುಟ್ಟು ಗೊತ್ತಾಯಿತು. ಆಗ ಅವನ ಮನಸ್ಸಿನಲ್ಲಿ ಲೋಭ ಅಂಕುರಿಸಿತು. ಅಲ್ಲದೇ ಅದು ಸ್ಥಾನಿಕರ ವಶದಲ್ಲಿದ್ದ ದೇವಾಲಯಗಳನ್ನು ಕಸಿದುಕೊಳ್ಳುವ ಕಾಲವಾಗಿತ್ತು. ಹೀಗಾಗಿ ಅವನು ಆ ಉಂಬಳಿ ಭೂಮಿಗಳನ್ನು ಕಬಳಿಸುವ ಸಂಚನ್ನು ನಡಿಸತೊಡಗಿದ. ಆದರೆ ದೇವಾಲಯವು ಬಸ್ತಿಯವರ ಮನೆಯ ವಠಾರದೊಳಗೆನೇ ಇದ್ದುದರಿಂದ ಅದನ್ನು ತನ್ನದೆಂದು ಹೇಳಲು ಸಾಧ್ಯವಿರಲಿಲ್ಲ. ಹೀಗಾಗಿ ಆ ಅರ್ಚಕನು ಗಣಪತಿಯ ವಿಗ್ರಹವನ್ನೇ ಹೊತ್ತುಕೊಂಡು ಹೋಗುವ ಯೋಚನೆಮಾಡಿದ. ಮತ್ತು ಅವನು ಒಂದು ದಿನ ರಾತ್ರಿಯ ಪೂಜೆಯನ್ನು ಮುಗಿಸಿ ಹೋಗುವಾಗ ಗರ್ಭಗ್ರುಹಕ್ಕೆ ಬೀಗ ಹಾಕದೆನೇ ಬೀಗದ ಕೈಯನ್ನು ಮನೆಯವರಿಗೆ ಕೊಟ್ಟುಹೋದ. ಹಾಗೂ ನಡುರಾತ್ರಿಯಲ್ಲಿ ಸದ್ದಿಲ್ಲದೇ ಗುಡಿಯನ್ನು ಹೊಕ್ಕು ಗಣಪತಿಯ ವಿಗ್ರುಹವನ್ನೂ, ಗಣಪತಿಯ ಹೆಸರಿನಲ್ಲಿದ್ದ ಶಾಸನಗಳನ್ನೂ ಎತ್ತಿಕೊಂಡು ಪರಾರಿಯಾದ. ಮರುದಿನ ಎಂದಿನಂತೆ ಬೀಗದ ಕೈಯನ್ನು ಒಯ್ಯಲು ಅರ್ಚಕನು ಬರದಿರಲಾಗಿ ಮನೆಯವರು ದೇವಾಲಯದ ಬಳಿಗೆ ಹೋಗಿ ನೋಡಿದಾಗ ಗುಡಿಯ ಬಾಗಿಲು ತೆರೆದಿತ್ತು, ಮತ್ತು ಸಿಂಹಾಸನದ ಮೇಲೆ ಗಣಪತಿ ಇರಲಿಲ್ಲ. ಗುಡಿಯೊಳಗಿದ್ದ ಶಾಸನಗಳೂ ಇರಲಿಲ್ಲ. ಆಗ ರಾಜ್ಯದಲ್ಲೆಲ್ಲಾ ಅವ್ಯವಸ್ಥೆ ಹಬ್ಬಿತ್ತು. ದೂರನ್ನು ಕೇಳುವವರೇ ಇರಲಿಲ್ಲ. ದೂರುಕೊಟ್ಟರೂ ನ್ಯಾಯಸಿಗುವಂತಿರಲಿಲ್ಲ. ಹೀಗಾಗಿ ಅರ್ಚಕನನ್ನು ಹಿಡಿಯಲು ಸಾಧ್ಯವಾಗಲಿಲ್ಲ. ಆ ತರುವಾಯ ಮನೆಯವರು ಮಂಗಳೂರಿನ

ಕೋಟೆಯೊಳಗೆ ಹಾಳುಬಿದ್ದ ಗುಡಿಯೊಳಗಿನ ಮಾರುತಿಯ ವಿಗ್ರಹವನ್ನು ಹೊತ್ತು ತಂದು ಅದಕ್ಕೆ ವಿಧಿಪೂರ್ವಕ ಅಭಿಷೇಕ, ಹೋಮ-ಹವನ ಮೊದಲಾದವುಗಳನ್ನು ಜರಗಿಸಿದ ತರುವಾಯ ಗಣಪತಿಯ ಸಿಂಹಾಸನದಲ್ಲಿ ಪ್ರತಿಷ್ಠಿಸಿದರು. ಮತ್ತು ಸ್ವಜಾತಿಯ ಬ್ರಾಹ್ಮಣನನ್ನು ಹುಡುಕಿತಂದು ಅರ್ಚಕನನ್ನಾಗಿ ನೇಮಿಸಿದರು. ಅಂದಿನಿಂದ ಆ ದೇವಾಲಯದಲ್ಲಿ ಗಣಪತಿಯ ಬದಲಿಗೆ ಮಾರುತಿ ಇದ್ದಾನೆ.

ಕೆಲವು ವರ್ಷಗಳ ತರುವಾಯ ಪರಾರಿಯಾದ ಆ ಅರ್ಚಕನು ಗಣಪತಿ ವಿಗ್ರಹದೊಂದಿಗೆ ಮಂಗಳೂರಿಗೆ ಬಂದು ಆ ವಿಗ್ರಹವನ್ನು ಬೇರೊಂದು ಶಿವಾಲಯದಲ್ಲಿ ಸ್ಥಾಪಿಸಿ ಉಂಬಳಿ ಭೂಮಿಗಳ ಉತ್ಪತ್ತಿಯನ್ನು ಪಡೆಯತೊಡಗಿದ್ದನೆನ್ನುತ್ತಾರೆ.

ಹಿಂದೆ ವಿವರಿಸಿದಂತೆ ಸಾರಸ್ವತ ಬ್ರಾಹ್ಮಣರಿಗೆ ಸೇರಿದ ಗಣಪತಿ, ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ಎಂಬ ನಾಲ್ವರು ದೇವರ ಆಲಯಗಳೂ ಮಂಜೇಶ್ವರದಲ್ಲಿನ ಶ್ರೀಮದನಂತೇಶ್ವರ ದೇವಾಲಯವೂ ಶಕದ ಹದಿಮೂರನೆಯ ಶತಮಾನಕ್ಕಿಂತ ಮೊದಲೇ ತುಳುನಾಡಿನಲ್ಲಿದ್ದವೆಂದು ಸಿದ್ಧವಾಗುತ್ತದೆ. ಅಲ್ಲದೇ ಆಳುಪವಂಶದ ಅರಸರು ಆ ದೇವರುಗಳ ನೈವೇದ್ಯಕ್ಕಾಗಿ ಭೂಮಿಯನ್ನು ದಾನಮಾಡಿರುವುದರ ಮೇಲಿಂದ ಹಾಗೂ ಬೇರೆ ಕೆಲವು ಶಾಸನಗಳಲ್ಲಿನ ಉಲ್ಲೇಖಗಳ ಮೇಲಿಂದ ಆಳುವಂಶದ ಅರಸರು ಸಾರಸ್ವತ ಬ್ರಾಹ್ಮಣರ ಆಶ್ರಯದಾತರಾಗಿದ್ದರೆಂದು ಸಿದ್ಧವಾಗುತ್ತದೆ.

ಎರಡನೆಯ ಬಂಕಿದೇವಾಳುಪೇಂದ್ರನ ತರುವಾಯ ಪಟ್ಟಕ್ಕೆ ಬಂದ ಸೋಯಿದೇವ ಆಳುಪೇಂದ್ರನ ಶಾಸನಗಳಲ್ಲಿ ಮಹಾಪ್ರಧಾನ ಸೋವಣ್ಣ ಸೇನಬೋವ ಹಾಗೂ ಸಿಂಗಣ್ಣಸಹಣಿ ಎಂಬ ಹೆಸರುಗಳು ಸಾರಸ್ವತ ಬ್ರಾಹ್ಮಣರವಾಗಿವೆ. ಈಗ ದಕ್ಷಿಣಕನ್ನಡ ಜಿಲ್ಲೆಯಲ್ಲಿ "ಸಹಣಿ" ಉಪನಾಮದ ಸಾರಸ್ವತ ಬ್ರಾಹ್ಮಣರ ಮನೆಗಳು ಇಲ್ಲವಾದರೂ ಬೇರೆ ಕಡೆಗಳಲ್ಲಿ ಇವೆ. ಅವರು ಈಗ ಸಹಣಿ ಅಥವಾ ಸಹನಿ ಎಂಬ ಉಪನಾಮವನ್ನು ಸೊಹೊನಿ ಇಲ್ಲವೇ ಸವನಿ ಎಂಬ ರೂಪದಲ್ಲಿ ಬಳಸುತ್ತಾರೆ. ಇತ್ತೀಚೆಗೆ ಮರಾಠಿಯಲ್ಲಿ "ಗೌಡಸಾರಸ್ವತ ಬ್ರಾಹ್ಮಣಾಂಚಾ ಇತಿಹಾಸ್" ಎಂಬ ಪುಸ್ತಕವನ್ನು ಪ್ರಕಟಿಸಿದ ಮಹನೀಯರ ಹೆಸರು ಶ್ರೀಯುತ ರಾಮಚಂದ್ರ ನರಹರ ಸೋಹನಿ ಎಂದಿದೆ.

# ಉಪಸಂಹಾರ

ಸಾರಸ್ವತ ಬ್ರಾಹ್ಮಣರು ದಕ್ಷಿಣ ಭಾರತಕ್ಕೆ ವಲಸೆ ಬಂದುದರ ಉದ್ದೇಶವು ವೈದಿಕ ಧರ್ಮವನ್ನು ಪ್ರಚಾರಮಾಡುವುದಾಗಿತ್ತು. ಮತ್ತು ಅವರು ತಮ್ಮ ಉದ್ದೇಶವನ್ನು ಪೂರ್ಣ ರೀತಿಯಲ್ಲಿ ಸಾಧಿಸಿ ಜಯಪಡೆದಿದ್ದಾರೆ. ಹದಿನೆರಡನೆಯ ಶನಮಾನದ ತರುವಾಯ ಜೈನ ಹಾಗೂ ಬೌದ್ಧ ಧರ್ಮದವರ ಪ್ರಭಾವದಿಂದಾಗಿ ವೈದಿಕ ಧರ್ಮದ ಸ್ವರೂಪವು ಕೊಂಚ ಮಾರ್ಪಟ್ಟಿತಾದರೂ ಅದು ತನ್ನ ಮುಖ್ಯ ಲಕ್ಷಣಗಳನ್ನು ಹೆಚ್ಚಿನ ಅಂಶಗಳಲ್ಲಿ ಉಳಿಸಿಕೊಂಡಿದೆ. ಜೈನ ಧರ್ಮದ ತತ್ವಗಳಿಂದ ಪ್ರಭಾವಿತರಾದ ಬ್ರಾಹ್ಮಣರ ಅಪಪ್ರಚಾರದಿಂದಾಗಿ ದಕ್ಷಿಣ ಭಾರತದಲ್ಲೀಗ ಸಾರಸ್ವತ ಬ್ರಾಹ್ಮಣರ ಧಾರ್ಮಿಕ ಗೌರವವು ಕೊಂಚ ಕುಗ್ಗಿದೆಯಾದರೂ ಅವರು ಇಚ್ಛಿಸಿದಲ್ಲಿ ಮೊದಲಿಗಿಂತಲೂ ಹೆಚ್ಚಿನ ಗೌರವವನ್ನು ಪಡೆಯುವುದು ಅವರಿಗೆ ಕಠಿನವಾಗಲಾರದು. ಅಂದರೆ ಸಾರಸ್ವತ ಬ್ರಾಹ್ಮಣರು ಇತರರಿಗಿಂತ ಹೆಚ್ಚು ಪ್ರಗತಿಪರರಾಗಿರುವುದರಿಂದ ಅವರು ಕಾರ್ಯರಂಗವನ್ನು ಪ್ರವೇಶಿಸಿದರೆ ಅವರು ಪ್ರಾಚೀನ ಕಾಲದಲ್ಲಿ ಮಾಡಿದಂತೆಯೇ ಹಿಂದೂ ಸಮಾಜದಲ್ಲಿ ಹಿಂದುಳಿದ ಜನರನ್ನು ಸಂಘಟಿಸಿ ಅವರಲ್ಲಿ ಧರ್ಮಪ್ರಚಾರಮಾಡಿ ಹಿಂದೂ ಸಮಾಜದಲ್ಲಿನ ಜಾತೀಯ ಅಸಮಾನತೆಯನ್ನು ಅಂದರೆ ಜಾತಿಭೇದವೆಂಬ ಗೋಡೆಗಳನ್ನು ಕೆಡವಿ ಸಕಲ ಹಿಂದೂಗಳನ್ನು ಏಕಜಾತಿ ಮತ್ತು ಏಕಧರ್ಮವೆಂಬ ಬಲವಾದ ಸೂತ್ರದಿಂದ ಕಟ್ಟಬಹುದಲ್ಲದೇ ಇತರರನ್ನು ಕೂಡ ನಮ್ಮ ಸರಿಸಮಾನರೆಂಬ ಭಾವನೆಯಿಂದ ನಮ್ಮಲ್ಲಿ ಸೇರಿಸಿಕೊಂಡು ಭಾರತವರ್ಷವನ್ನು ಜಗತ್ತಿನಲ್ಲಿಯೇ ಬಲಾಢ್ಯವಾದ ರಾಷ್ಟ್ರವನ್ನಾಗಿ ಮಾಡಬಹುದು ಹಾಗೂ ಪ್ರಾಚೀನ ಕಾಲದಂತೆಯೇ ಹಿಂದೂಧರ್ಮವನ್ನು ದೂರದೂರದ ದೇಶಗಳಲ್ಲಿ ಹರಡಬಹುದು. ದೇವರು ಸಾರಸ್ವತ ಬ್ರಾಹ್ಮಣರಿಗೆ ಧನಸಂಪತ್ತನ್ನೂ, ವಿದ್ಯಾಸಂಪತ್ತನ್ನೂ, ಕರುಣಿಸಿದ್ದಾನೆ. ಅವನು ಅವರಿಗೆ ಆ ಸಂಪತ್ತುಗಳನ್ನು ದೇಶೋದ್ಧಾರದ ಹಾಗೂ ಧರ್ಮೋದ್ಧಾರದ ಕಾರ್ಯಗಳಲ್ಲಿ ವಿನಿಯೋಗಿಸುವಂಥ ಸ್ಫೂರ್ತಿಯನ್ನು ಕೊಡಲೆಂದು ಪ್ರಾರ್ಥಿಸಿ ಈ ಲೇಖನವನ್ನು ಮುಗಿಸುವೆನು—

ಇತಿ ಶಮ್.

# ಪರಿಶಿಷ್ಟ

Chaunda Madhava, as he has been called to distinguish him from the two others, was also a Vedic Scholar, but unlike Mayana Madhava, also exercised secular authority as a warrior and minister. According to one record dated 1347 A D., he was born a "pilot" who by the power of his wisdom is said to have overreached "Brihaspati." He is further spoken of as the conqeuror of foreign countries for Marapa (E. C. VIII Sorab 375) The reference apparently is to the conquest of Goa effected by him for Marapa (I. A. VI, 162 f. n. 11) He was in charge of Jayanti (or Kadamba) country and was Marapas minister. From another inscription dated in 1368 A D., which records a grant by Madhava himself, we learn he was the minister of Bukka I (E. C. VIII Sikarpur 281) He apparently became the minister of Bukka I when the latter ascended the throne in succession to Harihara I, about 1353 A D., This record seems to suggest that his valour though a "holy man" was so great that obtained recognition at his sovereigns hands. He was ordered about 1368 A D. the date of the record, to accept the charge of the Government as far as the western ocean. This is confirmed by an inscription dated in 1371 A D. which tells us that Madhava was the governor of Banavasi, that he defeated the Turuskas ( = Mohammadans) and wrested Goa from them and that he made a grant in that year to twenty four learned Brahmans, who co-operated with him in the composition of works bearing his name. (page 1443).

Another grant connected with his name is that recorded in Goa, copperplates above referred to, which mention the gift of a village by him in his mother's name naming it Machalapura. A lithic inscription at Balihalli dated in 1369 A.D., a grant in his own favour during the reign of Buuka I,

while it would appear from another record at the same place (E. C. VI Koppa 6) dated in the same year that he was governor of Araga and other places which were in charge of Marapa and that he had a son named Boltarasa (See M. A. R. 1916 para 93).

Page 1474. A more famous minister and general, who was governor of Araga and other places forming the western part of the kingdom, was Madarasa-Odeyar, identical with Chaunda Madhava, the great upanishadic scholar and Saiva author already referred to. He served under Bukka I also. He was still alive in 1384 A. D., (E. C. VII Tirthahalli 147) though in 1377 A. D., we hear of Virupaksha-Raya I a younger brother of Harihara II, succeeding him in the governorship of Araga (E. C. VI Koppa 19) if this is so, Madhava should have been the minister and Virupaksha (Virappanna) the viceroy, for in 1384 A. D., Madhava is referred to as making grants in Araga. (E. C. VIII Tirthahalli 147) A few facts about Chaunda Madhava may be noted here. From the inscriptions quoted above, ranging in date from 1347 A. D. to 1384 A. D., he should have lived throughout the reigns of Harihara I and Bukka I and for a time during the reign of Harihara II as well, In the earliest inscription dated in 1347 A. D. (E. C. VII sorab 375) when Harihara I was living, Madhava appears as the Minister of Marapa, who had "aquired a kingdom in the west" with Chandragutti as its capital, It is stated that Marapa obtained him as Bhargava had obtained Sankara. Madhava is here described as the desciple of Kriyasakti who was Tryambaka himself, and as "the great minister" who was born a pilot to the great king. (Marapa) "floating in the ocean of the kingdom." In the power of his wisdom he could, it is said, over-reach Brihaspati. In the next important inscription dated in 1368 A. D.) in the reign of Bukka I we have some more notable detailes about Mabhava (E. C. VII Shikaripur 281) He is

described as the son of Chaunda, an austere ascetic Brahman of the Angirasa gotra, and that through the astonishing favour of his guru, Kasivilasa Kriyasakti, he gained celebrity as a saiva. By his masterful energies, he subdued this world and the next, and was speedily the conqueror of many countries on the shores of the western ocean. "What more could be said in his praise"! exclaims the learned Phanisitu, the composer of the inscription. Bukka I, on ascending the throne, committed the government as far as the western ocean to him. Madhava, in order that his overseeing of that part of the kingdom, might be without trouble, on the advice of his guru Kriyasakti worshipped his favourite linga Tryambakanatha by means of special ceremonies and by a number of rites and practices as prescribed in the Saivagama. Then in order to complete the great vow which he had commenced with special rites a year before in accordance with the directions of the Siva-saṇdhya, he requested the king's permission to make the grant of a village, but explained that it must be acquired from his own funds. Leave being granted, he purchased "at the price of the day", a village in his own province "with" we are told "the knowledge of the authorities of the mandala" and divided it into 80 shares and bestowed the same on Kashmir Brahmans "pre-eminent by their virtues and the country of their birth" travellers to the farthest point of the Chārāyaniya-aticharanāmnāya daily observers of all the rites appointed in the pure Sivamnāya, ever devoted to the worship of Astamurti". Madhava is further described as distinguished for policy and courage and as renounced in the world for his good qualities. It is said he was invested with authority for punishing the evil and with Brahman purity and Kshatra victorious power for protecting the earth from fear. He was undoubtedly as great in leading armies to success on the battle-field as in the conducting the civil administration of the country.

That he was a devout saiva and a great scholar and author is also evident. His grant to Kashmir Brahmans evidently of the Pasupata sect and resident in the Mysore country, shows that he was either an immigrant Kashmir Brahman himself or preferred Kashmir Brahmans as his donees because of his guru Kriyasakti who was obviously the head of the Pasupata sect at the time. Kriyasakti mentioned as his guru, appears to have been the family-guru of Vijayanagar kings of the first dynasty from Harihara I downwards. He probably belonged to the Lākuālāgama school and was a strict Saiva. The next inscription mentioning Madhava is one dated in 1384 A. D. (E. C. VIII Tirthahalli 147). This takes us into the reign of Harihara II. He was still the administrator of the western part of the kingdom including Araga and the other provinces. Seeing that we have no further trace of him, probably it has to be presumed that he died not long after. His son Boltarasa has been referred to above. Chaunda, father of Madhava, is, it will be seen (from E. C. VIII Shikaripur 281) described as "an austere ascetic". The Goa copper plates speak of him as Chaundi Bhatta and mention his mother's name as "Machāmbika".

# ಭಾಷಾವಿಭಾಗದ ಸಹಾಯಕ ಗ್ರಂಥಗಳು


| | | |
|---|---|---|
| ೧. | The Early History of the Deccan | Sri R. G. Bhandarkar M.A |
| ೨. | ಜ್ಞಾನೇಶ್ವರೀ (ಗೀತಾವ್ಯಾಖ್ಯಾನ) | ಸಂತಜ್ಞಾನೇಶ್ವರ |
| ೩. | ಸೇತುಬಂಧ ಕಾವ್ಯ (ಪ್ರಾಕೃತ) | ಮಹಾರಾಜ ಪ್ರವರಸೇನ |
| ೪. | ಕಾವ್ಯಾದರ್ಶ | ಮಹಾಕವಿ ದಂಡಿ |
| ೫. | ಹರ್ಷಚರಿತ | ಮಹಾಕವಿ ಬಾಣ |
| ೬. | ಸ್ವಪ್ನವಾಸವದತ್ತಮ್ | ಮಹಾಕವಿ ಭಾಸ |
| ೭. | ಅಭಿಜ್ಞಾನ ಶಾಕುಂತಲಮ್ | ಮಹಾಕವಿ ಕಾಳಿದಾಸ |
| ೮. | ಮಾಲವಿಕಾಗ್ನಿ ಮಿತ್ರಮ್ | ಮಹಾಕವಿ ಕಾಳಿದಾಸ |
| ೯. | ವಿಕ್ರಮೋರ್ವಶೀಯಮ್ | ಮಹಾಕವಿ ಕಾಳಿದಾಸ |
| ೧೦. | ಮೃಚ್ಛಕಟಿಕಮ್ | ಮಹಾಕವಿ ರಾಜಾ ಶೂದ್ರಕ |
| ೧೧. | ಮುದ್ರಾರಾಕ್ಷಸ | ಮಹಾಕವಿ ವಿಶಾಖದತ್ತ |
| ೧೨. | ಉತ್ತರ ರಾಮಚರಿತಮ್ | ಮಹಾಕವಿ ಭವಭೂತಿ |
| ೧೩. | The Inscriptions of Asoka | Sri D. R Bhandarkar M.A. |
| ೧೪. | ವೈದಿಕವ್ಯಾಕರಣಮ್ | ಶ್ರೀ ಉಮೇಶಚಂದ್ರ ಪಾಂಡೇಯ |
| ೧೫. | ಸಿದ್ಧಾಂತ ಕೌಮುದೀ | ಮಹಾಮಹೋಪಾಧ್ಯಾಯ ಭಟ್ಟೋಜೀ ದೀಕ್ಷಿತ |
| ೧೬. | ಅಷ್ಟಾಧ್ಯಾಯೀ (ಸೂತ್ರ-ಧಾತುಪಾಠ) | ಮಹರ್ಷಿ ಪಾಣಿನಿ |
| ೧೭. | ಸುಸಂಧಿಕಲ್ಪ (ಆದ್ಯಪ್ರಾಕೃತ) | ಆಚಾರ್ಯ ಕಾತ್ಯಾಯನ |
| ೧೮. | ಪ್ರಾಕೃತ ಪ್ರಕಾಶಃ | ಆಚಾರ್ಯ ವರರುಚಿ |
| ೧೯. | ಪ್ರಾಕೃತ ವ್ಯಾಕರಣಮ್ | ಆಚಾರ್ಯ ಸಿದ್ಧಹೇಮಚಂದ್ರ ಸೂರಿ |
| ೨೦. | ಪ್ರಾಕೃತ ವ್ಯಾಕರಣ | ಆಚಾರ್ಯ ಮಧುಸೂದನಮಿಶ್ರ ಎಮ್.ಎ. |
| ೨೧. | Grammatica Lingoa Kankani | Father Thomas Stephens |
| ೨೨. | Konkani Grammar | Fr.Angelus Francies XevierMaffei |
| ೨೩. | ಮರಾಠೀ ವ್ಯಾಕರಣ | ಶ್ರೀ ಮೋರೇಶ್ವರ ಸಖಾರಾಮ ಮೋನೆ |
| ೨೪. | ಮರಾಠೀ ವ್ಯಾಕರಣಾಚೀಂ ಮೂಲತತ್ವೇಂ | ಶ್ರೀ ಗಣೇಶಹರೀ ಕೇಳಕರ್ ಎಮ್. ಎ. |
| ೨೫. | ಶಾಲೇಯವ್ಯುತ್ಪತ್ತಿ ದೀಪಿಕಾ (ಮರಾಠಿ) | ಶ್ರೀ ಗಣೇಶ ಯಶವಂತ ಫಢೇ |
| ೨೬. | ಗುಜರಾತೀಭಾಷಾನುಂ ಮಧ್ಯಮವ್ಯಾಕರಣ | ಶ್ರೀ ಕಮಳಾಶಂಕರ ಪ್ರಾಣಶಂಕರ ತ್ರಿವೇದೀ |
| ೨೭. | ಶಬ್ದಸ್ತೋಮ ಮಹಾನಿಧಿ | ಪಂಡಿತ ತಾರಾನಾಥ ತರ್ಕವಾಚಸ್ಪತಿ |
| ೨೮. | ಶಬ್ದಾರ್ಥಕಲ್ಪದ್ರುಮ | ಶ್ರೀ ಟಿ. ಸುಬ್ರಾಯಶಾಸ್ತ್ರೀ ಬೆಂಗಳೂರು |
| ೨೯. | A Sanskrit English Dictionary | Sir Monier M. Williams M.A. |
| ೩೦. | A Standard Sanskrit English Dictionary | Sri Ramachandra Laxmana Vaidya M.A.LL.B. |

| | | |
|---|---|---|
| ೩೧. | A Sanskrit English Dictionary | Sri V. S. Apte M.A. |
| ೩೨. | Diccinario Konkani-Portuguez | Mons. Sebestio, Rodolpho Dalgado |
| ೩೩. | English-Konkani, Konkani-English-Dictionary | Fr. Angelus Francis Xavier Maffei |
| ೩೪. | English-Konkani Dictionary | B. X. Furtado & sons Bombay |
| ೩೫. | Konkani-English Sabda-Sangrah | Msgs. Sylvester Menezes |
| ೩೬. | ಕೊಂಕಣಿ ಭಾಷೇಚೆಂ ಜೈತ | ಶ್ರೀ ವಾಮನ ರಘುನಾಥವರ್ದೇ ವಾಲಾವಲೀಕರ್ |
| ೩೭. | ಭುಗರ್ಯಾಂಚೆಂ ವ್ಯಾಕರ್ಣ | ,, |
| ೩೮. | The Modern combined Dicti onary English-Gujarati-Gujarati-English | Oza and Bhat |
| ೩೯. | ವಿನೀತ ಜೋಡಣೀಕೋಶ | ಗುಜರಾತ ವಿದ್ಯಾಪೀಠ |
| ೪೦. | ಮರಾಠೀ ಶಬ್ದರತ್ನಾಕರ | ಶ್ರೀ ವಾಸುದೇವ ಗೋವಿಂದ ಆಪಟೇ, ಬಿ.ಏ. |
| ೪೧. | Arya-Bhushan School Dictionary Marathi-English | Sri Sridhar Ganesh Vaze B.A. |
| ೪೨. | ಪಾಣಿನಿಕಾಲೀನ ಭಾರತವರ್ಷ (ಹಿಂದಿ) | ಶ್ರೀ ವಾಸುದೇವ ಶರಣ ಅಗ್ರವಾಲ |
| ೪೩. | Elements of south Indian Palaeography | Dr. A. C. Burnell |
| ೪೪, | ಹೇಮಾದ್ರಿ ಊರ್ಫ ಹೇಮಾಡಪಂತ-ಯಾಂಚೇಂ ಚರಿತ್ರ | ಶ್ರೀ ಕೇಶವ ಅಪ್ಪಾಪಾಧ್ಯೇ, ಬಿ. ಎ. ಎಲ್.ಎಲ್. ಬಿ. |
| ೪೫. | Printing Press in India | Sri Dr. A. K. Priolkar |
| ೪೬. | ಹಿಂದೀ ವ್ಯಾಕರಣ | ಶ್ರೀಮಾನ್ ಕಾಮತಾ ಪ್ರಸಾದಗುರು ಎಮ್. ಏ. |
| ೪೭. | ಸಂಕ್ಷಿಪ್ತ ಹಿಂದೀ ಶಬ್ದಸಾಗರ | ಕಾಶೀನಾಗರೀ ಪ್ರಚಾರಿಣೀ ಸಭಾ ಬನಾರಸ್ |
| ೪೮. | ಕನ್ನಡ-ಇಂಗ್ಲೀಷು ನಿಘಂಟು | ರೆ. ಫಾ. ಕಿಟ್ಟೆಲ್ |
| ೪೯. | ಕನ್ನಡ-ಕನ್ನಡ ಕಸ್ತೂರೀ ಕೋಶ | ಪಂಡಿತ ಚೆ. ಎ. ಕವಲಿ |
| ೫೦. | ಇಂಗ್ಲೀಷು-ಕನ್ನಡ ನಿಘಂಟು | ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ |
| ೫೧. | The Discovery of Goa | Sri Alfred Braganza M.A. |
| ೫೨. | Historical Inscriptions of South India | Robert Sewel |

## ಚಾರಿತ್ರಿಕ ವಿಭಾಗದ ಸಹಾಯಕ ಗ್ರಂಥಗಳು


| | | |
|---|---|---|
| ೧. | ಋಗ್ವೇದ (ಶಾಕಲ ಸಂಹಿತಾ) | ಶ್ರೀ ವಿನಾಯಕ ರಾಮಚಂದ್ರ ಪಟವರ್ಧನ |
| ೨. | ಋಗ್ವೇದ (ಬಾಷ್ಕಲ ಸಂಹಿತಾ) | ನಿರ್ಣಯಸಾಗರ ಮುಂದ್ರಾಯಂತ್ರ |
| ೩. | ಐತರೇಯ ಬ್ರಾಹ್ಮಣಮ್ | ನಿರ್ಣಯಸಾಗರ ಮುಂದ್ರಾಯಂತ್ರ |
| ೪. | ಕೌಶೀತಕೀ ಬ್ರಾಹ್ಮಣಮ್ | ಪ್ರೊ. ಎ. ಬೀ. ಕೀಥ್ |
| ೫. | ಕೃಷ್ಣಯಜುರ್ವೇದ (ತೈತ್ತಿರೀಯಶಾಖಾ) | ಶ್ರೀ ಸಾತವಳೇಕರ್ ಶ್ರೀಪಾದ ಶರ್ಮಾ |
| ೬. | ಶುಕ್ಲಯಜುರ್ವೇದ (ಮಾಧ್ಯಂದಿನಶಾಖಾ) | ,, |
| ೭. | ತೈತ್ತಿರೀಯ ಬ್ರಾಹ್ಮಣಮ್ | ಆನಂದಾಶ್ರಮ ಮುದ್ರಣಾಲಯ |
| ೮. | ಶತಪಥ ಬ್ರಾಹ್ಮಣಮ್ | Dr. Albert weber |
| ೯. | ಸಾಮವೇದ (ಹಿಂದಿ ಟೀಕೆ ಸಹಿತ) | ಸ್ವಾಮಿ ತುಲಸೀರಾಮ |
| ೧೦. | ತಾಂಡ್ಯ ಮಹಾ ಬ್ರಾಹ್ಮಣ | ಚೌಖಂಬಾ ಸಂಸ್ಕೃತ ಸಿರೀಜ್ |
| ೧೧. | ಆರ್ಷೇಯ ಬ್ರಾಹ್ಮಣಮ್ | ಡಾಕ್ಟರ್ ಎ. ಸೀ. ಬರ್ನೆಲ್ |
| ೧೨. | ಸಂಹಿತೋಪನಿಷದ್ ಬ್ರಾಹ್ಮಣ | ಡಾಕ್ಟರ್ ಎ. ಸೀ. ಬರ್ನೆಲ್ |
| ೧೩. | ಅಥರ್ವ ವೇದ | ಶ್ರೀಮಾನ್ ಸಾತವಳೇಕರ್ ಶ್ರೀಪಾದಶರ್ಮಾ |
| ೧೪. | ಶಿಕ್ಷಾದಿವೇದ ಷಡಂಗಾನಿ | ನಿರ್ಣಯಸಾಗರ ಮುದ್ರಾಯಂತ್ರ |
| ೧೫. | ಶ್ರೌತಕೋಶ | ವೈದಿಕ ಸಂಶೋಧನ ಮಂಡಲ ಪುಣೆ |
| ೧೬. | ಕಾತ್ಯಾಯನ ಶ್ರೌತ ಸೂತ್ರ | ಚೌಖಂಬಾ ಸಂಸ್ಕೃತ ಸಿರೀಜ್ |
| ೧೭. | ಮಹಾಭಾರತ | ಶ್ರೀ ನ. ವೆಂಕಟ ಸುಬ್ಬಾ ಶಾಸ್ತ್ರೀ |
| ೧೮. | ಶ್ರೀ ಶಾಂತಾದುರ್ಗಾ ಚತುಃಶತಾಬ್ದಿ-ಮಹೋತ್ಸವ ಗ್ರಂಥ | ಮಹೋತ್ಸವ ಸಮಿತಿ ಗೋವ |
| ೧೯. | ಗೋಂಯಕಾರಾಂಚಿ ಗೋಂಯಾ-ಭಾಯಲೀ ವಸಣೂಕ | ಶೆಣೈ ವಾಮನ ರಘುನಾಥವರ್ದೆ ವಾಲಾವಲೀಕರ್ |
| ೨೦. | ಶಂಕರವಿಜಯ (ವ್ಯಾಸಾಚಲ ಕವಿ) | Government of Madras |
| ೨೧. | ಶಂಕರವಿಜಯ (ಮಾಧವೀಯ) | ಶ್ರೀ ಹರಿನಾರಾಯಣ ಆಪಟೇ |
| ೨೨. | ಶಂಕರವಿಜಯ (ಆನಂದಗಿರಿ) | ಜೀವಾನಂದ ವಿದ್ಯಾಸಾಗರ ಬಿ.ಎ. |
| ೨೩. | ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ | ಡಾ. ಚಿದಾನಂದಮೂರ್ತಿ ಎಮ್. ಎ. |
| ೨೪. | ಹೈಗ-ಹೈವೆ | ಶ್ರೀಮಾನ್ ಮಂಜೇಶ್ವರ ಗೋವಿಂದ ಪೈ |
| ೨೫. | ತುಳುನಾಡು-ಪೂರ್ವಸ್ಮೃತಿ | ಶ್ರೀಮಾನ್ ಮಂಜೇಶ್ವರ ಗೋವಿಂದ ಪೈ |
| ೨೬. | ತುಳುನಾಡು | ಶ್ರೀ ಪಿ. ಗುರುರಾಜ ಭಟ್, ಎಮ್.ಎ.ಬಿಟಿ. |
| ೨೭. | ತುಳುನಾಡಿನ ಇತಿಹಾಸದಲ್ಲಿ ಸ್ಥಾನಿಕರು | ,, |
| ೨೮. | ವಿಜಯನಗರ ಸಾಮ್ರಾಜ್ಯ | ಶ್ರೀ ದೇಸಾಯಿ ಪಾಂಡುರಂಗರಾಯರು ಬಿ.ಎ. |
| ೨೯. | ಶ್ರೀ ಸುಬ್ರಹ್ಮಣ್ಯ ಕ್ಷೇತ್ರದ ವರ್ಣನೆ | ಸುಬ್ರಹ್ಮಣ್ಯ ದೇವಸ್ಥಾನದ ಆಡಳಿತೆ ಸಮಿತಿ |
| ೩೦. | ಸ್ಥಾನಿಕ ಬ್ರಾಹ್ಮಣರು | ಶ್ರೀ ಐ. ಕೆ. ಶ್ರೀನಿವಾಸರಾವ್ |

| | | |
|---|---|---|
| ೩೧. | ಗ್ರಾಮ ಪದ್ಧತಿ | ಶ್ರೀ ಹೊಳ್ಳ ಕೃಷ್ಣಯ್ಯ |
| ೩೨. | ದ್ರಾವಿಡ ಭಾಷಾವಿಜ್ಞಾನ | ಶ್ರೀ ಹಂಪ ನಾಗರಾಜಯ್ಯ |
| ೩೩. | ಪಾಣಿನಿಕಾಲೀನ ಭಾರತವರ್ಷ | ಶ್ರೀ ವಾಸುದೇವ ಶರಣ ಅಗ್ರವಾಲ್ |
| ೩೪. | ಚಂದ್ರಗುಪ್ತ ಮೌರ್ಯ ಔರ್ ಭಾರತ ಮೇಂ ಅಲೆಕ್ಸಾಂಡರ ಕೀ ಪರಾಜಯ | ಪ್ರೊ. ಹರಿಶ್ಚಂದ್ರ ಸೇಠ್, ಎಮ್. ಎ. ಪಿ. ಎಚ್. ಡಿ |
| ೩೫. | ಮುದ್ರಾರಾಕ್ಷಸ | ಮಹಾಕವಿ ವಿಶಾಖದತ್ತ |
| ೩೬. | ದೇವಭೂಮಿ-ಗೋಮಂತಕ | |
| ೩೭. | Chandragupta Maurya and his times | Sri Radhakumud Mukerjee |
| ೩೮. | Somanatha the Shrine Eternal | Sri K. M. Munshi |
| ೩೯. | Glory that was Gurjara-Desa | Sri K. M. Munshi |
| ೪೦. | Mysore Gazetteer | Sri C. Hayavadana Rao, B.A.B.L |
| ೪೧. | A History of South India | K. A. Nilakanta Sastri M.A. |
| ೪೨. | History of India | Do |
| ೪೩. | Ancient India | Sri V. D. Mahajan M.A. |
| ೪೪. | Oxford History of India | Vincent A. Samith |
| ೪೫. | A Survey of Indin History | Sri K. M. Panikar |
| ೪೬. | Ancient Karnataka History of Tuluva P. I. | Dr. B. A. Saletore M.A.PH.D. |
| ೪೭. | The Sthanikas and Their Historical Importance | Do |
| ೪೮. | Immortal India from Part I to IV | Bharatiya Vidyabhavan |
| ೪೯. | Sankaracharya the Great and His Successors at Kanchi | Sri N. Venkataraman M.A. Ganesh and Co. Madras |
| ೫೦. | Arctic Home in the Vedas | Sri B. G. Tilak |
| ೫೧. | Sarasvat Families from Parts I to III | Sri S. S. Talamaki, B.A.LL.B. |
| ೫೨. | The Chitrapur Sarasavat Retrospect | Sri K. Gurudutt |
| ೫೩. | Ancient Shrines in Goa | Governmet of Goa |
| ೫೪. | Annual Report of the Mysore Archaeological Department 1943 | |